# ಷಟ್‌ಸ್ಥಲಪ್ರಭೆ



ಲೇಖಕರು:
**ಡಾ. ಆರ್. ಸಿ. ಹಿರೇಮಠ, ಎಂ. ಎ., ಪಿಎಚ್. ಡಿ.**
ಕನ್ನಡ ಪ್ರಾಧ್ಯಾಪಕರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.





ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಷಟ್‌ಸ್ಥಲಪ್ರಭೆ

ಷಟ್‌ಸ್ಥಲದ ಹಿನ್ನೆಲೆಯಲ್ಲಿ

**ಚನ್ನಬಸವಣ್ಣ ಮತ್ತು ತೋಂಟದ ಸಿದ್ಧಲಿಂಗ ಶಿವಯೋಗಿ**

ಲೇಖಕರು:

**ಡಾ. ಆರ್. ಸಿ. ಹಿರೇಮಠ, ಎಂ. ಎ., ಪಿಎಚ್. ಡಿ.**

ಕನ್ನಡ ಪ್ರಾಧ್ಯಾಪಕರು

**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.**



ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಕಾಶಕರು:
**ಶ್ರೀ ಎಸ್. ಎಸ್. ಒಡೆಯರ, ಎಂ.ಎ., ಎಲ್ಎಲ್.ಬಿ.**
ರಜಿಸ್ಟ್ರಾರ
**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**





ಪ್ರಥಮ ಮುದ್ರಣ ೫೦೦ ಪ್ರತಿಗಳು

**ಏಪ್ರಿಲ್ ೧೯೬೬**



ಮುದ್ರಕರು:
ಶಾರದಾ ಮುದ್ರಣಾಲಯ
ಮಂಗಳೂರು

**ಬೆಲೆ: ರೂ. ೭/-**

## ACKNOWLEDGEMENT

The Karnatak University, Dharwar is grateful to the University Grants Commission, New Delhi, for the 50% financial assistance towards the publication of this research work under the scheme of Publication of Research Works including Doctoral theses.

**Dharwar**
**1st April, 1966**

**S. S. Wodeyar**
*Registrar*

# ನಿವೇದನೆ

ಷಟ್‌ಸ್ಥಲ ಸಿದ್ಧಾಂತವು ಭಾರತೀಯ ಗಣ್ಯದರ್ಶನಗಳಲ್ಲಿ ಒಂದು. ಶಿವಾಗಮಗಳ ಕಾಲದಿಂದ ಇಂದಿನವರೆಗೆ ಷಟ್‌ಸ್ಥಲದ ಬಗೆಗೆ ವಿವೇಚನೆ ನಡೆಯುತ್ತ ಬಂದಿದೆ. ಷಟ್‌ಸ್ಥಲದ ಅನುಸಂಧಾನದಿಂದ ಅನೇಕ ಶರಣರು ವಿಮುಕ್ತರಾಗಿರುವರು. ಅನುಭಾವ ಮಾರ್ಗವಾಗಿ ಅದು ಶಿವಾನುಭವದ ರಹಸ್ಯವನ್ನು ಮಾರ್ಮಿಕವಾಗಿ ಭೇದಿಸುತ್ತದೆ; ಬೋಧಿಸುತ್ತದೆ. ಶಿವಯೋಗದ ನೆಲೆಯನ್ನು, ನಿಲವನ್ನು ತೋರಿಸುತ್ತದೆ. ಸಿದ್ಧಾಂತವಾಗಿ ಜೀವ, ಜಗತ್ತು, ಈಶ್ವರ ಇವುಗಳ ಪರಸ್ಪರ ಸಂಬಂಧವನ್ನು ತನ್ನದೇ ಆದ ಸ್ವತಂತ್ರ ವಿಚಾರಸರಣಿಯಿಂದ ವಿವರಿಸುತ್ತದೆ. ವಿಚಾರದ ಮಟ್ಟದಲ್ಲಿ ಅನುಭಾವದ ಪಥದಲ್ಲಿ ಷಟ್‌ಸ್ಥಲಕ್ಕೆ ವಿಶಿಷ್ಟವಾದ ಸ್ಥಾನವುಂಟು.

ಆಧುನಿಕ ವೈಜ್ಞಾನಿಕರು ಒಪ್ಪಿಕೊಳ್ಳುವಂತಹ ಅನೇಕ ವಿಚಾರಗಳು ಷಟ್‌ಸ್ಥಲ ಸಿದ್ಧಾಂತದಲ್ಲಿದ್ದರೂ ಅದರ ವಿಚಾರ ಹೊರಗೆ ಗೋಚರವಾಗದಿರುವುದು ಶೋಚನೀಯ. ಅದಕ್ಕೆ ಕೆಲವು ಕಾರಣಗಳೂ ಉಂಟು:

ಈ ಸಿದ್ಧಾಂತವು ವೇದಾಗಮಗಳಷ್ಟು ಹಳೆಯದಾಗಿ ಕಾಲಕಾಲಕ್ಕೆ ಹೊಸ ಹೊಸ ಸತ್ವಗಳನ್ನು ತತ್ವಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳುತ್ತ ಬಂದಿದೆ. ಮೂಲಸೂತ್ರ ಒಂದೇ ಆಗಿದ್ದರೂ ವಿವಿಧ ಸ್ವರೂಪಗಳು ಅದರಲ್ಲಿ ತಲೆದೋರಿದುವು. ಹೀಗೆ ಭಿನ್ನ ಭಿನ್ನ ದೃಷ್ಟಿಕೋನಗಳು ಅಲ್ಲಿ ಕಂಡುಬರುವುದರಿಂದ ಷಟ್‌ಸ್ಥಲದ ಸ್ವರೂಪದ ಬಗೆಗೆ ವಾದ ವಿವಾದಗಳು, ತರ್ಕವಿತರ್ಕಗಳು ತಲೆದೋರಿದುವು. ಸಾವಿರಾರು ವರ್ಷಗಳಿಂದ ಜನಜೀವನದಲ್ಲಿ ಬೆಳೆದುಬಂದ ಸಿದ್ಧಾಂತ ಹಾಗೂ ಅನುಭಾವ ಮಾರ್ಗಗಳ ಬಗೆಗೆ ಭಿನ್ನಾಭಿಪ್ರಾಯಗಳು ಕಂಡುಬಂದರೆ ಆಶ್ಚರ್ಯವೇನಲ್ಲ. ಅದು ಸ್ವಾಭಾವಿಕವೆಂದೇ ಹೇಳಬೇಕಾಗುತ್ತದೆ. ಅವನ್ನೆಲ್ಲ ಕ್ರೋಢೀಕರಿಸಿ, ಚರ್ಚಿಸಿ ಷಟ್‌ಸ್ಥಲದ ಸ್ವರೂಪವನ್ನು ಕಂಡುಕೊಳ್ಳುವುದು ನಮ್ಮೆಲ್ಲರ ಮುಂದಿನ ವಿಷಯ. ಬೌದ್ಧ ದರ್ಶನದಲ್ಲಿ ಹೀಗೆ ಭಿನ್ನಾಭಿಪ್ರಾಯಗಳು ತಲೆದೋರಲು ಅಶೋಕ, ಕನಿಷ್ಕರ ಕಾಲದ ಮಹಾಸಭೆಗಳಲ್ಲಿ ಈ ವಿಷಯವನ್ನು ಚರ್ಚಿಸಿ ಒಂದು ನಿರ್ಣಯಕ್ಕೆ ಬರಲಾಯಿತು. ವೀರಶೈವ ದರ್ಶನ ನಿರ್ಣಯದ ಬಗೆಗೂ ೧೨, ೧೫ನೆಯ ಶತಮಾನಗಳಲ್ಲಿ ಮಹತ್ವದ ಪ್ರಯತ್ನಗಳು ನಡೆದುವು. ಹೀಗೆ ಈ ಸಿದ್ಧಾಂತವನ್ನು ನಿರ್ಣಯಿಸಿದ ಮಹಾನುಭಾವರಲ್ಲಿ ಚನ್ನಬಸವಣ್ಣ ಹಾಗೂ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅಗ್ರಗಣ್ಯರು. ಅಂತೆಯೇ ಅವರನ್ನು ಷಟ್‌ಸ್ಥಲ ಚಕ್ರವರ್ತಿಗಳು, ಷಟ್‌ಸ್ಥಲ ಪ್ರಭಾಪುಂಜರಂಜಿತರು ಎಂದು ಮುಂದಿನ ಸಾಹಿತ್ಯದಲ್ಲಿ ಸಂಬೋಧಿಸಲಾಗಿದೆ. ಷಟ್‌ಸ್ಥಲದ ಚರಿತ್ರೆಯಲ್ಲಿ ಅವರಿಬ್ಬರ ಸ್ಥಾನ ಗುರುತರವಾದುದು.

ಪ್ರಸ್ತುತಗ್ರಂಥದಲ್ಲಿ ಷಟ್‌ಸ್ಥಲದ ಚರಿತ್ರೆಯನ್ನು, ಸ್ವರೂಪವನ್ನು ಸಮಗ್ರವಾಗಿ ವಿವರಿಸುವ ಪ್ರಯತ್ನವಿದೆ. ಆ ಸಿದ್ಧಾಂತದ ಬೇರುಗಳೆಲ್ಲಿ, ಅದರ ಬೆಳವಣಿಗೆ ಎಂತು?

ಅದರನ್ವಯ ಪ್ರಮಾಣಗಳೆಷ್ಟು, ಪದಾರ್ಥಗಳೆಷ್ಟು? ಅನುಭವಕ್ಕೆ ಅಲ್ಲಿರುವ ಸ್ಥಾನ ವೇನು? ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರಿಸುವ ಪ್ರಯತ್ನವನ್ನು ಇಲ್ಲಿ ಕಾಣ ಬಹುದು. ಈ ಹಿನ್ನೆಲೆಯಲ್ಲಿ ಷಟ್‌ಸ್ಥಲವನ್ನು ಸಾಧಿಸಿದ ಬೋಧಿಸಿದ ಮಹಾನುಭಾವ ರಾದ ಚನ್ನಬಸವಣ್ಣ ಹಾಗೂ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಜೀವನಚರಿತ್ರೆ, ತತ್ವ, ಸಾಹಿತ್ಯ ಮುಂತಾದುವನ್ನು ಕುರಿತು ವಿವರವಾಗಿ ವಿಚಾರಿಸಲಾಗಿದೆ. ಸಂಶೋಧನೆ, ವಿವರಣೆ ನಿರ್ಣಯಗಳ ಬಗೆಗೆ ಎಚ್ಚರಿಕೆ ವಹಿಸಿದೆ. ಎಡೆವಾಯ್ದು ಬಂದ ತಪ್ಪನ್ನು ಮನ್ನಿಸಬೇಕಾಗಿ ಬಿನ್ನಹ.

ಇಬ್ಬರು ಮಹಾನುಭಾವರನ್ನು ಕುರಿತು ನಡೆಸಿದ ಸಂಶೋಧನೆಗೆ ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯಮಹಾಸ್ವಾಮಿಗಳು ಧಾರವಾಡ ಹಾಗೂ ಕರ್ನಾಟಕ ವಿಶ್ವವಿದ್ಯಾಲಯ ಗಳ ಆಶೀರ್ವಾದ ಆಶ್ರಯಗಳು ಪ್ರೇರಕವಾಗಿದ್ದುವು. ಇವೆರಡೂ ಒಂದೆಡೆ ಬಂದರೆ ಸಮಗ್ರ ಚಿತ್ರವನ್ನು ಕಂಡುಕೊಳ್ಳಲು ಸಹಾಯವಾಗುವುದೆಂದು ಈ ಹೊತ್ತಗೆಯನ್ನು ಪ್ರಕಟಿಸಲಾಗಿದೆ.

ಇದನ್ನು ಬೆಳಕಿಗೆ ತಂದ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಅನಂತ ವಂದನೆಗಳು; ಅಚ್ಚು ಮಾಡಿದ ಮಂಗಳೂರು ಶಾರದಾ ಮುದ್ರಣಾಲಯದವರಿಗೆ ನಮಸ್ಕಾರಗಳು.

ಶಕೆ ೧೮೭೭ ಚೈತ್ರ<br>ಶುದ್ಧ ಪ್ರತಿಪದೆ

**ಆರ್. ಸಿ. ಹಿರೇಮಠ**

# ಪರಿವಿಡಿ

# ಸಂಕೇತಸೂಚನೆ

ಅನಾ — ಅನಾದಿ ವೀರಶೈವ ಸಾರಸಂಗ್ರಹ

ಅನು — ಜ್ಯೋತಿರ್ಮಯ ಶಾಂಭವದೀಕ್ಷಾ, ಅನುಭಾವಸ್ಥಲ ಇತ್ಯಾದಿ

ಅವಚಂ — ಅಲ್ಲಮನ ವಚನಚಂದ್ರಿಕೆ. ಸಂ: ಎಲ್. ಬಸವರಾಜು ೧೯೬೦.

ಆವ — ಆದಯ್ಯನ ವಚನಗಳು. ಸಂ: ವೀ. ರು. ಕೊಪ್ಪಳ.

ಏರಾರ — ಏಕಾಂತ ರಾಮಯ್ಯನ ರಗಳೆ. ಹರಿಹರನ ರಗಳೆಗಳು ಭಾಗ ೭. ಸಂ: ಫ. ಗು. ಹಳಕಟ್ಟಿ.

ಏಶಸ್ಥ — ಏಕೋತ್ತರಶತಸ್ಥಲ ಸಂ; ಫ. ಗು. ಹಳಕಟ್ಟಿ ವಿಜಾಪುರ.

ಕೈಕವ — ಕೈವಲ್ಯ ಕಲ್ಪವಲ್ಲರಿ. (ಸರ್ಪಭೂಷಣ ಶಿವಯೋಗಿಗಳು) ಸಂ: ಶಿ. ಶಿ. ಬಸವನಾಳ.

ಕೊಬಚಾ — ಕೊಟ್ಟೂರ ಬಸವೇಶ್ವರ ಚಾರಿತ್ರ (ಬಸವಲಿಂಗ). ಸಂ: ಆರ್. ಸಿ. ಹಿರೇಮಠ. ೧೯೬೧.

ಗಸನಾ — ಗಣಸಹಸ್ರನಾಮಾವಳಿ (ಪಾಲ್ಕುರಿಕೆ ಸೋಮನಾಥ). ಶರಣಸಾಹಿತ್ಯ ಗ್ರಂಥಮಾಲೆ, ಬೆಂಗಳೂರು.

ಗುಚಾ — ಗುರುರಾಜ ಚಾರಿತ್ರ (ಸಿದ್ಧನಂಜೇಶ). ಸಂ: ಸಂ. ಶಿ. ಭೂಸನೂರಮಠ, ಮುರುಘಾಮಠ, ಧಾರವಾಡ.

ಗುಸಿಶೂಸಂ — ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆ (ಅಪ್ರಕಟಿತ)

ಚಬವ — ಚನ್ನಬಸವಣ್ಣನವರ ವಚನಗಳು. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೫

ಚೆಬಪು — ಚೆನ್ನಬಸವ ಪುರಾಣ (ವಿರೂಪಾಕ್ಷ ಪಂಡಿತ). ಸಂ: ಶಿ. ಶಿ. ಬಸವನಾಳ, ಸಾಹಿತ್ಯಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೩೪.

ಚೆವ — ಚೆನ್ನಬಸವಣ್ಣನವರ ವಚನಗಳು ಸಂ: ಫ. ಗು. ಹಳಕಟ್ಟಿ ವಿಜಾಪುರ.

ಚೆಸಾ — ಚನ್ನಬಸವ ಸಾಹಿತ್ಯ. ಸಂ: ಅನ್ನದಾನಯ್ಯ ಪುರಾಣಿಕ, ಸಹಜೀವನ ಪ್ರಕಾಶನ, ಹೈದರಾಬಾದ. ೧೯೫೬.

ತಾಪ್ರ — ತಾಳೆಯೋಲೆಯ ಪ್ರತಿ.

ತುರಾವ — ತುರುಗಾಹಿ ರಾಮಣ್ಣನ ವಚನಗಳು. ಸಂ: ಬಿ. ಶಿವಮೂರ್ತಿ ಶಾಸ್ತ್ರಿ, ಶರಣಸಾಹಿತ್ಯ ಗ್ರಂಥಮಾಲೆ, ಬೆಂಗಳೂರು.

ತೋಸಿಷ — ತೋಂಟದ ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲಜ್ಞಾನಸಾರಾಮೃತ. ಸಂ: ಆರ್. ಸಿ. ಹಿರೇಮಠ, ಮುರುಘಾಮಠ, ಧಾರವಾಡ. ೧೯೬೪.

ತ್ರಿಪುಚಾ — ತ್ರಿಷಷ್ಟಿ ಪುರಾತನಚಾರಿತ್ರ (ಸುರಂಗಕವಿ). ಸಂ. ಆರ್. ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪಾತಂ — ಪಾರಮೇಶ್ವರತಂತ್ರ

ಪ್ರದೇಪು — ಪ್ರಭುದೇವರ ಪುರಾಣ (ಎಳಂದೂರ ಹರೀಶ್ವರ). ಸಂ: ಬುದ್ಧಯ್ಯ ಪುರಾಣಿಕ.

| | |
|---|---|
| ಪ್ರದೇರ | ಪ್ರಭುದೇವರ ರಗಳೆ. ಸಂ: ಸ. ಸ. ಮಾಳವಾಡ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ. |
| ಪ್ರಲೀ | ಪ್ರಭುಲಿಂಗ ಲೀಲೆ (ಚಾಮರಸ). ಸಂ: ಶಿ. ಶಿ. ಬಸವನಾಳ, ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೩೮. |
| ಪ್ರೌಕಾ | ಪ್ರೌಢರಾಯನ ಕಾವ್ಯ (ಅದೃಶ್ಯಕವಿ). ಸಂ: ಸಂ. ಶಿ. ಭೂಸನೂರಮಠ. |
| ಬದೇರ | ಬಸವರಾಜದೇವರ ರಗಳೆ (ಹರಿಹರದೇವ). ಸಂ: ಟಿ. ಎಸ್. ವೆಂಕಣ್ಣಯ್ಯ, ೧೯೩೮. |
| ಬಪು | ಬಸವಪುರಾಣ (ಭೀಮಕವಿ). ಸಂ: ಆರ್. ಸಿ. ಹಿರೇಮಠ. ಸಾಹಿತ್ಯಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ. ೧೯೫೮. |
| ಬಷವ | ಬಸವಣ್ಣನವರ ಷಟ್‌ಸ್ಥಲದ ವಚನಗಳು (ಗ್ರಂಥಾಲಯ ಸಂಸ್ಕರಣ). ಸಂ:ಶಿ.ಶಿ.ಬಸವನಾಳ, ಸಾಹಿತ್ಯಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ. ೧೯೬೨. |
| ಭಸುಸಾ | ಭಕ್ತಿ ಸುಧಾ ಸಾರ (ಘನಮಠದ ಶಿವಯೋಗಿಗಳು). ಸಂ: ಸಂ. ಶಿ. ಭೂಸ-ನೂರಮಠ, ಮುರುಘಾಮಠ, ಧಾರವಾಡ. |
| ಭಾಚಿಂರ | ಭಾವಚಿಂತಾರತ್ನ (ಗುಬ್ಬಿಯ ಮಲ್ಲಣ್ಣ). ಸಂ: ಸಿ. ಮಹದೇವಪ್ಪ. |
| ಭೈಕಾಕಸೂರ | ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ. ರತ್ನಾಕರ. ಸಂ: ಆರ್. ಸಿ. ಹಿರೇ-ಮಠ, ಎಮ್. ಎಸ್. ಸುಂಕಾಪುರ. ೧೯೬೪. |
| ಮದೇವ | ಮಹಾದೇವಿಯಕ್ಕನ ವಚನಗಳು. ಸಂ: ಫ. ಗು. ಹಳಕಟ್ಟಿ, ವಿಜಾಪುರ. |
| ಮಲಿಂಲೀ | ಮಹಲಿಂಗ ಲೀಲೆ (ಬಸವಕವಿ). ಸಂ: ಆರ್. ಸಿ. ಹಿರೇಮಠ, ಮುರುಘಾ-ಮಠ, ಧಾರವಾಡ. |
| ಮವಿ | ಮನೋವಿಜಯ (ಗುರುಬಸವ ಕವಿ). ಸಂ: ಎಂ. ನಾರಾಯಣಶಾಸ್ತ್ರಿ, ಮದರಾಸ ವಿಶ್ವವಿದ್ಯಾಲಯ, ೧೯೨೪. |
| ಮಾಸಾ | ಮಾದೇಶ್ವರ ಸಾಂಗತ್ಯ (ಗುರುಸಿದ್ಧ ಕವಿ). ಸಂ: ಬಿ. ಶಿವಮೂರ್ತಿಶಾಸ್ತ್ರೀ, ಶರಣಸಾಹಿತ್ಯ ಗ್ರಂಥಮಾಲಾ, ೧೯೫೫. |
| ಮಿಸ್ತೋವ | ಮಿಶ್ರ ಸ್ತೋತ್ರದ ವಚನ (ಚನ್ನಂಜದೇವ) |
| ರಾಚಾ | ರಾಘವಾಂಕಚಾರಿತ್ರ (ಸಿದ್ಧನಂಜೇಶ). ಸಂ: ಎಸ್. ಎಸ್. ಮಾಳವಾಡ, ಮುರುಘಾಮಠ, ಧಾರವಾಡ, ೧೯೫೪. |
| ರಾಶೇವಿ | ರಾಜಶೇಖರವಿಳಾಸಂ (ಷಡಕ್ಷರದೇವ). ಸಂ: ಆರ್. ಸಿ. ಹಿರೇಮಠ, ಎಮ್. ಎಸ್. ಸುಂಕಾಪುರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೬೨. |
| ಲಿಂಪವ | ಲಿಂಗ ಮತ್ತು ಪರಮಾತ್ಮನ ವಚನಗಳು–ಭಾಗ ೩. ಸಂ: ಫ. ಗು. ಹಳಕಟ್ಟಿ |
| ಲಿಂರ | ಲಿಂಗಾರ್ಚನೆಯ ರಗಳೆ (ಹರಿಹರನ ರಗಳೆಗಳು–ಭಾಗ ೭). ಸಂ: ಫ. ಗು. ಹಳಕಟ್ಟಿ, ವಿಜಾಪುರ. |
| ಲಿಂವಿಚಾ | ಲಿಂಗಲೀಲಾ ವಿಲಾಸ ಚಾರಿತ್ರ (ಕಲ್ಲುಮಠದ ಪ್ರಭುದೇವ). ಸಂ: ಎಸ್. ಎಸ್. ಭೂಸನೂರಮಠ, ಮುರುಘಾಮಠ, ಧಾರವಾಡ. |
| ವಶಾರ | ವಚನಶಾಸ್ತ್ರರಹಸ್ಯ ಸಂ: ರಂ. ರಾ. ದಿವಾಕರ. |

| | |
|---|---|
| ವಸಾ | ವಚನಶಾಸ್ತ್ರಸಾರ ಭಾಗ ೧, ಪೂರ್ವಾರ್ಧ. ಸಂ: ಫ. ಗು. ಹಳಕಟ್ಟಿ ವಿಜಾಪುರ. |
| ವಸಾ೧ | ,, ,, ,, ಉತ್ತರಾರ್ಧ. ,, |
| ವಸಾ೨ | ,, ಭಾಗ ೨, ,, |
| ವಸಾ೩ | ,, ಭಾಗ ೩, ಪೂರ್ವಾರ್ಧ, ,, |
| ವಾತಂ | ವಾತುಳತಂತ್ರ |
| ವಾವ | ಅಲ್ಲಮಪ್ರಭು ಸಿದ್ಧರಾಮೇಶ್ವರ ವಾದದವಚನ |
| ವೃವಿ | ವೃಷಭೇಂದ್ರ ವಿಜಯ (ಷಡಕ್ಷರದೇವ). |
| ಶಚ | ಶರಣಚರಿತಾಮೃತ. ಸಿದ್ಧಯ್ಯಪುರಾಣಿಕ, ವಯಸ್ಕರ ಶಿಕ್ಷಣಸಮಿತಿ, ಬೆಂಗಳೂರು. |
| ಶತ್ರ | ಶತಕತ್ರಯ (ಮಗ್ಗೆಯ ಮಾಯಿದೇವ). ಸಂ: ವೈ. ನಾಗೇಶಶಾಸ್ತ್ರಿಗಳು, ಮುರುಘಾಮಠ, ಧಾರವಾಡ. ೧೯೬೪. |
| ಶಲೀ | ಶರಣಲೀಲಾಮೃತ (ಚನ್ನಪ್ಪ ಕವಿ). ಸಂ: ಶಿವಬಸವಸ್ವಾಮಿಗಳು. ಶರಣವಾಙ್ಮಯ ಪ್ರಕಾಶ ಕಾರ್ಯಾಲಯ, ಮೈಸೂರು. ೧೯೪೫. |
| ಶಿಗಪು | ಶಿವಾತ್ರ ಗಣೇಶಪುರಾಣ (ಚನ್ನಬಸವ ಕವಿ). |
| ಶಿಚಿಂ | ಶಿವತತ್ವ ಚಿಂತಾಮಣಿ (ಲಕ್ಕಣ್ಣ ದಂಡೇಶ). ಸಂ: ಎಸ್. ಬಸಪ್ಪ, ಪ್ರಾಚ್ಯ ವಿದ್ಯಾ ಸಂಶೋಧಸಂಸ್ಥೆ, ಮೈಸೂರು. ೧೯೬೦. |
| ಶಿಪ್ರಮಶೂಸಂ | ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ. (ಅಪ್ರಕಟಿತ). |
| ಶಿಪ್ರ | ಶಿವಯೋಗಪ್ರದೀಪಿಕೆ |
| ಶಿಶ | ಶಿವಾಧವಶತಕ |
| ಶಿಸಂವ | ಶಿವಶರಣರ ಸಂಕೀರ್ಣ ವಚನಗಳು. ಸಂ: ಫ. ಗು. ಹಳಕಟ್ಟಿ. |
| ಶೂಸಂ | ಶೂನ್ಯಸಂಪಾದನೆ ಸಂ: ಫ. ಗು. ಹಳಕಟ್ಟಿ ವಿಜಾಪುರ. |
| S | ಶೂನ್ಯಸಂಪಾದನೆ (ಗೂಳೂರ ಸಿದ್ಧವೀರಣಾರ್ಯ ಸಂಪಾದಿತ). ಸಂ. ಎಸ್. ಎಸ್. ಭೂಸನೂರಮಠ, ಲಿಂಗರಾಜ ಕಾಲೇಜ, ಬೆಳಗಾವಿ. ೧೯೫೮. |
| ಸಪ | ಸಮಯಪರೀಕ್ಷೆ (ಬ್ರಹ್ಮಶಿವ). ಸಂ: ಬಿ. ಎಸ್. ಕುಲಕರ್ಣಿ, ಕನ್ನಡ ಸಂಶೋಧನಸಂಸ್ಥೆ, ಧಾರವಾಡ. ೧೯೫೮. |
| ಸಪುವ | ಸರ್ವಪುರಾತನರ ವಚನ. (ಅಪ್ರಕಟಿತ). |
| ಸಮಾವ | ಸಕಲೇಶ ಮಾದರಸರ ವಚನಗಳು. ಸಂ: ಫ. ಗು. ಹಳಕಟ್ಟಿ. |
| ಸಿಚಾ | ಸಿದ್ಧರಾಮ ಚಾರಿತ್ರ (ರಾಘವಾಂಕ). ಸಂ: ಡಿ. ಎಲ್. ನರಸಿಂಹಾಚಾರ್ಯ, ಕರ್ನಾಟಕ ಸಂಘ, ಶಿವಮೊಗ್ಗ. ೧೯೪೧. |
| ಸಿಪು | ಸಿದ್ಧೇಶ್ವರ ಪುರಾಣ (ವಿರಕ್ತ ತೋಂಟದಾರ್ಯ). ಸಂ: ವೈ. ನಾಗೇಶ-ಶಾಸ್ತ್ರಿಗಳು, ಜ. ತೋಂಟದಾರ್ಯಮಠ, ಗದಗ. |
| ಸಿಂಪು | ಸಿಂಗಿರಾಜ ಪುರಾಣ (ಸಿಂಗಿರಾಜ). ಸಂ: ಎಚ್. ದೇವೀರಪ್ಪ, ಪ್ರಾಚ್ಯ ಸಂಶೋಧನ ಸಂಸ್ಥೆ, ಮೈಸೂರ. ೧೯೫೦. |
| ಸಿವ | ಸಿದ್ಧರಾಮೇಶ್ವರವಚನ |

| | |
|---|---|
| ಸಿಷವ | ಸಿದ್ಧರಾಮೇಶ್ವರ ದೇವರು ನಿರೂಪಿಸಿದ ಷಟ್‌ಸ್ಥಲದ ವಚನಗಳು. ಸಂ: ಫ. ಗು. ಹಳಕಟ್ಟಿ. |
| ಸುಸಾ | ಸುಬೋಧಸಾರ (ಮುಪ್ಪಿನ ಷಡಕ್ಷರಿ). ಸಂ: ಹರ್ಡೇಕರ ಮಂಜಪ್ಪ, ಮುರುಘಾಮಠ, ಧಾರವಾಡ. |
| ಸೂಪ | ಸೂಚನಾ ಪದ್ಯ. |
| ಸೌಂಪು | ಸೌಂದರಪುರಾಣ (ಬೊಮ್ಮರಸ). ಸಂ: ಪಿ. ಆರ್. ಕರಿಬಸವಶಾಸ್ತ್ರಿಗಳು, ಎಂ. ಬಸವಲಿಂಗಶಾಸ್ತ್ರಿ. ೧೯೦೯. |
| ಹಕಾ | ಹಮ್ಮೀರ ಕಾವ್ಯ. ಸಂ: ಎಮ್. ಎಸ್. ಸುಂಕಾಪುರ. ಸುಕುಮಾರ ಗ್ರಂಥ ಮಾಲೆ, ಶಿವಯೋಗಮಂದಿರ. ೧೯೫೭. |
| ಕ್ಷೇಸುವಾ | ಕ್ಷೇತ್ರಜ್ಞ ಸುಮನೋವಾದ (ಚನ್ನಬಸವ ಶಿವಯೋಗಿಗಳು). ಸಂ: ಪಂ. ಬಸವರಾಜ ಶಾಸ್ತ್ರಿಗಳು, ಜ. ಮೂರುಸಾವಿರ ಮಠ, ಹುಬ್ಬಳ್ಳಿ. ೧೯೬೧. |
| ಹಶೂಸಂ | ಹಲಗೆದೇವರ ಶೂನ್ಯಸಂಪಾದನೆ (ಅಪ್ರಕಟಿತ). |
| ಹಪ್ರ | ಕೈಬರೆಹದ ಕಾಗದಪ್ರತಿ |
| ಹಾಕರ | ಹಾವಿನಹಾಳ ಕಲ್ಲಯ್ಯನ ರಗಳೆ (ಹರಿಹರನ ರಗಳೆಗಳು ಭಾಗ–೬). ಸಂ: ಫ. ಗು. ಹಳಕಟ್ಟಿ. |

---

# ಐತಿಹಾಸಿಕ ಹಿನ್ನೆಲೆ

ಜಾಗತಿಕ ಇತಿಹಾಸದಲ್ಲಿ ಮಾನವತೆಯನ್ನು ದಿವ್ಯದತ್ತ ಸಾಗಿಸುವ ಹಲವು ಆಂದೋ-ಲನಗಳು ಕಂಡುಬರುತ್ತವೆ. ಜನತೆಯ ವಿಚಾರದ ಮಟ್ಟವನ್ನು ಮೇಲಕ್ಕೆತ್ತಿ, ಬಾಳನ್ನು ಹಸನಾಗಿರಿಸಿ, ಜೀವನದ ಹೊಸ ಮೌಲ್ಯಗಳನ್ನು ಕಂಡುಹಿಡಿಯಲು ಈ ಆಂದೋಲನಗಳು ಯತ್ನಿಸಿದುವು. ಜಗತ್ತಿನ ಸಾಂಸ್ಕೃತಿಕ ಇತಿಹಾಸವೆಂದರೆ, ಈ ಆಂದೋಲನಗಳ ಚರಿತ್ರೆ. ಉಪನಿಷತ್‌ಕಾಲದ ಕ್ರಾಂತಿ, ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲ್ ಮೊದಲಾದವರಿಂದ ಗ್ರೀಸ್ ದೇಶದಲ್ಲಿ ನಡೆದ ವಿಚಾರಮಥನ, ಬೌದ್ಧಧರ್ಮದ ಉದಯ ಮುಂತಾದುವನ್ನೆಲ್ಲ ಈ ನಿಟ್ಟಿನಲ್ಲಿ ಹೆಸರಿಸಬೇಕಾಗುತ್ತದೆ. ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನೊಳಗೆ ನಡೆವ ಶಿವಶರಣರ ಕ್ರಾಂತಿ ಈ ಸಾಲಿನಲ್ಲಿ ನಿಲ್ಲುತ್ತದೆ. ಅದರ ಕಾರ್ಯ-ರಂಗ ಕಿರಿದಾಗಿದ್ದರೂ ಗುರಿ ಹಿರಿದಾಗಿದೆ. ಭುವನದ ಭಾಗ್ಯವಿಶೇಷದಿಂದ ಅಸದೃಶ ಮಹಿಮಾನ್ವಿತರ ಗುಂಪೊಂದು ಒಂದೆಡೆ ಉದಯವಾಗಿ ಮಿಂಚಿನ ಸಂಚನ್ನು ಜನ-ಜೀವನದಲ್ಲಿ ತುಂಬಿತು. ಮೇಲೆ ನಿರ್ದೇಶಿಸಿದ ಆಂದೋಲನಗಳೆಲ್ಲ ಹಲವಾರು ಅದ್ಭುತ ಶಕ್ತಿಗಳ ಸಂಪುಟವಾಗಿವೆ. ಗ್ರೀಕ ಕ್ರಾಂತಿಕಾಲ, ಉಪನಿಷತ್ ಕಾಲ, ಬುದ್ಧ-ದೇವನ ಯುಗ. ಶಿವಶರಣರ ಕ್ರಾಂತಿ—ಎಲ್ಲವುಗಳಲ್ಲಿಯೂ ಅಷ್ಟೇ! ಪೂರ್ವದಿಗಂತದಲ್ಲಿ ಒರ್ವ ಭಾಸ್ಕರನುದಿಸಿದರೆ ಲೋಕದ ಪುಣ್ಯದ ಪೂರ್ವದಿಗಂತದಲ್ಲಿ ಅಸಂಖ್ಯ ಭಾಸ್ಕರರುದಿಸಿ, ಈ ಲೋಕವನ್ನು ಬೆಳಗಿದರು. ಅಂತೆಯೇ ಈ ಆಂದೋಲನಗಳ ಪ್ರಭಾವ ಶಾಶ್ವತವಾಗಿರುತ್ತದೆ. ಅವುಗಳ ಆದರ್ಶ ಲೋಕದ ನಡೆಯಾಗುತ್ತದೆ. ಇಂತಹ ಕ್ರಾಂತಿಗಳು ಉದಯವಾಗಬೇಕಾದರೆ ಲೋಕದ ಪ್ರಾರ್ಥನೆಯಿಲ್ಲದೆ ಸಾಧ್ಯವಿಲ್ಲ. ಹಳೆಯ ಆದರ್ಶಗಳು ಸತ್ವಹೀನವಾಗಿ ಲೋಕ ಕಂಗೆಟ್ಟ ಸಮಯದಲ್ಲಿ ಪರಿಸರ ಹೊಸ-ತನ್ನು ಕುರಿತು ತಪವನ್ನಾಚರಿಸುತ್ತಿರುತ್ತವೆ: ಕಾರಣಪುರುಷರನ್ನು ಕೈಮಾಡಿ ಕರೆಯು-ತ್ತದೆ. ಮಹಾತ್ಮರು ನವೀನಯುಗವನ್ನು ನಿರ್ಮಿಸಿದರೆ. ಅವರ ಉದಯಕ್ಕೆ ಯುಗಧರ್ಮವೂ ಕಾರಣವಾಗಿರುತ್ತದೆ. ಆದುದರಿಂದ ಕ್ರಾಂತಿಗಳ ಸ್ವರೂಪ. ಉದ್ದೇಶ. ಸಾಧನೆ. ಸಿದ್ಧಿ ಮುಂತಾದುವನ್ನು ಅರಿಯಬೇಕಾದರೆ ಅವುಗಳ ಹಿನ್ನೆಲೆಯನ್ನು ತಿಳಿ-ಯುವುದು ಅವಶ್ಯ. ಅಂತೆಯೇ ಹನ್ನೆರಡನೆಯ ಶತಮಾನದ ಶಿವಶರಣರ ಕ್ರಾಂತಿಯ ಹಿನ್ನೆಲೆಯನ್ನು ಕುರಿತು ವಿವೇಚಿಸುವುದು ಪ್ರಸ್ತುತವೆನಿಸಿದೆ.

ಕಲ್ಯಾಣಚಾಲುಕ್ಯಸಾಮ್ರಾಜ್ಯವು (ಕ್ರಿ. ಶ. ೯೭೩–೧೧೮೦) ದಕ್ಷಿಣ ಭರತ-ಖಂಡದ ಪ್ರಖ್ಯಾತ ಸಾಮ್ರಾಜ್ಯಗಳಲ್ಲಿ ಒಂದು. ಈ ಚಾಲುಕ್ಯರಿಗೂ ಚೋಳ-ರಿಗೂ ವಂಶಪರಂಪರೆಯಿಂದ ದ್ವೇಷವಿದ್ದುದು ಚಾಲುಕ್ಯರ ಇತಿಹಾಸವನ್ನು ಓದಿದವರಿಗೆ

ವೇದ್ಯವಾಗದಿರದು. ವಂಶಾನುಗತವಾದ ಬದ್ಧದ್ವೇಷ ಕೊನೆಯುವರೆಗೂ ಮುಂದು-ವರಿದಿದೆ. ಜಯಸಿಂಹನು (ಕ್ರಿ. ಶ. ೧೦೧೫–೧೦೪೨) ಚಾಲುಕ್ಯ ಸಾಮ್ರಾಜ್ಯವನ್ನು ಆಳು-ತ್ತಿರುವ ಸಮಯದಲ್ಲಿ ರಾಜೇಂದ್ರ ಚೋಳ, ಪೆರುಮಾರ ಭೋಜ ಹಾಗೂ ಕಲಚುರಿಯ ಗಂಗಯದೇವ ಈ ಮೂವರೂ ಒಟ್ಟಾಗಿ ಒಪ್ಪಂದಮಾಡಿಕೊಂಡು ಕ್ರಿ. ಶ. ೧೦೧೯ರ ಸುಮಾರು ಮೂರು ಕಡೆಯಿಂದ ಒಮ್ಮೆಲೆ ಏರಿಬಂದುದಾಗಿ ತಿಳಿದುಬಂದಿದೆ.[೧] ಮೊದಲ-ನೆಯ ಸೋಮೇಶ್ವರ (ಕ್ರಿ. ಶ. ೧೦೪೨–೧೦೬೮)ನ ಕಾಲದಲ್ಲಿ ಚೋಳ–ಚಾಲುಕ್ಯದ್ವೇಷ ಇನ್ನೂ ಅಧಿಕವಾಗುವುದು. ಈ ಅವಧಿಯಲ್ಲಿಯೇ ಚೋಳ ರಾಜಾಧಿರಾಜನು ಕಲ್ಯಾಣ ವನ್ನು ಹಾಳುಮಾಡುವನು; ಅಲ್ಲಿಯೇ ವೀರಪಟ್ಟಾಭಿಷೇಕವನ್ನು ಮಾಡಿಸಿಕೊಂಡು ವೀರರಾಜೇಂದ್ರನೆಂಬ ಬಿರುದನ್ನು ಪಡೆಯುವನು[೨]. ಹೀಗೆ ಸೋಮೇಶ್ವರನ ಆಳಿಕೆ-ಯೆಲ್ಲ ಯುದ್ಧದಲ್ಲಿ ಕಳೆಯುವುದು[೩].

ಸೋಮೇಶ್ವರನ ತರುವಾಯ ಈ ದ್ವೇಷ ಹೆಚ್ಚುವುದರ ಜೊತೆಗೆ ಚಾಲುಕ್ಯ-ಸಾಮ್ರಾಜ್ಯದಲ್ಲಿ ಯಾದವೀಕಲಹ ಪ್ರಾರಂಭವಾಗುವುದು. ದೊರೆ ಇಮ್ಮಡಿ ಸೋಮೇ-ಶ್ವರನು ಬನವಾಸಿಯನ್ನು ಆಳುತ್ತಿದ್ದ ತನ್ನ ತಮ್ಮ ವಿಕ್ರಮಾದಿತ್ಯನ ಪರಾಕ್ರಮವನ್ನು ಸಹಿಸದೆ ಚೋಳರ ಸಹಾಯದಿಂದ ಆತನನ್ನು ಸದೆಬಡೆಯಬೇಕೆಂದು ಯತ್ನಿಸುವನು: ಕಾರಣ, ರಾಜ್ಯದಲ್ಲಿ ಎರಡು ಪಕ್ಷಗಳಾಗುವುವು; ಪರಿಸ್ಥಿತಿ ಹದಗೆಡುವುದು. ಆದರೆ, ಅತ್ಯಂತ ಪರಾಕ್ರಮಶಾಲಿಯಾದ ವಿಕ್ರಮಾದಿತ್ಯನು ದಕ್ಷಿಣದಿಂದ ಬರುತ್ತಿದ್ದ ಚೋಳರನ್ನೂ, ಉತ್ತರ ದಿಂದ ದಾಳಿಮಾಡುತ್ತಿದ್ದ ಅಣ್ಣ ಸೋಮೇಶ್ವರನನ್ನೂ ಸೋಲಿಸಿ, ಕಲ್ಯಾಣ-ಸಾಮ್ರಾ-ಜ್ಯಾಧಿಪತಿಯಾಗಿ ಸು. ೫೦ ವರ್ಷ ರಾಜ್ಯಭಾರಮಾಡುವನು (ಕ್ರಿ. ಶ.೧೦೭೬–೧೧೨೬).

ಈ ಆರನೆಯ ವಿಕ್ರಮಾದಿತ್ಯನು ಶಕಪುರುಷನೆನ್ನುವಷ್ಟು ಪ್ರಬಲನಾಗಿದ್ದರೂ ಆತನ ಕಾಲದಲ್ಲಿಯೇ ಆಂತರಿಕಹೋರಾಟಗಳೇಳದಿಲ್ಲ. ಹೊಯ್ಸಳ ಬಿಟ್ಟಿದೇವನು ಕ್ರಿ. ಶ. ೧೧೧೬ರಲ್ಲಿ ಚೋಳರಾಜ್ಯದ ಮೇಲೆ ದಾಳಿಮಾಡುವನು. ಗಂಗವಾಡಿಯ ಅಡಿಗೈ-ಮಾನನನ್ನು ಸೋಲಿಸುವನು. ಕೊನೆಗೆ ವಿಕ್ರಮನ ವಿರುದ್ಧ ಯುದ್ಧಸಾರಿ ಸೋತು ಹೋಗುವನು. ಆರನೆಯ ವಿಕ್ರಮಾದಿತ್ಯನ ಆಳಿಕೆಯ ಕೊನೆಯ ಭಾಗದಲ್ಲಿ, ಅಂದರೆ, ಹನ್ನೆರಡನೆಯ ಶತಮಾನದ ಮೊದಲಿನ ಎರಡು ದಶಕಗಳ ಅವಧಿಯಲ್ಲಿ ಚಾಲುಕ್ಯ ಸಾಮ್ರಾಜ್ಯಪತನದ ಲಕ್ಷಣಗಳು ಕಂಡುಬರುತ್ತಿವೆಯೆಂದು ತಿಳಿದುಬರುತ್ತದೆ. ಸಾಮಂತ ನಾದ ಹೊಯ್ಸಳ ಬಿಟ್ಟಿದೇವನು ಸ್ವತಂತ್ರನಾದುದೇ ಇದಕ್ಕೆ ನಿದರ್ಶನ.

ವಿಕ್ರಮಾದಿತ್ಯನ ಕಾಲದಲ್ಲಿ ಸ್ವಾತಂತ್ರ್ಯವನ್ನು ಘೋಷಿಸಿದ ಹೊಯ್ಸಳ ಬಿಟ್ಟಿ-ದೇವನು ಆತನ ತರುವಾಯ ಪಟ್ಟಕ್ಕೆ ಬಂದ ಮೂರನೆಯ ಸೋಮೇಶ್ವರನ

---

೧. History and Culture of the Indian People vol V p. 167.

೨. " " " "

೩. ಚೋಳರು ಉತ್ತರದಲ್ಲಿ ಏರಿಬಂದು ಕ್ರಿ. ಶ. ೧೦೪೭ರಲ್ಲಿ ಕಂಪಲಿಯನ್ನು ೧೦೫೧ರಲ್ಲಿ ಕೊಲ್ಲಾ ಪುರವನ್ನು ವಶಪಡಿಸಿಕೊಂಡರೆ. ಸೋಮೇಶ್ವರನು ಕ್ರಿ. ಶ. ೧೦೫೮-೧೦೬೧ರ ಅವಧಿಯಲ್ಲಿ ಎರಡು ಸಲ ಕಂಚಿಯ ಮೇಲೆ ದಾಳಿಮಾಡಿರುವನು.

೪. A History of South India, by K. A. Neelakantha Shastry, p. 183.

(ಕ್ರಿ. ಶ. ೧೧೨೬–೧೧೩೮) ಶಾಂತಸ್ವಭಾವದ ಸಂಪೂರ್ಣ ಲಾಭಪಡೆದು ತನ್ನ ಸ್ವತಂತ್ರ ಅಸ್ತಿತ್ವವನ್ನು ಸ್ಥಿರಪಡಿಸುವನು; ಆತನ ಸಾಮ್ರಾಜ್ಯದ ಮೇಲೆ ದಂಡೆತ್ತಿ ಬಂದು ಬನವಾಸಿ. ಹಾನುಂಗಲ್. ಉಚ್ಚಂಗಿ ಮೊದಲಾದುವನ್ನು ವಶಪಡಿಸಿಕೊಳ್ಳುವನು.

ಹೀಗೆ ಆರಂಭವಾದ ಸಾಮ್ರಾಜ್ಯದ ಪತನವು. ಪರಕೀಯರೊಡನೆ ನಡೆಸಿದ ಹೋರಾಟ. ಸಾಮಂತರ ಸ್ವತಂತ್ರ ಹಿರಾಟ ಇವುಗಳ ಮೂಲಕ ಅಧಿಕವಾಗುತ್ತ ನಡೆಯಿತು. ಮೂರನೆಯ ಸೋಮೇಶ್ವರನ ತರುವಾಯ ಪಟ್ಟಕ್ಕೆ ಬಂದ ಮೂರನೆಯ ಜಗದೇಕಮಲ್ಲನ ಕಾಲದಲ್ಲಿ ಹೊಯ್ಸಳರು ಇನ್ನೂ ಪ್ರಬಲರಾಗುವರು. ಚಾಲುಕ್ಯರ ಇನ್ನೊಬ್ಬ ಸಾಮಂತರಾದ ಕಲಚುರಿಗಳು ಸ್ವತಂತ್ರರಾಗಲು ಹವಣಿಸುವರು. ಜಗದೇಕನಾದರೋ ಮಾಳವ. ಗೂರ್ಜರ ಹಾಗೂ ದಕ್ಷಿಣದ ಕುಲೋತ್ತುಂಗ ಚೋಳ ಮುಂತಾದವರೊಡನೆ ಘನಘೋರ ಸಂಗ್ರಾಮಗಳನ್ನು ಎಸಗುವನು. ಹೀಗೆ ಚಾಲುಕ್ಯಸೈನ್ಯ ಕ್ಷೀಣವಾಗುತ್ತ ನಡೆದುದರಿಂದಲೂ ಸಾಮಂತರು ಪ್ರಬಲರಾದುದರಿಂದಲೂ ಸಾಮ್ರಾಜ್ಯ ಶಕ್ತಿಗುಂದುತ್ತ ನಡೆಯಿತು.

ಮೂರನೆಯ ಜಗದೇಕಮಲ್ಲನ ತರುವಾಯ ಆತನ ತಮ್ಮನಾದ ಮೂರನೆಯ ತೈಲಪನು ಪಟ್ಟಕ್ಕೆ ಬರುವನು. ಆಗ ಆಡಳಿತೆಯೆಲ್ಲ ದಂಡಾಧಿಪರ ಕೈಯಲ್ಲಿದ್ದುದಾಗಿ ತಿಳಿದುಬರುತ್ತದೆ. ಸಾಮಂತರ ಸ್ವಾತಂತ್ರ್ಯಪ್ರವೃತ್ತಿ ಅಧಿಕವಾಗಿ. ಈಗ ಅವರು ಹೆಸರಿಗೆ ಮಾತ್ರ ಸಾಮಂತರಾಗಿದ್ದರು. ಈ ಸಮಯವನ್ನು ಸಾಧಿಸಿ ಕಲಚುರಿ ಬಿಜ್ಜಳನು ರಾಜ್ಯಸೂತ್ರಗಳನ್ನೆಲ್ಲ ವಹಿಸಿಕೊಂಡನು.

## ಕಲಚೂರ್ಯರು

ಕಲಚೂರ್ಯರನ್ನು ಶಾಸನಗಳಲ್ಲಿ ಕಾಲಂಜರ ಪುರವರಾಧೀಶ್ವರರೆಂದು ಕರೆಯಲಾಗಿದೆ. ಬುಂದೇಲಖಂಡದ ಕಾಲಂಜರದಲ್ಲಿ ಆಳಿದ ಕಲಚುರಿಗಳಿಗೂ ಕರ್ನಾಟಕದ ಕಲಚುರಿಗಳಿಗೂ ಸಂಬಂಧವಿರುವಂತೆ ತೋರುತ್ತದೆ. ಕ್ರಿ. ಶ. ೧೧೬೨ರಲ್ಲಿ ಹುಟ್ಟಿದ ದಾವಣಗೆರೆಯ ಶಾಸನ[1]ವೊಂದರಲ್ಲಿ ಈ ಮನೆತನದ ಮೂಲಪುರುಷನಾದ ಕೃಷ್ಣನು ಶಿವನಿಂದ ಜನಿಸಿ ಕಾಲಂಜರಪತಿಯನ್ನು ಕೊಂದು ಕಲಚುರಿ ರಾಜ್ಯವನ್ನು ಸ್ಥಾಪಿಸಿದ್ದಾಗಿ ಉಕ್ತವಾಗಿದೆ. ಕಲಚುರಿಯರ ಮೂಲಪುರುಷನು ಶಿವನಿಂದ ಜನಿಸಿದನೆಂಬ ವಿಷಯ ಬಹಳ ಮಹತ್ವವಾದುದು. ಮುಂದೆ ಆ ಮನೆತನದಿಂದ ಶೈವಧರ್ಮದ ಪ್ರಸಾರಕ್ಕೆ ವಿಶೇಷ ಪ್ರೋತ್ಸಾಹ ದೊರೆತಿದೆ. ಈ ಕಲಚುರಿಯ ಕೆಲವು ಶಾಖೆಗಳು ಕ್ರಿ. ಶ. ೬ನೆಯ ಶತಮಾನದಿಂದ ಮಧ್ಯಪ್ರದೇಶದ ಕೆಲವು ಭಾಗಗಳನ್ನು ಆಳುತ್ತಿದ್ದವು[2]. ಬಾದಾಮಿಯ ಚಾಲುಕ್ಯ ದೊರೆ ಮಂಗಳೇಶನು ಕಲಚ್ಚುರಿಯರನ್ನು ಸೋಲಿಸಿದುದಾಗಿ ಐಹೊಳೆಯ ಶಾಸನದ ಕೆಳಗಣ ಉದ್ಧರಣೆಯಿಂದ ಸ್ಪಷ್ಟವಾಗುತ್ತದೆ.

'ರಣರಂಗಮಂದಿರೇ ಕಲಚ್ಚುರಿ ಶ್ರೀಲಲನಾ ಪರಿಗ್ರಹಮ್'

---

೧. No. 42. Epigraphia Carnatica.

೨. ಕರ್ನಾಟಕ ಕಲಚುರಿಗಳು. ಪಿ. ಬಿ. ದೇಸಾಯಿ. ಪು. ೫.

ಕಲುಚ್ಚುರಿಯರೆಂದರೆ ಕಲಚೂರ್ಯರೆಂದೂ ಇತಿಹಾಸಜ್ಞರ ಅಭಿಮತ. ಈ ವಂಶಜರು ಕ್ರಿ. ಶ. ೫ನೆಯ ಶತಮಾನದಿಂದ ಕ್ರಿ. ಶ. ೧೫ನೆಯ ಶತಮಾನದ ವರೆಗೆ ಭಾರತದ ಬೇರೆ ಬೇರೆ ಭಾಗಗಳಲ್ಲಿ ರಾಜ್ಯಭಾರವನ್ನು ಮಾಡಿರುವರು. ೯ನೆಯ ಶತ-ಮಾನದಲ್ಲಿ ಕರ್ನಾಟಕದ ರಾಷ್ಟ್ರಕೂಟ ದೊರೆಗಳ ಹಾಗೂ ಉತ್ತರದ ಪ್ರತೀಹಾರ ರಾಜರ ದಾಳಿಗಳ ಮೂಲಕ ಕಲುಚುರಿಯರು ಕಾಲಂಜರವನ್ನು ಬಿಟ್ಟು ಬೇರೆಡೆ ಹೋಗಿರ ಬಹುದಾಗಿದೆ. ಹೀಗೆ ಹೊರಗೆ ಬಂದವರಲ್ಲಿ ಕರ್ನಾಟಕಕ್ಕೆ ಬಂದ ಕಲಚೂರ್ಯರೂ ಒಬ್ಬರಾಗಿರಬೇಕು. ಬಿಜ್ಜಳನ ಅಥವಾ ಆತನ ಪೂರ್ವಜರ ಶಾಸನಗಳಲ್ಲಿ ಈ ವಿಷಯ ಉಕ್ತವಾಗಿರದಿದ್ದರೂ, ಅವೆರಡೂ ಮನೆತನಗಳ ಸಂಬಂಧವನ್ನು ಇತರ ಆಧಾರಗಳಿಂದ ಸಿದ್ಧಪಡಿಸಬಹುದಾಗಿದೆ.[೧]

ಕರ್ನಾಟಕಕ್ಕೆ ಬಂದ ಕಲಚುರಿಯರು ತರಿಕಾಡುನಾಡಿನ (ತರ್ದೇವಾಡಿಯ) ಮಂಗಳವಾಡದಲ್ಲಿ (ಈಗಿನ ಮಂಗಳವೇಡೆಯಲ್ಲಿ) ಬಂದು ನೆಲಸಿದಂತೆ ತೋರುತ್ತದೆ. ರಾಯಮುರಾರಿ ಸೋವಿದೇವನ ಮಾಡಗಿಹಾಳ ಶಾಸನದಲ್ಲಿ ತರಿಕಾಡು ಹಾಗೂ ಮಂಗಳ ವಾಡಗಳನ್ನು ಮನಂಬುಗುವ ರೀತಿಯಲ್ಲಿ ವರ್ಣಿಸಿರುವುದು ಈ ಮಾತಿಗೆ ಪುಷ್ಟಿಯನ್ನು ಕೊಡುತ್ತದೆ. ಈ ವಂಶದ ಎರಡನೆಯ ಕನ್ನಮನು ಅನೇಕ ಯುದ್ಧಗಳಲ್ಲಿ ಚಾಳುಕ್ಯರಿಗೆ ನೆರವಾಗಿ ತರ್ದೇವಾಡಿಯ (ವಿಜಾಪುರ ಸುತ್ತುಮುತ್ತಲಿನ ನಾಡಿನ) ಅಧಿಕಾರವನ್ನು ಪಡೆದು ಸಾಮಂತನೆನಿಸಿ ಮಂಗಳವಾಡವನ್ನು ದುಷ್ಟನಿಗ್ರಹ ಮತ್ತು ಶಿಷ್ಟಪರಿಪಾಲನ ಮಾಡುತ್ತ ಆಳುತ್ತಿದ್ದುದಾಗಿ ತಿಳಿದುಬರುತ್ತದೆ.[೨] ರಾಯಮುರಾರಿ ಸೋವಿದೇವನ ಕಾಲದ ಒಂದು ಶಾಸನದಲ್ಲಿ[೩] ಕಲಚುರಿವಂಶವು ಅಭಿವೃದ್ಧಿಹೊಂದುತ್ತ ಹೋದವಿಷಯ ವನ್ನು ಹೀಗೆ ವರ್ಣಿಸಲಾಗಿದೆ:

> **"ಕಳಚುರ್ಯಾನ್ವಾಯ ರಾಜ್ಯಂ ಬೆಳಗಿ ಭುವನಮಂ ಸೋಮನಿಂ ಪೆರ್ಮನಿಂನಿ ರ್ಮಳಭಾವಂಬೆತ್ತು ಯೋಗೋರ್ವಿಪನಿನೆಸೆದು ಭೋಗಂಗಳಿಂ ವಜ್ರನಿಂ ದೋ ರ್ವಳಮಂ ಕೈಕೊಂಡು ಯೋಗಕ್ಷಿತಿಪತಿಯನತಿಸ್ಥೈರ್ಯದಿಂ ತಾಳ್ದಿ ಸೌಖ್ಯಾ ವಿಳವಾಗಿರ್ದೊಪ್ಪಿ ಪೆರ್ಮಾಡಿಯಿನೊದವಿದುದಾ ಬಿಜ್ಜಣೋರ್ವೀಶನಿಂದಂ"**

ತರ್ದೆವಾಡಿಯು ಚಾಲುಕ್ಯಸಾಮ್ರಾಜ್ಯದ ಮರ್ಮಸ್ಥಾನವಿದ್ದಂತೆ. ಪರಾಕ್ರಮ-ಶಾಲಿಗಳೂ ಪ್ರಖ್ಯಾತರೂ ಆದ ಸಾಮಂತರೇ ಅದನ್ನಾಳುತ್ತ ಬಂದಿದ್ದರು. ಹಿಂದೆ ರಾಷ್ಟ್ರಕೂಟ ಕಕ್ಕಲನಿಂದ ಚಾಲುಕ್ಯ ತೈಲಪನು ಸಾಮ್ರಾಜ್ಯವನ್ನು ಕಿತ್ತುಕೊಳ್ಳುವಾಗ ತರ್ದೆವಾಡಿಯ ಸಾಮಂತರೇ ವಿಶೇಷವಾಗಿ ಸಹಾಯಮಾಡಿದ್ದರು. ಈ ಹಿನ್ನೆಲೆಯಲ್ಲಿ ತರ್ದೆವಾಡಿಯ ಅಧಿಕಾರ ವಹಿಸಿದ ಕಲಚುರಿಯರು ಪರಾಕ್ರಮಶಾಲಿಗಳಾಗಿದ್ದಂತೆ

---

೧. Mysore Gazetteer vol. V, Part II, p, 66.

೨. ಕ್ರಿ. ಶ. ೧೦೮೭ರ ಶಾಸನ.

೩. ಶಿಕಾರಿಪುರ ೨೩೬ನೆಯ ಶಾಸನ (ಕ್ರಿ. ಶ. ೧೧೬೪) Epigraphia Carnatica vol. VII.

ಮಹತ್ವಾಕಾಂಕ್ಷೆಯುಳ್ಳವರೂ ಆಗಿದ್ದರು. ಅಲ್ಲದೆ, ತಮ್ಮ ಘನತೆ ಗೌರವಗಳಿಂದಲೋ ಚಾಣಾಕ್ಷತನದಿಂದಲೋ, ಸುದೈವದಿಂದಲೋ ಚಾಲುಕ್ಯ ದೊರೆಗಳೊಡನೆ ಶರೀರ-ಸಂಬಂಧವನ್ನೂ ಬೆಳೆಸಿದ್ದರು.[೧] ತಾವು ಪ್ರಬಲರಾಗುತ್ತ ನಡೆದಂತೆಲ್ಲ ಚಕ್ರವರ್ತಿಗಳನ್ನು ಕಡೆಗಣಿಸಿ, ತಮ್ಮ ಸ್ವಾಯತ್ತತೆಯನ್ನು ಪ್ರತಿಷ್ಠಾಪಿಸುವ ಪ್ರಯತ್ನಗಳನ್ನೂ ಮಾಡುತ್ತ ನಡೆದಿದ್ದರು. ಈ ಕಾರ್ಯ ಬಿಜ್ಜಳನ ತಂದೆ ಪೆರ್ಮಾಡಿಯ ಕಾಲದಲ್ಲಿ ಸಂಸ್ಪಷ್ಟವಾಗಿ ನಡೆದಂತೆ ಆತನ ಶಾಸನಗಳಿಂದ ವೇದ್ಯವಾಗುತ್ತದೆ. ಅಲ್ಲಿ ಬಂದಿರುವ ಪೆರ್ಮಾಡಿಯ ವರ್ಣನೆ ಹಾಗೂ ಬಿರುದಾವಳಿಗಳು ಗಮನಾರ್ಹವಾಗಿವೆ.

> **"ಪಂಚಮಹಾಶಬ್ದ ಮಹಾಮಂಡಳೇಶ್ವರಂ, ಕಾಳಾಂಜರ ಪುರವರಾಧೀಶಂ ಸುವರ್ಣ ವೃಷಭಧ್ವಜಂ, ಡಮರು ತೂರ್ಯನಿರ್ಘೋಷಣಂ, ಕಳಚುರ್ಯ ಕುಳಕಮಳಮಾರ್ತಾಂಡಂ, ಕದನಪ್ರಚಂಡಂ, ಮನಕನಕಾಚಳಂ, ಸುಭಟರಾದಿತ್ಯಂ, ಕಲಿಗಳಂಕುಸಂ, ಗಜಸಾಮಂತಂ, ಶರಣಾಗತವಜ್ರಪಂಜರಂ, ಪ್ರತಾಪಲಂಕೇಶ್ವರಂ[೨] ವೈರೀಭಕಂಠೀರವಂ, ನಿಶ್ಶಂಕಮಲ್ಲನಾಮಾದಿ ಸಮಸ್ತ ಪ್ರಶಸ್ತಿಸಹಿತಂ"[೩]**

ಇದೇ ಶಾಸನದಲ್ಲಿ ಚಾಲುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನ ಉಲ್ಲೇಖ ಬಂದಿದೆಯಾದರೂ ಆತನ ವರ್ಣನೆ ಇಷ್ಟು ಉಜ್ವಲವಾಗಿಲ್ಲ. ಸೋಮೇಶ್ವರನು ಅಲ್ಲಿ ತೇಜೋಹೀನನಾಗಿ ಕಂಡುಬರುವುದೂ, ಅಲ್ಲಿ ಆತನ ಆಳಿಕೆಯ ವರ್ಷವನ್ನು ಉಲ್ಲೇಖಿಸದಿರುವುದೂ ಗಮನಾರ್ಹವಾಗಿವೆ. ಇದು ಇಷ್ಟಕ್ಕೇ ನಿಂತಿರುವುದಿಲ್ಲ. ಇನ್ನೊಂದು ಶಾಸನವನ್ನು[೪] ಸೋಮೇಶ್ವರನ ಆಳಿಕೆಯನ್ನು ಉಲ್ಲೇಖಿಸದೆ ಪೆರ್ಮಾಡಿಯೇ ಸ್ವತಂತ್ರರಾಜನೆಂಬಂತೆ ಬರೆಯಲಾಗಿದೆ. ಮತ್ತೊಂದು ಶಾಸನದಲ್ಲಿ[೫] ಆತನನ್ನು **'ನೆಗಳ್ದಂ ರಾಜಪೂಜಿತಪದಂ ಪೆರ್ಮಾಡಿದೇವಂ'** ಎಂದು ಬಣ್ಣಿಸಲಾಗಿದೆ.

ಇದರಿಂದ ಪೆರ್ಮಾಡಿಯು ಚಾಲುಕ್ಯ ಚಕ್ರವರ್ತಿಯನ್ನು ಕಡೆಗಣಿಸಿ ತನ್ನ ಸ್ವಾಯತ್ತತೆಯನ್ನು ಪ್ರತಿಷ್ಠಾಪಿಸಲು ಪ್ರಯತ್ನಿಸುತ್ತಿದ್ದುದು ಸ್ಪಷ್ಟವಾಗುತ್ತದೆ. ಮೂರನೆಯ ಸೋಮೇಶ್ವರನು ಅಷ್ಟೊಂದು ಭುಜಬಲಶಾಲಿಯಾಗಿರದಿದ್ದುದೇ ಮಾಂಡಲಿಕರ ಉದ್ಧತವೃತ್ತಿಗೆ ಕಾರಣ. ಅಲ್ಲದೆ, ಆತನು ವಯಸ್ಸಿನಿಂದ ಕಿರಿಯನೂ ಶಾಂತಸ್ವಭಾವ-

---

೧. ಕಳಚುರಿಯ ಕನ್ನಮನ ಮಗಳಾದ ಸಾವಳದೇವಿಯನ್ನು ವಿಕ್ರಮಾದಿತ್ಯನಿಗೂ ಮಗ ಪೆರ್ಮನಿಗೆ ಆರನೆಯ ವಿಕ್ರಮಾದಿತ್ಯ ಮತ್ತು ಅಭಿನವ ಸರಸ್ವತಿ ಎಂದು ಹೆಸರಾದ ಚಂದಲದೇವಿಯರ ಮಗಳನ್ನೂ ಕೊಟ್ಟುದಾಗಿ ೧೧೪೨ರ ವಳಸಂಗ ಶಾಸನದಿಂದ ತಿಳಿದುಬರುತ್ತದೆ.

೨. ಇದರೊಂದಿಗೆ ಬಸವರಾಜದೇವರ ರಗಳೆಯಲ್ಲಿ (ಸ್ಥಲ ೬, ಚರಣ ೨೨) ಬಿಜ್ಜಳನನ್ನು ಕಲಿಯುಗದ ರಾವಣನೆಂದು ಕರೆದಿರುವುದನ್ನು ಹೋಲಿಸಬೇಕು.

೩. Inscriptions in Northern Karnatak and Kolhapur State, p. 18, ವಿಜಾಪುರ ಶಾಸನ ಕ್ರಿ. ಶ. ೧೧೨೯.

೪. ತಡಬಾಗಿಲ ಶಾಸನ ಕ್ರಿ. ಶ. ೧೧೨೯.

೫. ಮುತ್ತಗಿ ಶಾಸನ—Inscriptions in Northern Karnatak and Kolhapur State, p. 42.

ದವನೂ ಆಗಿದ್ದನು. ಇದರ ದುರುಪಯೋಗ ಮಾಡಿಕೊಂಡು ಪೆರ್ಮನು ತನ್ನ ಖ್ಯಾತಿಯನ್ನು ಹೆಚ್ಚಿಸಿಕೊಂಡನು.

ತಂದೆಯ ಕಾರ್ಯವನ್ನೇ ಆತನ ಮಗ ಬಿಜ್ಜಳನು ಯಶಸ್ವಿಯಾಗಿ ಮುಂದು-ವರಿಸಿಕೊಂಡು ಬಂದಿದ್ದಾನೆ. ಬಿಜ್ಜಳನ ಹೆಸರು ಮೊದಲು ಕಂಡುಬರುವುದು ಕ್ರಿ. ಶ. ೧೧೪೨ರ ವಳಸಂಗ ಶಾಸನದಲ್ಲಿ. ಆತನು ಕರಹಡ ನಾಲ್ಕು ಸಾವಿರವನ್ನು ಆಳುತ್ತಿರು-ವುದಾಗಿ ಆ ಶಾಸನ ಹೇಳುತ್ತಿದೆ. ಮುಂದೆ ಐದು ವರ್ಷಗಳಲ್ಲಿ ಬರೆದ ಮುತ್ತಗಿಯ ಶಾಸನದಿಂದ ಬಿಜ್ಜಳನು ಕ್ರಿ. ಶ. ೧೧೪೭ರ ಸುಮಾರು ತರ್ದವಾಡಿಯನ್ನು ಆಳುತ್ತಿದ್ದನೆಂದು ಅರಿಯಬಹುದಾಗಿದೆ.[೧] ಕ್ರಿ. ಶ. ೧೧೪೨ರಿಂದ ೧೧೫೧ರ ವರೆಗೆ ಬಿಜ್ಜಳನು ತರ್ದ್ದೇ-ವಾಡಿಯನ್ನು ಆಳುತ್ತಿದ್ದನೆಂದು ತಿಳಿಯಬಹುದಾಗಿದೆ. ಆಗ ಚಾಲುಕ್ಯ ಚಕ್ರವರ್ತಿಯಾಗಿ ಮೂರನೆಯ ಜಗದೇಕಮಲ್ಲನೂ ಆತನ ಮಹಾದಂಡನಾಯಕನಾಗಿ ಹೊಯ್ಸಳರನ್ನು ಅರೆಯಟ್ಟಿದ ಪರಾಕ್ರಮಶಾಲಿ ಬರ್ಮದೇವನೂ ಕಲ್ಯಾಣದಲ್ಲಿದ್ದುದನ್ನು ಸ್ಮರಿಸಬೇಕು.

ಕ್ರಿ. ಶ. ಸು. ೧೧೫೧ರಲ್ಲಿ ಚಾಲುಕ್ಯಚಕ್ರವರ್ತಿಯಾದ ಜಗದೇಕಮಲ್ಲನು ಅಕಸ್ಮಿಕ-ವಾಗಿ ಮರಣಹೊಂದಿದುದರಿಂದ ಆತನ ತಮ್ಮ ಮೂರನೆಯ ತೈಲಪನು ಪಟ್ಟವೇರು ವನು. ಆಗ ಮಹತ್ವದ ಬದಲಾವಣೆಗಳಾದುದನ್ನು ಕಾಣುತ್ತೇವೆ. ಮಹಾ ದಂಡನಾಯಕ ನಾಗಿದ್ದ ಬರ್ಮರಸನು ತನ್ನ ದಂಡನಾಥ ಪದವಿಯನ್ನು ಬಿಟ್ಟುಬಿಡುವನು. ಕಿರಿಯನೂ ಅನುಭವರಹಿತನೂ ಆದ ದೊರೆ ಪಟ್ಟವೇರಿದುದರಿಂದಲೂ ಪ್ರಬಲಶಾಲಿಯಾದ ಬರ್ಮ-ರಸನಂತಹ ದಂಡನಾಯಕನು ಅಧಿಕಾರವನ್ನು ಬಿಟ್ಟುದರಿಂದಲೂ ಮೊದಲಿನಿಂದಲೇ ಸ್ವಾಯತ್ತತೆಯನ್ನು ಸಾಧಿಸುತ್ತ, ಪ್ರಬಲರಾಗುತ್ತ ನಡೆದಿದ್ದ ಸಾಮಂತರು ಇನ್ನೂ ಪ್ರಬಲರಾಗಲು ಯತ್ನಿಸುವರು. ಹೊಯ್ಸಳ ನರಸಿಂಹ ಮತ್ತು ಓರುಂಗಲ್ಲ ಪ್ರತಾಪ-ರುದ್ರರು ದಂಗೆಯನ್ನೇ ಎಬ್ಬಿಸುವರು. ಹೀಗೆ ಆಗಿನ ರಾಜ್ಯಕೀಯದಲ್ಲಿ ಪ್ರಕ್ಷುಬ್ಧ ವಾತಾವರಣವುಂಟಾಗುವುದು. ಅನೇಕ ಜನ ಸಾಮಂತರು ಈ ಸನ್ನಿವೇಶದ ಲಾಭ ವನ್ನು ಪಡೆಯಲು ಹವಣಿಸುತ್ತಿರಬೇಕು. ಅವರಲ್ಲಿ ಬಿಜ್ಜಳನು ಯಶಸ್ವಿಯಾಗಿ ಬರ್ಮ-ರಸನ ತರುವಾಯ ತೈಲಪನ ದಂಡನಾಯಕನಾಗಿದ್ದ ಕಸಪಯ್ಯನನ್ನು ಬನವಾಸಿ ಪ್ರಾಂತದ ಸಾಮಂತನನ್ನಾಗಿ ಮಾಡಿ ತಾನೇ ಮಹಾದಂಡನಾಥನಾದನು. ಬಿಜ್ಜಳನು ಒಳ್ಳೇ ಕರ್ತೃತ್ವಶಾಲಿಯಾಗಿದ್ದನು. ತರ್ದವಾಡಿ, ಕರಹಾಟಕ. ಬನವಾಸಿಯಂತಹ ಪ್ರಾಂತ ಗಳನ್ನು ದಕ್ಷತೆಯಿಂದ ಆಳಿ ಅನುಭವಸಂಪನ್ನನಾಗಿದ್ದನು. ಆರನೆಯ ವಿಕ್ರಮಾದಿತ್ಯನ ಮೊಮ್ಮಗನಾದುದರಿಂದ ಆತನಿಗೆ ಚಕ್ರವರ್ತಿಗಳ ಅಂತಃಪುರದ ಸಂಬಂಧವೂ ಇದ್ದಿತು. ಈತನು ಸಾಮಂತನಾಗಿರುವಾಗಲೇ ಚಾಲುಕ್ಯ ಚಕ್ರವರ್ತಿಗಳಿಬ್ಬರು ಗತಿಸಿಹೋದುದ-ರಿಂದ ರಾಜ್ಯಕೀಯ ಏರಿಳುವುಗಳನ್ನೂ ಬಹು ಸೂಕ್ಷ್ಮವಾಗಿ ಗಮನಿಸಿದ್ದನು. ದಂಡ-ನಾಯಕನಾಗಿ ರಾಜ್ಯಸೂತ್ರಗಳನ್ನು ವಹಿಸಿದೊಡನೆ ರಾಜ್ಯದಲ್ಲಿದ್ದ ದಂಗೆಯನ್ನು ಸದೆ-

---

೧. "ಸಮಸ್ತ . . . . . ಶ್ರೀಮನ್ಮಹಾಮಂಡಲೇಶ್ವರಂ ಕುಮಾರಂ ಬಿಜ್ಜಲದೇವರಸರ ಸೌರಸದಿಂ ಪತ್ಥಳೆಸಹಿತಂ ಪಡೆದು ಬರೆದ ಶಾಸನಂ"—

Inscriptions in Northern Karnatak and Kolhapur state.

ಬಿಡಿದನು. ತೈಲಪನು ಕಿರಿಯನೂ ಅನನುಭವಿಯೂ ಆದುದರಿಂದ ಆತನ ಹೆಸರಿನಲ್ಲಿ ತಾನೇ ರಾಜ್ಯದಾಡಳಿತೆಯನ್ನು ನಡೆಸತೊಡಗಿದನು. ದುರ್ಬಲನಾದ ದೊರೆಯ 'ಪಾದ-ಪದ್ಮೋಪಜೀವಿ' ಎಂದು ಕರೆಸಿಕೊಳ್ಳುವುದು ಮಹತ್ವಾಕಾಂಕ್ಷಿಯೂ ಪರಾಕ್ರಮ-ಶಾಲಿಯೂ ಆದ ಬಿಜ್ಜಳನ ಮನಸ್ಸಿಗೆ ಬಾರದಿದ್ದುದು ಸ್ವಾಭಾವಿಕವಾಗಿದೆ. ಅಲ್ಲದೆ. ಚಕ್ರವರ್ತಿಗಳ ಹೆಸರನ್ನು ತಾನು ಕೆತ್ತಿಸುವ ಶಾಸನಗಳಲ್ಲಿ ಉಪೇಕ್ಷಿಸುವ ಉಪಕ್ರಮವನ್ನು ಬಿಜ್ಜಳನ ತಂದೆ ಪೆರ್ಮಾಡಿಯು ಪ್ರಾರಂಭಿಸಿದ್ದುದನ್ನು ಈಗಾಗಲೇ ನಿರೂಪಿಸಲಾಗಿದೆ. ಬಿಜ್ಜಳನೂ ಹಾಗೆಯೇ ಶಾಸನಗಳಲ್ಲಿ ತನ್ನನ್ನು 'ತೈಲಪನ ದಂಡಾಧಿಪತಿ'ಯೆಂದು ಹೇಳಿಕೊಳ್ಳದೆ 'ಭುಜಬಲ ಚಕ್ರವರ್ತಿ' ಎಂದು ಹೇಳಿಕೊಳ್ಳತೊಡಗಿದನು. ಕ್ರಿ. ಶ. ೧೧೫೭ರಲ್ಲಿ ತೈಲಪನು ರಾಜ್ಯವಾಳುತ್ತಿದ್ದುದು ಸ್ಪಷ್ಟವಿದ್ದರೂ ಚಿಕ್ಕಲಗಿಯ ಶಾಸನದಲ್ಲಿ ಬಿಜ್ಜಳನನ್ನು 'ಮಹಾ ಭುಜಬಲಚಕ್ರವರ್ತಿ ರಾಯಸಮುದ್ಧರಣ' ಎಂದು ಕರೆಯಲಾಗಿದೆ. ಮಹಾ ಭುಜಬಲಚಕ್ರವರ್ತಿ ಎಂಬುದನ್ನು ಸಮಸ್ತ ಪ್ರಶಸ್ತಿ ಸಹಿತವಾಗಿ ಅಲ್ಲಿ ಬಳಸಿ-ರುದು ಇನ್ನೂ ಗಮನಾರ್ಹ. ಬಿಜ್ಜಳನ ಈ ಪ್ರಯತ್ನ ಕ್ರಿ. ಶ. ೧೧೫೪ರಿಂದಲೇ ಕಂಡು-ಬರುತ್ತದೆ. ಶಾಸನಗಳಲ್ಲಿ ಆತನನ್ನು ಒಮ್ಮೆ ಮಹಾಮಂಡಲೇಶ್ವರನೆಂದು ವರ್ಣಿಸಿ-ದರೆ, 'ಕಲಚೂರ್ಯ ಕುಲಚಕ್ರವರ್ತಿ' ಎಂದು ಇನ್ನೊಮ್ಮೆ ಬಣ್ಣಿಸಲಾಗಿದೆ. ಅನೇಕ ಸಲ ತೈಲಪನ ಆಳಿಕೆಯನ್ನು ಹೇಳುವುದಕ್ಕೆ ಪ್ರತಿಯಾಗಿ ಬಿಜ್ಜಳನ ಆಳಿಕೆಯ ವರ್ಷವನ್ನೇ ಉಲ್ಲೇಖಿಸಿರುವುದೂ ಕಂಡುಬರುತ್ತದೆ. ಹೀಗೆ ತಾನು ಮಹಾ ದಂಡನಾಯಕ ಪದವಿ-ಯನ್ನು ವಹಿಸಿದಂದಿನಿಂದ (ಕ್ರಿ. ಶ. ೧೧೫೧) ಚಕ್ರವರ್ತಿ ಪದವಿಯನ್ನು ಕಿತ್ತುಕೊಂಡು ಬಹಿರಂಗವಾಗಿ ಪ್ರಕಟಿಸುವವರೆಗೆ (ಕ್ರಿ. ಶ. ೧೧೬೨) ಬಿಜ್ಜಳನು ಹೊಂಚುಹಾಕುತ್ತ ತನ್ನ ಸಾಧನೆಯಲ್ಲಿಯೇ ಇದ್ದನು. ತೈಲಪನು ಇದೆಲ್ಲವನ್ನು ಕಂಡೂ ಸುಮ್ಮನಿದ್ದನೇಕೆ? ಎಂದು ಯಾರಾದರೂ ಪ್ರಶ್ನಿಸಬಹುದು. ಮೊದಲನೆಯದಾಗಿ ಬಿಜ್ಜಳನು ದಂಡನಾಥಮೊಗ-ಪಾಡದಲ್ಲಿಯೇ ಇದೆಲ್ಲವನ್ನೂ ನಡೆಸಿದನು. ಅಲ್ಲದೆ. ತೈಲಪನು ಕಿರಿಯನೂ ಅನನು-ಭವಿಯೂ ಅಷ್ಟೊಂದು ಪರಾಕ್ರಮಶಾಲಿಯಲ್ಲದವನೂ ಆಗಿದ್ದನು. ರಾಜ್ಯಕೀಯ ಚಾಕಚಕ್ಯವನ್ನು ಅರಿತು ನಿಯಂತ್ರಣದಲ್ಲಿಟ್ಟುಕೊಂಡು ಹೋಗುವ ಚಾಣಾಕ್ಷತನವೂ ಆತನಿಗಿರಲಿಲ್ಲ. ತನ್ನ ಸುತ್ತುಮುತ್ತಲೂ ಶತ್ರುಗಳೇ ಪ್ರಬಲರಾಗುತ್ತಿದ್ದುದನ್ನು ಆತನು ಅರಿತಿದ್ದನು. ಸಾಮಂತರೇ ತನ್ನ ಅಧೀನದಲ್ಲಿಲ್ಲವೆಂಬುದೂ ಆತನಿಗೆ ಗೋಚರವಾ-ಗಿದ್ದಿತು. ಎಲ್ಲಕ್ಕೂ ಮೇಲಾಗಿ ಚಾಲುಕ್ಯ ಸಾಮ್ರಾಜ್ಯಲಕ್ಷ್ಮಿ ಗದ್ದುಗೆಯಿಂದಿಳಿಯು-ತ್ತಿರುವಳೆಂಬುದು ತೈಲಪನಿಗೆ ಸೂಚ್ಯವಾಗಿ ವೇದ್ಯವಾಗುತ್ತಲೂ ಇರಬಹುದು. ಇಂತಹ ಸಮಯದಲ್ಲಿ ಬಿಜ್ಜಳನು ಅನೇಕ ಯುದ್ಧಗಳನ್ನು ಜಯಿಸಿ, ಸಾಮ್ರಾಜ್ಯದ ಗಡಿಯನ್ನು ವಿಸ್ತರಿಸಿದನೆಂಬುದು **'ಧರೆಯಂ ಸಾಧಿಸಿದಂ ತೆಂಕಾಬ್ಧಿಯೆ ಬಡಗಸೀಮೆ ಚಾಳುಕ್ಯ-ಕಟಕಮೆನೆ ಬಿಜ್ಜನೃಪಂ'**[೧] ಎಂಬಂತಹ ಶಾಸನೋಕ್ತಿಗಳಿಂದ ಗೊತ್ತಾಗುತ್ತದೆ. ಪ್ರಕೃತ್ಯಬ್ಧ ಪರಿಸ್ಥಿತಿಯಲ್ಲಿ ಹೇಗಾದರೂ ಆಗಲಿ. ಎಂತಾದರೂ ಆಗಲಿ ಅಳಿದುಹೋಗುವುದಕ್ಕಿಂತ ಉಳಿದುಕೊಳ್ಳುವುದು ಲೇಸೆಂದು ತೈಲಪನು ಮೌನಧಾರಣಮಾಡಿರಬಹುದು.

---

೧. ಶಿಕಾರಿಪುರ [illegible] ಕ್ರಿ. ಶ. [illegible]. Epigraphia Karnatica vol. VII

ತೈಲಪನಿಗೆ ಪರಿಸ್ಥಿತಿ ಪ್ರತಿಕೂಲವಿದ್ದರೆ, ಬಿಜ್ಜಳನಿಗೆ ಸುಯೋಗದಿಂದ ಬಹಳ ಅನುಕೂಲವಾಗಿದ್ದಿತು. ಅಥವಾ ತನಗೆ ಅನುಕೂಲವಾಗುವ ಪರಿಸ್ಥಿತಿಯನ್ನು ಆತನು ನಿರ್ಮಿಸಿಕೊಂಡಿದ್ದನೆಂದರೂ ಸಲ್ಲುವುದು. ತಾನು ತರ್ದವಾಡಿಯನ್ನು ಬಿಡುವಾಗ ತನ್ನ 'ಪಾದಪದ್ಮೋಪಜೀವಿ'ಯಾದ ಮೈಲಾರದೇವನು ಅಲ್ಲಿ ಸಾಮಂತನಾಗುವಂತೆ ನೋಡಿಕೊಂಡಿದ್ದನು. ಮೈಲಾರದೇವನು ಭುಜಬಲಪರಾಕ್ರಮಶಾಲಿಯಾಗಿದ್ದು ಬಿಜ್ಜಳನಿಗೆ ಅನುಕೂಲನಾಗಿದ್ದನು. ಮಹಾದೇವರಸ (ಕಸಪಯ್ಯ)ನನ್ನು ದಂಡನಾಥ ಪದದಿಂದ ತಳ್ಳಿ ತಾನು ಅದನ್ನು ಆಕ್ರಮಿಸಿದರೂ ಆತನನ್ನು ಪೂರ್ತಿಯಾಗಿ ಬಿಟ್ಟುಬಿಡದೆ ಬನವಾಸಿ ಪ್ರಾಂತಕ್ಕೆ ಸಾಮಂತನನ್ನಾಗಿ ಮಾಡಿದನು. ಈ ಸಾಮಂತರು ತನಗೆ ಅನುಕೂಲರಾದವರಿರಲಿ. ಇಲ್ಲದಿರಲಿ ಅಲ್ಲಿಯ ಆಳಿಕೆ ತನ್ನ ಅಂಕಿತದಲ್ಲಿರಲು ಅನುಕೂಲವಾಗುವಂತಹ ಕರಣಿಕರನ್ನು ನಿಯಮಿಸಿದ್ದನು. ಕಸಪಯ್ಯನ ಸಹಾಯಕ್ಕಾಗಿ ಆತನು (ಬಿಜ್ಜಳನು) ತನ್ನ ಪಂಚೇಂದ್ರಿಯಗಳಂತಿದ್ದ ಪೋತರಸ, ಚಟ್ಟರಸ, ಪದ್ಮರಸ, ಸಾವರಸರನ್ನು ನಿಯಮಿಸಿದುದಾಗಿ ತಿಳಿದುಬರುತ್ತದೆ. ತರ್ದವಾಡಿಯನ್ನಾಳುತ್ತಿದ್ದ ಮೈಲಾರದೇವನ ಸಹಾಯಕ್ಕಾಗಿ ರೇಚಣ, ಮಲ್ಲದೇವ, ಬಮ್ಮರಸ ಮತ್ತು ಗೋವಿಂದರನ್ನು ನಿಯಮಿಸಿದ್ದನು. ಹೀಗೆ ಬಲಿಷ್ಠರಾದವರನ್ನು ಸಾಮಂತರನ್ನಾಗಿ ನಿಯಮಿಸಿ, ತನ್ನ ವಿಶ್ವಾಸಿಕರನ್ನು ಅಲ್ಲಿ ಬೇರೆ ಬೇರೆ ಹುದ್ದೆಗಳಲ್ಲಿರಿಸಿ ಚಾಣಾಕ್ಷತನದಿಂದ ಬಿಜ್ಜಳನು ಆಡಳಿತೆಯನ್ನು ನಡೆಸಿದನು. ಇದೂ ಅಲ್ಲದೆ, ಆತನು ತನ್ನ ಜಾಣ್ಮೆಯಿಂದ ಇತರ ಸಾಮಂತರೊಡನೆ ಒಳ್ಳೆಯ ಸಂಬಂಧವನ್ನಿಟ್ಟುಕೊಂಡಿದ್ದನು. ತನ್ನ ಮಗಳು ಸಿರಿಯಾದೇವಿಯನ್ನು ಯಲಬುರ್ಗಿಯ ಸಿಂದವಂಶದ ಆಚುಗಿಯ ಮಗನಾದ ಇಮ್ಮಡಿ ಚಾವುಂಡನಿಗೆ ಕೊಟ್ಟಿದ್ದನು.[೧] ಸಿಂದವಂಶದ ಅರಸರು ಪರಾಕ್ರಮಶಾಲಿಗಳಾಗಿದ್ದರು. ಸಿಂದ ಆಚುಗಿಯು ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಯುದ್ಧದಲ್ಲಿ ಅವನಿಗೆ ವಿಶೇಷ ಸಹಾಯಮಾಡಿದ್ದನು. ಇಂತಹ ಪರಾಕ್ರಮಶಾಲಿಗಳೂ ಸಾಮಂತಶ್ರೇಷ್ಠರೂ ಆದವರೊಡನೆ ಶರೀರಸಂಬಂಧವನ್ನು ಬೆಳೆಸಿದುದು ಅರ್ಥಪೂರ್ಣವಾಗಿದೆ. ಅಲ್ಲದೆ, ಶಿಲಾಹಾರ ವಿಕ್ರಮಾದಿತ್ಯನ ಮಗನಾದ ಇಮ್ಮಡಿ ಭೋಜನೊಡನೆ ಬಿಜ್ಜಳನು ಸ್ನೇಹಸಂಬಂಧವನ್ನಿಟ್ಟುಕೊಂಡಿದ್ದನು. ಇದರಂತೆ ನೊಳಂಬವಾಡಿಯನ್ನು ಆಳುತ್ತಿದ್ದ ಪಾಂಡ್ಯವಂಶದ ವಿಜಯಪಾಂಡ್ಯನು ಮೊದಲಿನಿಂದಲೂ ಬಿಜ್ಜಳನ ಸ್ನೇಹಿತನಾಗಿದ್ದನು.

ಹೀಗೆ ಬಿಜ್ಜಳನು ದಿನದಿನಕ್ಕೆ ಪ್ರಬಲನಾಗುತ್ತ ಸುತ್ತಣ ಸಾಮಂತರೊಡನೆ ಸ್ನೇಹದಿಂದಿದ್ದಂತಿದ್ದರೂ ಅವರ ಮೇಲೆ ಪ್ರಭುತ್ವವನ್ನು ಬೀರುತ್ತ, ಚಕ್ರವರ್ತಿಯನ್ನು ಕಡೆಗಣಿಸುತ್ತ ರಾಜ್ಯಸೂತ್ರಗಳನ್ನೆಲ್ಲ ತನ್ನ ಕೈಯಲ್ಲಿಟ್ಟುಕೊಂಡು ಅಪರೋಕ್ಷ ಚಕ್ರವರ್ತಿಯಂತೆ ಅಧಿಕಾರ ನಡೆಸುತ್ತಿರುವ ಸಮಯದಲ್ಲಿ ಉತ್ತರದಲ್ಲಿ ಕಾಕತೀಯ ಇಮ್ಮಡಿ ಪ್ರೋಲನು, ಪೂರ್ವದಲ್ಲಿ ಭೀಮನೆಂಬ ಇನ್ನೊಬ್ಬ ಸಾಮಂತನು ದಂಗೆಯನ್ನೆಬ್ಬಿಸುವರು; ತಮ್ಮ ಸ್ವಾತಂತ್ರ್ಯವನ್ನು ಸಾರಿ, ಚಕ್ರವರ್ತಿಯ ವಿರುದ್ಧ ಯುದ್ಧಹೂಡುವರು. ಈ ಸಮಯದಲ್ಲಿ ಬಿಜ್ಜಳನ ವರ್ತನೆ, ಆತನ ಕಾಪಟ್ಯಕ್ಕೆ ಎತ್ತಿಹಿಡಿದ ಕನ್ನಡಿಯಾಗಿದೆ.

---

೧. Bombay Gazetteer vol. I, Part II, p. 548.

ಆತನು ಮನಸ್ಸುಮಾಡಿದ್ದರೆ ಸ್ವತಃ ದಂಡೆತ್ತಿಹೋಗಿ, ಸಾಮ್ರಾಜ್ಯದ ವಿರುದ್ಧ ದಂಗೆ ಹೂಡಿದವರನ್ನು ಸದೆಬಡಿಯಬಹುದಾಗಿದ್ದಿತು. ಆದರೆ, ಈಗ ಅವನಿಗೆ ರಾಜ್ಯದಲ್ಲಿ ದಂಗೆ ಏಳುವುದೇ ಬೇಕಾಗಿದ್ದಿತು. ಮಹಾಮಂತ್ರಿಪದವಿಯಲ್ಲಿದ್ದುದರಿಂದ ಸ್ವತಃ ತಾನೇ ದಂಗೆ ಎಬ್ಬಿಸಿ ತೈಲಪನ ಆಳಿಕೆಯನ್ನು ಕೊನೆಗೊಳಿಸಿ ಚಕ್ರವರ್ತಿಯಾಗುವುದು ಆತನಿಗೆ ಬೇಕಿರಲಿಲ್ಲ. ರಾಜ್ಯದ ಪೂರ್ವೋತ್ತರದ ಸಾಮಂತರೂ ಅಧೀನರಾಜರೂ ದಂಗೆಯೆಬ್ಬಿಸಿದಾಗ ಬಿಜ್ಜಳನು ಉದಾಸೀನನಾದನು. ಆಗ ಆ ದಂಗೆಗಳನ್ನು ನಿಲ್ಲಿಸಲು ಸ್ವತಃ ತೈಲಪನೇ ಪ್ರೋಲನ ಮೇಲೆ ದಂಡೆತ್ತಿ ಹೋಗುವನು. ಯುದ್ಧದಲ್ಲಿ ಸೋತು ಪ್ರೋಲನ ಕೈಯಲ್ಲಿ ಸೆರೆಸಿಗುವನು. ಆತನು ಚಕ್ರವರ್ತಿಯೆಂಬುದನ್ನು ಸ್ಮರಿಸಿ ಪ್ರೋಲನು ಆತನನ್ನು ಬಿಟ್ಟುಬಿಡುವನು. ಚಕ್ರವರ್ತಿಯಾಗಿ ಅಧೀನ ಅರಸನ ಸೆರೆಸಿಕ್ಕೆನೆಂಬ ಅಪಮಾನದ ಭಾವನೆಯ ಮೂಲಕ[೧] ಆತನು ಕಲ್ಯಾಣಕ್ಕೆ ಹೋಗದೆ ಅಣ್ಣಿಗೆರೆಗೆ ಬಂದು ಅಲ್ಲಿ ನಿಂತನು. ಈ ಸಮಯವನ್ನೇ ಸಾಧಿಸುತ್ತ ಕುಳಿತಿದ್ದ ಬಿಜ್ಜಳನು ಶಕವರ್ಷ ೧೦೮೩ (ಕ್ರಿ. ಶ. ೧೧೬೧–೬೨) ರಲ್ಲಿ ತಾನೇ ಚಕ್ರವರ್ತಿಯೆಂದು ಸಾರಿದನು.

**"ನೊಸಲೊಳ್ ಸಾಮ್ರಾಜ್ಯಪಟ್ಟಂ ನೆಲಸಲೊಡನೆ ದೋರ್ಗರ್ವದಿಂ ಮನ್ನೆಯಗರ್**
**ಬ್ಬಸಮಂ ಮುಮ್ಮಾಡ ಮತ್ತಿರೆಯಿರೆ ಚಲದಿಂ ಮಂಡಳೇಶರ್ಗೆ ಬೇರೊಳ್**
**ಬಿಸಿನೀರಂ ಪೊಯ್ದನಂತಂತಿರೆಯಿರೆ ಬಳಿಯಂ ರಾಯರಂ ಕೂಡೆ ನಿರ್ಮೂ**
**ಳಿಸಿದಂ ಚಕ್ರಾಧಿನಾಥೋಜ್ವಳಮುಖತಿಳಕಂ ಬಿಜ್ಜಳಕ್ಷೋಣಿಪಾಲಂ ॥"**

**"ಕೊಡದಿನುದಯಿಸಿದಗಸ್ತ್ಯಂ**
**ಕಡಲಂ ಪೀರ್ದಂತೆ ಮಂಡಳೇಶ್ವರರಾಜ್ಯ**
**ಕ್ಕೊಡೆಯನೆನೆ ಪುಟ್ಟಿ ವೀರದಿ**
**ನೆಡೆಗೊಂಡಂ ಸಕಳ ಧಾತ್ರಿಯಂ ಬಿಜ್ಜನೃಪಂ"**[೨]

ಶಾಸನೋಕ್ತವಾದ ಈ ಪದ್ಯಗಳು ಬಿಜ್ಜಳನು ಸಾಮಂತನಾಗಿ ಹುಟ್ಟಿ ಸಾಮ್ರಾಜ್ಯಕ್ಕೊಡೆಯನಾದುದನ್ನು ವಿವರಿಸುತ್ತವೆ. ಮಂಡಳೇಶ್ವರನಾದವನು ಸಮಯ ಸಾಧಿಸಿ ಆಡಳಿತೆಯ ಸೂತ್ರಗಳನ್ನು ವಹಿಸಿ ಪ್ರತಿಕೂಲರಾದವರನ್ನು ಸದೆಬಡಿದು ಅನುಕೂಲರಾದವರನ್ನು ಪೋಷಿಸಿ ಜೋಳದ ಪಾಳಿಯಂ ಬಗೆಯದೆ ಕೊನೆಗೆ ಚಕ್ರವರ್ತಿಗೆ ಎರಡು ಬಗೆದು ಮೋಸಮಾಡಿ ಸಮ್ರಾಟನಾದನು. ಇದರಿಂದ ರಾಜ್ಯಕೀಯದಲ್ಲಿ ಅತ್ಯಂತ ಪ್ರಕ್ಷುಬ್ಧ ವಾತಾವರಣವಿದ್ದಿತೆಂದು ಬೇರೆ ಹೇಳಬೇಕೆ? ಮಾಂಡಲಿಕರಾದ ಕಳಚೂರ್ಯರು ಚಾಳುಕ್ಯ ಸಿಂಹಾಸನವನ್ನು ಆಕ್ರಮಿಸಿದುದು ಜನತೆಯಲ್ಲಿ ಹಾಗೂ ಮಿಕ್ಕ ಸಾಮಂತರಲ್ಲಿ ತೀರ ಅಸಮಾಧಾನವನ್ನುಂಟುಮಾಡಿರಲು ಸಾಕು. ಬಿಜ್ಜಳನ ಭಯಕ್ಕೇನೋ ಕೆಲವರು ಸ್ನೇಹಿತರಂತೆಯೂ ಮತ್ತೆ ಕೆಲವರು ಉದಾಸೀನರಂತೆಯೂ ಇದ್ದರು. ಆದರೆ. ಸಮಯ ಬಂದರೆ ಅದರ ಪ್ರತಿಕ್ರಿಯೆ ಮಾಡಲು ಸಹ ಅವರು ಹಿಂಜರಿಯುತ್ತಿರಲಿಲ್ಲ. ಬಿಜ್ಜಳ

೧. This incident gave a crushing blow to the prestige of the Chalukyas. History and Culture of Indian people, vol. II, p. 177

೨. Epigraphia Carnatica, vol. XI, p. 42 (Davangere Inscs).

ನಿಗೂ ಇದು ವೇದ್ಯವಾಗಿರಲು ಸಾಕು. ಅಂತೆಯೇ ಜನಬೆಂಬಲವನ್ನು ಆತನು ಸಂಪಾದಿಸ-ಬೇಕಾಗಿದ್ದಿತು. ತನ್ನ ಆಡಳಿತೆ ಸುಭದ್ರವಾಗಿ ನಡೆದು ಕಲಚೂರ್ಯರು ಸಿಂಹಾಸನದ ಮೇಲೆ ಸ್ಥಿರವಾಗಿ ನೆಲೆಗೊಳ್ಳಬೇಕಾದರೆ, ಜನತೆಯ ಬೆಂಬಲ ಅವಶ್ಯವೆಂದು ಆತನಿ-ಗೆನಿಸಿದ್ದಿತು. ಅಂತೆಯೇ ಆತನು ಆ ಮಹಾಕಾರ್ಯಕ್ಕೆ ಅನುವಾಗಬಲ್ಲವರನ್ನು ತನ್ನ ಮಂತ್ರಿಮಂಡಲದಲ್ಲಿಯೋ ದಂಡನಾಥಪದದಲ್ಲಿಯೋ ಆಡಳಿತೆಯಲ್ಲಿಯೋ ನಿಯಮಿಸಿ ಕೊಂಡಿರಲು ಸಾಕು. ಈ ಹಿನ್ನೆಲೆಯಲ್ಲಿ ಬಿಜ್ಜಳನು ಬಸವಣ್ಣನವರನ್ನು ದಣ್ಣಾಯಕ-ರನ್ನಾಗಿ ಮಾಡಿಕೊಂಡಂತೆ ತೋರುತ್ತದೆ.

ಬಸವಣ್ಣನವರು ಕೂಡಲಸಂಗಮದಿಂದ ನೇರವಾಗಿ ಕಲ್ಯಾಣಕ್ಕೆ ಹೋಗಿರದೆ ಹರಿಹರದೇವನು ಹೇಳುವಂತೆ ಬಿಜ್ಜಳರಾಯನಾಳುತ್ತಿದ್ದ ಮಂಗಳವಾಡಕ್ಕೆ ಹೋಗಿರುವ ಸಂಭವವೂ ಉಂಟು. ಇದು ನಿಜವಿದ್ದರೆ, ಬಸವಣ್ಣನು ಕರಣಿಕನಾಗಿ ಸೇರಿ, ತನ್ನ ಕರ್ತೃತ್ವಶಕ್ತಿ, ಬುದ್ಧಿಶಕ್ತಿ, ಕಾರಣಿಕ ಶಕ್ತಿಯಿಂದ ಮೇಲಕ್ಕೇರಿ ದಣ್ಣಾಯಕನಾದಂತೆ ತೋರುತ್ತದೆ. ಬಲದೇವ, ಸಿದ್ಧರಸರೊಡನೆ ಆದ ಶರೀರಸಂಬಂಧವೂ[1] ಬಸವಣ್ಣನವರ ಈ ಅಭ್ಯುದಯಕ್ಕೆ ಅನುಕೂಲವಾಗಿರುವಂತೆ ತೋರುತ್ತದೆ. ಬಿಜ್ಜಳನ ಮತ್ತಿತರ ಮಂತ್ರಿಗಳಿತ್ತ ಶಾಸನಗಳು ದೊರೆವುದರಿಂದ ಅವರ ಹೆಸರು ಅಲ್ಲಿ ಕಂಡುಬರುತ್ತವೆ. ಅವರು ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಿಗೆ ಸಾಮಂತರಾಗಿಯೂ ಇದ್ದುದರಿಂದ ದತ್ತಿಗಳನ್ನು ಕೊಡುವ ಪ್ರಸಂಗಗಳು ಬಂದೇ ಬರುತ್ತಿದ್ದುವು. ಬಸವಣ್ಣನವರು ಯಾವ ಪ್ರಾಂತಕ್ಕೂ ಅಧಿಪತಿಗಳೆನಿಸದೆ ದಂಡನಾಥ ಚೂಡಾಮಣಿಯೆನಿಸಿ, ಕಲ್ಯಾಣದಲ್ಲಿ ನೆಲಸಿ, ಲೋಕಸಂಗ್ರಹಕಾರ್ಯದಲ್ಲಿ ನಿರತರಾಗಿರಬೇಕು. ಸಾಮ್ರಾಜ್ಯಕ್ಕೆ ಜನತೆಯ ಪ್ರೇಮ-ವಿಶ್ವಾಸಗಳು ಅವಶ್ಯವಿದ್ದುದರಿಂದ ಬಸವಣ್ಣನವರಂತಹ ಕಾರಣಿಕ ವ್ಯಕ್ತಿಯು ಜನತೆಯ ಮನವನ್ನು ಸೆಳೆದು, ಈ ಕಾರ್ಯವನ್ನು ಪೂರೈಸಬಲ್ಲನೆಂಬುದನ್ನು ಬಿಜ್ಜಳನು ಕಂಡು ಕೊಂಡಿರಲು ಸಾಕು. ತರ್ದವಾಡಿಯ ಮೈಲಾರನಿಗೋ ಬನವಾಸಿಯ ಕಸಪಯ್ಯ-ನಿಗೋ, ಕರಹಾಟದ ಇಮ್ಮಡಿ ಭೋಜನಿಗೋ ಯಾರೊಬ್ಬರಿಗೆ ದಂಡನಾಥ ಪದವಿ ಯನ್ನು ಕೊಟ್ಟರೆ ಮಿಕ್ಕವರಿಗೆ ಅಸಮಾಧಾನವಾಗಿ ರಾಜ್ಯದಲ್ಲಿ ಕ್ಷೋಭೆ ಎದ್ದು ಅನೈಕ್ಯತೆ-ಯುಂಟಾಗಬಹುದೆಂದು ಬಿಜ್ಜಳನು ಭಾವಿಸಿದ್ದನು. ಮೊದಮೊದಲು ಮಹಾದೇವರಸ (ಕಸಪಯ್ಯ)ನಿಗೆ ಆ ಪದವಿಯನ್ನು ಕೊಟ್ಟಂತೆ ಮಾಡಿದರೂ ಬಿಜ್ಜಳನು ಕ್ಷಿಪ್ರದಲ್ಲಿಯೇ ಅದನ್ನು ಬಸವಣ್ಣನಿಗೆ ಕೊಟ್ಟಂತೆ ಕಾಣುತ್ತದೆ.

ಬಸವಣ್ಣನು ಶಿವಭಕ್ತನಾಗಿದ್ದು ಭಕ್ತಿಸಾಮ್ರಾಜ್ಯದಲ್ಲಿ ಲೋಲಾಡುತ್ತಿದ್ದುದನ್ನು ಬಿಜ್ಜಳನು ಬಹುಕಾಲ ಪೂರ್ವದಲ್ಲಿಯೇ ಗುರುತಿಸಿರಬೇಕು. ಕಲಚೂರ್ಯರು ನಿಷ್ಠೆಯ ಶೈವರು. ಗೋರಖಪುರದಲ್ಲಿ ಆಳುತ್ತಿದ್ದ ಕಳಚೂರ್ಯರ ಒಂದು ಮನೆತನದ ರಾಜ-ಮುದ್ರೆ ನಂದಿಯ ವಿಗ್ರಹವಾಗಿದ್ದಿತು[2]. ಕಲಚುರಿ ಮನೆತನದ ಕೃಷ್ಣ ಎಂಬ ದೊರೆ-

---

೧. ಬಸವಣ್ಣನವರ ಪತ್ನಿಯರಾದ ಗಂಗಾದೇವಿ, ಮಾಯಿದೇವಿಯರು ಬಲದೇವ ಸಿದ್ಧರಸರ ಮಕ್ಕಳೆಂದು ತಿಳಿಯಬಹುದಾಗಿದೆ.

೨. ಮಹನೇರ ತಾಮ್ರಶಾಸನ: Epigraphia Indica, vol. VI, p. 1

ಯನ್ನು 'ಆಜನ್ಮ ಏವ ಪಶುಪತಿ ಸಮಾಶ್ರಯಃ' ಎಂದೂ ಅನಂತರ ಬಂದ ಶಂಕರಗಣ, ಬುದ್ಧರನ್ನು ಪರಮ ಮಾಹೇಶ್ವರರೆಂದೂ ವರ್ಣಿಸಲಾಗಿದೆ. ಹೀಗೆ ಶಿವಭಕ್ತರಾಗಿ ಶೈವ-ಪಕ್ಷಪಾತಿಗಳಾದ ಕಲಚೂರ್ಯ ಮನೆತನದಲ್ಲಿ ಹುಟ್ಟಿದ ಬಿಜ್ಜಳನು, ಬಸವಣ್ಣನವ-ರಂತಹರನ್ನು ಬರಮಾಡಿಕೊಂಡುದೂ ಬಸವಣ್ಣನವರಂತಹರು ಬಂದು ಆತನನ್ನು ದಂಡನಾಥರಾಗಿ ಒಲೈಸಿರುವುದೂ ಸಹಜವಾಗಿದೆ. ಮಂತ್ರಿಗಳ ಕರ್ತವ್ಯಕರ್ಮಾನುಸ-ರಿಸಿ ಬಸವಣ್ಣನವರು ಗುಡಿಗುಂಡಾರಗಳನ್ನು ಕಟ್ಟಿಸುವ, ಜೀರ್ಣೋದ್ಧಾರ ಮಾಡಿ-ಸುವ, ದಾನ-ದತ್ತಿಗಳನ್ನು ಬಿಡುವ ಪ್ರಸಂಗಗಳೆಷ್ಟೋ ಬಂದಿರುವ ಸಂಭವವಿದೆ. ಆಳ್ದನ ಸೊಮ್ಮು ಆಳ್ದಂಗೆಂಬಂತೆ ಎಲ್ಲವನ್ನೂ ದೊರೆಯ ಹೆಸರಿನಲ್ಲಿ ಮಾಡಿ, ಆತನ ಹೆಸರನ್ನೇ ಅಲ್ಲಿ ಕೆತ್ತಿಸಿರುವ ಸಂಭವವಿದೆ. 'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ, ಏಡಿಸಿ ಕಾಡಿತ್ತು ಶಿವನ ಡಂಗುರ.' ಎಂಬ ನಿಷ್ಕಾಮಭಕ್ತಿಯನ್ನು ಆಚರಿಸುತ್ತಿದ್ದ ಬಸವಣ್ಣನವರು ಇಂತಹ ರಾಜಶಾಸನಗಳಲ್ಲಿ ತಮ್ಮ ಹೆಸರನ್ನು ಕೊರೆಸುವುದು ಸಾಧ್ಯವೇ? ಅಲ್ಲದೆ, ಬಸವಣ್ಣನವರು ಸಾಮ್ರಾಜ್ಯದ ಆವುದೊಂದು ಪ್ರಾಂತಕ್ಕೆ ಅಧಿಪತಿಗಳಾಗಿರದೆ ನೇರವಾಗಿ ಕಲ್ಯಾಣದ ಕೇಂದ್ರ ಆಡಳತೆಗೆ, ಭಂಡಾರಕ್ಕೆ ಸಂಬಂಧಪಟ್ಟವರಾಗಿರಬಹು-ದಾದುದರಿಂದಲೂ ದಾನಧರ್ಮಾದಿಗಳನ್ನು ನೀಡಿ ಶಾಸನ ಕೊರೆಸುವುದಕ್ಕೆ, ಬರೆಸು ವುದಕ್ಕೆ ತತ್ವತಃ ಒಪ್ಪದವರಾಗಿರಬಹುದಾದುದರಿಂದಲೂ ದಣ್ಣಾಯಕ ಬಸವಣ್ಣನವರ ಶಾಸನಗಳು ಉಪಲಬ್ಧವಾಗಿರಲಿಕ್ಕಿಲ್ಲ. ಕಲ್ಲು ಕೂಗದೆಂದು ಎಲ್ಲ ಸತ್ಯವನ್ನು ಅಲ್ಲಗಳೆಯ ಬಹುದೇ? ಬಸವಣ್ಣನವರು ಬಿಜ್ಜಳನಲ್ಲಿ ಓಲಗಿಸಿದರೆಂಬುದಕ್ಕೆ, ಭಂಡಾರದ ಅಧಿಪತಿ ಗಳಾಗಿದ್ದರೆಂಬುದಕ್ಕೆ, ಮಿಕ್ಕವರ ವಚನಗಳೊಡನೆ ಸ್ವತಃ ಅವರ ವಚನಗಳೇ ಸಾಕ್ಷಿಯಾಗಿವೆ.

**'ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯಾ ಪ್ರಮಥರು.'[೧]**

**'ಕೂಡಲಸಂಗಮದೇವನುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯಾ?'[೨]**

**'ಆದ್ಯರ ಅಱುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ'[೩]**

**'ರಾಜಾಧಿರಾಜ ಬಿಜ್ಜಳರಾಯನೂ ಆ ಬಸವಣ್ಣನೂ ಕಲ್ಯಾಣಪಟ್ಟಣದೊಳಗೆ ಸುಖಸಂಕಥಾ ವಿನೋದದಿಂದ ರಾಜ್ಯಂಗೆಯ್ಯುತ್ತಿರಲು'[೪].**

ಹೀಗೆಯೇ ಅನೇಕ ಕವಿಗಳೂ ಈ ಮಾತನ್ನು ಘಂಟಾಘೋಷವಾಗಿ ಸಾರಿರುವರು.[೫]

---

೧. ಬಪವ ೭೦೯. ೨. ಬಪವ ೭೫೪. ೩. ಚಬವ ೫೬೩. ೪. ಚಬವ ೩೫೭.

೫. ಬದೇರ. ಬಪು ೧-೧೦. ೫-೩, ೪, ೬, ೭, ೮, ೯, ೧೨, ೫೧, ೫೨, ೫೫, ೫೬, ೬೦, ೬೧, ೬೫. ೬೯. ೭-೧೭, ೧೯. ೮-೧೨ ಇತ್ಯಾದಿ.

ಪ್ರಲೀ, ಪು. ೧೧೯. ೧೨೦. ೧೫೬. ೧೯೦. ೧೯೧. ೧೯೨. ೨೦೦. ೨೦೧. ೨೫೫. ೨೫೪ ಇತ್ಯಾದಿ.

ಶಿಚಿಂ, ಪು. ೨೬೪, ೨೬೫, ೨೬೬, ೨೬೭ ಇತ್ಯಾದಿ.

ಸಿಂಪ್ರ. ಪು, ೪೪೬, ೪೫೨, ೪೬೨, ೪೬೭, ೪೭೩ ಇತ್ಯಾದಿ.

ಚಬಪು, ಶಲೀ ಮೊದಲಾದ ವೀರಶೈವ ಪುರಾಣಗಳಲ್ಲಿ ವಿಪುಲವಾದ ಉಲ್ಲೇಖಗಳು ಬರುತ್ತವೆ.

ವಿಪುಳವಾದ ಈ ಉಲ್ಲೇಖಗಳು ಬಸವಣ್ಣನವರು ಬಿಜ್ಜಳನಲ್ಲಿ ದಂಡನಾಥ-ರಾಗಿದ್ದರೆಂಬ ವಿಷಯವನ್ನು ಸ್ಫುಟಗೊಳಿಸುತ್ತವೆ. ಬಿಜ್ಜಳನ ಆಕ್ರಮಣದಿಂದ ಚಾಳುಕ್ಯ ಸಾಮ್ರಾಜ್ಯದಲ್ಲಿ ಕ್ಷೋಭೆ ನೆಲೆಗೊಂಡು, ಜನತೆಯಲ್ಲಿ ಅದೊಂದು ಬಗೆಯ ಅತೃಪ್ತಿ-ಯುಂಟಾಗಿರುವುದು ಸ್ವಾಭಾವಿಕ. ಇಂತಹ ಸಮಯದಲ್ಲಿ ಜನಮನಕ್ಕೆ ಶಾಂತಿಯನ್ನೀಯ-ಬಲ್ಲ ಬಸವಣ್ಣನವರಂತಹ ಕಾರಣಿಕರ ಅವಶ್ಯಕತೆಯಿದ್ದಿತು. ಬಸವಣ್ಣನವರಲ್ಲಿದ್ದ ಈ ಶಕ್ತಿಯನ್ನು ಕಂಡುಹಿಡಿದುದು ಬಿಜ್ಜಳನ ಚಾಣಾಕ್ಷತನ.

ಬಿಜ್ಜಳ–ಬಸವಣ್ಣನವರು ಕರ್ನಾಟಕದ ರಾಜ್ಯಕೀಯ ರಂಗದಲ್ಲಿ ಅರಸು-ಪ್ರಧಾನಿಗಳಾಗಿ ತಲೆದೋರುವ ಸಮಯಕ್ಕೆ ಇಲ್ಲಿ ಭಾರತದ ಎಲ್ಲ ಧರ್ಮಗಳ ಹಾಗೂ ಅವುಗಳ ಅವಾಂತರ ಭೇದಗಳ ಅಸ್ತಿತ್ವವನ್ನು ಕಾಣಬಹುದಾಗಿದ್ದಿತು. ಅವುಗಳಲ್ಲಿ ಬೌದ್ಧ-ಧರ್ಮವೂ ಒಂದು. ಅಶೋಕನ ಶಾಸನಗಳು ಕರ್ನಾಟಕದ ಮಸ್ಕಿ, ಕೊಪ್ಪಳ, ಬ್ರಹ್ಮಗಿರಿ ಮುಂತಾದ ಕಡೆ ದೊರೆಯುವುದರಿಂದ ಆಗ (ಕ್ರಿ. ಪೂ. ೩ನೆಯ ಶತಕ) ಬೌದ್ಧಧರ್ಮವು ಅಲ್ಲಿ ಅಸ್ತಿತ್ವದಲ್ಲಿರಲು ಸಾಕು. ಮಸ್ಕಿಯಲ್ಲಿ ಬೌದ್ಧರ ಒಂದು ಮಹಾ ಸಂಘವೇ ಇದ್ದಿತಂತೆ. ಅಶೋಕನು ಬೌದ್ಧಧರ್ಮೋಪದೇಶಕರನ್ನು ಬನವಾಸಿ, ಮಹಿಷಮಂಡಲಗಳಿಗೆ ಕಳಿಸಿದು-ದಾಗಿ 'ಮಹಾವಂಶ'ವೆಂಬ ಬೌದ್ಧಗ್ರಂಥಗಳಿಂದ ಅರಿಯಬಹುದಾಗಿದೆ. ಚಂದ್ರವಳ್ಳಿ ಹಾಗೂ ಕೊಲ್ಲಾಪುರದ ನೆರೆಯ ಬ್ರಹ್ಮಪುರಿಯ ಭೂಖನನದಲ್ಲಿ ದೊರೆತ ಶಾಲಿವಾಹನರ ನಾಣ್ಯಗಳಲ್ಲಿ ಬೋಧಿವೃಕ್ಷ ಹಾಗೂ ಚೈತ್ಯಚಿಹ್ನಗಳಿವೆ. ಇವೆರಡೂ ಸ್ಪಷ್ಟವಾಗಿ ಬೌದ್ಧ ಧರ್ಮದ ಸಂಕೇತಗಳು. ಶಾಲಿವಾಹನರು ಬೌದ್ಧಧರ್ಮಾನುಯಾಯಿಗಳಾಗಿರಬೇಕೆಂದು ಇದರಿಂದ ನಿರ್ಣಯಿಸಬಹುದಾಗಿದೆ. ಇವರು ಕ್ರಿ. ಶ. ಆರಂಭದಿಂದಲೇ ಕರ್ನಾಟಕವನ್ನು ಆಳುತ್ತಿದ್ದುದರಿಂದ ಆಗಿನಿಂದಲೇ ಬೌದ್ಧಧರ್ಮ ಇಲ್ಲಿ ಪ್ರಚಾರದಲ್ಲಿದ್ದಿತೆಂದು ನಿರ್ಣ-ಯಿಸಬಹುದಾಗಿದೆ. ಕ್ರಿ. ಶ. ೧ನೆಯ ಶತಮಾನದ ಅಂತ್ಯದಲ್ಲಿ ಬನವಾಸಿಯ ದೊರೆಯ ಮಗಳಾದ ನಾಗರಸಿ, ಅಲ್ಲಿಯ ಬೌದ್ಧವಿಹಾರಕ್ಕೆ ದತ್ತಿಯನ್ನು ಕೊಟ್ಟಿರುವಳು. ಇದೇ ಸ್ಥಳದ ಭೂತಪಾಲನೆಂಬ ವ್ಯಾಪಾರಸ್ಥನು ಕಾರ್ಲಾಗುಹೆಯಲ್ಲಿರುವ ಬೌದ್ಧಮಂಟಪವನ್ನು ಕೆತ್ತಿಸಿರುವನು.೧ ಬೌದ್ಧರಿಗೆ ಅತ್ಯಂತ ಪವಿತ್ರವಾದ 'ಮೃಗದಾವ' ಎಂಬುದು 'ಫುಲ್ಲೆಯ ಬಯಲು' ಎಂಬ ಅಭಿಧಾನದಿಂದ ಬನವಾಸಿಯಲ್ಲಿದ್ದಿತಂ.೨ ಬನವಾಸಿಯು ಕ್ರಿ. ಶ. ಆರಂಭದಿಂದಲೂ ಬೌದ್ಧರಿಗೆ ಪವಿತ್ರವಾದ ಯಾತ್ರಾಸ್ಥಳವಾಗಿದ್ದಿತು. ಕ್ರಿ. ಶ. ೧೦೬೫ರಲ್ಲಿ ಚಾಲುಕ್ಯ ಆಹವಮಲ್ಲನ ದಂಡನಾಯಕನು ಬನವಾಸಿಯಲ್ಲಿ ಬೌದ್ಧವಿಹಾರವನ್ನು ಕಟ್ಟಿಸಿ ತಾರಾ, ಭಗವತಿ, ಲೋಕೇಶ್ವರ ಹಾಗೂ ಬುದ್ಧ ವಿಗ್ರಹಗಳನ್ನು ಸ್ಥಾಪಿಸಿ, ದತ್ತಿಗಳನ್ನು ಬಿಟ್ಟುದಾಗಿ ವೇದ್ಯವಾಗುತ್ತದೆ. ಇದೇ ಚಾಲುಕ್ಯ ಆಹವಮಲ್ಲನ ಅಪ್ಪಣೆಯ ಮೇರೆಗೆ ಪೆರ್ಗಡೆ ನಾಗಿಯಕ್ಕ ಸಹವಾಸಿಯು ಕ್ರಿ. ಶ. ೧೦೬೭ರಲ್ಲಿ ಬುದ್ಧ ಜಾತಕರ ಪಾದವನ್ನು ತೊಳೆದು ದತ್ತಿಯನ್ನು ಬಿಟ್ಟಿರುವಳು. ಹೀಗೆಯೇ ಕ್ರಿ. ಶ. ೧೧೯೮ರಲ್ಲಿ ಆಹವಮಲ್ಲನ ಇಬ್ಬರು ಅಧಿಕಾರಿಗಳಾದ ಜೋಗರಸ ಮತ್ತು ಲೋಕರಸರೆಂಬವರು ಬೌದ್ಧವಿಹಾರ

---

೧. ಕಾರ್ಲೆ ಗುಹೆಯಲ್ಲಿರುವ ಶಿಲಾಶಾಸನ.

೨. ಶಿಕಾರಿಪುರ ಶಿಲಾಶಾಸನ ಕ್ರಿ. ಶ. ೧೦೪೮.

ಗಳಿಗೆ ದತ್ತಿಗಳನ್ನು ಬಿಟ್ಟಿರುವರು. ಕ್ರಿ. ಶ. ೧೦೬೫ರ ಮೊದಲನೆಯ ಸೋಮೇಶ್ವರನ ಕಾಲದ ಡಂಬಳ ಶಾಸನದಲ್ಲಿ ಆ ಊರೊಳಗಣ ತಾರಾದೇವಿಗೆ ದತ್ತಿಯನ್ನು ಬಿಡಲಾಗಿದೆ. ಹೀಗೆ ಕ್ರಿ. ಶ. ಆರಂಭದಿಂದ ೧೧ನೆಯ ಶತಮಾನದ ವರೆಗೆ ಕರ್ನಾಟಕದಲ್ಲಿ ಬೌದ್ಧ-ಧರ್ಮವು ಅಸ್ತಿತ್ವದಲ್ಲಿದ್ದುದಾಗಿ ಶಿಲಾಶಾಸನಗಳಿಂದ ವ್ಯಕ್ತವಾಗುತ್ತದೆ. ೧೨ನೆಯ ಶತಮಾನದಲ್ಲಿ ಅಂದರೆ, ಬಸವಣ್ಣನವರು ಧಾರ್ಮಿಕ ಕ್ರಾಂತಿಯನ್ನೆಸಗುವ ಸಮಯ-ದಲ್ಲಿ ಬೌದ್ಧಧರ್ಮವು ಇಲ್ಲಿ ಪ್ರಚಾರದಲ್ಲಿತ್ತೆಂದು ವಿದಿತವಾಗುತ್ತದೆ.[೧]

ಆದರೆ, ಆ ಸಮಯಕ್ಕೆ ಅದು ತನ್ನ ಮೊದಲಿನ ಪಾವಿತ್ರ್ಯವನ್ನು ಕಳೆದುಕೊಂಡು ತೀರ ಅವನತಸ್ಥಿತಿಯಲ್ಲಿದ್ದಿತೆಂದು ಹೇಳಬಹುದು. ಬುದ್ಧನ ತರುವಾಯ ಆ ಧರ್ಮ-ದಲ್ಲಿ ತಲೆದೋರಿದ ಮಹಾಯಾನ, ಹೀನಯಾನ ಪಂಥಗಳು ಒಂದಕ್ಕೊಂದು ಹೊಡೆ-ದಾಡತೊಡಗಿದುವು. ಬುದ್ಧ ವಿಹಾರಗಳಲ್ಲಿರುತ್ತಿದ್ದ ಭಿಕ್ಕುಗಳಲ್ಲಿ ನೈತಿಕ ಶೈಥಿಲ್ಯವುಂಟಾ-ಯಿತು. ಧರ್ಮಾಧಿಕಾರಿಗಳು ಹೆಚ್ಚು ವಿಲಾಸಿಗಳಾಗತೊಡಗಿದುದರಿಂದ ಬೌದ್ಧಧರ್ಮ ಜನತೆಯ ವಿಶ್ವಾಸವನ್ನು ಕಳೆದುಕೊಳ್ಳತೊಡಗಿದ್ದಿತ್ತೆಂಬುದು ಕೆಳಗಿನ ಉದ್ಧರಣೆಯಿಂದ ವ್ಯಕ್ತವಾಗುತ್ತದೆ:

"The luxurious and comfortable life led by some of the monks had shaken the confidence of the people."[೨]

ಕಾಮವಿಲಾಸ, ಸ್ವೇಚ್ಛಾಚಾರಗಳಿಗೆ ಆಸ್ಪದ ಕೊಡುವಷ್ಟು ಬೌದ್ಧಧರ್ಮ ಅವನತಿಗಿಳಿಯಿತು.

"Carnal passion of man found a religious sanction in some of the tenets of Buddhism and the result was a looseness of sexual morality"[೩]

ಬೌದ್ಧಧರ್ಮವು ಹೀಗೆ ನೈತಿಕಮಟ್ಟವನ್ನು ಕಳೆದುಕೊಳ್ಳಹತ್ತಿದ್ದುದರಿಂದ ಅದು ಜನತೆಯ ಆಧ್ಯಾತ್ಮಿಕ ಆಶೋತ್ತರಗಳನ್ನು ಈಡೇರಿಸಲು ಅಸಮರ್ಥವಾಗಿದ್ದಿತೆಂಬುದು ಸ್ಪಷ್ಟವಾಗಿದೆ.

ಇಷ್ಟು ಹೊತ್ತಿಗಾಗಲೇ ಅದು ಹಿಂದೂಧರ್ಮದ ಪ್ರಭಾವಕ್ಕೊಳಗಾಗಿದ್ದಿತು. ಶಂಕರಾಚಾರ್ಯರು ಕ್ರಿ. ಶ. ೮ನೆಯ ಶತಮಾನದಲ್ಲಿ ಆಸೇತು ಹಿಮಾಚಲ ಅದ್ವೈತ-ಮತ ಪ್ರತಿಷ್ಠಾಪನೆಮಾಡಿದುದು ಬೌದ್ಧಧರ್ಮಕ್ಕೆ ಕುಠಾರಪ್ರಾಯವಾಯಿತು. ಬೌದ್ಧ ಧರ್ಮದ ಸಾರವನ್ನೆಲ್ಲ ಹೀರಿ, ಜೊತೆಗೆ ಆಸ್ತಿಕತೆಯ ವಸಂತಗಾಳಿಯನ್ನು ಬೀರಿ ಶಂಕರಾಚಾರ್ಯರು ವೈದಿಕ ಧರ್ಮಪ್ರಸಾರಮಾಡಿದುದರಿಂದ ಹಿಂದೆ ಮತಾಂತರ ಹೊಂದಿದ ಕೋಟ್ಯಂತರ ಜನರು ಈಗ ಪುನಃ ಹಿಂದೂಧರ್ಮಕ್ಕೆ ಬರತೊಡಗಿದರು.

---

೧. "Buddhism was a living religion in Karnatak between 11th and 13th century"—Mysore Gazetteer, vol. II, Part I, p. 144.

೨. History of Mediaeval India, p. 30.

೩. The Cultural Heritage of India, p. 48.

ಶಂಕರಾಚಾರ್ಯರು ಪ್ರಚ್ಛನ್ನಬುದ್ಧರಾದರು. ಹಿಂದೂಧರ್ಮ ಹಾಗೂ ಬೌದ್ಧ ಧರ್ಮಗಳಲ್ಲಿ ವಿಶೇಷ ಅಂತರವಿಲ್ಲವೆನ್ನುವಷ್ಟು ಮಟ್ಟಿಗೆ ವೈದಿಕಧರ್ಮ ಪರಿವರ್ತನ ಹೊಂದಿದುದರಿಂದ ಬೌದ್ಧಧರ್ಮ ಕ್ರಮೇಣ ಕ್ಷೀಣವಾಗಿ ಹಿಂದೂಧರ್ಮದಲ್ಲಿ ಸಮಾವೇಶವಾಯಿತು. ಅಳಿದುಳಿದ ಬೌದ್ಧಧರ್ಮವು ತನ್ನ ಮೂಲತತ್ವವನ್ನು ಮರೆತು ಸತ್ವಹೀನವಾಗಿದ್ದಿತು.

## ಇನ್ನು ಜೈನಧರ್ಮ

ಇದು ಕನ್ನಡನಾಡಿನ ಪ್ರಾಚೀನ ಧರ್ಮಗಳಲ್ಲಿ ಒಂದು. ಕನ್ನಡನಾಡಿನಲ್ಲಿ ಈ ಧರ್ಮದ ಪ್ರಾಚೀನತೆಯ ಬಗೆಗೆ ದೊರೆವ ಶಾಸನಗಳಲ್ಲಿ ಆರನೆಯ ಶತಮಾನದ ಶ್ರವಣಬೆಳ್ಗೊಳ ಶಿಲಾಶಾಸನವೇ ಮೊದಲನೆಯದಾದರೂ ಅದಕ್ಕಿಂತ ಬಹು ಪೂರ್ವದಲ್ಲಿಯೇ ಜೈನಧರ್ಮ ಇಲ್ಲಿ ಕಾಲಿಟ್ಟಿದ್ದಿತೆಂಬುದಕ್ಕೆ ಅನೇಕ ಆಧಾರಗಳುಂಟು. ಮೇಲೆ ನಿರ್ದೇಶಿಸಿದ ಶಾಸನದಲ್ಲಿ ಭದ್ರಬಾಹು ಮುನಿಗಳು ಉತ್ತರದಲ್ಲಿ ದ್ವಾದಶವರ್ಷ ಕ್ಷಾಮಬೀಳಲು ಚಂದ್ರಗುಪ್ತ ದೊರೆಯೊಡನೆ ಶ್ರವಣಬೆಳ್ಗೊಳಕ್ಕೆ ಬಂದು ನೆಲಸಿದರೆಂದು ಉಕ್ತವಾಗಿದೆ. ಇಲ್ಲಿ ಉಕ್ತನಾದ ಚಂದ್ರಗುಪ್ತನ ಬಗೆಗೆ ವಾದ–ವಿವಾದಗಳಿದ್ದರೂ ವ್ಹಿನ್ಸೆಂಟ್ ಸ್ಮಿಥ್ ಮೊದಲಾದ ಇತಿಹಾಸಜ್ಞರು ಈ ಉಲ್ಲೇಖಕ್ಕೆ ಐತಿಹಾಸಿಕ ಬೆಲೆಯಿದೆಯೆಂದು ನಂಬಿ ಜೈನಧರ್ಮವು ಕ್ರಿ. ಪೂ. ೨೮೧ರ ಸುಮಾರು ಭದ್ರಬಾಹು ಮುನಿಗಳೊಡನೆ ಕರ್ನಾಟಕಕ್ಕೆ ಬಂದಿತೆಂದು ನಿರ್ಣಯಿಸಿರುವರು. ಇದು ಸರಿಯಾದ ಊಹೆಯೆಂದು ತೋರುತ್ತದೆ.

ಅಂದಿನಿಂದ ಜೈನಧರ್ಮ ಕನ್ನಡನಾಡಿನ ಜನಜೀವನದಲ್ಲಿ ಹಾಸುಹೊಕ್ಕಾಗಿ ಅದರ ಏಳ್ಗೆಗೆ ತುಂಬ ಪರಿಶ್ರಮಿಸಿದೆ. ಗಂಗರು ಜೈನಧರ್ಮವನ್ನು ವಿಶೇಷವಾಗಿ ಪೋಷಿಸಿದರು. ಗಂಗ, ಚಾಳುಕ್ಯ, ಹೊಯ್ಸಳ ಮನೆತನದ ಅನೇಕ ದೊರೆಗಳು ಜೈನಧರ್ಮಾವಲಂಬಿಗಳಾಗಿದ್ದರು. ಹೀಗೆ ಅನೇಕ ಜನ ಸಾರ್ವಭೌಮರು, ಮಾಂಡಲಿಕರು ಈ ಧರ್ಮವನ್ನು ಎತ್ತಿಹಿಡಿದುದರಿಂದ ಇದು ಕನ್ನಡ ನಾಡಿನ ಪ್ರಬಲ ಧರ್ಮಗಳಲ್ಲಿ ಒಂದಾಯಿತು. ಕರ್ನಾಟಕ ಸಾಹಿತ್ಯ ಸಂಸ್ಕೃತಿಗಳ ಉನ್ನತಿಗೆ ಕಾರಣವಾಯಿತು.

ಹೀಗೆ ಜೈನಧರ್ಮವು ಗಂಗ, ಚಾಲುಕ್ಯ, ರಾಷ್ಟ್ರಕೂಟ ಹಾಗೂ ಹೊಯ್ಸಳ ದೊರೆಗಳಿಂದ ವಿಶೇಷವಾಗಿ ಪ್ರೋತ್ಸಾಹವನ್ನು ಪಡೆದು ಕರ್ನಾಟಕದ ಪ್ರಸಿದ್ಧ ಧರ್ಮಗಳಲ್ಲಿ ಒಂದಾಗಿದ್ದಿತು. ಆದರೆ ಹನ್ನೊಂದನೆಯ ಶತಮಾನದ ಸುಮಾರು ಆ ಧರ್ಮದ ಪ್ರಾಬಲ್ಯ ಕಡಿಮೆಯಾಗತೊಡಗುವುದು. ಹತ್ತನೆಯ ಶತಮಾನದ ಹೊತ್ತಿಗೆ ಕರ್ನಾಟಕಕ್ಕೆ ಬಂದ ಕಾಶ್ಮೀರ ಶೈವರು ವೇದಾಗಮಪುರಾಣಗಳಲ್ಲಿ ಅದ್ವಿತೀಯವಾದ ಪಾಂಡಿತ್ಯವನ್ನು ಸಂಪಾದಿಸಿ, ತಪೋನಿಷ್ಠರಾಗಿ, ದೊಡ್ಡ ದೊಡ್ಡ ಮಠಗಳ ಗುರುಗಳಾಗಿ ಜನಮನವನ್ನೂ ಅರಸರ ಚಿತ್ತವನ್ನೂ ತಮ್ಮತ್ತ ಸೆಳೆದುಕೊಂಡಂತೆ ತೋರುತ್ತದೆ. ಜನಾಶ್ರಯ ರಾಜಾಶ್ರಯಗಳ ತೋಳತೆಕ್ಕೆಯಲ್ಲಿ ಬೆಳೆದುಬರುತ್ತಿದ್ದ ಜೈನಧರ್ಮಕ್ಕೆ ಮೇಲೆ ನಿರ್ದೇಶಿಸಿದ ಪರಿವರ್ತನೆಗಳಿಂದ ಆಘಾತವುಂಟಾಗಿರಲು ಸಾಕು.

ಗಂಗಮನೆತನ ಜೈನಧರ್ಮದ ಪತಾಕೆಯನ್ನು ಎತ್ತಿಹಿಡಿದು ನಿರಂತರ ಅದಕ್ಕೆ ಪ್ರೋತ್ಸಾಹವೀಯುತ್ತಿದ್ದಿತು. ಕ್ರಿ. ಶ. ಸುಮಾರು ೧೧೦೪ರಲ್ಲಿ ಈ ಮನೆತನ ನಾಶವಾಗುತ್ತದೆ. ಚೋಳರು ಚಾಲುಕ್ಯರೊಡನೆ ನಡೆಸಿದ ಅನೇಕ ಯುದ್ಧಗಳಲ್ಲಿ ಜೈನ ಬಸದಿಗಳನ್ನೂ ಯಾತ್ರಾಸ್ಥಳಗಳನ್ನೂ ಹಾಳುಮಾಡುತ್ತ ಬಂದಿದ್ದರು.[೧] ಕೊನೆಗೆ ಹೊಯ್ಸಳ ಬಿಟ್ಟಿದೇವನು ಜೈನಧರ್ಮವನ್ನು ತ್ಯಜಿಸಿ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿದುದು ಜೈನಧರ್ಮಕ್ಕೆ ದೊಡ್ಡ ಆಘಾತವಾಗಿರಲು ಸಾಕು. ದಿನ ದಿನ ಬೆಳೆಯುತ್ತಿದ್ದ ಶೈವ-ವೈಷ್ಣವ ಪಂಥಗಳು ಜನಮನವನ್ನೂ ದೊರೆಗಳ ದೃಷ್ಟಿಯನ್ನೂ ಸೆಳೆದುಕೊಂಡುದರ ಫಲವಾಗಿ ಜೈನಧರ್ಮಕ್ಕೆ ಇಳಿಗಾಲ ಪ್ರಾಪ್ತವಾದಂತಾಗಿದ್ದಿತು.

ಆಂತರಿಕವಾಗಿಯೂ ಜೈನಧರ್ಮ ತನ್ನ ಮೊದಲಿನ ಸತ್ವಶುದ್ಧಿಯನ್ನು ಕಳೆದು-ಕೊಂಡುದು ಅದರ ಇಳಿಮುಖಕ್ಕೆ ಇನ್ನೂ ಬಲವಾದ ಕಾರಣವಾಗಿದೆ. ಜೈನ ಸಂಘಗಳಲ್ಲಿ ಇಬ್ಬಣಗಳಾಗಿ ಮೂಲಸಂಘ ಮತ್ತು ದ್ರಾವಿಡಸಂಘಗಳೆಂದು ಎರಡು ಭೇದಗಳಾದುದು ಕಂಡುಬರುತ್ತದೆ.[೨] ಜೈನಮತದಲ್ಲಿಯೂ ಆಚಾರಶೈಥಿಲ್ಯವುಂಟಾದಂತೆ ತೋರುತ್ತದೆ.

**"ಒಂದೆಡೆಯೊಳ್ ಜಿನಬಿಂಬವ**
**ನೊಂದೆಡೆಯೊಳ್ ಲಿಂಗ ವಿಷ್ಣು ಬಿಂಬಮನವನಂ**
**ತೊಂದೆಡೆಯೊಳ್ ಪೂಜಿಸುವಾ**
**ಸಂದೇಹಿಗೆ ಜೈನನೆಂಬ ಪೆಸರೆಂತೆಸೆಗುಂ"[೩]**

ಜೈನಧರ್ಮದಲ್ಲಿ ಮಿಕ್ಕ ದೇವತೆಗಳ ಪ್ರವೇಶವಾಗುತ್ತಿದ್ದುದನ್ನು ಇಲ್ಲಿ ಗುರುತಿಸಬಹುದಾಗಿದೆ. ಅತಿ ಕಠಿನತರವಾದ ವ್ರತ, ನಿಯಮಗಳಿಗೆ ಮಹತ್ವದ ಸ್ಥಾನವಿತ್ತಿದ್ದ ಜೈನ-ಧರ್ಮ ಮಾರ್ಪಡುತ್ತಿದ್ದ ಹೊಸ ಜನಾಂಗದ ಹೃದಯದ ಕೂಗಿಗೆ ಓಗೊಡದಾಯಿತು. ಅಂತೆಯೇ ಅನೇಕ ವೈದಿಕ ದೇವತೆಗಳು ಜೈನಧರ್ಮದಲ್ಲಿ ಪ್ರವೇಶಮಾಡಿದುವಲ್ಲದೆ. ಜೈನರು ಶೈವ ವೈಷ್ಣವ ಧರ್ಮಗಳನ್ನು ಸ್ವೀಕರಿಸತೊಡಗಿದರು.

**"ಪೆಂಡತಿ ಮಾಹೇಶ್ವರಿ ಗಡ**
**ಗಂಡಂ ಜೈನಂ ಗಡ ಮಕ್ಕಳ್ಗಡ ಮಾ**
**ರ್ತಂಡಂಗೆ ಭಕ್ತನೆನಿಪಾ**
**ಭಂಡಂಗುತ್ತಮದ ಜೈನವೆಸಲೆಂತೆಸೆಗುಂ"[೪]**

ತರ್ಕದಲ್ಲಿ ತಾಂಡವವಾಡುತ್ತಿದ್ದ ಜೈನಧರ್ಮ, ಕಠಿನತರವಾದ ವ್ರತ-ನಿಯಮಗಳಿಗೆ ಅಂಟಿಕೊಂಡು ಜನಸಾಮಾನ್ಯರ ಹೃದಯದ ಅಶೋತ್ತರಗಳನ್ನು ಕಡೆಗಣಿಸಿದು-ದರಿಂದ ಅದು ಇಳಿಮುಖವಾಗತೊಡಗಿದ್ದಿತು.

೧. ರಾಜಾಧಿರಾಜ ಚೋಳನು ಕ್ರಿ. ಶ. ೧೦೫೧ರಲ್ಲಿ ಕೊಲ್ಲಾಪುರದ ಅನೇಕ ಜೈನ ಬಸದಿಗಳನ್ನು ನಾಶಪಡಿಸಿದುದಾಗಿ ತಿಳಿದುಬರುತ್ತದೆ.

೨. Mediaeval Jainism, p. 54.

೩. ಸಪ ೪–೫೪. ೪. ಸಪ ೧೫–೧೫.

ಕರ್ನಾಟಕದ ಪ್ರಬಲ ಧರ್ಮವೆಂದರೆ.ವಾಸ್ತವವಾಗಿ ಶೈವವೇ. ಆ ಧರ್ಮದಲ್ಲಿ ಅನೇಕ ಪಂಥಗಳಿದ್ದುದು ಶಿವಾಗಮಗಳಲ್ಲಿಯೇ ಉಕ್ತವಾಗಿದೆ. ಶೈವ. ಪಾಶುಪತ. ಸೋಮ. ಲಾಕುಲ ಈ ನಾಲ್ಕು ಪಂಥಗಳನ್ನು ಹಲವರು ಹೆಸರಿಸುವರು.

**'ತನ್ಮತಾನುಸಾರಿಣಶ್ಚತುರ್ವಿಧಾಃ ಕಾಪಾಲಾಃ**
**ಕಾಲಾಮುಖಾಃ, ಪಾಶುಪತಾಃ, ಶೈವಾಶ್ಚೇತಿ'.**[೧]

ಎಂದು ರಾಮಾನುಜರು ಹೇಳುವರು. ಕೇಶವಕಾಶ್ಮೀರಿಯೂ ಇದೇ ಅಭಿಪ್ರಾಯ ವ್ಯಕ್ತಪಡಿಸುವನು. ಆದರೆ. ಶಂಕರವಿಜಯದ ವ್ಯಾಖ್ಯಾನಕಾರನಾದ ಆನಂದಗಿರಿಯು. ಶೈವದ ಹತ್ತು ಪ್ರಭೇದಗಳನ್ನು ಹೆಸರಿಸುವನು. ಮಾಧವಾಚಾರ್ಯರು ತಮ್ಮ ಸರ್ವ-ದರ್ಶನ ಸಂಗ್ರಹದಲ್ಲಿ ಲಕುಲೀಶ. ಪಾಶುಪತ. ಶೈವ. ಮಾಹೇಶ್ವರ. ಪ್ರತ್ಯಭಿಜ್ಞಾ ಮತ್ತು ರಸೇಶ್ವರ ಪಂಗಡಗಳನ್ನು ಉಲ್ಲೇಖಿಸುವರು. ಬ್ರಹ್ಮಶಿವನು ಕಾಳಾಮುಖಿ. ಕಾಪಾಲ. ಪಾಶುಪತ. ಶೈವ ಪಂಥಗಳನ್ನು ಕುರಿತು ಹೇಳುವನು.[೨] ಹರಿಭದ್ರಸೂರಿಯು ತನ್ನ ಷಡ್ದರ್ಶನಸಮುಚ್ಚಯದಲ್ಲಿ ಶೈವ. ಪಾಶುಪತ. ಮಹಾವ್ರತಧಾರಿ ಮತ್ತು ಕಾಲಾ-ಮುಖರನ್ನು ಉಲ್ಲೇಖಿಸಿರುವನು. ಇದರಿಂದ ಶೈವಧರ್ಮವು ವಿವಿಧ ಶಾಖೆಗಳನ್ನು ಒಳಗೊಂಡಿದ್ದುದಾಗಿ ನಿರ್ಣಯಿಸಬಹುದಾಗಿದೆ.

ಈ ಶೈವಪಂಥಗಳಿಗೆಲ್ಲ ಶಿವನೇ ಆರಾಧ್ಯದೈವವಾದರೂ ಆ ದೈವದ ಸ್ವರೂಪಗಳನ್ನು ಪೂಜಿಸುವಲ್ಲಿ ಅವು ಭಿನ್ನ ಮಾರ್ಗಗಳನ್ನು ಹಿಡಿದಿವೆ. ಶೈವರು ತಾಂಡವಮೂರ್ತಿಯನ್ನೂ ಪಾಶುಪತರು ಜಟಾಧರನನ್ನೂ. ಕಾಪಾಲಿಕರು ಮತ್ತು ಕಾಲಾ-ಮುಖರು ಕಂಕಾಲಮಾಲಾಲಂಕೃತ ಭೈರವರೂಪವನ್ನೂ ಪೂಜಿಸುತ್ತಿದ್ದರು. ಈ ಪಂಥಗಳು ಪ್ರಮಥರ ಪೂರ್ವದಲ್ಲಿ ಪ್ರಬಲವಾಗಿದ್ದುದರಿಂದ ಅವುಗಳ ಸ್ಥಿತಿಗತಿಯನ್ನರಿ-ಯುವುದು ಅವಶ್ಯವೆನಿಸಿದೆ.

## ಲಕುಲೀಶಪಂಥ

ಇವರನ್ನು ಲಾಕುಲ. ಪಾಶುಪತ ಅಥವಾ ಮಾಹೇಶ್ವರ ಎಂದು ಕರೆಯುವರು. ಶಿವನು ತನ್ನ ಇಪ್ಪತ್ತೆಂಟನೆಯ ಅವತಾರದಲ್ಲಿ ಲಕುಲೀಶನಾಗಿ. ಲಾಕುಲಧಾರಿಯಾಗಿ—ಕಾಯಾವರೋಹಣವೆಂಬ ಸ್ಥಳದಲ್ಲಿ ಜನಿಸಿ ಈ ಮತವನ್ನು ಸ್ಥಾಪಿಸಿದನೆಂದು ಹೇಳ-ಲಾಗಿದೆ.[೩] ಮಹಾಭಾರತದಲ್ಲಿ ಈ ಮತದ ಉಲ್ಲೇಖ ದೊರೆಯುತ್ತದೆ.[೪] ಉತ್ತರ ಮೀಮಾಂಸದಲ್ಲಿ ಇದನ್ನು ಖಂಡಿಸಲಾಗಿದೆ. ಈ ಮತ ಕ್ರಿ. ಶ. ೨ನೆಯ ಶತಮಾನದಷ್ಟು ಹೊತ್ತಿಗೆ ಅಸ್ತಿತ್ವದಲ್ಲಿ ಬಂದಿರಬಹುದೆಂದು ಊಹಿಸಬಹುದಾಗಿದೆ. ತ್ರಿಕ ವಿಚಾರ. ಅಂದರೆ ಪಶು (ಜೀವ). ಪತಿ (ಶಿವ). ಪಾಶ (ಸಂಸಾರ) ಇವುಗಳ ಆಧಾರದ

---

೧. ಶ್ರೀಭಾಷ್ಯ II ೨. ೩೫.
೨. ಸಪ ೧೪–೫೦.
೩. ಕೂರ್ಮ, ವಾಯು, ಲಿಂಗಪುರಾಣ.
೪. ಶಾಂತಿಪರ್ವ. ನಾರಾಯಣಗೀತ. ಪಂಚಧರ್ಮಗಳಲ್ಲಿ ಲಕುಲೀಶ ಪಾಶುಪತ ಧರ್ಮವೊಂದನ್ನು ಹೇಳಲಾಗಿದೆ. 'ಪತ್ಯುರಸಮಂಜಸ್ಯಾತ್' ಎಂಬ ಸೂತ್ರವನ್ನು ನೋಡಬಹುದು.

ಮೇಲೆ ಇವರ ತತ್ವ ನಿಂತಿದೆ. 'ಸ್ವತಂತ್ರಂ ಸರ್ವಂ ಕಾರ್ಯಂ' ಎಂದು ಇವರು ಕಾರ್ಯಕ್ಕೆ ಕಾರಣವನ್ನು ಹೇಳದೆ ಅದು ಸ್ವತಂತ್ರವೆಂದೂ ತಿಳಿಯುವರು. ಯೋಗದಿಂದ ಇಂದ್ರಿಯ ಗಳನ್ನು ವಶಪಡಿಸಿಕೊಂಡು ದುಃಖಾಂತರೂಪವಾದ ಮೋಕ್ಷವನ್ನು ಪಡೆಯಬೇ-ಕೆಂಬುದೇ ಇವರ ಸಿದ್ಧಾಂತ.

ಹಿಂದೆ ಹೇಳಿದಂತೆ ಈ ಕಾಶ್ಮೀರಶೈವರು ಹತ್ತನೆಯ ಶತಮಾನದ ಸುಮಾರು ಕರ್ನಾಟಕಕ್ಕೆ ಬಂದಿರಬೇಕು. 'ನಾನಾ ಕಾಶ್ಮೀರದ ಕೂಡಿಬಂದು ಬಿಜಯಾಪುರದೊಳ್ ನೆಲಸಲ್' ಎಂದು ಬಿಜಾಪುರದ ಕ್ರಿ. ಶ. ೧೧೪೭ನೆಯ ಇಸವಿಯ ಶಾಸನದಲ್ಲಿ ಹೇಳಿದೆ.[೧] ಈ ಶಾಸನೋಕ್ತನಾದ ಕಾಶ್ಮೀರಮುನೀಂದ್ರನು ನಾಲ್ಕನೆಯವನಾದುದರಿಂದ ಸುಮಾರು ನೂರು ವರ್ಷಗಳ ಪೂರ್ವದಲ್ಲಿ ಈತನ ಪೂರ್ವಜರು ಬಿಜಯಾಪುರಕ್ಕೆ ಬಂದಿರಲು ಸಾಕು. ತರ್ದವಾಡಿ, ಬಳ್ಳಿಗಾವೆ ಮುಂತಾದ ಪ್ರದೇಶಗಳಲ್ಲಿ ಅವರು ಪ್ರಸಿದ್ಧರಾಗಿದ್ದರು. ಪ್ರಸಿದ್ಧವಾದ ಕೋಡಿಯಮಠ ಕಾಳಾಮುಖ ಸಂಪ್ರದಾಯಕ್ಕೆ ಸಂಬಂಧಪಟ್ಟುದು. ಇವರ ಮಠಗಳಿಗೆ ರಾಜಮಹಾರಾಜರು ದಾನ ದತ್ತಿಗಳನ್ನು ಕೊಟ್ಟುದು ಕರ್ನಾಟಕದ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ.[೨]

ಲಕುಲೀಶರ ತತ್ವ ಉದಾತ್ತವಾಗಿದ್ದರೂ ಅವರ ಆಚಾರ-ವಿಚಾರಗಳು ಉನ್ನತಾ-ವಸ್ಥೆಯಲ್ಲಿದ್ದಂತೆ ಕಂಡುಬರುವುದಿಲ್ಲ. ಉಚ್ಚಸ್ವರದಲ್ಲಿ ತಮ್ಮ ಆರಾಧ್ಯದೇವತೆಯ ನಾಮಸ್ಮರಣೆ ಮಾಡುವುದು. ಹಾ ಹಾ ಹು ಹು ಎಂದು ಕೂಗುವುದು. ಮನಬಂದಂತೆ ಕುಣಿಯುವುದು, ಹೋರಿಗಳಂತೆ ಡುರುಕೆ ಹೊಡೆಯುವುದು. ಹುಚ್ಚರಂತೆ ನಟಿಸುವುದು. ನಿದ್ರೆಬಂದವರಂತೆ ವರ್ತಿಸುವುದು. ಪಾರ್ಶ್ವವಾಯು ಹೊಡೆದವರಂತೆ ನಡೆಯುವುದು. ಕುಂಟುವುದು ಇವೇ ಮೊದಲಾದ ಬಾಹ್ಯಾಚಾರಗಳು ಬಲಿತು ಮೂಲತತ್ವ ಬಲಿತು-ಹೋಗಿದ್ದಿತು. ಈ ಅಂಗಚೇಷ್ಟೆಗಳೊಡನೆ ಬಿಕ್ಕೆ ಬೇಡುವುದು. ಉಚ್ಛಿಷ್ಟ ಸೇವನೆಮಾಡು ವುದು ಮುಂತಾದುವು ನಡೆದು ಜನತೆಯಲ್ಲಿ ಈ ಮತದ ಬಗೆಗೆ ಅಸಹ್ಯಭಾವನೆಯನ್ನು ಹುಟ್ಟಿಸಿದ್ದುವು.

## ಕಾಳಾಮುಖಪಂಥ

ರಾಜಪೂಜಿತರಾಗಿದ್ದ ಕಾಳಾಮುಖರು ಶಿವಪೂಜಕರೂ, ವ್ರತನಿಯಮ ನಿರತರೂ ಆಗಿದ್ದರೂ ಹನ್ನೆರಡನೆಯ ಶತಮಾನದ ಹೊತ್ತಿಗೆ ಆ ಮತದ ಒಂದು ಪಂಥವು ಉಗ್ರ ಸ್ವರೂಪದಲ್ಲಿರುವಂತೆ ಕಂಡುಬರುತ್ತದೆ. ರಾಮಾನುಜರು ತಮ್ಮ ಶ್ರೀಭಾಷ್ಯದಲ್ಲಿ[೩] ಕಾಳಾಮುಖರ ಬಗೆಗೆ ಹೀಗೆ ಹೇಳಿರುವರು:

೧. Inscriptions in Northern Karnatak and Kolhapur State No. 8. P. 24.

೨. ಜಗದೇಕಮಲ್ಲನ ದಂಡಾಧಿಪನ ಮನೆಯ ಶಿವರಾಜನು ಮುತ್ತಗೆಯ ಲಕುಲೇಶ್ವರ ನೈಷ್ಠಿಕ-ಸ್ಥಾನಕ್ಕೆ ದತ್ತಿಯನ್ನು ಬಿಟ್ಟಿರುವನು. ಬಿಜ್ಜಳನು ಕೋಡಿಯ ಮಠಕ್ಕೆ ದತ್ತಿಯನ್ನು ಕೊಟ್ಟಿರುವನು.

೩. ಬ್ರಹ್ಮಸೂತ್ರ ಭಾಷ್ಯ II ೨.೩೫.

**"ತಥಾ ಕಾಲಾಮುಖಾ ಅಪಿ ಕಪಾಲಪಾತ್ರಭೋಜನ, ಶವಭಸ್ಮಸ್ನಾನ, ತತ್ಪ್ರಾಶನ, ಲಗುಡಧಾರಣ, ಸುರಾಕುಂಭಸ್ಥಾಪನ, ತದಾಧಾರದೇವಪೂಜಾದಿಕಂ ಐಹಿಕ ಆಮುಷ್ಮಿಕ ಸಕಲಫಲಸಾಧನಂ ಅಭಿದಧತಿ. ರುದ್ರಾಕ್ಷಕಂಕಣಂ ಹಸ್ತೇ, ಜಟಾ ಚೈಕಾ ಚ ಮಸ್ತಕೇ ಕಪಾಲಂ ಭಸ್ಮನಾಸ್ನಾನಂ ಇತ್ಯಾದಿ ಚ ಪ್ರಸಿದ್ಧಂ ಶೈವಾಗಮೇಷು".**

ಕಾಳಾಮುಖ ಗುರುಗಳಿಗೆ ಮೇಲಿನ ವರ್ಣನೆ ಅನ್ವಯವಾಗಲಾರದಾದರೂ ಅವರ ಒಂದು ಶಾಖೆಯಲ್ಲಿ ದುರಾಚಾರಗಳು ಆರಂಭವಾಗಿದ್ದುವೆಂಬುದನ್ನು ಇದರಿಂದ ನಿರ್ಣ-ಯಿಸಬಹುದಾಗಿದೆ. ಕಾಳಾಮುಖರು, ಹಣೆಯಮೇಲೊಂದು ಕರಿ ಗೆರೆಯನ್ನು ಧರಿಸು-ತ್ತಿದ್ದುದರಿಂದ ಇವರಿಗೆ 'ಕಾಲಾಮುಖ' ಎಂಬ ಹೆಸರು ಬಂದಿತೆಂದು ಊಹಿಸುತ್ತಾರೆ.

ಕಾಲಾಮುಖವೂ ಲಾಕುಳದ ಒಂದು ಶಾಖೆಯೆಂದು ತೋರುತ್ತದೆ. ಕ್ರಿ. ಶ. ೯ನೆಯ ಶತಮಾನದಿಂದ ಕ್ರಿ. ಶ. ೧೫ನೆಯ ಶತಮಾನದ ವರೆಗೆ ಕಾಳಾಮುಖರ ಗುರುಗಳಿಗೂ ಮಠಗಳಿಗೂ ದತ್ತಿಗಳನ್ನು ಬಿಟ್ಟ ಶಾಸನಗಳು ದೊರೆಯುವುದರಿಂದ ಕಾಳಾಮುಖರು ಕ್ರಿ. ಶ. ೯ನೆಯ ಶತಮಾನದ ಸುಮಾರು ಕರ್ನಾಟಕಕ್ಕೆ ಬಂದಿರ ಬಹುದೆಂದು ಊಹಿಸಬಹುದಾಗಿದೆ. ಚಾಲುಕ್ಯ, ಚೋಳ ಹಾಗೂ ಇನ್ನೂ ಅನೇಕ ಮನೆತನಗಳ ರಾಜರಿಂದ ಅವರು ಪೂಜೆಗೊಳ್ಳುತ್ತಿದ್ದರು. ಅವರ ಕುರುಹಾಗಿ ರಾಜರು ಅವರಿಗೆ ದತ್ತಿಗಳನ್ನು ಬಿಟ್ಟಿರುವರು, ದೇವಾಲಯಗಳನ್ನು ಕಟ್ಟಿಸಿರುವರು. ಶ್ರೀಶೈಲ, ಬಳ್ಳಿಗಾವಿ, ಅಬ್ಬಲೂರು, ಹಾನುಗಲ್ಲು, ಗದುಗು, ಹೂಲಿ, ಕೊಪ್ಪಳ, ಸುತ್ತೂರು ಮೊದಲಾದುವು ಕಾಳಾಮುಖರ ಕೇಂದ್ರಗಳಾಗಿದ್ದುವು. ಕಾಳಾಮುಖರ ಗುರುಗಳ ಹೆಸರುಗಳು ಶಕ್ತಿ, ರಾಶಿ, ಜೀಯ ಮುಂತಾದ ಪದಗಳಿಂದ ಕೊನೆಗೊಳ್ಳುತ್ತವೆ. ಇವರು ಆರನೆಯ ವಿಕ್ರಮಾದಿತ್ಯನ ಗುರುಗಳಾಗಿದ್ದಂತೆ ತಿಳಿದುಬರುತ್ತದೆ. ಶಾಸನಗಳಲ್ಲಿ ಕಾಳಾಮುಖಗುರುಗಳನ್ನು ಮನವಾರೆ ಹೊಗಳಲಾಗಿದೆ. 'ಸ್ಮೃತ್ಯಳಂಕಾರ ಸುವಾಕ್ಯಂ' 'ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನಜಪತಪಸಮಾಧಿಶೀಲಗುಣ - ಸಂಪನ್ನ' 'ಶಿವಾಗಮನಿರತ' 'ಶಿವಧರ್ಮಪರಿಪಾಕ' ಎಂದು ಮುಂತಾಗಿ ಬಣ್ಣಿಸಲಾಗಿದೆ.[೧]

## ಕಾಪಾಲಿಕ ಮತ

ಇದೂ ಒಂದು ಭೀಕರಸ್ವರೂಪದ ಶೈವಪಂಥ. ಕಪಾಲಧಾರಿಗಳಾಗಿರುತ್ತಿದ್ದು-ದರಿಂದ ಇವರಿಗೆ ಈ ಹೆಸರು ಬಂದಂತೆ ತಿಳಿಯಬಹುದು. ಇವರನ್ನು ಸೋಮ-ಸಿದ್ಧಾಂತಿಗಳೆಂದೂ ಮಹಾವ್ರತಧಾರಿಗಳೆಂದೂ ಕರೆಯುವರು. ಶಿವನು ಕೈಲಾಸ ದಲ್ಲಿ ಉಮಾಸಹಿತನಾಗಿ ಸುಖದಿಂದಿರುವಂತೆ ಉಮಾಸ್ವರೂಪದ ಸ್ತ್ರೀಯೊಡನೆ ಈ ಲೋಕದಲ್ಲಿ ಸುಖದಿಂದಿರಬೇಕೆಂಬುದು ಇವರ ಮತ. ಸ್ತ್ರೀಭೋಗ, ತಪಸ್ಸಿದ್ಧಿ, ಸದಾಶಿವ ಪ್ರಸಾದಗಳೇ ದುಃಖಾಂತರೂಪದ ಮೋಕ್ಷವೆಂಬುದು ಇವರ ಸಿದ್ಧಾಂತ. ಕಾಪಾಲಿಕ

೧. ಸೊರಬ ಶಾಸನ ನಂ. ೨೫. Epigraphia Carnatica, vol. VII

ಪಂಥವು ಬಹಳ ಪ್ರಾಚೀನವಾದುದು. ಇವರ ಉಲ್ಲೇಖ ಮೈತ್ರಿ ಉಪನಿಷತ್ತಿನಲ್ಲಿ ಬರುತ್ತದೆ. ಅಲ್ಲಿ 'ಅಥ ಯೇ ಚಾತ್ರೀಹ ವೃಥಾಕಾಷಾಯ ಕುಂಡಲಿನಃ ಕಾಪಾಲಿನಃ' ಎಂದು ಉಕ್ತವಾಗಿದೆ. ರಾಮಾನುಜರು ಇವರನ್ನು ಹೀಗೆ ಸಂಬೋಧಿಸಿರುವರು:

> "ಮುದ್ರಿಕಾಷಟ್ಕತತ್ತ್ವಜ್ಞಃ ಪರಮುದ್ರಾವಿಶಾರದಃ
> ಭಗಾಸನಸ್ಥಮಾತ್ಮಾನಂ ಧ್ಯಾತ್ವಾ ನಿರ್ವಾಣಮೃಚ್ಛತಿ
> ಕಂಠಿಕಾ ರುಚಕಂ ಚೈವ ಕುಂಡಲಂ ಚ ಶಿಖಾಮಣಿಃ
> ಭಸ್ಮ ಯಜ್ಞೋಪವೀತಂ ಚ ಮುದ್ರಾಷಟ್ಕಂ ಪ್ರಚಕ್ಷತೇ
> ಅಭಿಮುದ್ರಿತ ದೇಹಸ್ತು ನ ಭೂಯ ಇಹ ಜಾಯತೇ"[೧]

ಕಂಠಿಕೆ, ರುಚಕ, ಕುಂಡಲ, ಶಿಖಾಮಣಿ, ಭಸ್ಮ, ಯಜ್ಞೋಪವೀತ—ಇವು ಆರು ಇವರ ಮುದ್ರಿಕೆಗಳು. ಭಗಾಸನಸ್ಥನಾದ ಆತ್ಮನನ್ನು ಧ್ಯಾನಿಸಿ ನಿರ್ವಾಣವನ್ನು ಪಡೆಯಬೇಕೆಂಬುದೇ ಇವರ ಅಂತಿಮ ಧ್ಯೇಯ. ಅಲ್ಲದೆ ಇವರು ಎಲುಬಿನ ಹಾರಗಳನ್ನು ಧಾರಣಮಾಡಿ ಶ್ಮಶಾನದಲ್ಲಿ ವಾಸಿಸುತ್ತಿದ್ದರು. ಮನುಷ್ಯರ ತಲೆಬುರುಡೆಯಲ್ಲಿ ಊಟ ಮಾಡುತ್ತಿದ್ದರು. ಮೆದುಳು, ಕರುಳು, ಶ್ವಾಸಕೋಶ, ಮಾಂಸ, ಮಜ್ಜಾದಿಗಳನ್ನು ಅಗ್ನಿಗೆ ಆಹುತಿಕೊಡುವುದು ಮೋಕ್ಷದ ಮಾರ್ಗವೆಂದು ತಿಳಿದಿದ್ದರು. ಆಗತಾನೇ ಕೊಂದ ಪ್ರಾಣಿಗಳ ಬಿಸಿನೆತ್ತರನ್ನು ದೇವರಿಗೆ ಅರ್ಪಿಸಿದರೆ, ಆತನು ಪೂರ್ಣ ಸಂತೋಷ ಭರಿತನಾಗುವನೆಂದು ತಿಳಿಯುತ್ತಿದ್ದರು. ಕೃಷ್ಣಮಿಶ್ರನ 'ಚಂದ್ರೋದಯ'ದಲ್ಲಿ ಬರುವ ಕಾಪಾಲಿಕರ ವರ್ಣನೆಯನ್ನು ನೋಡಬೇಕು:

> "ನರಾಸ್ಥಿಮಾಲಾಕೃತಿಚಾರುಭೂಷಣಃ ಶ್ಮಶಾನವಾಸೀ ನೃಕಪಾಲಭೋಜನಃ ।
> ಪಶ್ಯಾಮಿ ಯೋಗಾಂಜನಶುದ್ಧ ಚಕ್ಷುಷಾ ಜಗನ್ಮಿಥೋ ಭಿನ್ನಮಭಿನ್ನಮೀಶ್ವರಾತ್ ॥"

ಭವಭೂತಿಯ ಮಾಲತೀಮಾಧವದಲ್ಲಿ ಅಘೋರಘಂಟನೆಂಬ ಭೈರವನು ಮಾಲತಿಯನ್ನು ಬಲಿಕೊಡುತ್ತಿರುವ ಚಿತ್ರವನ್ನು ಕಾಣಬಹುದು. ಇದರಿಂದ ಕಾಪಾಲಿಕರ ಭೀಕರ ಸ್ವರೂಪದ ಅರಿವಾಗದಿರದು. ಈ ಪಂಥವೂ ಆಗ ಕರ್ನಾಟಕದಲ್ಲಿದ್ದುದಾಗಿ ವಚನಗಳಿಂದಲೂ[೨] ಇತರ ಆಧಾರಗಳಿಂದಲೂ ತಿಳಿದುಬರುತ್ತದೆ.

## ಶಾಕ್ತಪಂಥ

ಕರ್ನಾಟಕದೊಳಗೆ ಒಂದು ಕಾಲದಲ್ಲಿ ಶಾಕ್ತಧರ್ಮವು ಪ್ರಬಲವಾಗಿದ್ದಿತು. ಕೊಲ್ಹಾಪುರ, ಎಲ್ಲಮ್ಮನ ಗುಡ್ಡ, ತುಳಜಾಪುರ, ಅಂಬೋಜೋಗಾಮಿ—ಮುಂತಾದುವು ಶಾಕ್ತರ ಕೇಂದ್ರಗಳಾಗಿದ್ದುವು. ಶಕ್ತಿಗೆ ಪ್ರಧಾನ ಸ್ಥಾನವನ್ನಿತ್ತುದರಿಂದ ಇವರಿಗೆ ಶಾಕ್ತರೆಂಬ ಅಭಿಧಾನ ಪ್ರಾಪ್ತವಾಯಿತು. ಇವರೂ ಶಿವೋಪಾಸಕರೇ. ಈ

೧. History and philosophy of Lingayat Religion, p. 45

೨. 'ಶೈವಸೈವಜಿಗಾದ, ಕಾಪಾಲಿ ಕಂಗೆಟ್ಟು' ಬಸವ ೫೪೫.

ಪಂಥಕ್ಕೆ ನಾಥ ಅಥವಾ ಸಿದ್ಧಪಂಥವೆಂದೂ ಕೌಲಮತವೆಂದೂ ಬೇರೆ ಬೇರೆ ಹೆಸರುಗಳುಂಟು. ಮಚ್ಛೇಂದ್ರನಾಥನೆಂಬವನು ಕ್ರಿ. ಶ. ೯ನೆಯ ಶತಮಾನದಲ್ಲಿ 'ಕಾಲಜ್ಞಾನ ಸಂಧೀಯ'ವೆಂಬ ಗ್ರಂಥವನ್ನು ಬರೆದು ಈ ಪಂಥವನ್ನು ಸ್ಥಾಪಿಸಿದನು. ಆಸಾಮದಿಂದ ಈ ಪಂಥವು ಹಬ್ಬಿ, ಕರ್ನಾಟಕದಲ್ಲಿ ಪ್ರಬಲವಾಗಿದ್ದಿತೆಂದು ಊಹಿಸಬಹುದು. ಈಗಿನ ಶಾಕ್ತ ಕೇಂದ್ರಗಳೆನಿಸಿದ ಎಲ್ಲಮ್ಮನ ಗುಡ್ಡದಂತಹ ಸ್ಥಳಗಳನ್ನೂ ಅಲ್ಲಿ ನಡೆವ ಆಚಾರವಿಚಾರಗಳನ್ನೂ ನೋಡಿದರೆ ಈ ಪಂಥದ ಪ್ರಾಚೀನಸ್ವರೂಪದ ಕಲ್ಪನೆಯಾಗುವುದು. ಈ ಪಂಥವು ಹಲವು ರಾಜರ. ಮಾಂಡಲಿಕರ ಮನ್ನಣೆಯನ್ನು ಪಡೆದಿದೆ.[೧]

ಹೀಗೆ ಶೈವ ಶಾಕ್ತ ಪಂಥಗಳು ಮತಿಗೆಟ್ಟು ಗತಿಗೆಟ್ಟುದನ್ನು ಚನ್ನಬಸವಣ್ಣನವರ ವಚನ ಸ್ಫುಟವಾಗಿ ವರ್ಣಿಸುತ್ತದೆ:

> **"ಶೈವ ಸೈವೆಱಗಾದ; ಪಾಶುಪತಿ ಪಥವಱಿಯು, ಕಾಳಾಮುಖಿ ಕಂಗೆಟ್ಟ ಮಹಾವ್ರತಿ ಮದವೇಱಿದ; ಸನ್ಯಾಸಿ ಪಾಷಂಡಿಯಾದ, ಕಾಪಾಲಿ ಮರುಳಾಗಿ ತಿರುಗಿದ; ಈ ಆಱು ಭಕ್ತಿಪಥಕ್ಕೆ ಸಲ್ಲವು ಕೇಳಿರಣ್ಣಾ!"[೨]**

## ವೈದಿಕ ಪಂಥಗಳು

ಮೇಲೆ ನಿರ್ದೇಶಿಸಿದ ಶೈವಪಂಥಗಳನ್ನು ರಾಮಾನುಜರು ಇವೆಲ್ಲವು ವೇದವಿರೋಧವಾದುವುಗಳು—ಸರ್ವೇ ಚ ಏತೇ ವೇದವಿರುದ್ಧಾಃ—ಎಂದು ಕರೆದಿರುವರು. ಇನ್ನು ವೇದಸಮ್ಮತವಾದ ಅದ್ವೈತ. ಶ್ರೀವೈಷ್ಣವ ಪಂಥಗಳ ಸ್ಥಿತಿಯೂ ಅಷ್ಟೊಂದು ತೃಪ್ತಿಕರವಾಗಿದ್ದಂತೆ ಕಂಡುಬರುವುದಿಲ್ಲ. ಕರ್ಮಕಾಂಡಕ್ಕೆ ಪ್ರಾಧಾನ್ಯವನ್ನಿತ್ತ ಈ ಪಂಥಗಳು ಯಜ್ಞಯಾಗಾದಿಗಳಿಗೆ ವಿಶೇಷ ಮಹತ್ವವನ್ನು ಕೊಡುತ್ತಿದ್ದುದರಿಂದ ೧೧–೧೨ನೆಯ ಶತಮಾನಗಳಲ್ಲಿ ಯಜ್ಞಯಾಗಾದಿಗಳನ್ನು ಆಚರಿಸುತ್ತಿದ್ದರೆಂಬುದು ವಚನಗಳಿಂದ ವ್ಯಕ್ತವಾಗುತ್ತದೆ.

> **"ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು**
> **ಎಲೆ ಹೋತೇ, ಅಳು ಕಂಡಾ!**
> **ವೇದವನೋದಿದವರ ಮುಂದೆ ಅಳು ಕಂಡಾ!**
> **ಶಾಸ್ತ್ರವ ಕೇಳಿದವರ ಮುಂದೆ ಅಳು, ಕಂಡಾ!!**
> **ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ."[೩]**

ಯಜ್ಞಯಾಗಾದಿಗಳ ನೆವದಲ್ಲಿ ವೈದಿಕ ಮತಾನುಯಾಯಿಗಳು ಮಾಂಸಭಕ್ಷಣೆ ಮಾಡುತ್ತಿದ್ದರೆಂಬುದನ್ನು ಬ್ರಹ್ಮಶಿವನು ಹೀಗೆ ವಿವರಿಸಿರುವನು:

---

೧. ಶಾಸನಪರಿಚಯ ಸಂ. ೫೩. ಕುಕುನೂರಪೀಠದ ಕಾಳೇಶ್ವರ ಮುನಿಗಳು ಮಹಾಮಂಡಲೇಶ್ವರ ಚಾಮುಂಡನರೇಶ್ವರಂಗೆ ಗುರುಗಳು.

೨. ಚಬವ ೫೪೫. ೩. ಬಸವ ೫೭೪.

> "ಪೊನ್ನುಳ್ಳಡೆ ಕುಱುವಿಂಡಂ
> ಜನ್ನದ ನೆವದಿಂದೆ ಬಱಿದು ಮಾಡರೆ ತಕ್ಕರ್ ॥
> ಬಯಕೆಗೆ ಪಶುವಂ ಕೊಲ್ವವ
> ರಯುಸಕ್ಕಂಜುವರೆ ಕೊಂದುಕೊಳ್ವಾತಂ ಹಿಂ ॥
> ಡಯು ಕೂಳ್ಗೆ ಹೇಸುವನೆ ನಿ
> ರ್ದಯರೆನಿಸಿ ಕುಪಾತ್ರಕಂಠರೇನಂ ಮಾಡರ್ ॥"[೧]

ತರ್ಕದ ತಾಂಡವದಲ್ಲಿ ನಿಂತು ಸ್ವಾನುಭವಕ್ಕೆ ವಿಶೇಷ ಮಹತ್ವ ಕೊಡದೆ ಕರ್ಮಕ್ಕೆ ಪ್ರಾಧಾನ್ಯವನ್ನಿತ್ತ ಈ ವೈದಿಕಪಂಥಗಳು ಜನಸಾಮಾನ್ಯರಿಂದ ದೂರ ನಿಂತು ಅವರ ಜೀವನವನ್ನು ಪಾವನಗೈಯಲು ಅಸಮರ್ಥವಾಗಿದ್ದುವು.

ಈ ಬಗೆಯ ರಾಜ್ಯಕೀಯ ಮತ್ತು ಧಾರ್ಮಿಕ ಪ್ರಕ್ಷೋಭೆಯಲ್ಲಿ ಕನ್ನಡನಾಡು—ಭರತಖಂಡವೆಂದರೂ ಸಲ್ಲುವುದು—ಸಿಲುಕಿ ತತ್ತರಿಸುತ್ತಿದ್ದಿತು. ಜನ ಆತ್ಮೋನ್ನತಿಯ ಹಾದಿಯನ್ನು ತೋರಿಸುವ ಪುಣ್ಯಪುರುಷನ ಬರವನ್ನು ಕಾಯುತ್ತಿತ್ತು. ಬಸವಣ್ಣನವರು ನಂಬಿ ಕರೆದ ಜನತೆಗೆ ಇಂಬುಗೊಟ್ಟುದು ಈ ಸಮಯದಲ್ಲಿ[೨]

## ಉತ್ಕ್ರಾಂತಿ

ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ದಂಡನಾಥಚೂಡಾಮಣಿಯಾದುದು ಒಂದು ದೃಷ್ಟಿಯಿಂದ ಭುವನದ ಭಾಗ್ಯವೆಂದೇ ಹೇಳಬೇಕು. ಏಕೆಂದರೆ, ಏತನ್ನಿಮಿತ್ತವಾಗಿ ನೂತನ ಕ್ರಾಂತಿ ಕಲ್ಯಾಣದಲ್ಲಿ ಪ್ರಾದುರ್ಭವಿಸಿತು. ಕಲ್ಯಾಣ ಮನುಕುಲದ ಕಲ್ಯಾಣ ವಾಯಿತು. ಬಸವಣ್ಣನವರು ಕಪ್ಪಡಿಸಂಗಮದಿಂದ ಕಲ್ಯಾಣಕ್ಕೆ ಬಂದುದರ ಉದ್ದೇಶವನ್ನು ಭೀಮಕವಿ ಬಹು ಚೆನ್ನಾಗಿ ಹೇಳಿದ್ದಾನೆ.

> "ಪುರಕೆ ಬಿಜಯಂಗೈದು ಸಲೆಯು
> ದ್ಧರಿಸಿಯೆಂಬರ ಬಿನ್ನಪವನವ
> ಧರಿಸಿ ಭಕ್ತಹಿತಾರ್ಥವಂ ನೆನೆದಲ್ಲಿಗೊಡಬಟ್ಟಾ"[೩]

ಬಿಜ್ಜಳನ ನಿಯೋಗವನ್ನು ಹೊತ್ತುಬಂದ ಅಮಾತ್ಯರು. ಪುರಕೆ ಬಿಜಯಂಗೈದು ಉದ್ಧರಿಸಬೇಕೆಂದು ಪ್ರಾರ್ಥಿಸುವುದೂ ಬಸವಣ್ಣನವರು ಭಕ್ತಹಿತಾರ್ಥವನ್ನು ನೆನೆದು ಅದಕ್ಕೆ ಒಡಂಬಟ್ಟುದೂ ಅರ್ಥಪೂರ್ಣವಾಗಿದೆ. ಬಸವಣ್ಣನವರು ಲೋಕೋದ್ಧಾರಕ್ಕಾಗಿ ಅವತರಿಸಿದ ಕಾರಣಪುರುಷರು. ಆದುದರಿಂದ ಅವರು ಕಲ್ಯಾಣದಲ್ಲಿ ಅಡಿಯಿಟ್ಟೊಡನೆ

---

೧. ಸಪ ೧೪-೧೨೪, ೧೨೫.

೨. S S Basavanal and K. R. Sreenivas Iyengar—Musings of Basava P.10. The Political situction was dark and alarmingly uncertain. Karnatak was then all but a spiritualy waste land pathetically waiting for the life giving rains of authentic faith. It was at this junction, Basava made his appearance in the chequred history of Karnatak.

೩. ಬಸು ೫—೧೦.

ಮಾನವಕಲ್ಯಾಣಕಾರ್ಯದಲ್ಲಿ ನಿರತರಾದರು. ಅವರ ಅಸದೃಶವಾದ ಭಕ್ತಿ, ಅನುಪಮ-ವಾದ ವ್ಯಕ್ತಿತ್ವ, ಅಸಾಧಾರಣವಾದ ಕರ್ತೃತ್ವಶಕ್ತಿ, ಲೋಕೋತ್ತರವಾದ ಧ್ಯೇಯ—ಇವೆಲ್ಲ ಕ್ಷಿಪ್ರದಲ್ಲಿಯೇ ಅಸಂಖ್ಯಾತರ ಚಿತ್ತವನ್ನು ಸೆಳೆದುವು. ನೊಂದು ಬೆಂದ ಜೀವಿಗಳಿಗೆ ಸಂಜೀವಿನಿ ಪ್ರಾಪ್ತವಾದಂತಾಯಿತು. ಬಸವಣ್ಣನವರು ಜನಸಾಮಾನ್ಯರ ಚಿತ್ತವನ್ನು ತಮ್ಮತ್ತ ಸೆಳೆದುಕೊಳ್ಳತೊಡಗಿದಂತೆ ಮಹಾನುಭಾವರನ್ನೂ ತಮ್ಮ ಭಕ್ತಿಯ ಪರಾ-ಕಾಷ್ಠೆಯಿಂದ ಬರಮಾಡಿಕೊಂಡರು. ಅನುಪಮ ದಿವ್ಯತೇಜೋವ್ಯೋಮಮೂರು-ತಿಯೂ ನಾಮರೂಪ ಕ್ರಿಕಳಾಪವಿರಾಮನೂ ಗುರುಗುಹೇಶ್ವರಲಿಂಗಸ್ವರೂಪನೂ ಆದ ಪ್ರಭುದೇವರು ಬಸವಣ್ಣನವರಿಗೆ ಕಲ್ಯಾಣದಲ್ಲಿ ಸಂದರ್ಶನವಿತ್ತುದು ಬಸವಣ್ಣನವರ ಆತ್ಮಕಲ್ಯಾಣ ಹಾಗೂ ಅವರು ಕೈಕೊಂಡ ಲೋಕಕಲ್ಯಾಣಗಳ ದೃಷ್ಟಿಯಿಂದ ಬಹು ಮಹತ್ವವಾದುದು. ಷಟ್‌ಸ್ಥಲಸಿದ್ಧಾಂತದ ಸಾಕಾರಮೂರ್ತಿ, ಶಿವಯೋಗಸಾಮ್ರಾಜ್ಯದ ಚಕ್ರವರ್ತಿ ಚನ್ನಬಸವಣ್ಣನು ಪ್ರೈದೋರಿ ಕಲ್ಯಾಣದ ಕ್ರಾಂತಿಯ ಆರಾಧ್ಯಮೂರುತಿ ಯಾದನು. ಇನ್ನೂ ಅನೇಕ ಜನ ಸಾಧಕರೂ ಮುಮುಕ್ಷುಗಳೂ ಶಿವಭಕ್ತರೂ ನಾಡಿನ ನಾನಾ ಮೂಲೆಗಳಿಂದ ಕಲ್ಯಾಣಕ್ಕೆ ಆಗಮಿಸಿದರು. ಸಕಲೇಶ ಮಾದರಸ, ಡೋಹರ ಕಕ್ಕಯ್ಯ, ಕಿನ್ನರಿ ಬೊಮ್ಮಯ್ಯ, ಮೋಳಿಗೆಯ ಮಾರಯ್ಯ, ದಾಸೋಹದ ಸಂಗಣ್ಣ, ಅರಿವಿನ ಮಾರಣ್ಣ, ರಾಯಸದ ಮಂಚಣ್ಣ, ವೀರಗೊಲ್ಲಳ, ಕೋಲ ಶಾಂತಯ್ಯ, ತೆಲುಗು ಜೊಮ್ಮಯ್ಯ, ಬಿಬ್ಬ ಬಾಚಯ್ಯ, ಶಿವಲೆಂಕ ಮಂಚಣ್ಣ, ಢಕ್ಕೆಯ ಬೊಮ್ಮಣ್ಣ, ಉರಿಲಿಂಗದೇವ, ಉರಿಲಿಂಗ ಪೆದ್ದಿ, ಬೊಕ್ಕಸದ ಚಿಕ್ಕಣ್ಣ, ಅಮುಗಿ ದೇವಯ್ಯ—ಮುಂತಾದ ಅಸಂಖ್ಯಾತರು ಕಲ್ಯಾಣಕ್ಕೆ ಆಗಮಿಸಿದರು. ಬಸವಣ್ಣನವರ ಮಹಾಮನೆ ಶಿವಾನುಭವಮಂಟಪವಾಯಿತು. ಅಲ್ಲಿ ಶರಣರು ನೂತನ ತತ್ತ್ವ, ಧರ್ಮ, ಸಮಾಜಗಳ ಸ್ವರೂಪಗಳನ್ನು ಕುರಿತು ಚರ್ಚಿಸಿದರು. ಈ ಶಿವಾನುಭವಮಂಟಪದ ಶರಣಸಂದೋಹದ ಚರ್ಚೆಯ ಪ್ರತಿಫಲವೇ ಕಲ್ಯಾಣದ ಕ್ರಾಂತಿ. ಅಲ್ಲಿ ಶರಣರು ಮಾನವ ಜೀವನದ ನೆಲೆ-ಬೆಲೆಗಳ ಇತ್ಯರ್ಥವನ್ನು ಮಾಡಿದರು. 'ಅದು ಗಂಡು-ಹೆಣ್ಣು, ಮೇಲು-ಕೀಳುಗಳೆಂಬ ಅಂತರಕ್ಕೆ ಅತೀತವಾದುದು. 'ಸರ್ವವ್ಯಾಪಿಯಾದ ಆತ್ಮ ಆತನಲ್ಲಿರುವುದರಿಂದ ಈ ಭೇದಾಭೇದಗಳಿಗೆ ಸಿಲುಕದಾತನು ಮಾನವನು. ಆತನು ನಿಂತ ನೆಲ ಅಂದರೆ—ಈ ಸೃಷ್ಟಿ ಸತ್ಯವಾದುದು. ಹುಸಿಯಲ್ಲ: ಬಂಧಕಾರಿಯಲ್ಲ. ಇಷ್ಟೇ ಅಲ್ಲ, ಈ ಕರ್ಮೋ-ದ್ಯೋಗ ಭೂಮಿಯ ಕರ್ಮತನುವಿನಿಂದಲೇ ಮೋಕ್ಷ ಸಾಧ್ಯ' ಎಂಬುದು, ಶರಣರ ಮತ. ಆದುದರಿಂದಲೇ ಅವರು 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ'ವೆಂದು ಸಾರಿದರು. 'ಇಲ್ಲಿ ಸಲ್ಲುವರು ಅಲ್ಲಿ ಸಲ್ಲುವ'ರೆಂದರು. ಹೀಗೆ ಬದುಕಿ ಬಾಳುವ ಜೀವನವನ್ನು, ಜಗತ್ತನ್ನು ಹುಸಿಯೆಂದು ಹೀಗಳೆಯದೆ ಅದನ್ನೇ ಉದಾತ್ತೀಕರಿಸುವ ಹೊಣೆ ಹೊತ್ತರು ಶರಣರು. ಮರ್ತ್ಯದಿಂದ ಕೈಲಾಸಕ್ಕೆ ಹೋಗುವುದಕ್ಕಿಂತಲೂ ಮಹವನ್ನೇ ಮರ್ತ್ಯಕ್ಕೆ ತರಬೇಕೆಂಬುದು ಇವರ ಗುರಿಯಾಯಿತು. ಇದರಿಂದ ಜನ್ಮ-ಜನ್ಮಾಂತರಗಳಲ್ಲಿ ಕಷ್ಟಪಟ್ಟರೂ ಮೋಕ್ಷಸಾಧನೆಯಾಗದೆಂಬ ವಿಚಾರಕ್ಕೆ ಪ್ರತಿಯಾಗಿ, ಒಂದೇ ಜನ್ಮದಲ್ಲಿ, ಈ ಸೃಷ್ಟಿಯಲ್ಲಿ ಮೋಕ್ಷ ಪ್ರಾಪ್ತಿಯಾಗುತ್ತದೆ ಎಂಬ ವಿಚಾರವನ್ನು

ಪ್ರಾಯಶಃ ಭಾರತೀಯ ದಾರ್ಶನಿಕರಲ್ಲಿ ಮೊಟ್ಟಮೊದಲು ಕಂಡವರು ಶರಣರೇ. ಈ ಮಹತ್ಸಾಧನೆಗೆ ಅವರು ಸುಲಭೋಪಾಯವನ್ನು ಇದಿರಿಟ್ಟರು. 'ನುಡಿದಂತೆ ನಡೆವರೆ, ಇದೇ ಜನ್ಮದ ಕಡೆ' ಎಂದರು. ನುಡಿ-ನಡೆಗಳ ಸಾಮರಸ್ಯವೇ ಶರಣರ ಸಿದ್ಧಾಂತ-ವಾಯಿತು. ಅದನ್ನೇ ಅವರು 'ಕ್ರಿಯಾಜ್ಞಾನ ಸಾಮರಸ್ಯ' 'ಲಿಂಗಾಂಗ ಸಾಮರಸ್ಯ' ಎಂದು ಕರೆದರು. 'ಮೋಕ್ಷ' ಎಂಬ ವಿಚಾರವನ್ನೇ ಬಿಟ್ಟು ನುಡಿ-ನಡೆಗಳ ಸಾಮರಸ್ಯ-ರೂಪವಾದ ಐಕ್ಯವೇ ಮೇಲೆಂದು ಬಗೆದರು. ಇಲ್ಲಿ ತತ್ವ, ಧರ್ಮ ಮತ್ತು ಸಮಾಜ ಈ ಮೂರನ್ನೂ ಮುಪ್ಪುರಿಯಾಗಿ ಹೊಸೆಯುವ ಮಹಾ ಸಾಹಸದ ಕಾರ್ಯವನ್ನು ಕಾಣ ಬಹುದು. ಹೀಗೆ ವ್ಯವಹಾರ–ಪರಮಾರ್ಥಗಳನ್ನು ಒಂದುಗೂಡಿಸುವ ಅಸದೃಶವಾದ ಕಾರ್ಯವನ್ನು ಶರಣರು ಎಸಗಿದರು. ವ್ಯವಹಾರವೆಲ್ಲ ಪರಮಾರ್ಥವಾಗಬೇಕು; ಧರ್ಮ ಕೆಲವೊಂದು ವಿಶಿಷ್ಟ ಜನತೆಯ ಸೊತ್ತೆಂಬ ಕಲ್ಪನೆ ಇರುವಾಗ ಅದು ಸಮಸ್ತ ಮಾನವರ ಪಕ್ಕೆಂದು ಸಾರಿದುದು ಶರಣರ ದಿವ್ಯಸಂದೇಶ. ಜಾತಿ-ಮತ-ಪ್ರದೇಶ ಇವುಗಳ ಹಂಗನ್ನು ಹರಿದು ವಿಶಾಲವಾದ ಮಾನವಧರ್ಮವನ್ನು ಪ್ರತಿಷ್ಠಾಪಿಸಲು ಪ್ರಯತ್ನಪಟ್ಟರವರು. 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಸಮಾಜದ ಒಂದು ಮಹತ್ವದ ಅಂಗವನ್ನು ಕಗ್ಗತ್ತಲೆಯಲ್ಲಿರಿಸಿದ ದೇಶದಲ್ಲಿ, ಹೆಣ್ಣು ಪ್ರತ್ಯಕ್ಷ ಪರಮಾತ್ಮನೆಂದು ಸಾರಿ, ಆಕೆಗೆ ಎಲ್ಲಿಲ್ಲದ ಸ್ವಾತಂತ್ರ್ಯವನ್ನು ಕೊಟ್ಟರು. ಧರ್ಮದ ನೆವದಿಂದ ಸಮಾಜ ಬಡವಾಗ-ಕೂಡದೆಂಬುದು ಬಸವಣ್ಣನವರ ಅಭಿಪ್ರಾಯವಾಗಿದ್ದಿತು. ಅಂತೆಯೇ ಕಾಯಕದ ದಿವ್ಯ ಕಲ್ಪನೆಯನ್ನು ಕಂಡುಕೊಂಡರು; ಕಾಯಕವೇ ಕೈಲಾಸವೆಂದರು. ಕಾಯಕದಲ್ಲಿ ನಿರತ-ನಾದಡೆ ಗುರುಲಿಂಗ ಜಂಗಮವನಾದಡೆಯೂ ಮರೆಯಬೇಕೆಂದರು. ಹೀಗೆ ಮಾನವ-ಜೀವನದ ಎಲ್ಲಿಲ್ಲದ ಹೊಸ ಮೌಲ್ಯಗಳನ್ನು ಕಂಡುಹಿಡಿದರು. ಕರ್ಮ ಕ್ರಿಯೆ-ಯಾಯಿತು; ಧರ್ಮ ದಯೆಯಾಯಿತು. ಸೃಷ್ಟಿ ಸತ್ಯವಾಯಿತು: ದೃಷ್ಟಿ ಲಿಂಗವಾಯಿತು. ವ್ಯಷ್ಟಿ ಸಮಷ್ಟಿಯಾಯಿತು. ಈ ಉದಾತ್ತ ಅನುಭಾವದ ಆಗರದಲ್ಲಿ ಶಿವಾನುಭವ-ಮಂಟಪ ಮಾನವಕಲ್ಯಾಣಮಂಟಪವಾಯಿತು. ಎಲ್ಲೆಲ್ಲಿಯೂ ಮಂಗಲ ಮೈವೆತ್ತು ನಿಂತಿತು. ಹಳೆಯ ಕೊಳೆ ತೊಳೆದುಹೋಗಿ, ಹೊಸ ಸೃಷ್ಟಿಯ ಉದಯವಾಯಿತು. ಈ ಮಂಗಲೋದಯದಲ್ಲಿ ಚನ್ನಬಸವಣ್ಣನೆಂಬ ಸುಜ್ಞಾನಿ ಉದಯವಾಗಿ ಬಸವಣ್ಣ-ನವರ ಪ್ರಾಣಕ್ಕೆ ಪ್ರಾಣವಾದನು, ಕಾಯಕ್ಕೆ ಜೀವವಾದನು; ಧ್ಯೇಯಕ್ಕೆ ಸಾಧನ-ವಾದನು. ಆತನಿಂದ ಬಸವಣ್ಣನವರ ಕನಸುಗಳು ನನಸಾದುವು. ಚನ್ನಬಸವಣ್ಣನವರು ಕಲ್ಯಾಣದ ಈ ಕ್ರಾಂತಿಯಲ್ಲಿ ಮಹತ್ವದ ಪಾತ್ರವನ್ನು ವಹಿಸಿ, ಅಂದು ನಡೆದ ತಾತ್ವಿಕ, ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ಕ್ಷೇತ್ರಗಳಲ್ಲಿ ನೂತನ ದರ್ಶನಗಳನ್ನು ಕಂಡುಹಿಡಿದಿರುವರು. ಅವರ ಜೀವನ ಸಾಧನೆ ಸಿದ್ಧಿ ಮುಂತಾದುವನ್ನೆಲ್ಲ ಮುಂದೆ ಅವಲೋಕಿಸಬಹುದು.



# ಜೀವನಚರಿತ್ರೆ

"ಕಿಱಿಯರಾದಡೇನು ಹಿರಿಯರಾದಡೇನು
ಅಱಿವಿಂಗೆ ಹಿರಿದು ಕಿಱಿದುಂಟೇ?
ಆದಿ ಅನಾದಿ ಇಲ್ಲದಂದು,
ಅಜಾಂಡಬ್ರಹ್ಮಾಂಡಕೋಟಿಗಳುದಯವಾಗದಂದು,
ಗುಹೇಶ್ವರಲಿಂಗದಲ್ಲಿ ನೀನೊಬ್ಬನೇ ಮಹಾಜ್ಞಾನಿಯೆಂಬುದು
ಕಾಣಬಂದಿತ್ತು ಕಾಣಾ ಚನ್ನಬಸವಣ್ಣಾ."[೧]

ಇದು ಪ್ರಭುದೇವರ ಮಾತೆಂಬ ಜ್ಯೋತಿರ್ಲಿಂಗ. ಇದರ ಪ್ರಭೆಯಲ್ಲಿ ತೊಳಗಿ ಬೆಳಗಿದೆ. ಶಬ್ದವನ್ನು ಮುಗ್ಧಗೊಳಿಸುವ ಚನ್ನಬಸವಣ್ಣನವರ ದಿವ್ಯ ವ್ಯಕ್ತಿತ್ವ.

ಭಾರತೀಯ 'ಚಾರಿತ್ರಿಕ ಸಾಹಿತ್ಯ'ದಲ್ಲಿ ಪವಾಡಕ್ಕೆ ಪ್ರಧಾನಸ್ಥಾನ; ಚರಿತ್ರೆಗೆ ಗೌಣಸ್ಥಾನ. ಕನ್ನಡವು ಇದಕ್ಕೆ ಅಪವಾದವೇನಲ್ಲ. ಶರಣರು ನಡೆದುದು, ನುಡಿದುದು ಸೂರ್ಯಪ್ರಕಾಶದಷ್ಟು ಸತ್ಯವಾದರೂ ಅವರ ಚರಿತ್ರ ಬೆಳಕು ಕಾಣದಿರುವುದು ನಮ್ಮ ಐತಿಹಾಸಿಕ ಪ್ರಜ್ಞೆಯ ಅಭಾವದ್ಯೋತಕ. ಚನ್ನಬಸವಣ್ಣನವರ ಚರಿತ್ರೆ ಈ ಮಾತಿಗೊಂದು ಪರಮಾವಧಿಯ ನಿದರ್ಶನ. ಆದರೂ ದೊರೆತ ಸಾಧನ-ಸಾಮಗ್ರಿಯ ಮಥನದಲ್ಲಿ ಸತ್ಯಾಂಶ ಹೊರಹೊಮ್ಮಬೇಕಾಗಿದೆ. ಆ ಸಾಧನ-ಸಾಮಗ್ರಿ:

೧. ಚನ್ನಬಸವಸಾಹಿತ್ಯ.
೨. ಮಿಕ್ಕ ವಚನಸಾಹಿತ್ಯ.
೩. ಶಿವಕವಿಸಾಹಿತ್ಯ.

ಇಲ್ಲಿ ಸಮಾಲೋಚನೆಮಾಡಬೇಕಾದ ಸಾಹಿತ್ಯವೇನೋ ವಿಪುಲ; ಆದರೆ. ಅಲ್ಲಿ ವಿಶ್ವಸನೀಯವಾದ ಚರಿತ್ರೆ ವಿರಳ. ಗುರುಕರಕಮಲಸಂಜಾತರಾದ ಶರಣರ ಚರಿತ್ರೆಯಲ್ಲಿ ಪೂರ್ವಾಶ್ರಯಕ್ಕೆ ಸ್ಥಾನವಿಲ್ಲ: ನಿಜದ ನಿಲವಿಗೆ ಅದು ಹೊಲ್ಲ. ಆದುದರಿಂದ ಶರಣರ. ಅಂತೆಯೇ ಚನ್ನಬಸವಣ್ಣನವರ ಚರಿತ್ರೆಯನ್ನು ನಿರ್ಣಯಿಸುವುದು ಸುಲಭಸಾಧ್ಯವಲ್ಲ.

## ಜನನ-ಬಾಲ್ಯ

ಚನ್ನಬಸವಣ್ಣನವರು ಅಣ್ಣ ಬಸವಣ್ಣನವರ ಸೋದರಳಿಯ. ಈ ಮಾತಿಗೆ ಸಮಕಾಲೀನ ಶರಣರ ಉಕ್ತಿಗಳು ಉಪಷ್ಟಂಭಕವಾಗಬಲ್ಲುವು.

೧. ಅವಚ ೧೦೬೫.

೧. 'ಪ್ರಸಾದಿ ಸ್ಥಲಕ್ಕೆ ಆತನಳಿಯ ಚನ್ನಬಸವ.'[೧]
೨. 'ಪ್ರಸಾದಿ ಸ್ಥಲಕ್ಕೆ ಆತನಳಿಯನಲ್ಲದಿಲ್ಲ.'[೨]
೩. 'ಮಹೇಶ್ವರ ಸ್ಥಲಕ್ಕೆ ಬಸವಣ್ಣನಳಿಯ.'[೩]

ಮೇಲಣ ವಚನಗಳಲ್ಲಿ 'ಆತನು' ಎಂಬುದು ಬಸವಣ್ಣನವರಿಗೆ ಅನ್ವಯಿಸುತ್ತದೆ. ಇದಕ್ಕೆ ಆ ವಚನಗಳಲ್ಲಿ ಬರುವ ಸನ್ನಿವೇಶ ಹಾಗೂ ಅವುಗಳ ಟೀಕೆ ಇವೇ ಸಾಕ್ಷಿ. ಶರಣರಂತೆ ಕೆಲವು ಕವಿಗಳೂ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಉದಾಹರಣೆಗೆ 'ಶರಣ-ಲೀಲಾಮೃತ'ವನ್ನು ನೋಡಬಹುದು.

೧. **'ನಿಜಾಲಯುಕ್ಕಳಿಯುವಾಾವಂದಿರಂ ತೀವಿದುತ್ಸವದೆ ಬೀಳ್ಕೊಟ್ಟು'[೪]**
೨. **'ಬಸವರಾಜನ ಅಳಿಯ ಚನ್ನಬಸವ'[೫]**

ಈ ಉಕ್ತಿಗಳಿಂದ ಬಸವಣ್ಣ ಚನ್ನಬಸವಣ್ಣ ಇವರಲ್ಲಿ ಮಾವ-ಅಳಿಯ ಸಂಬಂಧವಿರುವುದು ಸ್ಪಷ್ಟವಾಗುತ್ತದೆ. ಅದು ಸೋದರಳಿಯ ಸಂಬಂಧವೆನ್ನಲಿಕ್ಕೆ ಹಲವು ಬೇರೆ ಬೇರೆ ಪ್ರಮಾಣಗಳೂ ಉಂಟು. ಅವನ್ನು ಹೀಗೆ ವಿವರಿಸಬಹುದು:

೧. **'ಎನುತ ಬಸವಂ ನಿಜಸಹೋದರಿ**
**ಯೆನಿಪ ನಾಗಾಂಬಿಕೆಯುಂ ತಾನುಂ'[೬]**
೨. **'ಅಕ್ಕ ನಾಗಾಂಬಿಕೆಯುರನುಜನಂ ತೆಗೆದೆತ್ತಿ**
**ಅಕ್ಕಟಿಂದಪ್ಪಿ ಚೈವುಂಡಾಡಿ ಬಸವಯ್ಯ**
**ಚಕ್ಕನೆನ್ನಿದಿರೊಳುಂ ಕುಣಿದಾಡು'[೭]**
೩. **'ಆ ಸಮಯುಕೆಂದಿನಂದದಿ ಬಸವರಾಜನಗ್ರಜೆ ಬರಲ್ಕೆ'[೮]**
೪. **'ಉಕ್ಕುವತಿಹರುಷದಿಂ ಬಸವಣ್ಣನಾಗ ತ**
**ಮ್ಮಕ್ಕ ನಾಗಾಂಬೆಯೊಡನೆ'[೯]**
೫. **'ಬಸವನಗ್ರಜೆ ನಾಗಲಾಂಬಿಕೆಯು'[೧೦]**
೬. **'ಚಿಕ್ಕ ಬಸವನು ತನ್ನ ಅಕ್ಕ ನಾಗಲೆಸಹಿತ'[೧೧]**
೭. **'ಬಸವಣ್ಣನಿಗೆ ಅಕ್ಕನಾದ ನಾಗಲಾಂಬಿಕೆಯುಮ್ಮನು'[೧೨]**

---

೧. ವಸಾ ೨, ಪು. ೨೭೨.
೨. ವಸಾ ೨., ಪು. ೨೭೨. ಈ ವಚನಕ್ಕೆ ಹೀಗೆ ಟೀಕೆಯನ್ನು ಬರೆಯಲಾಗಿದೆ: "ತ್ರಿವಿಧ ಪದಾರ್ಥವ ತ್ರಿವಿಧಲಿಂಗಕ್ಕರ್ಪಿಸಿ, ತ್ರಿವಿಧಪ್ರಸಾದ · ಸ್ವೀಕರಿಸುವ ಪ್ರಸಾದಿಸ್ಥಲವುಳ್ಳವನೇ ಬಸವೇಶ್ವರನ ಸೋದರಳಿಯನಾದ ಚನ್ನಬಸವಣ್ಣನು."
೩. ವಸಾ ೨, ಪು. ೨೭೨.
೪. ಚೆಬಪು, ಕಾಂ. ೧, ಸಂ. ೮, ಪ. ೨೩.
೫. ಶಲೀ ೨೨–೧೫, ೧೬, ೧೭.
೬. ಬಪು ೩–೮೪.
೭. ಶಿಚಿಂ ೩೦–೨೭, ೩೦, ೪೦, ೫೩, ೫೪.
೮. ಸಿಂಪು ೩೧–೨೧; ೩೪–೧೮.
೯. ಚೆಬಪು, ೫–೫೭.
೧೦. ಚೆಬಪು, ೬–೪೮.
೧೧. ಶಲೀ, ೬–೧೩೧.
೧೨. ಭೈಕಾಕಸೂರ, ಪು. ೩೭೯.

ಹೀಗೆ ಅನೇಕ ಕವಿಗಳು ಬಸವಣ್ಣನವರಿಗೆ ಅಗ್ರಜೆಯೊಬ್ಬಳು ಇದ್ದುದನ್ನು ಸ್ಪಷ್ಟವಾಗಿ ಸಾರಿರುವರು. ಆಕೆಯ ಹೆಸರು ನಾಗಲಾಂಬಿಕೆ.[೧] ಈ ಅಕ್ಕ ನಾಗಮ್ಮನವರ ಸತ್ಪುತ್ರನೇ ಚನ್ನಬಸವಣ್ಣ. ಇದಕ್ಕೆ ಚನ್ನಬಸವಣ್ಣನವರ ವಚನಗಳೇ ಸಾಕ್ಷಿ:

೧. "ಲಿಂಗ ಜಂಗಮ, ಜಂಗಮ ಲಿಂಗವೆಂಬುದ ತೋರಿ
ನಿಜೈಕ್ಯನಾದೆಯಲ್ಲಾ ನಿಜಗುರು ಬಸವಣ್ಣಾ!
ಪ್ರಸಾದ ಕಾಯ, ಕಾಯ ಪ್ರಸಾದವೆಂಬುದ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ
ಎನ್ನನಾಗುಮಾಡಿ ಮುಂದುವರಿದೆಯಲ್ಲಾ ಬಸವಣ್ಣಾ!
ಲಿಂಗ ಪ್ರಾಣ, ಪ್ರಾಣ ಲಿಂಗವೆಂಬುದ ಎನ್ನಂತರಂಗದಲ್ಲಿ ಸ್ಥಾಪ್ಯವಮಾಡಿ,
ಎನ್ನ ನಿನ್ನಂತೆ ಮಾಡಿ, ನಿಜಲಿಂಗದೊಳಗೆ ನಿರವಯವಾದೆಯಲ್ಲಾ
ಬಸವಣ್ಣಾ!
ಎನ್ನ ಮನವ ಮಹಾಸ್ಥಲದಲ್ಲಿ ಲಯವಮಾಡಿ,
ನಿರ್ವಯಲಾಗಿ ಹೋದೆಯಲ್ಲಾ ನಿಜಲಿಂಗೈಕ್ಯ ಬಸವಣ್ಣಾ!
ನಿನ್ನ ಒಕ್ಕುಮಿಕ್ಕ ಶೇಷವನಿಕ್ಕಿ ಆಗುಮಾಡಿ,
ನಿನ್ನಂತರಂಗದಲ್ಲಿ ಅವ್ವೆ ನಾಗಾಯಿಯ ಇಂಬುಗೊಂಡಡೆ
ಎನ್ನ ಮನ ನಿಮ್ಮ ಪಾದದಲ್ಲಿ ಕರಗಿ ಕೊರಗಿತ್ತಯ್ಯಾ ಸಂಗನ
ಬಸವಣ್ಣಾ!
ಕೂಡಲಚನ್ನಸಂಗಯ್ಯಂಗೆ ಸುಜ್ಞಾನವಾಹನವಾಗಬೇಕೆಂದು
ನಿರವಯವಾದೆಯಲ್ಲಾ ಸಂಗನಬಸವಣ್ಣಾ!"[೨]

೨. "ಹನ್ನೆರಡುಗಾವುದ ವಿಸ್ತೀರ್ಣದ ಮಹಾಪಟ್ಟಣಕ್ಕೆ ಕಲ್ಯಾಣವೆಂಬ ಪ್ರಣತಿ
ಆ ಪ್ರಣತಿಯಲ್ಲಿ ಮಹತ್ತೆಂಬ ಎಣ್ಣೆಯನೆರೆದು
ಜ್ಞಾನವೆಂಬ ಜ್ಯೋತಿಯ ಹೊತ್ತಿಸಿ ಒಪ್ಪುತಿದ್ದಿತಯ್ಯಾ.
ಅಲ್ಲಿ ಕಾಳಯ್ಯ, ಚೌಡಯ್ಯ, ಕೋಲ ಶಾಂತಯ್ಯ, ಮೊಗವಾಡದ ಕೇಶಿರಾಜಯ್ಯ, ಖಂಡೆಯ ಬೊಮ್ಮಣ್ಣ, ಮಿಂಡ ಮಲ್ಲಿನಾಥ, ಹಡಪದಪ್ಪಣ್ಣ, ಮಡಿವಾಳ ಮಾಚಯ್ಯ, ಅವ್ವೆ ನಾಗಾಯಿಗಳು ಸಹಿತ ಇವರೆಲ್ಲರೂ ಸಂಗನಬಸವಣ್ಣನ ಬಯಲಕೂಡಿದರು.
ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ
ಇವರೆಲ್ಲರ ಪ್ರಸಾದದ ಬಯಲು ಎನಗಾಯಿತ್ತು."[೩]

ಹೀಗೆ ಚನ್ನಬಸವಣ್ಣನವರೇ ಅಕ್ಕನಾಗಮ್ಮನವರನ್ನು 'ಅವ್ವೆ' ಎಂದು ಸಂಬೋಧಿಸಿರುವರು. ಇದನ್ನು ಇತರರು ಎತ್ತಿಹಿಡಿದಿದ್ದರೆ ಆಶ್ಚರ್ಯವೇನಿಲ್ಲ.

---

೧. ನಾಗಲಾಂಬೆ, ನಾಗಲಾಂಬಿಕೆ, ಅಕ್ಕ ನಾಗಲಾಂಬಿಕೆ, ಅಕ್ಕ ನಾಗಾಯಿ, ನಾಗಮ್ಮ, ಅಕ್ಕ ನಾಗಮ್ಮ, ನಾಗಲೆ ಎಂಬ ಪರ್ಯಾಯ ಪದಗಳಿಂದ ವಿವಿಧ ಕಾವ್ಯಗಳಲ್ಲಿ ನಾಗಮ್ಮನವರ ಉಲ್ಲೇಖ ಬರುತ್ತದೆ.

೨. ಚಬವ ೧೫೦೧. ೩. ಚಬವ ೧೫೮೯.

೩. 'ನಾಗಲಾಂಬೆಯ ವರ ತನೂಭವ .......'[೧]

೪. 'ನಾಗಲಾಂಬೆಯುದರವನೊಡೆದು ಚನ್ನಬಸವಂ ಜನಿಸಿದಂ.'[೨]

೫. 'ತರುಣಿ ನಾಗಾಂಬಿಕೆಯ ಜಠರದೊಳು ಜನಿಸಿದಂ ಚನ್ನಬಸವಯ್ಯ.'[೩]

೬. 'ನಾಗಲೆಗೆ.......ಅವತರಿಸಿದಂ......ಚನ್ನಬಸವನೆಂಬಭಿಧಾನದಿಂ.'[೪]

ಹೀಗೆ ಚನ್ನಬಸವಣ್ಣನವರು ಬಸವಣ್ಣನವರ ಅಗ್ರಜೆಯಾದ ನಾಗಲಾಂಬಿಕೆಯ ಸುಪುತ್ರನೆಂಬುದು ವಚನಗಳಿಂದಲೂ ಕಾವ್ಯಗಳಿಂದಲೂ ಸ್ಪಷ್ಟವಾಗುತ್ತದೆ. ಆದರೆ, ಇಷ್ಟೇ ಸ್ಪಷ್ಟವಾಗಿ ಈ ಎಲ್ಲ ಆಕರಗಳಲ್ಲಿಯೂ ಅವರ ತಂದೆಯ ಹೆಸರು ಉಕ್ತವಾಗದಿರುವುದು ಅನೇಕರಿಗೆ ಅಚ್ಚರಿಯನ್ನುಂಟುಮಾಡಿದೆ. ಚನ್ನಬಸವಣ್ಣನವರ ತಂದೆಯ ಹೆಸರನ್ನು ನೇರವಾಗಿ ಉಲ್ಲೇಖಿಸುವ ಕಾವ್ಯ ಒಂದೇ ಒಂದು: ಅದು ಸಿಂಗಿರಾಜ ಪುರಾಣ. ಅದರ ಕಾಲ ಕ್ರಿ. ಶ. ಸುಮಾರು ೧೫೦೦. ಆದರೆ. ತತ್ಪೂರ್ವದ ಮತ್ತು ತದನಂತರದ ಕೃತಿಗಳು ಈ ಬಗೆಗೆ ಭಿನ್ನಾಭಿಪ್ರಾಯವನ್ನು ತಳೆದಿವೆ. ಅಲ್ಲಿ ಚನ್ನಬಸವಣ್ಣನವರ ಜನನವನ್ನು ಪವಾಡರೂಪದಿಂದ ವಿವರಿಸಲಾಗಿದೆ. ಆ ಪವಾಡಗಳನ್ನು ನಾಲ್ಕು ಬಗೆಯಾಗಿ ವಿಂಗಡಿಸಬಹುದು:

೧. ಪ್ರಸಾದದಿಂದ ಜನಿಸಿದರು.[೫]

೨. ಬಸವಣ್ಣನವರ ಪ್ರಸಾದದಿಂದ ಜನಿಸಿದರು.[೬]

೩. ಕಕ್ಕಯ್ಯಗಳ ಪ್ರಸಾದದಿಂದ ಜನಿಸಿದರು.[೭]

೪. ಶಿವಪ್ರಸಾದದಿಂದ ಜನಿಸಿದರು.[೮]

ಚನ್ನಬಸವಣ್ಣನವರ ವಿಷಯವಾಗಿ ಹಲಕೆಲವು ಗ್ರಂಥಗಳಲ್ಲಿ ಅವರು ಪ್ರಸಾದದಿಂದ ಜನಿಸಿದರು ಎಂಬ ಮಾತು ಸ್ಪಷ್ಟವಾಗಿರುತ್ತದೆ. ಅದಕ್ಕೆ ಕಾರಣ ಹೀಗಿರಬಹುದು:

ವಚನವಾಙ್ಮಯದೊಳಗೆ ಒಬ್ಬೊಬ್ಬ ಶರಣರಿಗೆ ಅವರವರ ಮನೋಧರ್ಮಕ್ಕನುಗುಣವಾಗಿ ಷಟ್‌ಸ್ಥಲಮಾರ್ಗದಲ್ಲಿ ಒಂದೊಂದು ಸ್ಥಲವನ್ನು ಕಲ್ಪಿಸಿರುವುದುಂಟು:

"ಭಕ್ತಸ್ಥಲ ಬಸವಣ್ಣಂಗಾಯಿತ್ತು, ಮಾಹೇಶ್ವರಸ್ಥಲ ಮಡಿವಾಳಯ್ಯಂಗಾಯಿತ್ತು, ಪ್ರಸಾದಿಸ್ಥಲ ಚನ್ನಬಸವಣ್ಣಂಗಾಯಿತ್ತು, ಪ್ರಾಣಲಿಂಗಿಸ್ಥಲ ಚಂದಯ್ಯಂಗಾಯಿತ್ತು,

---

೧. ಬಪು, ೬–೩೪.

೨. ಚಬಪು, ೪–ಸೂಪ, ೩೩; ೫–೬, ೨೧.

೩. ಶಿಚಂ, ೩೧–೭೧.

೪. ಶಿಚಂ, ೩೧–೭೨.

೫. ಶಿಚಂ, ೩೧–೭೦.

೬. ಮಿಕ್ಕು ಭಕ್ತಿಯಲೊಂದು ದಿವಸದ । ಲಕ್ಕನಾಗಾಯಿಗಳು ಬಸವನ ।<br>ಒಕ್ಕುಮಿಕ್ಕ ಮಹಾಪ್ರಸಾದವನುಣಲು ಕ್ಷಣದೊಳಗೆ ॥<br>ತಕ್ಕ ಶಿವತತ್ವಸ್ವರೂಪದ । ಶಿಕ್ಕೆ ಬೆಳೆದುದಯಿಸಲು ಕಾಂತ ।<br>ಲಕ್ಕನಾ ಬಸವೇಶ್ವರನ ಹೆಸರಿಟ್ಟಳಾ ಶಿಶುಗೆ ॥ ಪ್ರಲೀ. ೯–೨೩.

೭. ಪೌಕಾ. ಸಂ. ೧೯.

೮. ಚಬಪು. ಸಂ. ೪.

ಶರಣಸ್ಥಲ ಘಟ್ಟಿವಾಳಯ್ಯಂಗಾಯಿತ್ತು, ಐಕ್ಯಸ್ಥಲ ಅಜಗಣ್ಣಂಗಾಯಿತ್ತು
ಇಂತೀ ಷಟ್‌ಸ್ಥಲಬ್ರಹ್ಮಿಗಳೆಲ್ಲರು ಎನ್ನಂಗದ ಮರದ ಮಱೆಯಲ್ಲಿ ಸಂಗಾತಲೈದಾರೆ
ಆಱಂಗದ, ಮೂಱು ಸಂಗದ ತೋಱಿಕೆಯ ತೋಱಾ ಕಾಲಾಂತಕ
ಭೀಮೇಶ್ವರಲಿಂಗವೇ."[೧]

"ಭಕ್ತಸ್ಥಲಕ್ಕೆ ಒಬ್ಬ, ಮಹೇಶ್ವರ ಸ್ಥಲಕ್ಕೆ ಇಬ್ಬರು,
ಪ್ರಸಾದಿಸ್ಥಲಕ್ಕೆ ಆತನಳಿಯನಲ್ಲದಿಲ್ಲ. ಪ್ರಾಣಲಿಂಗಿಸ್ಥಲಕ್ಕೆ ಮೂವರು,
ಶರಣಸ್ಥಲಕ್ಕೆ ನಾಲ್ವರು, ಐಕ್ಯಸ್ಥಲಕ್ಕೆ ಅಕ್ಕನ ತಮ್ಮನಲ್ಲದಿಲ್ಲ.
ಇಂತೀ ಕುಱುಹಿನ ಬೆಂಬಳಿಯನಱಿದು, ಬಿಡುವರ ಬಿಟ್ಟು
ತಡವರ ತಡವುತಿದೇನೆ ಕೂಡಲಸಂಗಮದೇವರಲ್ಲಿ ಬಸವಣ್ಣನಱಿಕೆಯಾಗಿ."[೨]

ಹೀಗೆ ವಿವಿಧ ಸ್ಥಲಗಳಿಗೆ ವಿವಿಧ ಶರಣರು ಲಕ್ಷ್ಯವೆಂದು ವಿವರಿಸುವಲ್ಲಿ ಚನ್ನ-ಬಸವಣ್ಣನವರಿಗೆ ಪ್ರಸಾದಿಸ್ಥಲ ಸಲ್ಲುತ್ತದೆ. ಇದನ್ನು ಇನ್ನೂ ಅನೇಕ ವಚನಗಳಲ್ಲಿ ಕಂಡುಕೊಳ್ಳಬಹುದು. ಇದರಿಂದ ಚನ್ನಬಸವಣ್ಣನವರು ಪ್ರಸಾದಿಸ್ಥಲಕ್ಕೆ ಮೀಸಲಾ-ಗಿದ್ದವರೆಂದು ವ್ಯಕ್ತವಾಗುತ್ತದೆ. ಆದರೆ, ಅವರು ಕೇವಲ ಪ್ರಸಾದಿಸ್ಥಲದಲ್ಲಿ ನಿಂದವರೆಂದು ಅರ್ಥಮಾಡಿಕೊಳ್ಳಲಾಗದು. ಏಕೆಂದರೆ, ಆವಾವ ಸ್ಥಲದಲ್ಲಿ ನಿಂದರೂ ಆ ಸ್ಥಲ ದಲ್ಲಿಯೇ ಐಕ್ಯವನ್ನು ಸಾಧಿಸುವ ಸಮುಸಮುಚ್ಚಯದ ವಿಧಾನ ಷಟ್‌ಸ್ಥಲದಲ್ಲಿ ಅಳ-ವಟ್ಟಿದೆ. ಬಸವಣ್ಣನವರು ಭಕ್ತಿಸ್ಥಲದಲ್ಲಿ ನಿಂದು ಐಕ್ಯವನ್ನು ಸಾಧಿಸಿದವರು. ಮಡಿವಾ-ಳಯ್ಯಗಳು ಮಹೇಶ್ವರಸ್ಥಲದಲ್ಲಿ ನಿಂದು ಐಕ್ಯವನ್ನು ಸಾಧಿಸಿದವರು. ಹೀಗೆ ಚನ್ನ-ಬಸವಣ್ಣನವರು ಪ್ರಸಾದಿಸ್ಥಲದಲ್ಲಿ ನಿಂದು ಐಕ್ಯವನ್ನು ಪಡೆದಿರುವರು. ಅಂದರೆ, ಅವರು ಜನ್ಮತಃ ಪ್ರಸಾದಿಸ್ಥಲ ಲಕ್ಷಣವಾದ ಅವಧಾನಭಕ್ತಿಯನ್ನು ಪಡೆದಿರಬೇಕು. ಅವಧಾನ ಭಕ್ತಿಯಲ್ಲಿ ಜ್ಞಾನ, ಕ್ರಿಯೆಗಿಂತಲೂ ಒಡೆದು ಕಾಣುತ್ತದೆ. ಚನ್ನಬಸವಣ್ಣನವರ ವಚನ ಗಳನ್ನು ಓದಿದರೆ ಈ ಮಾತಿಗೆ ಹೇರಳ ಉದಾಹರಣೆಗಳು ದೊರಕಬಲ್ಲವು. ಸುಜ್ಞಾನಿ ಚನ್ನಬಸವಣ್ಣ. ಸಮ್ಯಕ್‌ಜ್ಞಾನಿ ಚನ್ನಬಸವಣ್ಣ ಎಂದು ಮುಂತಾಗಿ ಅನೇಕ ಜನ ಶಿವ-ಶರಣರು ಚನ್ನಬಸವಣ್ಣನವರನ್ನು ಕೊಂಡಾಡಿರುವರು.

೧. 'ಸ್ವಯಂಭುಜ್ಞಾನಿ ಚನ್ನಬಸವಣ್ಣ.'[೩]

೨. 'ನೀನೊಬ್ಬನೆ ಮಹಾಜ್ಞಾನಿಯೆಂಬುದು ಕಾಣಬಂದಿತ್ತು ಕಾಣಾ
ಚನ್ನಬಸವಣ್ಣಾ.'[೪]

೩. 'ಗುಹೇಶ್ವರಲಿಂಗದಲ್ಲಿ ಅವಿರಳಜ್ಞಾನಿ ಚನ್ನಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋಯೆಂಬೆನು.'[೫]

೪. 'ಸದಮಳಜ್ಞಾನದಲ್ಲಿ......ಲೋಕಕ್ಕೆ ಭಕ್ತಿಯ ಸಾಧಿಸಿಕೊಟ್ಟ......
ಚನ್ನಬಸವಣ್ಣನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.'[೬]

---

೧. ಮಿಸ್ತ್ರೀವ ೭೯.
೨. ಸಮುವ, ತಾಪ್ರ ೪೭೮, ಪ್ರ. ೨೫೦. ಉಗ್ಗಡಿಸುವ ಗಬ್ಬಿದೇವಯ್ಯನ ವಚನ.
೩. ಶೂಸಂ. ೮–೩೨.
೪. ಶೂ. ಸಂ. ೮–೬೨.
೫. ಚೆಸಾ, ಪು. ೨೫೦, ವ. ೫.
೬. ಶೂಸಂ, ಪು. ೨೫೭.

೫. ‘ಸಂಗನ ಬಸವಣ್ಣನ ಕ್ರೀ; ಚನ್ನಬಸವಣ್ಣನ ಜ್ಞಾನ.’[೧]

೬. ‘ಎನ್ನ ಸತ್ಕ್ರಿಯೆ ಬಸವಣ್ಣನು; ಎನ್ನ ಸುಜ್ಞಾನವೆ ಚನ್ನಬಸವಣ್ಣನು.’[೨]

೭. ‘ಬಸವೇಶ್ವರಂಗೆ ಸರ್ವಗುಣಶೀಲ; ಚನ್ನಬಸವಣ್ಣಂಗೆ ದಿವ್ಯಜ್ಞಾನ-ಗುಣಶೀಲ.’[೩]

೮. ‘ತನ್ನನಱಿದ ಇದಿರ ಕಾಬ ಜ್ಞಾನ, ಚನ್ನಬಸವಣ್ಣಂಗೆ ಸಾಧ್ಯವಾಯಿತ್ತು.’[೪]

೯. ‘ಸಮ್ಯಜ್ಞಾನಿ ಚನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು
ಎನ್ನ ಭವಂ ನಾಸ್ತಿಯಾಯಿತ್ತಯ್ಯಾ ಪ್ರಭುವೇ.’[೫]

೧೦. ‘ಚನ್ನಬಸವಣ್ಣನ ಜ್ಞಾನ.’[೬]

೧೧. ‘ಭಕ್ತಿಶಕ್ತಿ ಬಸವಣ್ಣಂಗಾಯಿತ್ತು; ಜ್ಞಾನಶಕ್ತಿ ಚನ್ನಬಸವಣ್ಣಂಗಾಯಿತ್ತು.’[೭]

ಈ ಉದ್ಧರಣೆಗಳಿಂದ ಚನ್ನಬಸವಣ್ಣನವರು ಸಹಜಜ್ಞಾನಿಗಳಾಗಿದ್ದರೆಂಬುದು ವ್ಯಕ್ತವಾಗುತ್ತದೆ. ಜ್ಞಾನ ಅವರಿಗೆ ಜನ್ಮತಃ ಸಾಧ್ಯವಾಯಿತ್ತೆಂಬುದು ಕೆಳಗಣ ವಚನಗಳಿಂದ ಸ್ಪಷ್ಟವಾಗುತ್ತದೆ.

“ಕಿಱಿಯರಾದಡೇನು, ಹಿರಿಯರಾದಡೇನು, ಅಱಿವಿಂಗೆ ಹಿರಿದುಕಿಱಿದುಂಟೆ?
ಆದಿ ಅನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡಕೋಟಿಗಳುದಯವಾಗದಂದು,
ಗುಹೇಶ್ವರಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿಯೆಂಬುದು
ಕಾಣಬಂದಿತ್ತು ಕಾಣಾ, ಚನ್ನಬಸವಣ್ಣಾ”.[೮]

“ಶಿಶುವೆನ್ನಬಹುದೆ ನಂಬಿಯಣ್ಣನ? ಸೂಕ್ಷ್ಮನೆನ್ನಬಹುದೆ ರವಿಯ?
ಜಗವ ಬೆಳಗುವ ದೃಷ್ಟಿ ಕಿಱಿದೆನಬಹುದೆ?
ಸೃಷ್ಟಿಯ ಕಾಂಬುವ ಭಾವ ಕಿಱಿದೆನಬಹುದೆ?
ಬಳ್ಳ ಲಿಂಗವಾದುದನು ಕೂಡಲಸಂಗಮದೇವ ಕೇಳಯ್ಯಾ,
ಯುಗಜುಗವೆಲ್ಲವನು ಮೀಱಿದ ಶರಣನ ಕಿಱಿಯನೆನಬಹುದೆ?
ಚನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು”.[೯]

ಪ್ರಭುದೇವರ ಹಾಗೂ ಬಸವಣ್ಣನವರ ಈ ಉಕ್ತಿಗಳಿಂದ ಚನ್ನಬಸವಣ್ಣನವರಿಗೆ ಸಂಜ್ಞಾನವು ಬಾಲ್ಯಾವಸ್ಥೆಯಲ್ಲಿಯೆ ಪ್ರಾಪ್ತವಾಯಿತ್ತೆಂಬುದು ಸ್ಪಷ್ಟವಾಗುತ್ತದೆ. ಬಸವಣ್ಣನವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಚನ್ನಬಸವಣ್ಣನವರಿಗೆ ಸಂಜ್ಞಾನ ಜನ್ಮದಾರಭ್ಯ ಪ್ರಾಪ್ತವಾಯಿತ್ತೆಂದು ಹೇಳುವರು.

“ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಶಿಯ ನೋಡಾ!
ಸುಗಂಧ ಬಂಧಬಂಧುರದಂತೆ ಹುಟ್ಟುತ್ತವೆ ಪರಿಮಳ.

---

೧. ತಾಪ್ರ ೮೨, ಪು. ೧೪೫. ೨. ಶೂಸಂ, ಪು. ೩೦೨. ೩. ತಾಪ್ರ ೧೦೮–೧೯೫.
೪. ತಾಪ್ರ ೮೨, ಪು. ೧೩೭; ಶಿಸಂವ ಭಾ. ೨, ಪು. ೧೧೦–೮೨.
೫. ಮದೇವ ೯೬. ೬. ಮದೇವ ೯೭. ೭. ಶಿವ ೭೭.
೮. ಅವಚಂ ೧೦೬೫. ೯. ಬಷವ ಅನುಬಂಧ ಪು. ೧೧೨–೩೩೮.

**ಆದಿ ಅನಾದಿ ಇಲ್ಲದ ಮುನ್ನವೆ ತನ್ನಿಂದವೆ ತಾನಾದ ಕಾರಣ,**
**ಮುಟ್ಟದೆ ತಟ್ಟದೆ ಗುರುಕಾರುಣ್ಯವ ಪಡೆದು ಲಿಂಗ ಸ್ವಯವಾಗಿ**
**ಎನಗೆ ಗತಿಪಥವ ತೋಱಬೇಕೆಂದು ಹಾಗಾದನು**
**ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣನು".**[೧]

ಈ ಅರ್ಥವನ್ನೇ ಬಸವಣ್ಣನವರ ಇನ್ನೊಂದು ವಚನ ಧ್ವನಿಯಿಂದ ಹೇಳುವಂತಿದೆ:

**"ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯಾ.**
**ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯಾ.**
**ಇದಱ ಸಂಗಸುಖದನುಭವವನು ಕೂಡಲಸಂಗಮದೇವ ತಾನೆ ಬಲ್ಲ".**[೨]

ಎಂದರೆ ಅವರು ಪ್ರಸಾದಕಾಯರಾಗಿ ಜನ್ಮವೆತ್ತುದನ್ನು ಸರ್ವಶರಣರೂ ಗುರುತಿಸಿದ್ದರು. ಪದಾರ್ಥಕಾಯಕ್ಕೂ ಪ್ರಸಾದಕಾಯಕ್ಕೂ ಮಹದಂತರವುಂಟು. ಪದಾರ್ಥ ಕಾಯದ ಕ್ಲೇಶಗಳನ್ನು ಸದ್ಭಕ್ತಿಯ ಆಚರಣೆಯಿಂದ ಅಳಿದು ಶರಣನು ಪ್ರಸಾದಕಾಯವನ್ನು ಪಡೆಯಬೇಕಾಗುತ್ತದೆ. ಈ ಹಂತದಲ್ಲಿ ಸಾಧಕನು ಭಕ್ತ, ಮಹೇಶ್ವರ, ಪ್ರಸಾದಿ ಮುಂತಾದ ಸ್ಥಲಗಳಲ್ಲಿ ನಿಲ್ಲಬೇಕಾಗುತ್ತದೆ. ಪ್ರಸಾದಿಸ್ಥಲಕ್ಕೆ ಬಂದಾಗಲೇ ಸುಜ್ಞಾನ ಕಾಯದ ಸುಸ್ಪಷ್ಟ ಚಿಹ್ನಗಳು ಕಂಗೊಳಿಸುತ್ತವೆ. ಸುಜ್ಞಾನಕಾಯವೆತ್ತು ಅವತರಿಸಿದ ಚನ್ನಬಸವಣ್ಣನವರನ್ನು ಪ್ರಸಾದಕಾಯರೆಂದು ಶರಣರು ಸಂಬೋಧಿಸಿರುವರು. ಈ ಸತ್ಯ ಸಂಗತಿಯನ್ನೇ ಮುಂದಣ ಕಾವ್ಯಗಳು, ಚರಿತ್ರೆಗಳು ತಂತಮ್ಮ ರೀತಿಯಲ್ಲಿ ಅರ್ಥೈಸಿದುವು. ಚನ್ನಬಸವಣ್ಣನವರು ವಿವಿಧ ಪ್ರಸಾದಗಳಿಂದ ಜನಿಸಿದರೆಂದು ಕಥೆ ಕಟ್ಟಿದುವು. ಈ ಹಿನ್ನೆಲೆಯಲ್ಲಿ ಹಿಂದೆ ವಿವರಿಸಿದ ನಾಲ್ಕುಬಗೆಯ ಪವಾಡಗಳನ್ನು ಕುರಿತು ವಿವೇಚಿಸಬಹುದು.

## ಪ್ರಸಾದಜನ್ಮ

ಶಿವತತ್ವಚಿಂತಾಮಣಿಯಲ್ಲಿ ಚನ್ನಬಸವಣ್ಣನವರ ಸಂದರ್ಭ ಹೀಗೆ ಉಕ್ತವಾಗಿದೆ: "ಬಸವಣ್ಣನವರು ಕಲ್ಯಾಣದಲ್ಲಿ ನಿತ್ಯವೂ ಜಂಗಮಾರಾಧನೆಯನ್ನು ಮಾಡುತ್ತಿರುವರು. ಒಂದು ದಿನ ಇದ್ದಕ್ಕಿದ್ದಂತೆಯೇ ದೊರೆ ಬಿಜ್ಜಳನಿಂದ ಅಣ್ಣನವರಿಗೆ ಕರೆ ಬರುತ್ತದೆ. ಆಗ ಜಂಗಮದ ತೀರ್ಥಪ್ರಸಾದಗಳನ್ನು ಕಾಯ್ದುಕೊಂಡಿರಬೇಕೆಂದು ಅಕ್ಕ ನಾಗಾಯಿಯನ್ನು ನೇಮಿಸಿ ಆಸ್ಥಾನಕ್ಕೆ ಹೊರಡುವರು. ಇತ್ತ ನಾಗಾಯಿಗೆ ತೂಕಡಿಕೆ ಬಂದಿರಲು ಒಂದು ಬೆಕ್ಕು ಪ್ರಸಾದವನ್ನು ಕೊಳ್ಳಲು ಬರುವುದು. ಆಸ್ಥಾನದಲ್ಲಿದ್ದ ಬಸವಣ್ಣನವರು ದಿವ್ಯದೃಷ್ಟಿಯಿಂದ ಇದನ್ನರಿತು ಕೈಬೀಸಲು, ನಾಗಾಯಿಯು ಎಚ್ಚತ್ತು ಪ್ರಸಾದವನ್ನು ತೆಗೆದುಕೊಂಡು ಸೇವಿಸುವಳು. ಅಲ್ಲಿಂದ ಚನ್ನಬಸವಣ್ಣನವರ ಗರ್ಭವಾಗುವುದು." ಈ ಕಥೆಯಲ್ಲಿ ಹೊರಹೊಮ್ಮುವ ತಿರುಳು ಇಷ್ಟು:

೧. ಬಸವಣ್ಣನವರು ಕಲ್ಯಾಣದೊಳಗೆ ಜಂಗಮದಾಸೋಹನಿರತರಾಗಿರುತ್ತಿದ್ದರು.
೨. ಅಕ್ಕ ನಾಗಾಯಿಯು ಅವರ ಮಹಾಮನೆಯಲ್ಲಿಯೇ ನಿಂತು, ಎಲ್ಲ ಕಾರ್ಯದಲ್ಲಿಯೂ ಬಸವಣ್ಣನವರಿಗೆ ನೆರವಾಗುತ್ತಿದ್ದಳು.

---

೧. ಬಸವ ಅನುಬಂಧ, ವ. ೩೧೧.
೨. ಬಸವ ೫೧೭.

೩. ಅವರು ಜಂಗಮ ಪಾದೋದಕ ಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸುತ್ತಿದ್ದರು. ಈ ಸತ್ಯ ಸಂಗತಿಗಳನ್ನು ನೇರವಾಗಿ ಚಿತ್ತರಿಸಿದ ಪೌರಾಣಿಕ ದೃಷ್ಟಿಯ ಕವಿಯು ಅವುಗಳ ಸುತ್ತು ಪವಾಡಗಳ ಕಥೆಯನ್ನು ಕಲ್ಪಿಸಿದ್ದಾನೆ.

## ಬಸವಣ್ಣನವರ ಪ್ರಸಾದ

ಮೊದಮೊದಲು ಚನ್ನಬಸವಣ್ಣನವರು ಪ್ರಸಾದದಿಂದ ಜನಿಸಿದರೆಂಬ ಕಥೆ ಹುಟ್ಟಿ, ಮುಂದೆ ಬರಬರುತ್ತ ಬೇರೆ ಬೇರೆಯವರ ಪ್ರಸಾದಗಳು ಅವರ ಜನನಸಂದರ್ಭದಲ್ಲಿ ಉಲ್ಲಿಖಿತವಾಗಿವೆ. ಅವುಗಳಲ್ಲಿ ಬಸವಣ್ಣನವರ ಪ್ರಸಾದವೂ ಒಂದು. ಈ ವಿಷಯ ಪ್ರಭುಲಿಂಗಲೀಲೆಯಲ್ಲಿ ಹೀಗೆ ಉಕ್ತವಾಗಿದೆ:

> "ವಿಂಕ್ಕ ಭಕ್ತಿಯುಲೊಂದು ದಿವಸದ
> ಲಕ್ಕನಾಗಾಯಿಗಳು ಬಸವನ
> ಲೊಕ್ಕುವಿಂಕ್ಕ ಮಹಾಪ್ರಸಾದವನುಣಲು ಕ್ಷಣದೊಳಗೆ ।
> ತಕ್ಕ ಶಿವತತ್ವಸ್ವರೂಪವೆ
> ಸಿಕ್ಕಿ ಬೆಳೆದುದಯಿಸಲು ಕಾಣುತ
> ಲಕ್ಕನಾ ಬಸವೇಶ್ವರನ ಹೆಸರಿಟ್ಟಳಾ ಶಿಶುಗೆ" ॥[೧]

ಪ್ರಭುಲಿಂಗಲೀಲೆ (ಕ್ರಿ. ಶ. ಸು. ೧೪೩೦) ಶಿವತತ್ವ ಚಿಂತಾಮಣಿಯ (ಕ್ರಿ. ಶ. ಸು. ೧೪೨೫) ಬೆನ್ನಹಿಂದೆಯೇ ಹುಟ್ಟಿಬಂದಿದೆ. ಈ ನಾಲ್ಕೈದು ವರುಷಗಳ ಅವಧಿಯಲ್ಲಿಯೇ ಚನ್ನಬಸವಣ್ಣನವರು ಬಸವಣ್ಣನವರ ಮಹಾಮನೆಯೊಳಗಣ ಜಂಗಮಪ್ರಸಾದದಿಂದ ಜನಿಸಿದರೆಂಬ ಶಿವತತ್ವಚಿಂತಾಮಣಿಯ ಕಥೆ, ಬಸವಣ್ಣನವರ ಪ್ರಸಾದದಿಂದ ಜನಿಸಿದ-ರೆಂಬುದಾಗಿ ಪ್ರಭುಲಿಂಗಲೀಲೆಯಲ್ಲಿ ಮಾರ್ಪಟ್ಟಿತು. ಇದಕ್ಕೆ ಚನ್ನಬಸವಣ್ಣನವರ ಹೆಸರಿನಲ್ಲಿರುವ 'ಬಸವಣ್ಣ' ಎಂಬ ಪದ ಪ್ರೇರಕವಾಗಿರಬಹುದಾಗಿದೆ. ಇದನ್ನು ಎತ್ತಿ ಹಿಡಿಯುವಂತೆ 'ಅಕ್ಕನಾಗಾಯಿಗಳು ಬಸವೇಶ್ವರನ ಹೆಸರಿಟ್ಟಳಾ ಶಿಶುಗೆ' ಎಂದು ಚಾಮರಸನು ಸ್ಪಷ್ಟವಾಗಿ ಹೇಳಿರುವನು.

## ಕಕ್ಕಯ್ಯನವರ ಪ್ರಸಾದ

ಕಾಲ ಗತಿಸಿದಂತೆ ಮೇಲಿನ ಪವಾಡ ಬೇರೆ ಸ್ವರೂಪವನ್ನು ತಳೆಯಿತು. ಹಲಗೆ-ದೇವ ಸಂಪಾದಿತ ಶೂನ್ಯಸಂಪಾದನೆ[೨] (ಕ್ರಿ. ಶ. ಸು. ೧೫೩೦), ಸಿದ್ಧನಂಜೇಶನ ಗುರುರಾಜ ಚಾರಿತ್ರ[೩] (ಕ್ರಿ. ಶ. ೧೬೭೨), ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ[೪] (ಕ್ರಿ. ಶ. ೧೬೮೦), ಅದೃಶ್ಯಕವಿಯ ಪ್ರೌಢರಾಯನ ಕಾವ್ಯ[೫] (ಕ್ರಿ. ಶ. ಸು. ೧೬೮೦), ಚನ್ನಪ್ಪ ಕವಿಯ ಶರಣಲೀಲಾಮೃತ[೬] (ಕ್ರಿ. ಶ. ಸು. ೧೭೦೦)—ಇವುಗಳಲ್ಲಿ

೧. ಪ್ರಲೀ ೯–೨೩. ೨. O. R. I. A 105, P. 50. ೩. ೮.–೧೨.
೪. ಪು. ೩೭೯. ೫. ಸಂ. ೧೯. ೬. ಶಲೀ ೧೩–೩೦೧.

ಚನ್ನಬಸವಣ್ಣನವರು ಕಕ್ಕಯ್ಯನವರ ಪ್ರಸಾದದಿಂದ ಜನಿಸಿದರೆಂದು ಉಕ್ತವಾಗಿದೆ. ಈ ಕಲ್ಪನೆ ಇತ್ತೀಚಿನದೆಂಬುದು ಈ ಕವಿಗಳ ಕಾಲಮಾನದಿಂದಲೇ ವ್ಯಕ್ತವಾಗುವುದು.

ಕಕ್ಕಯ್ಯನವರು ಬಸವಣ್ಣನವರ ಹಿರಿಯ ಸಮಕಾಲೀನರಾಗಿ, ಅತ್ಯಂತ ಪೂಜ್ಯ-ರಾಗಿದ್ದರೆಂದು ಶಿವಶರಣರ ವಚನಗಳಿಂದಲೂ[೧] ಚರಿತ್ರೆಗಳಿಂದಲೂ ತಿಳಿದುಬರುವುದು. ಅವರು ದಾಸೋಹಂಭಾವಿಗಳಾಗಿದ್ದು ಪ್ರಸಾದ ಸಂತರ್ಪಣೆಯ ವ್ರತವನ್ನು ಕೈಕೊಂಡಂತೆ ತೋರುತ್ತದೆ. ತತ್ಸಂಬಂಧವಾದ ಒಂದು ಕಥೆ ಗುರುರಾಜಚಾರಿತ್ರದಲ್ಲಿ ಹೀಗೆ ಬಂದಿದೆ:

> **"ಒಂದು ದಿನ ಬಿಜ್ಜಳಂ ಬಸವೇಶನಂ ಬರಿಸ**
> **ಲೆಂದು ಶಿಷ್ಯರ ಕಳುಹೆ ಬಸವ ವಹಿಲದಿ ಪೋಪ**
> **ಸಂದಣಿಯೊಳೆಯ್ದಿ ಕಕ್ಕಯ್ಯ ಪ್ರಸಾದವುಂ ಸವಿದು ಹೋಗೆನೆ ಹಸಾದಂ**
> **ಎಂದು ಮುಂದಕೆ ಹೆಜ್ಜೆಯಿಕ್ಕಿ ಬಂದವರುಗಳ**
> **ನೊಂದುಪಾಯದಿ ಕಳುಹಿ ಬರ್ಪನಿತರೊಳು ಕದವ**
> **ಬಂಧಿಸುತ ಕಕ್ಕಯ್ಯ ಶಿವಶಿವ ಪ್ರಸಾದಕೆನೆ ಮುಂದಕಡಿಯಿಡಲು ಬಹುದೆ**
> **ಎಂದು ಕಕ್ಕಯ್ಯನೊಳಗಿರೆ ಬಾಗಿಲೊಳು ಬಸವ**
> **ನೊಂದು ರೂಪಿಂದ ಹನ್ನೆರಡೊರುಷ ಕಾದಿರಲು**
> **ತಂದುದೊಳಗಿಂದೊಂದು ಇರುವೆ ಪ್ರಸಾದವುಮುನದಕೆ ಸಕ್ಕರೆಯ ತಳಿದು**
> **ವಂದಿಸಿ ಪ್ರಸಾದವುಂ ಕೈಕೊಂಡು . . . . . . "[೨]**

ಬಸವಣ್ಣನವರಂತಹರು ಕಕ್ಕಯ್ಯನವರ ಪ್ರಸಾದಕ್ಕೆ ಹನ್ನೆರಡು ವರುಷ ಕಾಯಬೇಕಾದರೆ ಅವರ ಪ್ರಸಾದಮಹತ್ವವೆಷ್ಟೆಂಬುದು ವಿದಿತವಾಗುತ್ತದೆ.

> **"ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟದ ಹೊರೆಯ ಹೊರಿಸದಿರಯ್ಯಾ,**
> **ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ".[೩]**

ಎಂಬ ಬಸವಣ್ಣನವರ ವಚನವೂ ಇದನ್ನು ಸಮರ್ಥಿಸುತ್ತದೆ. ಆದರೆ, ಎರಡು ವಿಷಯ ಗಳು ಜನಮನದಲ್ಲಿ ಬೇರೆ ಬೇರೆಯಾಗಿ ಬೇರೂರಿ ನಿಂತಂತೆ ತೋರುತ್ತದೆ.

೧. ಪ್ರಸಾದಿಸ್ಥಲವಿಶಿಷ್ಟರಾದ ಚನ್ನಬಸವಣ್ಣನವರು ಪ್ರಸಾದದಿಂದ ಜನಿಸಿದರು.

೨. ಡೋಹರ ಕಕ್ಕಯ್ಯನವರ ಪ್ರಸಾದ ಶಿವಶರಣರಲ್ಲಿ ಅತ್ಯಂತ ಪೂಜನೀಯ ವಾದ ಸ್ಥಾನವನ್ನು ಪಡೆದಿದ್ದಿತು.

---

೧. ಅಪ್ಪನು ಡೋಹಾರ ಕಕ್ಕಯ್ಯನಾಗಿ-ಬಷವ ೩೪೨: ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ಬಷವ ೩೪೮; ಕಿಜಿಯುಯ್ಯ ಡೋಹಾರ ಕಕ್ಕಯ್ಯ.......ಬಷವ ೩೫೦; ಕಕ್ಕಯ್ಯ ಹಿರಿಯಯ್ಯ......ಬಷವ ೩೫೨.

೨. ಗುಚಾ ೮–೧೧. ೧೨: ಪ್ರೌಕಾ ಸಂ. ೧೯: ಮತ್ತು ಬಸವೇಶ್ವರ ಷಟ್‌ಸ್ಥಲವಚನದ ಕಥಾಸಾರ ಪು. ೯.

೩. ಬಷವ ೩೪೩.

ಬೇರೆ ಬೇರೆಯಾಗಿ ಬೆಳೆದುಬಂದ ಈ ಭಾವನೆಗಳನ್ನು ೧೬–೧೭ನೆಯ ಶತಮಾನದ ಕವಿ-ಗಣವು ಒಂದುಗೂಡಿಸಿ ಚನ್ನಬಸವಣ್ಣನವರು ಕಕ್ಕಯ್ಯನವರ ಪ್ರಸಾದದಿಂದ ಹುಟ್ಟಿದ-ರೆಂಬ ಹೊಸ ಕಥೆಯನ್ನು ಕಟ್ಟಿದಂತೆ ತೋರುತ್ತದೆ.

ಒಂದುವೇಳೆ ಕಕ್ಕಯ್ಯನವರ ಪ್ರಸಾದದಿಂದ ಚನ್ನಬಸವಣ್ಣನವರು ಜನಿಸಿದ್ದರೂ ಅಚ್ಚರಿಪಡುವ ಕಾರಣವಿಲ್ಲ. ಅವರ ಒಕ್ಕು ಮಿಕ್ಕ ಪ್ರಸಾದದಿಂದ ಅನೇಕ ಜನರು ಪುನೀತ ರಾಗಿ ಸತ್ಫಲಗಳನ್ನೂ ಪಡೆದಿರಬಹುದು. ಮಹಿಮಾನ್ವಿತರ ವರಪ್ರಸಾದದಿಂದ ಮಹ-ತ್ಕಾರ್ಯಗಳು ನಡೆಯುತ್ತಿರುವ ವಿಷಯ ಈಗಲೂ ಅನೇಕರ ಅನುಭವಕ್ಕೆ ಬಂದ ಮಾತು. ಅದರಂತೆ ಕಕ್ಕಯ್ಯನವರ ಪ್ರಸಾದದ ಪುಣ್ಯವಿಶೇಷದಿಂದ ಪ್ರಸಾದಕಾಯರಾದ ಚನ್ನ-ಬಸವಣ್ಣನವರು ಜನಿಸಿದ್ದರೆ, ಅವರು ತಂದೆಯಿಲ್ಲದೆ ಜನಿಸಿದರೆಂದು ಭ್ರಮಿಸುವ ಕಾರಣವುಂಟೇ?

## ಶಿವಪ್ರಸಾದ

ವಿರೂಪಾಕ್ಷ ಪಂಡಿತನು ಚನ್ನಬಸವ ಪುರಾಣದಲ್ಲಿ ಚನ್ನಬಸವಣ್ಣನವರ ಜನನ ಶಿವಪ್ರಸಾದದಿಂದ ಆಯಿತೆಂದು ಹೇಳುತ್ತಾನೆ.[೧] ಚನ್ನಬಸವಣ್ಣನವರು ಬಸವಣ್ಣನವರ ಪ್ರಸಾದದಿಂದಲೋ, ಕಕ್ಕಯ್ಯನವರ ಪ್ರಸಾದದಿಂದಲೋ ಜನಿಸಿದರೆಂಬುದಾಗಿ ಅದು-ವರೆಗೆ ಬೆಳೆದುಬಂದ ಪವಾಡಗಳಲ್ಲಿ ಆತನಿಗೆ ವಿಶ್ವಾಸವಿಲ್ಲ. ಚನ್ನಬಸವಣ್ಣನವರು ಚಿತ್-ಸ್ವರೂಪರು, ಅಂದರೆ ಜ್ಞಾನಸ್ವರೂಪರು. ಶಿವನ ಚಿತ್ಕಳೆಯಿಂದಲೇ ಇಂತಹ ಸುಜ್ಞಾನಿ ಗಳ ಜನನವಾಗಬಲ್ಲುದೆಂದು ಆತನ ನಂಬುಗೆ. ಅದಕ್ಕಾಗಿ ಆ ಚಿತ್ಕಳೆ ಶಿವಪ್ರಸಾದದಿಂದ ಬಂದಿರಬೇಕೆಂದು ಕವಿಯ ಊಹೆ ಇಲ್ಲಿ ಮುಂದಡಿಯಿಟ್ಟಿದೆ. ಅದರ ಸುತ್ತಲೂ ಇನ್ನೊಂದು ಪವಾಡ ಹುಟ್ಟಿತು.

## ಶಿವಸ್ವಾಮಿಸುತ

ಚನ್ನಬಸವಣ್ಣನವರ ಜನನದ ವಿಷಯವನ್ನು ವಿವರಿಸುವ ಗ್ರಂಥರಾಶಿಯಲ್ಲಿ ಸಿಂಗಿರಾಜಪುರಾಣ, ಹಿಂಡನಗಲಿದ ಗಜದಂತಿರುತ್ತದೆ. ಆ ಕಾವ್ಯ ಚನ್ನಬಸವಣ್ಣನವರ ತಂದೆ ಶಿವಸ್ವಾಮಿಯೆಂದು ಘಂಟಾಘೋಷವಾಗಿ ಸಾರುತ್ತಿದೆ.

ಕೂಡಲ ಸಂಗಮಕ್ಕೆ ಹೋದ ಬಸವಣ್ಣನು ಎಷ್ಟು ಹೇಳಿದರೂ ಮನೆಗೆ ಬಾರ-ದಿರಲು ಅವರ ತಂದೆ ಮಂಡಗೆಯ ಮಾದರಸರು—

> "ಏತಕಾವಾತಿನ್ನು ನೋಡಿ ಸುಖಮಿಹುದು ಪರ
> ಮಾರ್ಥ ಕಾಮ್ಯಾರ್ಥಕಾಗದು ಸಹಜ ಮೇಲೆ ದು
> ರ್ನೀತದಘಾರಕಾಂ ಬಹುದಿಲ್ಲ ಬಂದಡೇಂ ನಿಮಗೆ ಸುಖವಿಲ್ಲವಿದಱ
> ಭ್ರಾಂತ ಬಿಡಿಯೆಂದು ಬೀಳ್ಕೊಡಲವರು ಸಂಸಾರ
> ಭ್ರಾಂತಳಿಯುದಳಿಯ ಶಿವದೇವ ಮಗಳ್ಮಾಗಾಯ
> ನಾತಂಗೆ ಸೇವೆಗೋಸುಗಮಿತ್ತು ತಕ್ಕುದಂ ಕೊಟ್ಟು ಬಂದರು ಇತ್ತಲು ॥"[೨]

೧. ಚಬಪು ೪–೨, ೪.   ೨. ಸಿಂಪು ೫–೧೧೭.

ಈ ವಿವರಣೆಯಿಂದ ಶಿವದೇವನು ಅಕ್ಕ ನಾಗಾಯಿಯ ಪತಿಯೆಂದು ವ್ಯಕ್ತವಾಗುತ್ತದೆ. ಇನ್ನೂ ಹಲವೆಡೆ ಈ ಕಾವ್ಯದಲ್ಲಿ ಮೇಗಣ ಉಕ್ತಿಯನ್ನು ಸಮರ್ಥಿಸುವ ಉಲ್ಲೇಖಗಳು ದೊರೆಯುತ್ತವೆ.

"ಕಲ್ಯಾಣದಗ್ರನಾರಭ್ಯಸಿದ್ಧಿಗಳಿಟ್ಟ
ಯಲ್ಲಿದಂ ಕೊಟ್ಟೊಂದು ಲಕ್ಷ ಹೊಂದೆಗೆದುಕೊಂ
ಡಲ್ಲೊಡೆಯರ್ಗೆ ಸೂಚಿಸಿ ಸರ್ವಸುಯಿದಾನಕರ್ಥಧನ ಕೊಟ್ಟುಕೊಂಡು
ಇಲ್ಲಿಗೀಕ್ಷಣ ಹೇಳು ಹೆಡಗೆ ನಡೆಗೈದುವಂ
ತಲ್ಲಲ್ಲಿ ಹರಿಕೊಳಿಸಿ ಬನ್ನೆಂದು ನಾಗಾಯ
ವಲ್ಲಭ ಶಿವಸ್ವಾಮಿಪಾಲ ಸರ್ವೇಶನ ವಶಕ್ಕೆ ಕೊಟ್ಟಟ್ಟುವಾಗ" ॥೧

"ಅವಯುವಂ ಮೂಡಿದಂತಜ್ಞಾನಚರರುಬ್ಬಿ
ತವಕದಿಂ ಪರಿದರಮನೆಯ ಹೊಕ್ಕು ಭಂಡಾರ
ಭವನ ಧಾನ್ಯಾದಿ ನಾನಾ ಕೋಶಗೃಹಗಳಂ ಮುದ್ರಿಸಾ ಬಸವೇಶನ
ಯುವತಿ ಗಂಗಾಂಬೆಯರ ನೀಲಲೋಚನೆಯವರ
ಕುವರ ಸಂಗಮನಕ್ಕನಾಗಾಯನವರ ಪತಿ-
ಶಿವಸ್ವಾಮಿಗಳ ಚನ್ನಬಸವನಿವರಾಭರಣ ವಸ್ತ್ರಾದಿಗಳನು ತೆಗೆಸಿ"೨

'ಶಿವಸ್ವಾಮಿಗಳ ಚನ್ನಬಸವನಿವರಾಭರಣವಸ್ತ್ರಾದಿಗಳನು ತೆಗಿಸಿ' ಹೀಗೆ ಸಿಂಗಿರಾಜ ಪುರಾಣದ ಕರ್ತೃವಿಗೆ ಚನ್ನಬಸವಣ್ಣನವರ ತಂದೆ ಶಿವಸ್ವಾಮಿ ಎಂಬ ಬಗ್ಗೆ ದೃಢವಾದ ನಂಬುಗೆ ಇದೆ.

ಇವುಗಳಲ್ಲಿ ಆವುದು ಚರಿತ್ರಾರ್ಹ? ಸಿಂಗಿರಾಜ ಪುರಾಣವೇ, ಇಲ್ಲವೆ ಪವಾಡಪರ ಕಾವ್ಯರಾಶಿಯೆ? ಚನ್ನಬಸವಣ್ಣನವರ ಜನನವನ್ನು ಪವಾಡರೂಪದಿಂದ ಬಣ್ಣಿಸುವ ವಿಷಯದಲ್ಲಿ ಐಕಮತ್ಯವಿಲ್ಲದಿರುವುದರಿಂದಲೂ ಪವಾಡಗಳಲ್ಲಿ ಒಂದು ಬಗೆಯ ವಿಕಾಸ ಕಂಡುಬರುತ್ತಿರುವುದರಿಂದಲೂ ಅವು ಕವಿಕಲ್ಪನೆಯೆಂದು ಊಹಿಸಬೇಕಾಗುತ್ತದೆ. ಕವಿ ಕಲ್ಪನೆ ಹೀಗೆ ಕುದುರಿತೇಕೆ? ಪವಾಡಗಳು ಹುಟ್ಟಿದುವೇಕೆ? ಎಂಬುದಕ್ಕೆ ಕಾರಣಗಳೂ ಇಲ್ಲದಿಲ್ಲ. ಅವನ್ನು ಹೀಗೆ ವಿವರಿಸಬಹುದು:

೧. ದಿವ್ಯ ತೇಜೋಮೂರ್ತಿಯಾಗಿ ಜನ್ಮವೆತ್ತ ಚನ್ನಬಸವಣ್ಣನವರನ್ನು ಕಾಣುತ್ತಲೇ. ಆತನು ಅಸಾಧಾರಣ ವ್ಯಕ್ತಿಯಾಗಿರಬೇಕೆಂಬ ಕಲ್ಪನೆ ಯಾರಿಗಾದರೂ ಉಂಟಾಗಿರಬೇಕು. ಸಾಮಾನ್ಯ ವಸ್ತುವನ್ನೇ ವಿಲಕ್ಷಣ ದೃಷ್ಟಿಯಿಂದ ಕಾಣುತ್ತಿರುವ ಭಾರತೀಯರ ಪೌರಾಣಿಕ ದೃಷ್ಟಿಗೆ ಚನ್ನಬಸವಣ್ಣನವರಂತಹ ಅಸಾಮಾನ್ಯ ತೇಜೋಮೂರ್ತಿ ಪವಾಡಪುರುಷನಾಗಿ ಕಂಡುದು ಆಶ್ಚರ್ಯಕರವೇನಲ್ಲ.

---

೧. ಸಿಂಪು ೩೧–೫೦; ೨. ಸಿಂಪು ೩೧–೨೧.

೨. ಚನ್ನಬಸವಣ್ಣನವರ ಚರಿತ್ರೆಯನ್ನು ಬರೆಯಹೊರಟ ಲಕ್ಕಣ್ಣದಂಡೇಶ ಮೊದಲಾದ ಕವಿಗಳಿಗೆ ಚಾರಿತ್ರಿಕ ದೃಷ್ಟಿಗಿಂತಲೂ ಪೌರಾಣಿಕ ಭಾವನೆಯೇ ಮಿಗಿಲಾಗಿದ್ದಿತು. ಆದುದರಿಂದ ಜನತೆಯಲ್ಲಿ ರೂಢವಾದ ಇಲ್ಲವೆ ಸ್ವ-ಕಪೋಲಕಲ್ಪಿತವಾದ ಪವಾಡಗಳನ್ನು ಬಣ್ಣಿಸಿ, ಚನ್ನಬಸವಣ್ಣನವರ ಘನತೆಯನ್ನು ಎತ್ತಿ ತೋರಿಸಬೇಕೆಂಬ ಉದ್ದೇಶದಿಂದ ಈ ಕಾವ್ಯಗಳನ್ನು ರಚಿ-ಸಿದರು.

೩. ಅಲೌಕಿಕ ವ್ಯಕ್ತಿಯೆನಿಸಿದ ಚನ್ನಬಸವಣ್ಣನವರ ಜನನ ಅಸಾಮಾನ್ಯ ರೀತಿಯಲ್ಲಿ ಆಯಿತೆಂದು ವಿವರಿಸಿದರೆ, ತಮ್ಮ ಧರ್ಮಕ್ಕೆ ಹೆಚ್ಚಿನ ಮಹತ್ವ ಬರಬಹುದೆಂಬ ಭಾವನೆಯೂ ಇದ್ದಿರಬೇಕು.

ಧಾರ್ಮಿಕ ಇತಿಹಾಸದಲ್ಲಿ ಮತಾನುಯಾಯಿಗಳಿಗೆ ತಮ್ಮ ತಮ್ಮ ಧರ್ಮದ ಅಗ್ಗಳಿಕೆಯನ್ನು ಹೇಳಿಕೊಳ್ಳುವುದೊಂದು ಹೆಮ್ಮೆ. ಆ ಹೆಮ್ಮೆ ನಾನಾ ಮುಖವಾಗಿ ಪ್ರಕಟವಾಗುತ್ತದೆ. ಕೆಲವರಿಗೆ ತಮ್ಮ ಧರ್ಮ ಅತ್ಯಂತ ಪ್ರಾಚೀನವೆಂದು ಹೇಳಿಕೊಳ್ಳುವ ಹೆಮ್ಮೆ. ಮತ್ತೆ ಕೆಲವರಿಗೆ ತಮ್ಮ ಧರ್ಮದಲ್ಲಿ ಲೋಕವಿಲಕ್ಷಣರಾದ ವ್ಯಕ್ತಿಗಳು ಹುಟ್ಟಿದರೆಂದು ಹೇಳಿಕೊಳ್ಳುವಲ್ಲಿ ಹೆಮ್ಮೆ. ಮತಪ್ರಚಾರದ ದೃಷ್ಟಿಯಿಂದ ಇಂತಹ ಅದ್ಭುತಗಳನ್ನೂ ಪವಾಡಗಳನ್ನೂ ಪ್ರಾಯಶಃ ಎಲ್ಲ ಮತಾನುಯಾಯಿಗಳೂ ಕಲ್ಪಿಸಿರುವು-ದುಂಟು. ಕ್ರೈಸ್ತ ಧರ್ಮಸ್ಥಾಪಕನಾದ ಏಸು, ಆತನ ತಂದೆ ತಾಯಿಗಳು ಪ್ರಯಾಣಕ್ಕೆ ಹೊರಟಾಗ ಒಂದು ಮನೆಯ ಗೋದಲೆಯಲ್ಲಿ ಹುಟ್ಟಿದನೆಂಬ ಐತಿಹ್ಯವಿದ್ದರೂ ಕ್ರೈಸ್ತ ಮತೀಯರು ಆತನ ತಾಯಿಯನ್ನು ವ್ಹರ್ಜಿನ್ (ಕನ್ಯಾ) ಮೇರಿ ಎಂದೇ ಕರೆಯುವರು. ಆಕೆ ಕನ್ಯೆಯಾಗಿದ್ದು ಪುತ್ರರತ್ನವನ್ನು ಹೆತ್ತಳೆಂದರೆ, ಜನತೆಯಲ್ಲಿ ಆ ಧರ್ಮದ ಬಗೆಗೆ ಹೆಚ್ಚಿನ ಗೌರವ, ಭಕ್ತಿಭಾವಗಳು ಹುಟ್ಟುತ್ತವೆಯೆಂದು ಅವರ ಕಲ್ಪನೆಯಾಗಿರಬೇಕು. ಸಾಮಾನ್ಯ ಜನರ ಮನವೊಲಿಸಲು ಇಂತಹ ಕಥೆಗಳನ್ನು ಅಂದಿನ ಜನರು ಕಲ್ಪಿಸಿರಬೇಕು,

ಇದರಂತೆ ವೀರಶೈವ ಮತದ ಅನುಯಾಯಿಗಳೂ ಇಂತಹ ಅನೇಕ ಪವಾಡಗಳನ್ನು ಕಲ್ಪಿಸಿದಂತೆ ತೋರುತ್ತದೆ. 'ಬಸವಣ್ಣನವರು ನಂದಿಯ ಅವತಾರವಾಗಿ ಬಂದರು'. 'ಸಿದ್ಧರಾಮೇಶ್ವರರು ತಮ್ಮ ತಾಯಿಗೆ ಶುಕ್ಲಶೋಣಿತದ ಹಂಗು ಹರಿದ ಮೇಲೆ ಜನಿಸಿದರು.' ಹೀಗೆಯೇ ಅನೇಕ ಜನ ಶಿವಶರಣರ ವಿಷಯವಾಗಿ ಕಥೆಗಳು ಹುಟ್ಟಿವೆ. ಆ ಎಲ್ಲ ಕಥೆಗಳ ಉದ್ದೇಶ, ಅವರು ಅಸಾಮಾನ್ಯರಾಗಿದ್ದರೆಂದು ಹೇಳುವುದು ಇಷ್ಟೆ. ಹೀಗೆಯೇ ಸಂಜ್ಞಾನಪ್ರಭಾಪುಂಜರಾಗಿ ಜನಿಸಿದ್ದ ಚನ್ನಬಸವಣ್ಣನವರ ಜನನದ ಬಗೆಗೆ ಈ ಕಥೆ ಹುಟ್ಟಿರಬೇಕು. ಮೇಲೆ ನಿರ್ದೇಶಿಸಿದಂತೆ ಈ ಪವಾಡಗಳಿಗೆ ವಿವಿಧೋದ್ದೇಶಗಳೂ ಇದ್ದಿರಬೇಕು. ಪ್ರಸಾದದ ಮಹಿಮೆಯನ್ನು ತೋರಿಸುವ ಉದ್ದೇಶ ಒಂದೆಡೆ ಇದ್ದರೆ, ಗರ್ಭದೊಳಗಿನ ಶಿಶುವನ್ನು ಮಾತನಾಡಿಸಿ, ಪರವಾದಿಗಳ ಬಾಯಿಕಟ್ಟಿಸುವ ಉದ್ದೇಶ ಇನ್ನೊಂದೆಡೆ. ಪ್ರತಿಯೊಂದು ಧರ್ಮದ ಇತಿಹಾಸದಲ್ಲಿ ಇಂತಹ ಸಾವಿರಾರು ಕಥೆಗಳು ಹುಟ್ಟಿರುತ್ತವೆ. ಅವನ್ನು ಮೇಲೆ ನಿರ್ದೇಶಿಸಿದ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬೇಕಲ್ಲದೆ ಬೇರೆ ಚಾರಿತ್ರಿಕ ದೃಷ್ಟಿಯಿಂದಲ್ಲ.

ಆದುದರಿಂದ ಚನ್ನಬಸವಣ್ಣನವರು ಪ್ರಸಾದದಿಂದ—ಬಸವಣ್ಣನವರ ಪ್ರಸಾದ ದಿಂದ—ಕಕ್ಕಯ್ಯನವರ ಪ್ರಸಾದದಿಂದ—ಜನಿಸಿದರೆಂಬ ಕಥೆಗಳು ಮಂತಪ್ರಕರ್ಷ-ದ್ಯೋತಕವೆಂದು ಹೇಳಬೇಕಾಗುತ್ತದೆ. ಈ ಪವಾಡಗಳನ್ವಯ ಚನ್ನಬಸವಣ್ಣನವರು ಅಕ್ಕನಾಗಾಯಿಯ ಉದರವನ್ನು ಬಗಿದು ಬಂದಿರುವರು. ಇದು ಅಭಿಮಾನದಿಂದ ಹೇಳಿದ ಸಂಗತಿಯಾಗಬಹುದಲ್ಲದೆ ವಾಸ್ತವ ಘಟನೆಯಾಗಲಾರದು. ಬಸವಣ್ಣನವರೇ ಒಂದೆಡೆ:

> **“ಹೊಲೆಗಂಡಲ್ಲದೆ ಪಿಂಡದ ನೆಲೆಗೆ ಆಶ್ರಯವಿಲ್ಲ.**
> **ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ”?**[೧]

ಎಂದು ಲೋಕಸತ್ಯವನ್ನು ತೀಕ್ಷ್ಣವಾಗಿ ವ್ಯಕ್ತಪಡಿಸಿರುವರು. ಹೀಗೆ ವಾಸ್ತವತೆಯನ್ನು ಎತ್ತಿಹಿಡಿದ ಶರಣರ ಸುತ್ತು ಇಂತಹ ಪವಾಡಗಳು ಹುಟ್ಟಿಬಂದಿರುವುದನ್ನು ಶರಣರೇ ನಂಬದಂತಿದೆ. ಚನ್ನಬಸವಣ್ಣನವರ ದಿವ್ಯತೇಜಸ್ಸನ್ನು ಕಂಡು, ಅವರು ಅಯೋನಿಜ-ರೆಂಬುದನ್ನು ಪ್ರತಿಷ್ಠಾಪಿಸಲು ಕಾವ್ಯಗಳಲ್ಲಿ ಇಂತಹ ಕಥೆಗಳು ಹುಟ್ಟಿಬಂದಿರುವುದರಲ್ಲಿ ಸಂದೇಹವಿಲ್ಲ.

ಇನ್ನು ಸಿಂಗಿರಾಜಪುರಾಣದ ಪರಿಯೇ ಬೇರೆ. ಶರಣರ ಚರಿತ್ರೆಯನ್ನು ಹೇಳುವ ಕಾವ್ಯಗಳಲ್ಲಿ ಈ ಗ್ರಂಥವು ಧ್ರುವನಕ್ಷತ್ರದಂತಿದೆ. ಇದು ಬಸವಣ್ಣನವರು ಎಸಗಿದ ಪವಾಡಗಳನ್ನು ಬಣ್ಣಿಸಲು ಮೀಸಲಾಗಿದ್ದ ಕಾವ್ಯ. ಆದರೆ, ಅದರ ಕರ್ತೃ ಸಿಂಗಿರಾಜನಿ-ಗಿದ್ದ ಐತಿಹಾಸಿಕ ಪ್ರಜ್ಞೆ ಅಪ್ರತಿಮವಾದುದು. ಪವಾಡಗಳನ್ನು ಬಣ್ಣಿಸಹೊರಟ ಕವಿಯು ಕೇವಲ ಜನಸ್ತೋಮದಲ್ಲಿ ಪ್ರಚಲಿತವಾಗಿದ್ದ ಕಥೆಗಳ ಕಡೆಗೆ ಮಾತ್ರ ಗಮನವೀಯಲಿಲ್ಲ. ಶರಣರ ಚರಿತ್ರೆಯನ್ನು ಬರೆವೊಡೆ ವಚನವಾಙ್ಮಯವೇ ಮೊದಲೆಂಬುದನ್ನು ಅರಿತ ಕವಿಗಳಲ್ಲಿ ಆತ ಅಗ್ರಗಣ್ಯ. ಹಿಂದೆ ಹರಿಹರ ರಾಘವಾಂಕಾದಿಗಳಿಗೆ ವಚನವಾಙ್ಮಯದ ಪರಿಚಯವಿದ್ದಿತೆಂಬುದಕ್ಕೆ ಅವರ ಕಾವ್ಯಗಳಲ್ಲಿ ನುಸುಳಿಬಂದಿರುವ ವಚನಗಳೇ ಸಾಕ್ಷಿ. ಆದರೆ, ಸಿಂಗಿರಾಜನದೊಂದು ವೈಶಿಷ್ಟ್ಯ. ಆಧುನಿಕ ವಿಮರ್ಶಕರಂತೆ ಆತನು ಅನೇಕ ಸಂದರ್ಭಗಳಲ್ಲಿ ಸಮಂಜಸವಾದ ವಚನಗಳನ್ನೇ ಉದ್ಧರಿಸಿ ಕಥೆಯನ್ನು ವಿವರಿಸುತ್ತಾನೆ. ಇದರಿಂದ ಸಿಂಗಿರಾಜನಿಗೆ ತಾನು ಬರೆದ ಕಥೆಗಳ ಮೂಲ ಆಕರಗಳನ್ನು ಕಂಡುಹಿಡಿಯುವ ಪ್ರಜ್ಞೆ ಇದ್ದಿತೆಂಬುದು ಸ್ಪಷ್ಟ. ಅಲ್ಲದೆ, ಅಸಂಭವವೂ ಚರಿತ್ರೆಗೆ ವಿರೋಧಕವೂ ಆದ ಘಟನೆಗಳನ್ನು ತನ್ನ ಪೂರ್ವದ ಕವಿಗಳು ಒಕ್ಕೊರಲಿನಿಂದ ಸಾರಿದ್ದರೂ[೨] ಅದನ್ನು ಧಿಕ್ಕರಿಸಿ ಬಿಡುವ ವಿಮರ್ಶನಬುದ್ಧಿ ಇದೆ ಆತನಿಗೆ. ಆದುದರಿಂದ ಬಸವಣ್ಣನವರ ಹಾಗೂ ಚನ್ನ-ಬಸವಣ್ಣನವರ ಚರಿತ್ರೆಯನ್ನು ವಿವರಿಸುವ ಗ್ರಂಥಗಳಲ್ಲಿ ಸಿಂಗಿರಾಜಪುರಾಣಕ್ಕೆ ಪ್ರಧಾನ-

---

೧. ಬಸವ ೫೧೯.

೨. ಬಸವಣ್ಣ ಹಾಗೂ ಬಿಜ್ಜಳ ಇವರಿಬ್ಬರ ಪರಸ್ಪರ ಸಂಬಂಧ ಕೊನೆಯವರೆಗೂ ವಿರಸವಾಗಿಯೇ ಉಳಿದು. ಬಿಜ್ಜಳನ ಕೊಲೆಯಲ್ಲಿ ಪರಿಣಮಿಸಿತೆಂದು ಅನೇಕ ಕಾವ್ಯಗಳು ಸಾರಿದರೂ ಸಿಂಗಿರಾಜನು ವಸ್ತುಸ್ಥಿತಿಯನ್ನು ಸೂಕ್ಷ್ಮವಾಗಿ ಪರಿಗ್ರಹಿಸಿ. ಆ ಸರಸ ವಿರಸ ಪ್ರಸಂಗಗಳನ್ನು ಚಿತ್ರಿಸಿ, ಬಿಜ್ಜಳನ ಕೊಲೆಯಾಗದೆ. ಆತನು ರಾಜ್ಯವನ್ನು ಮಗನಿಗೊಪ್ಪಿಸಿ ಹೋದನೆಂದು ಹೇಳಿರುವನು. ಶಾಸನಗಳು ಸಿಂಗಿರಾಜನ ಅಭಿಪ್ರಾಯವನ್ನೇ ಪುಷ್ಟೀಕರಿಸುವುದನ್ನು ಗಮನಿಸಬೇಕು.

ಸ್ಥಾನವೀಯಬೇಕಾಗುತ್ತದೆ. ಈ ಶರಣರ ಚರಿತ್ರೆಯನ್ನು ಬರೆಯಹೊರಟ ಎಮ್. ಆರ್. ಶ್ರೀನಿವಾಸಮೂರ್ತಿಗಳೇ ಮೊದಲಾದ ಆಧುನಿಕ ವಿದ್ವಾಂಸರು ಸಿಂಗಿರಾಜಪುರಾಣದ ಹಾದಿಯನ್ನೇ ಹಿಡಿದಿರುವುದು ಆ ಗ್ರಂಥದ ಚಾರಿತ್ರಿಕಮಹತ್ವವನ್ನು ತೋರಿಸುತ್ತದೆ. ಆದುದರಿಂದ ಸಿಂಗಿರಾಜಪುರಾಣವು ಏಕೈಕವಾಗಿ 'ಚನ್ನಬಸವಣ್ಣನವರ ತಂದೆ ಶಿವಸ್ವಾಮಿ' ಎಂದು ಹೇಳಿದುದನ್ನು ನಾವು ನಂಬಲೇಬೇಕಾಗುತ್ತದೆ.

ಹಾಗಿದ್ದರೆ ಸಮಕಾಲೀನ ಶರಣರೂ ತದನಂತರದ ಕವಿಗಳೂ ಶಿವಸ್ವಾಮಿಯ ಹೆಸರನ್ನು ಉಲ್ಲೇಖಿಸಲಿಲ್ಲವೇಕೆ? ಅದಕ್ಕೆ ಕಾರಣ, ಸಿಂಗಿರಾಜಪುರಾಣದಲ್ಲಿಯೇ ಕಂಡು ಬರುತ್ತದೆ. ಶಿವದೇವನನ್ನು ಅಲ್ಲಿ 'ಸಂಸಾರಭ್ರಾಂತಳಿಯದಳಿಯ'ನೆಂದು ಕರೆಯಲಾಗಿದೆ. ಶರಣಸಮೂಹದ ನಡುವೆ ಇದ್ದರೂ ಪ್ರಾಯಶಃ ಶಿವದೇವನಿಗೆ ಸಂಸಾರದ ಭ್ರಾಂತು, ಕೊನೆಯವರೆಗೂ ಬಿಟ್ಟಂತೆ ತೋರಲಿಲ್ಲ. ಆದುದರಿಂದ ಶರಣರು ಶಿವದೇವನ ಅಸ್ತಿತ್ವಕ್ಕೆ ವಿಶೇಷ ಮಹತ್ವವನ್ನು ಕೊಟ್ಟಂತೆ ತೋರುವುದಿಲ್ಲ. ನಾಗಾಯಿ-ಶಿವದೇವರ ವಿವಾಹ ವಾದರೋ ಬಸವಣ್ಣನವರಿನ್ನೂ ಕೂಡಲಸಂಗಮಕ್ಕೆ ಬರುವ ಮುನ್ನವೇ ಅಂದರೆ, ಅವರು ಅಧ್ಯಾತ್ಮಮಾರ್ಗದಲ್ಲಿ ವಿಶೇಷ ಪ್ರಗತಿಯನ್ನು ಸಾಧಿಸುವ ಪೂರ್ವದಲ್ಲಿಯೇ ಆಗಿರುವಂತೆ ತೋರುತ್ತದೆ. ನಾಗಾಯಿ ಷಟ್‌ಸ್ಥಲಮಾರ್ಗದಲ್ಲಿ, ಶಿವದೇವ ಸಂಸಾರ-ವಿಷಯದಲ್ಲಿ ಮುನ್ನಡೆದರೂ ಅವರಿರ್ವರ ಸತಿಪತಿತ್ವಸಂಬಂಧ ಸ್ಥಿರವಾಗಿ ನಡೆದಿರು-ವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಅನುಭಾವದ ದಿವ್ಯಜ್ಯೋತಿಯಾಗಿ ಬೆಳಗುತ್ತಿದ್ದ ಅಕ್ಕ ನಾಗಾಯಿ, ಸುಜ್ಞಾನದ ಪ್ರಭಾಪುಂಜದಂತಿದ್ದ ಅವರ ಮಗ ಚನ್ನಬಸವಣ್ಣ ಇವರು ಶರಣಗಣದಲ್ಲಿ ಉನ್ನತಸ್ಥಾನವನ್ನು ಅಲಂಕರಿಸಿದುದರಿಂದಲೂ ಅವರ ಪ್ರಭಾವಮುದ್ರೆ ಮಿಕ್ಕವರ ಮೇಲೆ ಅಮಿತವಾಗಿ ಬಿದ್ದುದರಿಂದಲೂ ಶರಣರು ಮತ್ತೆ ಮತ್ತೆ ಅವರ ಹೆಸರೆತ್ತಿದರು. • ಸಂಸಾರಭ್ರಾಂತಳಿಯಂದ ಶಿವದೇವ, ಬೆಳಕಿನಗೆಯನ್ನು ಸಾಕುವ ಕತ್ತಲೆ ಯಂತೆ ಸಾಹಿತ್ಯಪ್ರಪಂಚದಲ್ಲಿ ಕಣ್ಮರೆಯಾಗಿರುವನು. ಪವಾಡಗಳು ಆತನನ್ನು ಮರೆ-ಮಾಡಲು ಯತ್ನಿಸಿದರೂ ಆತನ ಅಸ್ತಿತ್ವವನ್ನು ನಿರಾಕರಿಸುವ ಎಂಟೆರ್ದೆ ಇತಿಹಾಸಕ್ಕಿಲ್ಲ.

ಈ ವಿವೇಚನೆಯಿಂದ ಚನ್ನಬಸವಣ್ಣನವರು ಅಣ್ಣ ಬಸವಣ್ಣನವರ ಸೋದರಳಿಯ ನೆಂದೂ, ಅಣ್ಣನವರ ಅಗ್ರಜೆಯಾದ ನಾಗಾಯಿ ಹಾಗೂ ಆಕೆಯ ಪತಿ ಶಿವದೇವ ಈ ದಂಪತಿಗಳ ಉದರದಲ್ಲಿ ಜನಿಸಿದರೆಂದೂ ಸಿದ್ಧವಾಗುತ್ತದೆ.

## ಜನ್ಮಸ್ಥಳ

ತೇಜೋಮಯನಾದ ಚನ್ನಬಸವಣ್ಣನು ಅಭಿನವಕೈಲಾಸವೆನಿಸಿದ ಕಲ್ಯಾಣದಲ್ಲಿ ಜನ್ಮವೆತ್ತಿರುವನು. ಅನೇಕ ಗ್ರಂಥಗಳು ಇದನ್ನು ಅನುಮೋದಿಸುತ್ತವೆ.[೧] ಆದರೆ, ಬಿಜ್ಜಳನು ಕಲ್ಯಾಣದಲ್ಲಿ ಚಾಲುಕ್ಯ ಸಾಮ್ರಾಜ್ಯದ ಸೂತ್ರಗಳನ್ನು ವಹಿಸಿ ಚಕ್ರವರ್ತಿ

೧. ಬಪು, ಕಾಂ. ೨, ಸಂ. ೬; ಶಿಚಿಂ ೩೧–೬೯, ೭೨. ಪ್ರಲೀ ೯–೨೩: ಶೂಸಂ ೪–೮೧, ೮೨; ಚೆಬಪು ಕಾಂಡ ೧, ಸಂ ೪; ಗುಚಾ ೮–೧೧; ರಾಚಾ ೧೨–೬೫, ೬೭; ಪೌರ್ಕಾ ಸಂ. ೧೯; ಶಲೀ ೧೩–೨೯.

ಯಾಗಿ ಬಾಳಿದುದು ಕ್ರಿ. ಶ. ೧೧೫೬ರಿಂದ ೧೧೬೭ರ ವರೆಗೆ ಎಂದು ಶಾಸನಗಳಿಂದ ತಿಳಿದುಬರುತ್ತದೆ. ಬಸವಣ್ಣನವರು ಈ ಬಿಜ್ಜಳನ ಮಂತ್ರಿಯಾಗಿಯೇ ಕಲ್ಯಾಣಕ್ಕೆ ಆಗಮಿಸಿದರು. ಆಮೇಲೆ ಶರಣಸಂದೋಹಕ್ಕೆ ಕಲ್ಯಾಣದಲ್ಲಿ ಕಳೆಯೇರಿತು. ಚನ್ನ-ಬಸವಣ್ಣನವರು ಮಂತ್ರಿ ಬಸವಣ್ಣನವರ ಅಳಿಯನಾಗಿ ಕಲ್ಯಾಣದ ಮಹಾಮನೆಯಲ್ಲಿ ಜನಿಸಿ ಶಿವಶರಣರ ಕ್ರಾಂತಿಯಲ್ಲಿ ಮುಖ್ಯಪಾತ್ರ ವಹಿಸಬೇಕಾದರೆ, ಈ ಹನ್ನೊಂದು ವರುಷಗಳ ಅವಧಿಯಲ್ಲಿ ಸಾಧ್ಯವಿಲ್ಲ, ಇದು ಅಸಂಭವನೀಯ, ಎಂದು ಕೆಲಜನ ವಿದ್ವಾಂ-ಸರು ಭಾವಿಸಿ ಅಕ್ಕ ನಾಗಾಯಿಯು ಬಸವಣ್ಣನವರೊಡನೆ ಕಲ್ಯಾಣಕ್ಕೆ ಬರುವ ಮೊದಲೇ ಚನ್ನಬಸವಣ್ಣನವರು ಜನಿಸಿರಬೇಕೆಂದು ಊಹಿಸಿರುವರು.[೧] ಆದರೆ, ಬಸವಣ್ಣನವರು ಕಲ್ಯಾಣದಲ್ಲಿದ್ದುದು ಈ ಹನ್ನೊಂದು ವರುಷವಲ್ಲ; ಸುಮಾರು ಮೂವತ್ತಾರು ವರುಷ ಎಂದು ಬೇರೆ ಆಧಾರಗಳಿಂದ ನಿರ್ಣಯಿಸಬಹುದಾಗಿದೆ. ಆದುದರಿಂದ ಚನ್ನಬಸವಣ್ಣನವರು ಕಲ್ಯಾಣದಲ್ಲಿ ಜನಿಸಿ. ಅಲ್ಲಿಯ ಧಾರ್ಮಿಕ, ರಾಜ್ಯಕೀಯ ಕಾರ್ಯರಂಗಗಳಲ್ಲಿ ವಿಶಿಷ್ಟವಾದ ಸೇವೆಯನ್ನು ಸಲ್ಲಿಸಿ ಆ ಕ್ರಾಂತಿಯ ನಾಯಕತ್ವವನ್ನು ವಹಿಸಿರುವರೆಂದು ಊಹಿಸಲು ಪ್ರತ್ಯವಾಯವಿಲ್ಲ.

## ಗುರುಕಾರುಣ್ಯ

ಚನ್ನಬಸವಣ್ಣನವರ ಗುರು ಅಣ್ಣ ಬಸವಣ್ಣ. ಸುಜ್ಞಾನದ ಪಿಂಡ ಗರ್ಭದಲ್ಲಿರುವಾಗಲೇ ಬಸವಣ್ಣನವರು ಗರ್ಭಕ್ಕೆ ಲಿಂಗಧಾರಣಮಾಡಿ ಗುರುಸ್ವರೂಪದಲ್ಲಿ ನಿಂತಿರುವರು. ಆ ವಿಷಯವನ್ನು ಚನ್ನಬಸವಣ್ಣನವರೇ ಹೀಗೆ ಪ್ರಸ್ತಾಪಿಸಿರುವರು:

> **"..... ನಾನು ಶಿಶುವಾಗಿ ಒಡಲೊಳಗೆ ಇದ್ದಲ್ಲಿ ವಿಭೂತಿಪಟ್ಟವ ಕಟ್ಟಿ।**
> **ಹಸ್ತಮಸ್ತಕಸಂಯೋಗವ ಮಾಡಿ, ಎನ್ನನುಳುಹಿದವರಾರಯ್ಯಾ ನೀವಲ್ಲದೆ?"**॥[೨]

ಪ್ರಾಯಶಃ ಅವರಿಬ್ಬರ ಗುರುಶಿಷ್ಯತ್ವ ಜನ್ಮಜನ್ಮಾಂತರಗಳಿಂದ ಬಂದುದೇನೊ! ಚನ್ನ-ಬಸವಣ್ಣನವರು ವೀರಶೈವಾನ್ವಯ ತಮಗೆ ಲಿಂಗಧಾರಣೆ ಮಾಡಬೇಕೆಂದು ಬಸವಣ್ಣ-ನವರಲ್ಲಿ ಪ್ರಾರ್ಥಿಸಿಕೊಂಡಾಗ ಸದುವಿನಯದ ಬಸವಣ್ಣ ಅದಕ್ಕೆ ಒಪ್ಪಿದಂತೆ ಕಂಡು-ಬರುವುದಿಲ್ಲ. 'ನೀವು ಪುಟ್ಟಿಸಿದ ಘಟಕ್ಕೆ ಕಾರುಣ್ಯವ ಮಾಡಿ ಸಲಹಯ್ಯಾ' ಎಂದು ಬಸವಣ್ಣನವರಲ್ಲಿ ಚನ್ನಬಸವಣ್ಣನವರು ಪ್ರಾರ್ಥಿಸಿದಾಗ—

> **"ಓಹೋ ನಾನೊಬ್ಬರಿಗೆ ಉಪದೇಶವ ಮಾಡಲಮ್ಮೆನು,**
> **ಮುನ್ನಲಾದವರು ತಮ್ಮಿಂದ ತಾವಾದರು; ಅವರೆಲ್ಲರು ನಿಜಲಿಂಗೈಕ್ಯರು.**
> **ನಾನೆ ಮಾಡಿತಲ್ಲ, ಕಿಂಕಲವಾಗಿ ಅಜಿಸುವಂದು**
> **ಕಾಲಾಗ್ನಿರುದ್ರನ ಆಜ್ಞೆಯಿಂದ ಭೃತ್ಯನಾಗಿ ಬಂದಿದ್ದರ್ದು,**
> **ಕರ್ತೃವಾದೆನೆಂದರೆ ಆ ಕರ್ತ ನನ್ನ ನಗುವನು;**
> **ತತ್ತ್ವವ ಹಿಡಿದವರಿಗೆ ತೊತ್ತಾಗಿ ನಡೆವೆನು.**

೧. ಶಚಮಾ, ಪು. ೧೮೭. ೨. ಚಬವ ೪೯.

**ಅಮರಗಣಂಗಳ ಸಾಕ್ಷಿಯಾಗಿ ಕೂಡಲಸಂಗಮದೇವರ ಮುಂದೆ**
**ಭಾಷೆಪ್ರಸಾದವನಿಕ್ಕಲೆಮ್ಮನಯ್ಯಾ ಚನ್ನಬಸವಣ್ಣಾ."[೧]**

ಹೀಗೆ ಬಸವಣ್ಣನವರು ಚನ್ನಬಸವಣ್ಣನವರಿಗೆ ಲಿಂಗದೀಕ್ಷೆಕೊಡಲು ನಿರಾಕರಿಸಿದಾಗ 'ನಾನು ನಿಮಗೆ ಅನಾದಿಶಿಶು'ವೆಂದು ಚನ್ನಬಸವಣ್ಣನವರು ಬಿನ್ನವಿಸಿ ಗುರುಕಾರುಣ್ಯ ವನ್ನು ಪಡೆವರು.

ಚನ್ನಬಸವಣ್ಣನು ಬಸವಣ್ಣನವರ ಸೋದರಳಿಯನಾಗಿ ಜನಿಸಿ, ಅವರ ಕರ-ಸಂಜಾತನಾಗಿ ಶರಣಸಮುದಾಯದ ದಿವ್ಯಪರಿಸರದಲ್ಲಿ ಬೆಳೆದು ಆ ಬಳವಿಯನ್ನೇ ಲಿಂಗಮಯವನ್ನಾಗಿ ಮಾಡಿದನು. ಗುರುಶಿಷ್ಯರಿಬ್ಬರ ಘನತೆ ಇದರಿಂದಲೇ ವೇದ್ಯ-ವಾಗುವಂತಿದೆ.

## ಅನುಭವಮಂಟಪದಲ್ಲಿ

ಚನ್ನಬಸವಣ್ಣನವರ ವ್ಯಕ್ತಿತ್ವ ಮಾಗಿ ಹಣ್ಣಾದುದು ಕಲ್ಯಾಣದ ಶಿವಾನುಭವ ಮಂಟಪದಲ್ಲಿ. ಬಸವಣ್ಣನವರ ಮಹಾಮನೆಯಲ್ಲಿ ಜನಿಸಿ, ಅಲ್ಲಿಯ ಅನುಭವಮಂಟಪ-ದಲ್ಲಿ ದಿವ್ಯವ್ಯಕ್ತಿತ್ವವನ್ನು ಗಳಿಸಿಕೊಂಡ ಚನ್ನಬಸವಣ್ಣನವರ ಜೀವನಚರಿತ್ರೆಯನ್ನು ವಿವರಿಸುವಲ್ಲಿ ಅವೆರಡಕ್ಕೂ ಉನ್ನತ ಸ್ಥಾನವಿದೆ. ಬಸವಣ್ಣನವರ ಮಹಾಮನೆಯ ಬಗೆಗೆ ಹಾಗೂ ಅಲ್ಲಿ ಚನ್ನಬಸವಣ್ಣನವರು ಪಳಗಿದ ಬಗೆಗೆ ಭಿನ್ನಾಭಿಪ್ರಾಯವಿದ್ದಂತೆ ಕಂಡುಬರುವುದಿಲ್ಲ. ಆದರೆ, ಅನುಭವಮಂಟಪದ ಬಗೆಗೆ ಕೆಲವು ವರುಷಗಳ ಹಿಂದೆ ವಾದವೆದ್ದು ಸಂಶೋಧಕರ ಚಿತ್ತವನ್ನು ಕೆರಳಿಸಿದ್ದಿತು.[೨] ವಾಸ್ತವವಾಗಿ ಈ ಬಗೆಯ ವಾದಕ್ಕೆ ಎಡೆಯಿಲ್ಲವೆಂದೇ ತೋರುತ್ತದೆ. ಹರಿಹರದೇವನ 'ಪ್ರಭುದೇವರ ರಗಳೆ'ಯಲ್ಲಿ ಅನುಭವಮಂಟಪದ ಉಲ್ಲೇಖ ಬರುವುದಿಲ್ಲವೆಂಬುದು ಅದರ ಅಸ್ತಿತ್ವವನ್ನು ನಿರಾ-ಕರಿಸುವವರ ಊರುಗೋಲು. ಆದರೆ, ಹರಿಹರನಿಗೆ ಕಲ್ಯಾಣದಲ್ಲಿ ನಡೆದ ಘಟನೆಗಳೆಲ್ಲವೂ ವೇದ್ಯವಾಗಿದ್ದುವೆಂದು ಊಹಿಸುವುದೇ ತಪ್ಪೆಂದು ತೋರುತ್ತದೆ. ಐತಿಹಾಸಿಕ ದೃಷ್ಟಿ-ಯಿಂದ ಆತನಿಗೆ ದೊರೆತ ಸಾಧನ-ಸಾಮಗ್ರಿ ಅತ್ಯಲ್ಪ. ಅವನ ವಿಪುಲವಾದ ಕಾವ್ಯ-ಸಾಮಗ್ರಿಯಲ್ಲಿ ಅವೆಲ್ಲ ತೇಲಿಹೋಗಿವೆ. ಅನೇಕಕಡೆಗೆ ಶಿವಭಕ್ತನುಂ ಶಿವಭಕ್ತೆಯುಂ ಎಂದು ಹೇಳಿ ಶರಣರ ಕಥೆಯನ್ನು ಮುಂದುವರಿಸುತ್ತಾನೆ. ಹರಿಹರನಿಗೆ ಮಹತ್ವ-ವಾದುದು ಹೃದಯಕಂಪನವನ್ನುಂಟುಮಾಡುವ ಭಕ್ತಿಯ ಸನ್ನಿವೇಶ. ತರ್ಕದ ವಿಷಯ ಗಳಾಗಲಿ, ಐತಿಹಾಸಿಕ ವಸ್ತುಗಳಾಗಲಿ ಅವನಿಗೆ ಅನೇಕಸಲ ಗೌಣವೆಂದೇ ತೋರಿವೆ. ಶಿವಶರಣರ ಕ್ರಾಂತಿ ನಡೆದುದು ಕಲ್ಯಾಣದಲ್ಲಿ. ಅಲ್ಲಿಂದ ಶರಣರು ಬಿಜಯಂಗೈದುದು ಓರಂಗಲ್ಲು, ಶ್ರೀಶೈಲ, ಉಳಿವೆಗಳತ್ತ. ಹರಿಹರನಿದ್ದುದು ಹೊಯ್ಸಳರಾಜ್ಯದ ಹಂಪೆ-

---

೧. ಬಷವ. ಅನುಬಂಧ ಪು. ೧೧೫, ವ. ೩೪೭.

೨. ಕ್ರಿ. ಶ. ೧೯೪೪ರ 'ಜಯಂತಿ' ಮಾಸಪತ್ರಿಕೆಯಲ್ಲಿ ಕಪಟರಾಳ ಕೃಷ್ಣರಾಯರು ಬರೆದ ಲೇಖನ ಗಳನ್ನು ಹಾಗೂ ಅವನ್ನು ಖಂಡಿಸಿ ಶ್ರೀ ಚನ್ನಪ್ಪ ಉತ್ತಂಗಿ ಅವರು ಬರೆದ 'ಅನುಭವಮಂಟಪದ ಐತಿಹಾಸಿಕತೆ' ಎಂಬ ಗ್ರಂಥವನ್ನು ನೋಡಬಹುದು.

ಯಲ್ಲಿ. ಮೇಲೆ ನಿರ್ದೇಶಿಸಿದ ಕೇಂದ್ರಗಳಿಂದ ಸ್ವಲ್ಪ ದೂರದಲ್ಲಿಯೇ ಇದ್ದನೆಂದು ತೋರು-ತ್ತದೆ. ರಾಜ್ಯಕೀಯ ಕಾರಣಗಳಿಂದಲೋ ಇಲ್ಲವೆ ಬೇರಿನ್ನಾವ ಕಾರಣದಿಂದಲೋ ಕಲ್ಯಾ-ಣದಲ್ಲಿ ನಡೆದ ಅದ್ಭುತಕ್ರಾಂತಿ, ಹರಿಹರನಿಗೆ ವೇದ್ಯವಾಗದೆ ಹೋಗಿದೆ. ಸಮಷ್ಟಿಯಲ್ಲಿ ನಡೆದ ಹನ್ನೆರಡನೆಯ ಶತಮಾನದ ಶಿವಶರಣರ ಕ್ರಾಂತಿ ರಾಜ್ಯಕೀಯ ವಿಪ್ಲವದ ಮೂಲಕ ವಾಗಿ ಕಣ್ಮರೆಯಾಗಿಹೋಗಿರಬೇಕು. ಅಲ್ಲಿಯ ವ್ಯಷ್ಟಿಗಳ ಪರಿಚಯ ಕತ್ತಲೆಯ ಗರ್ಭ-ದಿಂದ ಬೆಳಕಿನ ಕಿರಣಗಳು ಬಂದಂತೆ ಕವಿ ಹೃದಯವನ್ನು ಭೇದಿಸಿವೆ. ಅಷ್ಟೇ ಆತನ ಸಾಮಗ್ರಿ. ಆದುದರಿಂದ ಅಲ್ಲಿಲ್ಲದುದು ಎಲ್ಲಿಯೂ ಇಲ್ಲವೆಂದು ನಿರ್ಣಯಿಸುವುದು ಸಾಹಸದ ಮಾತು. ಹರಿಹರನ 'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನವರ ಭಕ್ತಿಯಿಂದ ಆಕರ್ಷಿತರಾಗಿ ಶಿವಶರಣರು ನಾಡಿನ ನಾನಾ ಮೂಲೆಗಳಿಂದ ಆಗಮಿಸಿ ಅವರ ಸುತ್ತು ನೆಲೆಸಿದ್ದರೆಂದೂ ಅವರೊಡನೆ ಸದ್ಗೋಷ್ಠಿ ನಡೆಸುತ್ತಿದ್ದರೆಂದೂ ಸ್ಪಷ್ಟ ವಾಗುತ್ತದೆ. ಇದರಿಂದ ಹರಿಹರನು ವಾಚ್ಯವಾಗಿ ಅನುಭವಮಂಟಪವನ್ನು ಉಲ್ಲೇಖಿ-ಸಿರದಿದ್ದರೂ ಸೂಚ್ಯವಾಗಿ ಅದನ್ನು ತಿಳಿಸಿದಂತಿದೆ.

ಅನುಭವಮಂಟಪದ ಕಲ್ಪನೆ ೧೫ನೆಯ ಶತಮಾನದಲ್ಲಿಯೇ ಉದ್ಭವಿಸಿತೆಂದು ಕೆಲವರ ವಾದ. ಆದರೆ, ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ತಲೆದೋರಿದ ವೀರ-ಶೈವದ ಪುನರುತ್ಥಾನಯುಗಕ್ಕಿಂತ ಮೊದಲೇ ಕಾವ್ಯವನ್ನು ಬರೆದ ಭೀಮಕವಿಯ ಬಸವಪುರಾಣದಲ್ಲಿ ಅಧಿಕಪ್ರಮಾಣದಲ್ಲಿ ತತ್ವಗೋಷ್ಠಿ, ಒಡ್ಡೋಲಗ ಮುಂತಾದ ಪದಗಳ ಉಲ್ಲೇಖ ಬರುವುದಲ್ಲದೆ ಅನುಭವಮಂಟಪದ ಹತ್ತಿರ ಹತ್ತಿರಕ್ಕೆ ಬರುವ "ಕೂಡಲಸಂಗಮೇಶನ ಭವನಮಂಟಪದೊಳಗೆ ವಿವಿಧ ಭಕ್ತರುವೆರಸಿ" ಒಡ್ಡೋಲಗವಿತ್ತ ವಿಷಯವೂ ಪ್ರಸ್ತಾಪಿತವಾಗಿದೆ. ಇದು ಅನುಭವಮಂಟಪಕ್ಕೆ ಅನ್ವಯಿಸುತ್ತದೆಯೆಂದು ಬೇರೆ ಹೇಳಬೇಕಾಗಿಲ್ಲ. ಈ ಮಾತು ಭೀಮಕವಿಯ ಕಲ್ಪಿತವಾಗಿರದೆ, ಅದು ತೆಲುಗು ಬಸವಪುರಾಣದ ಪ್ರತಿಕೃತಿಯಾಗಿರಬೇಕು. ಅಂದರೆ, ಅನುಭವಮಂಟಪದ ಉಲ್ಲೇಖ ಹನ್ನೆರಡನೆಯ ಶತಮಾನದ ಬಸವಾದಿ ಪ್ರಮಥರ ತೀರ ಸನಿಹದ ಸಮಯಕ್ಕೆ ಹೋಗು-ತ್ತದೆ. ಅಲ್ಲಿಂದ ೧೫ನೆಯ ಶತಮಾನಕ್ಕೆ ಬಂದರಂತೂ ಅನುಭವಮಂಟಪದ ಉಲ್ಲೇಖ ಇನ್ನೂ ಸ್ಪಷ್ಟವಾಗಿ ಕಂಡುಬರುತ್ತದೆ. ಉದಾಹರಣೆಗೆಂದು ಸಿಂಗಿರಾಜಪುರಾಣದಲ್ಲಿ ಬರುವ ಮಹಾಮನೆ, ಅನುಭವಮಂಟಪ ಹಾಗೂ ಶೂನ್ಯಸಿಂಹಾಸನಗಳ ಸುಂದರವಾದ ಚಿತ್ರವನ್ನು ನೋಡಬಹುದು.

> "ಶ್ರೀಕಾರದಾಕಾರವಾಗಿ ಕಲ್ಯಾಣಭೂ
> ನಾಕೇಶ್ವರನ ಪದಸ್ಥದ ಹಸ್ತ ತಾನಾಗಿ
> ವಾಕು ಮನ ನಯನ ಕರಚರಣದ್ವೈಮುಖಪುರುಷ ತನ್ನರಮನೆಯೊಳು
> ಪಾಕಶಾಸನಪ್ರಶಸ್ತದೊಳು ಮಯನಿರ್ಮಿತನಿ
> ಜಾಕಾರ ಕೈವಲ್ಯ ನಾಮ ಜಂಗಮಲಿಂಗ
> ನಾಕರುಷಣದ ಮಹಾಮಂಟಪಸ್ಥಳವ ಸ್ಥಳಗೊಳಿಸಿಪ್ಪನಂತದಱೊಳು"

"ಭಾವಬ್ರಹ್ಮಸ್ವರೂಪಿತ ತತ್ವ ನಿಜ ಮಹಾ
ಕೇವಲಜ್ಞಾನ ಜ್ಯೋತಿರ್ಲಿಂಗ ಲಿಂಗದೇ
ಹಾವಯುವ ನಿರ್ದೇಹದೇಹಿಕದಿ ಬಂದೆನ್ನ ದಾಸೋಹಕ್ರೀಕರ್ಮವ
ತಾವವಗ್ರಹಿಸೆನಗೆ ಸೋಹಾಮೃತವನೂಡಿ
ದಾ ವಿಭು ಪ್ರಸನ್ನೋತ್ತರದಿ ಮೂರ್ತಿಗೊಳಲಱುವ
ಭಾವಕಿಕ್ಕಿದ ಪ್ರತಿಷ್ಠಿತವೆನಲು ಶೂನ್ಯಸಿಂಹಾಸನಮನಲ್ಲಿ ನೆಗಳ್ದ" ॥[1]

ಬಸವಣ್ಣನವರ ಅರಮನೆ (ಮಹಾಮನೆ), ಅದರಲ್ಲಿ ಅನುಭವಮಂಟಪ, ಆ ಅನುಭವಮಂಟಪದಲ್ಲಿ ಶೂನ್ಯಸಿಂಹಾಸನ—ಈ ಪರಿವಿಡಿಯಲ್ಲಿ ಮೂರೂ ನೆಲೆಗೊಂಡಂತೆ ತೋರುತ್ತದೆ. ಮಹಾಮನೆ ಎಂದರೆ ಸಾಮಾನ್ಯವಾಗಿ ಮಹಾಂತರು ನೆಲೆಸಿದ ಮನೆ ಎಂದು ತೋರುತ್ತದೆ. ಆ ಪದ ಬಸವಣ್ಣನವರಂತೆ ಮಿಕ್ಕ ಶರಣರ ಮನೆಗಳನ್ನು ಉಲ್ಲೇಖಿಸುವಲ್ಲಿಯೂ ಪ್ರಯೋಗವಾಗಿದೆ.[2] ಬಸವಣ್ಣನವರ ಮಹಾಮನೆಯಲ್ಲಿ ಅನುಭವಮಂಟಪವಿದ್ದುದೂ ಆ ಅನುಭವಮಂಟಪದಲ್ಲಿ ಶೂನ್ಯಪೀಠವನ್ನು ಪ್ರತಿಷ್ಠಾಪಿಸಿದುದೂ ಅದರ ವೈಶಿಷ್ಟ್ಯ. ಸಿಂಗಿರಾಜಪುರಾಣವು ಈ ವಿಷಯವನ್ನು ಖಚಿತಗೊಳಿಸಿ ಈ ಸಮಸ್ಯೆಯ ಮೇಲೆ ಪ್ರಜ್ವಲಿಸುವ ಬೆಳಕನ್ನು ಬೀರಿದೆ.

ಸಿಂಗಿರಾಜಪುರಾಣದಲ್ಲಿ 'ಮಹಾಮಂಟಪ' ಎಂದು ಉಲ್ಲೇಖಿಸಿದ್ದರೆ, ಚನ್ನಬಸವಪುರಾಣ, ಪ್ರಭುದೇವರ ಪುರಾಣಗಳಲ್ಲಿ 'ಅನುಭವಮಂಟಪ' ಎಂಬ ಪದವನ್ನೇ ಬಳಸಲಾಗಿದೆ.

". . . . . . . . . . . . . . . ಬಸವಣ್ಣನ
ವರ ಗೃಹಾಂತಸ್ಥನನುಭವಮಂಟಪದೊಳು"[3]
ನೆಲಗಟ್ಟು ಸಪ್ತಮಹಾಕೋಟಮಂತ್ರಂಗಳತಿ
ಚಲುವ ಮೂವತ್ತಾಱು ವಂಗ ಸಾಲ್ಗಂಭಗಳು
ಲಲಿತಷಟ್ತ್ರಿಂಶ ಶಕ್ತಿಯರು ಬೋದಿಗೆಯು ಮೂವತ್ತಾಱು ಭಕ್ತಿಕ್ರಮದಿಂ
ತೊಲೆಗಳುಂ ಮೇಲ್ವಲಗೆನೂಱಱೊಂದು ಸ್ಥಲಗಳತಿ
ಯುಲಿವುತಿಹ ಉಪಮಂತ್ರ ಇಟ್ಟಗೆಯುಮೇಲ್ಗಾರೆ
ಕಲಿತ ಷಟ್ತ್ರಿಂಶ ಪ್ರಣಮದ ಬಸವರಾಜನನುಭವಮಂಟಪ"[4]

ಚನ್ನಬಸವಪುರಾಣದಲ್ಲಿಯೂ ಸಹ ಬಸವಣ್ಣನವರ ವರಗೃಹದಲ್ಲಿಯೇ (ಮಹಾಮನೆಯಲ್ಲಿಯೇ) ಅನುಭವಮಂಟಪವಿದ್ದ ವಿಷಯ ಪ್ರಸ್ತಾಪಿತವಾಗಿದೆ. ಈ ಮಾತಿಗೆ ಪುಷ್ಟಿಯನ್ನು ಕೊಡುವಂತೆ ಹಡಪದ ರೇಚಣ್ಣನವರ ಹೆಸರಿನಲ್ಲಿರುವ ಸುದೀರ್ಘವಾದ ಕಾಲಜ್ಞಾನ ವಚನವೊಂದರಲ್ಲಿ ಕಲ್ಯಾಣದಲ್ಲಿದ್ದ ಅನುಭಾವಮಂಟಪ, ಮೇರುಮಂಟಪ,

---

೧. ಸಿಂಪು ೪೮–೩, ೪. ಇದರೊಡನೆ ಪ್ರಪು ೭–೨೬೭ ನೋಡಬೇಕು.
೨. ಸಿಚಾ. ೮–೩೦, ೫೯, ೯೨. ೩. ಚೆಬಪು., ಕಾಂಡ ೧, ೪–೧೮.
೪. ಪ್ರದೇಪು ೭–೨೬೭.

ಚರಮಂಟಪ, ವಿಶಾಲಮಂಟಪ, ಪರಮಾನಂದಪ್ರಕಾಶಮಂಟಪ, ಪ್ರಸಾದಮಂಟಪ, ಆರಾಧ್ಯಮಂಟಪ, ಚೆಂಗಣಗಿಲಮಂಟಪಗಳ ಉಲ್ಲೇಖವಿದ್ದು ಆಯಾ ಶರಣರ ಉಲ್ಲೇಖ ಬೇರೆ ಬೇರೆ ಮಂಟಪಗಳಲ್ಲಿ ಬಂದರೆ, ಚನ್ನಬಸವಣ್ಣನವರ ಪ್ರಸ್ತಾಪ ಅನುಭವಮಂಟಪ ದಲ್ಲಿ ಬರುತ್ತದೆ.

ಇವೆಲ್ಲವುಗಳಿಗೆ ಕಳಸವಿಟ್ಟಂತೆ, ಈ ಸಂಬಂಧವಾಗಿ ನೀಲಮ್ಮನವರ ವಚನವೊಂದು ಇದೀಗ ನಮ್ಮ ಸಂಶೋಧನೆಯಲ್ಲಿ ಹೊರಬಂದಿದೆ. ಆ ವಚನ ಈ ವರೆಗೆ ನಾಲ್ಕು ತಾಳೆಯೋಲೆಯ ಪ್ರತಿಗಳಲ್ಲಿ[೧] ಕಂಡುಬರುತ್ತಿರುವುದರಿಂದ ಅದನ್ನು ಪ್ರಕ್ಷಿಪ್ತವೆನ್ನುವ ಧೈರ್ಯ ಯಾರಿಗೂ ಬಾರದು. ಅಲ್ಲಿರುವ ಉಲ್ಲೇಖ ಹೀಗೆ

> **"..... ಚನ್ನಬಸವನೆಂಬ ಪ್ರಸಾದಿಯ ಪಡೆದು, ಅನುಭವ ಮಂಟಪ ವನನುಮಾಡಿ ಅನುಭವ ಮೂರ್ತಿಯಾದ ನಮ್ಮ ಬಸವಯ್ಯನು. ಅಱಿವ ಸಂಪಾದಿಸಿ, ಆಚಾರವನಂಗಂಗೊಳಿಸಿ, ಏಳುನೂಱೆಪ್ಪತ್ತ ಮರಗಣಂಗಳ ಅನುಭವ ಮೂರ್ತಿಗಳ ಮಾಡಿದಾತ ನಮ್ಮ ಬಸವಯ್ಯನು ......"**

ಬಸವಣ್ಣನವರ ಧರ್ಮಪತ್ನಿಯಾದ ನೀಲಮ್ಮನವರ ಈ ವಚನದಿಂದ ಬಸವಣ್ಣ ನವರು ಅನುಭವಮಂಟಪವನ್ನು ಸ್ಥಾಪಿಸಿದ್ದರೆಂಬುದೂ ಅಲ್ಲಿ ಏಳುನೂರೆಪ್ಪತ್ತು ಅಮರಗಣಂಗಳು ಅನುಭವಮೂರ್ತಿಗಳಾಗಿ ನೆಲೆಗೊಂಡಿದ್ದರೆಂಬುದೂ ಅಲ್ಲಿ ಚನ್ನ-ಬಸವಣ್ಣನವರು ಮುಖ್ಯರಾಗಿದ್ದರೆಂಬುದೂ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ.

ಇಂತಹ ಪ್ರಬಲವಾದ ಆಧಾರಗಳನ್ನವಲೋಕಿಸಿದರೆ ಅನುಭವಮಂಟಪದ ಅಸ್ತಿತ್ವ-ವನ್ನು ಅಲ್ಲಗಳೆಯುವುದು ಸಾಹಸದ ಮಾತೆನಿಸುತ್ತದೆ. ಚನ್ನಬಸವಣ್ಣನವರ ಜನನ, ವ್ಯಕ್ತಿತ್ವದ ವಿಕಾಸ, ಕಾರ್ಯರಂಗ ಇವುಗಳಿಗೆ ಸಂಬಂಧಪಟ್ಟ ಅನುಭವಮಂಟಪವು ಐತಿಹಾಸಿಕವಲ್ಲವೆಂಬ ಕೂಗು ಕೆಲದಿನಗಳ ಹಿಂದೆ ಕೇಳಿಬಂದುದರಿಂದ ಅವರ ಚರಿತ್ರೆಯನ್ನು ವಿವರಿಸುವಲ್ಲಿ ಈ ವಿಷಯವನ್ನು ಸ್ವಲ್ಪ ವಿಶದವಾಗಿ ವಿಚಾರಿಸಲಾಯಿತು.

ಅನುಭವಮಂಟಪ ಬಸವಣ್ಣನವರ ದಿವ್ಯದರ್ಶನದ ಸಾಕಾರಮೂರ್ತಿ. ಅವರು ನಿರ್ಮಿಸಬೇಕೆಂದಿದ್ದ ನೂತನ ಸಮಾಜ. ಧರ್ಮ, ತತ್ವ ಮುಂತಾದವುಗಳೆಲ್ಲಕ್ಕೆ ಅದು ಆಡುಂಬೊಲ. ಶಿವಶರಣರ ಸನ್ನಿಕರ್ಷದಿಂದ, ಮಾತುಮಾತುಗಳ ಮಥನದಿಂದ ವ್ಯಕ್ತ-ದೋರಿದ ದಿವ್ಯ ಆದರ್ಶಗಳೆಲ್ಲ ಬಾಲ್ಯದಲ್ಲಿ ಚನ್ನಬಸವಣ್ಣನವರ ಕರ್ಣಪಟಲದ ಮೇಲೆ ಬಿದ್ದು ಅದ್ಭುತವಾದ ಪರಿಣಾಮವನ್ನುಂಟುಮಾಡಿರಬೇಕು. ಕ್ಷಿಪ್ರದಲ್ಲಿಯೇ ಸ್ವತಃ ಚನ್ನಬಸವಣ್ಣನವರೇ ಅಲ್ಲಿ ನಡೆವ ಮಹತ್ವದ ಸನ್ನಿವೇಶಗಳಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸಿದಂತೆ ತೋರುತ್ತದೆ. ಅವರ ಲಿಂಗದೀಕ್ಷೆ ಅಲ್ಲಿಯೇ ನೆರವೇರಿದ್ದರೆ ಆಶ್ಚರ್ಯವೇನಿಲ್ಲ. ಹಾಗಿದ್ದರೆ. ಅನುಭವಮಂಟಪಕ್ಕೂ ಚನ್ನಬಸವಣ್ಣನವರಿಗೂ ಇರುವ ಸಂಬಂಧವಲ್ಲಿ ಇದೇ ಮೊತ್ತಮೊದಲನೆಯದೆನಿಸುತ್ತದೆ.

---

೧. ನೀಲಮ್ಮನವರ ವಚನ, ತಾಪ್ರ ೪೯, ೧೧೫, ३२३, ೭೦೫.

ಅನುಭವಮಂಟಪದಲ್ಲಿ ಮಹತ್ವದ ಎಲ್ಲ ಸನ್ನಿವೇಶಗಳಲ್ಲಿಯೂ ಚನ್ನಬಸವಣ್ಣನವರು ಕಂಡುಬರುತ್ತಾರೆ. ಪ್ರಭುದೇವರು ಕಲ್ಯಾಣಕ್ಕೆ ಆಗಮಿಸಿ ಬಸವಣ್ಣನವರ ಮೇಲೆ ಕೋಪಿಸಿಕೊಂಡ ಸಂದರ್ಭದಲ್ಲಿ, ಮಹಾದೇವಿಯಕ್ಕನವರ ಸತ್ವಪರೀಕ್ಷೆ ನಡೆದಲ್ಲಿ, ನುಲಿಯ ಚಂದಯ್ಯಗಳು ಕಾಯಕದ ಹೊಣೆಯಲ್ಲಿ ಲಿಂಗವನ್ನು ತೊರೆದಲ್ಲಿ, ಸಿದ್ಧರಾಮದೇವರಿಗೆ ಗುರುವಾಗಿ ಕಾರುಣ್ಯವನ್ನು ನೀಡುವಲ್ಲಿ—ಇಂಥ ಎಲ್ಲ ಶಿವಸಮಯದಲ್ಲಿ ಚನ್ನಬಸವಣ್ಣನವರ ವ್ಯಕ್ತಿತ್ವ, ಕರ್ತೃತ್ವಶಕ್ತಿಗಳು ಸ್ಫುಟವಾಗಿ ಒಡಮೂಡಿವೆ. ಇಷ್ಟೆಲ್ಲ ಮಹತ್ಕಾರ್ಯಗಳನ್ನು ಸಾಧಿಸಿದ ಚನ್ನಬಸವಣ್ಣನವರು ವಯಸ್ಸಿನಲ್ಲಿ ಇನ್ನೂ ಕಿರಿಯರು; ೧೦–೧೨ ವರುಷದ ಬಾಲ್ಯದ ಚನ್ನಬಸವಣ್ಣನವರು, ಪ್ರೌಢವಯಸ್ಸಿನ ಮಹಾಯೋಗಿ ಸಿದ್ಧರಾಮನಿಗೆ ಲಿಂಗದೀಕ್ಷೆಯನ್ನು ಮಾಡಿದ ಸನ್ನಿವೇಶ, ವೀರಶೈವದ ಇತಿಹಾಸದಲ್ಲಿಯೇ ವೈಲಕ್ಷಣ್ಯಪೂರ್ಣವಾಗಿದೆ. ಈ ಮಹತ್ವದ ಸಂಗತಿಯ ಐತಿಹಾಸಿಕತೆಯ ಬಗೆಗೆ ಹಲವರು ಸಂದೇಹ ತಳೆದುದರಿಂದ ಅದನ್ನಿಲ್ಲಿ ವಿಚಾರಿಸುವುದು ಸೂಕ್ತವೆನಿಸಿದೆ.

# ಸಿದ್ಧರಾಮನ ಲಿಂಗದೀಕ್ಷೆ

ಚೆನ್ನಬಸವಣ್ಣನವರು ಸಿದ್ಧರಾಮನಿಗೆ ಇಷ್ಟಲಿಂಗಧಾರಣೆ ಮಾಡಿದರೆಂಬ ವಿಷಯ ಅವರ ಜೀವನಚರಿತೆಯಲ್ಲಿಯೂ ವೀರಶೈವದ ಇತಿಹಾಸದಲ್ಲಿಯೂ ಬಹು ಮಹತ್ವವಾದುದು. ಸಿದ್ಧರಾಮನು ಸಾಮಾನ್ಯನಲ್ಲ; ಮಹಾಯೋಗಿ. ಅಸಂಖ್ಯಾತ ಗುಡ್ಡರಿಗೆ ಅಧಿಪತಿಯಾಗಿ ಸೊನ್ನಲಿಗೆಯ ಭಾಗದಲ್ಲಿ ಬಹಳ ಪ್ರಖ್ಯಾತನಾಗಿದ್ದನು. ಆತನ ಹೆಸರು ಶಾಸನೋಕ್ತ[1]ವಾಗಿರುವುದನ್ನು ಸ್ಮರಿಸಿದರೆ ಅವನ ಹಿರಿಮೆ ಎಷ್ಟೆಂಬುದು ಸ್ಪಷ್ಟವಾಗುತ್ತದೆ. ರಾಜ–ಮಹಾರಾಜರುಗಳ ಮೇಲೆ ಪ್ರಭಾವ ಬೀರುವಷ್ಟು ಖ್ಯಾತಿಯನ್ನು ಆತನು ಪಡೆದಿದ್ದನು. ಆತನದೊಂದು ವಚನ ಸಂಸ್ಕೃತಕ್ಕೆ ಪರಿವರ್ತನಹೊಂದಿ ಒಂದು ಶಾಸನದಲ್ಲಿ[2] ಉದ್ಧೃತವಾದ ವಿಷಯ ಗಮನಾರ್ಹವಾಗಿದೆ. ಇಷ್ಟೊಂದು ಮಹಿಮಾನ್ವಿತನಾದ ಯೋಗಿ ಸಿದ್ಧರಾಮನು ಕಲ್ಯಾಣದ ಶಿವಶರಣರ ತತ್ವವನ್ನು ಸ್ವೀಕರಿಸಿ ಶರಣ ಸಿದ್ಧರಾಮನಾದುದು ವೀರಶೈವದ ಸಂಘಟನೆಯ ವಿಜಯಪತಾಕೆಯ ದ್ಯೋತಕ. ಈ ಸಂಘಟನೆ ಆ ಕಾಲದಲ್ಲಿ ನಡೆಯದೇ ಹೋಗಿದ್ದರೆ, ಪ್ರಾಯಶಃ ಒಂದಕ್ಕೊಂದು ಹೊಂದಿಕೊಳ್ಳದ ಎರಡು ಸಮಸಮಾಂತರ ಶಾಖೆಗಳು ಅಸ್ತಿತ್ವದಲ್ಲಿ ಉಳಿದು ವೀರಶೈವವು ಘರ್ಷಣೆಗೆ ಒಳಗಾಗಬಹುದಾಗಿದ್ದಿತು. ಆದರೆ, ಸಿದ್ಧರಾಮನನ್ನು ಶರಣರು ತಮ್ಮ ತಾತ್ವಿಕವಲಯದಲ್ಲಿ ಎತ್ತಿಕೊಂಡುದರ ಮೂಲಕ ಈ ಘರ್ಷಣೆ ತಪ್ಪಿ, ಕಲ್ಯಾಣ, ಸೊನ್ನಲಿಗೆಗಳಲ್ಲಿ ಬೆರಸಿ ಬೇರಿಲ್ಲದಂತಹ ಸಾಮರಸ್ಯ ಉಂಟಾಯಿತು. ಸಿದ್ಧರಾಮನನ್ನು ಶೂನ್ಯಸಿಂಹಾಸನದ ಮೂರನೆಯ ಅಧಿಪತಿಯನ್ನಾಗಿ ಮಾಡಿದುದು ಎರಡಾಲಿಕಲ್ಲು ಒಂದಾದಂತಾಯಿತು. ಇಂತಹ ಮಹಾಘಟನೆಗೆ ಮೂಲ, ಸಿದ್ಧರಾಮನ ಲಿಂಗದೀಕ್ಷೆ. ಅದು ಚೆನ್ನಬಸವಣ್ಣನವರಿಂದ ನೆರವೇರಿದುದು ಅವರ ಜೀವನಚರಿತ್ರೆಯಲ್ಲಿ ಮಹತ್ವದ ಸನ್ನಿವೇಶವಲ್ಲವೇ? ವಯಸ್ಸಿನಲ್ಲಿ ಕಿರಿಯನಾಗಿ ಅರಿವಿನಲ್ಲಿ ಹಿರಿಯನಾದ ಚೆನ್ನಬಸವಣ್ಣನಿಂದ ಈ ದೀಕ್ಷೆ ಪಡೆದುದು ಅರ್ಥಪೂರ್ಣವಾಗಿದೆ; ವೀರಶೈವ ಧರ್ಮೇತಿಹಾಸದಲ್ಲಿ ಸುಸಂಸ್ಮರಣೀಯವಾಗಿದೆ.

ಆದರೆ, ಈ ದೀಕ್ಷೆಯೇ ನಡೆಯಲಿಲ್ಲವೆಂದು ವಾದಿಸುವ ಪ್ರಯತ್ನಗಳೂ ನಡೆದು ಹೋದುವು;[3] ನಡೆಯುತ್ತಲಿವೆ. ವೀರಶೈವ ಸಾಹಿತ್ಯದಲ್ಲಿ ಸಿದ್ಧರಾಮನ ಲಿಂಗದೀಕ್ಷೆಯನ್ನು ಉದ್ಘೋಷಿಸುವ ವಿಪುಲವಾದ ಆಧಾರಗಳು ದೊರೆಯುತ್ತಿದ್ದರೂ ಅವನ್ನು ನಂಬದೆ ಸಂದೇಹವನ್ನು ವ್ಯಕ್ತಪಡಿಸಿದುದು ಆಶ್ಚರ್ಯಕರವಾಗಿದೆ. ಅಂತಹ ಆಧಾರಗಳನ್ನು ಇಲ್ಲಿ ಪರಿಕಿಸಬಹುದು.

ವಚನವಾಙ್ಮಯದಲ್ಲಿ ಈ ಪ್ರಸ್ತಾಪ ಹಲವಾರು ಕಡೆಗೆ ಬರುತ್ತದೆ. ಸ್ವತಃ ಸಿದ್ಧರಾಮನೇ ಈ ಮಾತನ್ನು ಘಂಟಾಘೋಷವಾಗಿ ಸಾರಿದ್ದಾನೆ:

---

೧. Ep. I. XXIII, P. 189—196. Sangur Inscription: ಸೊರಬ ಶಾಸನ ೫೬೧.

೨. ಡೈರೆಕ್ಟರ್. ಆರ್ಕಿಯಾಲಾಜಿಕಲ್ ವಿಭಾಗ. ಊಟಿ ಅವರು ನಮಗೆ ಪತ್ರದಲ್ಲಿ ತಿಳಿಸಿರುವರು.

೩. ಶ್ರೀ. ಡಿ. ಎಲ್. ನರಸಿಂಹಾಚಾರ್—ಸಿದ್ಧರಾಮಚಾರಿತ್ರ ಪ್ರಸ್ತಾವನೆ, ಪುಟ ೫೦.
ಶ್ರೀ. ಎಸ್. ಆರ್. ಶ್ರೀನಿವಾಸಮೂರ್ತಿ—ಪ್ರಬುದ್ಧಕರ್ನಾಟಕ. ೧೫–೪.

'ನಮ್ಮ ಚನ್ನಬಸವಣ್ಣಗುರುವಿನ ಬೋಧೆಯಿಂದ ಮಾಡಿಸಹೋದರೆ, ಮಾಡುವ ರೂಪು ಇಲ್ಲದಂತಾಯಿತಯ್ಯಾ.'[೧]

'ಭಾವಲಿಂಗವ ಮಹಾಲಿಂಗವಾಗಿ ಅಳವಡಿಸಿದನು ಎನ್ನ ಗುರು ಚನ್ನ ಬಸವಣ್ಣ.'[೨]

'ಭೋಗಿಯಾದರೆ, ಎನ್ನ ಗುರು ಚನ್ನಬಸವಣ್ಣನಂತಾಗಬೇಕು.'[೩]

'ನಾ ಯೋಗಿಯೆಂದರೇನು, ಮನವೊಲಿದು ಚನ್ನಬಸವಣ್ಣ ಲಿಂಗವ ಕೊಡ ದನ್ನಕ್ಕ!'[೪]

'ಕಪಿಲಸಿದ್ಧಮಲ್ಲಿಕಾರ್ಜುನಾ ಇದಱಿರವ ಹೇಳಿಕೊಡಯ್ಯಾ, ಎನ್ನ ಗುರು ಚನ್ನಬಸವಣ್ಣನಿಂದ.'[೫]

'ಎನ್ನ ತನ್ನಂತೆ ಮಾಡಿದ ಗುರು ಚನ್ನಬಸವಣ್ಣ. ಆನು ಬಸವಣ್ಣನ ಕರುಣ ದಿಂದ ಅಭ್ಯಾಸಯೋಗವನತಿಗಳೆದು, ಶಿವಯೋಗದಲ್ಲಿ ನಿತ್ಯನಾಗಿ, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಕ್ಕೆ ಅಧಿಕಾರಿಯಾದೆ; ನಿನ್ನವರ ಸಲುಗೆಗೆ ಸಂದೆ, ಚನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತುಕಾಣಾ ಗುರುವೇ, ಕಪಿಲಸಿದ್ಧಮಲ್ಲಿಕಾರ್ಜುನಾ.'[೬]

'ಹೆಸರಿಡಬಾರದ ಲಿಂಗವ ಹೆಸರಿಟ್ಟು ಎನ್ನ ಕರಸ್ಥಲಕ್ಕೆ ತಂದು . . . . . ಕ್ರಿಯಾಲಿಂಗವ ಕೊಟ್ಟು ಶ್ರೀಗುರು ಚನ್ನಬಸವಣ್ಣ ಹೆಸರಿಟ್ಟ ಲಿಂಗದ ಹೆಸರು ಹೇಳುವೆನು ಕೇಳಯ್ಯಾ.'[೭]

'ಅನಾದಿಸಂಸಿದ್ಧನ ಆಗುಮಾಡಿ ಹೆಸರಿಟ್ಟು ಕರಸ್ಥಲಕ್ಕೆ ತಂದುಕೊಟ್ಟ ಗುರು ಚನ್ನಬಸವಣ್ಣ . . . . .'[೮]

'ಚನ್ನಬಸವಣ್ಣ ಗುರುವಾಗಿ ಬಂದು ಎನ್ನ ಜನ್ಮಕರ್ಮವ ನಿವೃತ್ತಿಯ ಮಾಡಿದನು.'[೯]

'ಲಿಂಗತ್ರಯವ ತಂದು ಅವರವರ ಕರದಲ್ಲಿ ದೀಕ್ಷೆಯಮಾಡಿದ ಚನ್ನ-ಬಸವಣ್ಣ.'[೧೦]

'ಎಂದಿಪ್ಪೆನಯ್ಯಾ ಲಿಂಗಪೂಜೆಯ ಮಾಡುತ್ತ ನಮ್ಮ ಚನ್ನಬಸವಣ್ಣನ ಪಾದೋದಕ ಪ್ರಸಾದವ ಸೇವಿಸುತ್ತ!'[೧೧]

'ಎನ್ನ ಗುರು ಚನ್ನಬಸವಣ್ಣ ಕೊಟ್ಟ ಇಷ್ಟಲಿಂಗ . . . . .'[೧೨]

'ಎನ್ನ ಗುರು ಚನ್ನಬಸವಣ್ಣಂಗೆ ನನಗೆ ಭೇದವುಂಟೇ ಅಯ್ಯಾ?'[೧೩]

'ಜನ್ಮಕ್ಕೊಮ್ಮೆ ಚನ್ನಬಸವಣ್ಣನ ಪಾದೋದಕ ತೆಗೆದುಕೊಂಡರೆ ಸಾಲದೆ?'[೧೪]

---

೧. ಸಿಪವ ೫೧. ೨. ಸಿಪವ ೫೨. ೩. ಸಿಪವ ೭೭.
೪. ಸಿಪವ ೧೨೦. ೫. ಸಿಪವ ೧೨೪ ೬. ಸಿಪವ ೧೨೭.
೭. ಸಿಪವ ೧೨೮. ೮. ಸಿಪವ ೧೨೯. ೯. ಸಿಪವ ೧೩೧.
೧೦. ಸಿಪವ ೧೫೨. ೧೧. ಸಿಪವ ೨೭೯. ೧೨. ಸಿಪವ ೨೭೪.
೧೩. ಸಿಪವ ೩೮೯. ೧೪. ಸಿಪವ ೫೯೩.

ಹೀಗೆ ಸಿದ್ಧರಾಮನು ಚನ್ನಬಸವಣ್ಣನವರಿಂದ ತನಗೆ ಇಷ್ಟಲಿಂಗೋಪದೇಶವಾಗಬೇಕೆಂದು ಹಾರೈಸಿದ, ಹಂಬಲಿಸಿದ; ಗುರುಕರುಣೆಯನ್ನು ಪಡೆದ, ಇಷ್ಟಲಿಂಗವನ್ನು ಪಡೆದ, ನಿರಾಳತೃಪ್ತಿಯಲ್ಲಿ ಬೆರೆದ ವಿಷಯವನ್ನು ವಿವರಿಸುವ ಮಾರ್ಮಿಕವಾದ ವಚನಗಳು ಅಧಿಕಸಂಖ್ಯೆಯಲ್ಲಿ ದೊರೆಯುತ್ತವೆ. ಇದಲ್ಲದೆ ಚನ್ನಬಸವಣ್ಣನವರನ್ನು ಮನವಾರೆ ಹೊಗಳಿದ ವಚನಗಳು ಅದೆಷ್ಟೋ! ಚನ್ನಬಸವಣ್ಣನವರಂತೆ, ಸಿದ್ಧರಾಮೇಶ್ವರನು, ಪ್ರಭುದೇವ, ಬಸವಣ್ಣ, ಮಡಿವಾಳಮಾಚಿದೇವ ಮೊದಲಾದ ಶಿವಶರಣರನ್ನು ಸಂಬೋಧಿಸುವ ವಚನಗಳೂ ದೊರೆಯುತ್ತವೆ.[೧] ಕಲ್ಯಾಣಕ್ಕೆ ಸಿದ್ಧರಾಮನು ಆಗಮಿಸಿದ ವಿಷಯವನ್ನೇ ಪ್ರಸ್ತಾಪಿಸುವ ಮಹತ್ವದ ಒಂದು ವಚನವೂ ಉಂಟು.[೨] ಇವು ಸಿದ್ಧರಾಮನಿಗೆ ಚನ್ನಬಸವಣ್ಣನವರಿಂದ ಲಿಂಗದೀಕ್ಷೆಯಾಯಿತೆಂಬುದನ್ನು ಪ್ರಸ್ಥಾಪಿಸಲು ಸಮರ್ಥವಾಗಲಾರವೇ? ಇನ್ನು ಚನ್ನಬಸವಣ್ಣನವರ ವಚನಗಳನ್ನೇ ನೋಡಿರಿ:

> **'ಕೂಡಲಚನ್ನಸಂಗಯ್ಯನಲ್ಲಿ ಪ್ರಾಣಲಿಂಗಸಂಬಂಧ ನಿನಗೆಲ್ಲಿಯದು ಹೇಳಾ, ಸಿದ್ಧರಾಮಯ್ಯಾ?'[೩]**
>
> **'ಕೂಡಲಚನ್ನಸಂಗಯ್ಯನಲ್ಲಿ ನಿಸ್ಸೀಮ ಸಿದ್ಧರಾಮಯ್ಯನ ಶ್ರೀಪಾದಕ್ಕೆ ಶರಣೆಂದು ಬದುಕಿದೆನು ಕಾಣಾ, ಪ್ರಭುವೇ.'[೪]**
>
> **'ನಡುಮುರಿದು ಗುಡುಗೂರಿದೊಡೇನು, ಲಿಂಗದ ನಿಜವನರಿಯದನ್ನಕ್ಕರ? ಸಾವನ್ನಕ್ಕರ ಜಪವ ಮಾಡಿದಡೇನು ಲಿಂಗಪ್ರಾಣ, ತನ್ನ ಪ್ರಾಣ ಒಡಗೂಡದನ್ನಕ್ಕರ? ಇಂತಿವರೆಲ್ಲರು ಅಭ್ಯಾಸಶಕ್ತಿಗಳುಹಿಗರು. ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಮಾಯಾಕೋಳಾಹಳ ಸಿದ್ಧರಾಮಯ್ಯದೇವರಿಗೆ ಅಹೋರಾತ್ರಿಯಲ್ಲಿ ನಮೋನಮೋ ಎಂದು ಬದುಕಿದೆನು.'[೫]**

ಚನ್ನಬಸವಣ್ಣನವರ ಈ ವಚನಗಳಿಂದ ಅವರು ಸಿದ್ಧರಾಮಯ್ಯನೊಡನೆ ಇಷ್ಟಪ್ರಾಣಲಿಂಗಗಳನ್ನು ಕುರಿತು ಚರ್ಚಿಸಿದಂತೆಯೂ ಅವುಗಳ ಮಹತ್ವವನ್ನು ಕುರಿತು ವಿವೇಚಿಸಿದಂತೆಯೂ ಕೊನೆಗೆ ಅವರಿಗೆ ದೀಕ್ಷೆಕೊಟ್ಟು ಅವರ ಶ್ರೀಪಾದಕ್ಕೆ ನಮಸ್ಕರಿಸಿದಂತೆಯೂ ಅರ್ಥೈಸಬಹುದಾಗಿದೆ. ಇದೇ ರೀತಿಯಲ್ಲಿ ಚನ್ನಬಸವಣ್ಣನವರ ಇನ್ನೂ ಹಲವಾರು ವಚನಗಳಲ್ಲಿ ಈ ಪ್ರಸ್ತಾಪ ಧ್ವನಿತವಾಗಿದೆ.[೬]

ಚನ್ನಬಸವಣ್ಣನವರ ದೀಕ್ಷೆಯ ಉಲ್ಲೇಖ. ಇತರ ವಚನಕಾರರ ವಚನಗಳಲ್ಲಿಯೂ ಬಂದಿದೆ. ಪ್ರಭುದೇವರು. ಬಸವಣ್ಣ, ಅಮುಗಿದೇವಯ್ಯ. ತೆಲುಗು ಜೊಮ್ಮಣ್ಣ, ಶಿವನಾಗಮಯ್ಯ. ಡಕ್ಕೆಯ ಬೊಮ್ಮಣ್ಣ, ರಾಯಸದ ಮಂಚಣ್ಣ, ಉರಿಲಿಂಗಪೆದ್ದಿ,

---

೧. ಶೂಸಂ ೧೪. ೨. ಶೂಸಂ ೪–೩೭. ೩. ಚಬವ ೯೫೪.

೪. ಚಬವ ೯೫೫. ೫. ಚಬವ. ೩೭೩. ೬. ಚಬವ ೧೮೦, ೨೪೯.

ಇದುವರೆಗೆ ಉದ್ಧೃತವಾದ ಚನ್ನಬಸವಣ್ಣನವರ ವಚನಗಳಲ್ಲಿ ೧೮೦ನೆಯ ವಚನವೊಂದನ್ನು ಬಿಟ್ಟು ಮಿಕ್ಕುವು ಶೂನ್ಯಸಂಪಾದನೆಯಲ್ಲಿ ಬಂದಿದ್ದರೂ ಅವುಗಳಿಗೆ ಇತರ ತಾಳೆ ಓಲೆಗ್ರಂಥಗಳ ಆಕರಗಳಿರುವುದರಿಂದ ಅವನ್ನು ಶೂನ್ಯಸಂಪಾದನೆಗಿಂತಲೂ ಚನ್ನಬಸವಣ್ಣನವರ ವಚನಗಳಿಂದೇ ಇಟ್ಟುಕೊಳ್ಳಲಾಗಿದೆ.

ಮೆರೆಮಿಂಡದೇವ, ಮೋಳಿಗೆಯ್ಯ ಮುಂತಾದವರ ವಚನಗಳು ಶೂನ್ಯಸಂಪಾದನೆಯಲ್ಲಿ ಉದ್ಧೃತವಾಗಿವೆ. ಆ ವಚನಗಳ ಪ್ರಸ್ತಾಪವನ್ನು ಮುಂದೆ ಮಾಡಲಾಗುವುದು. ಇಲ್ಲಿ ಶೂನ್ಯಸಂಪಾದನೆಯನ್ನುಳಿದು ಬೇರೆಡೆ ದೊರೆಯುವ ವಚನಗಳನ್ನು ಉದ್ಧರಿಸಬಹುದು.

"ಗುರುವಾದಡಾಗಲಿ, ಚರಲಿಂಗವಾದಡಾಗಲಿ ವರ್ತನತಪ್ಪಿ ನಡೆದವಂಗೆ
ಭಕ್ತಿ ವಿರಕ್ತಿ, ಮೋಕ್ಷ ಮುಮುಕ್ಷತ್ವವಿಲ್ಲ.
ಸಂಗನ ಬಸವಣ್ಣ ಸಾಕ್ಷಿಯಾಗಿ, ಚನ್ನಬಸವಣ್ಣನಱಿಕೆಯಾಗಿ,
ಪ್ರಭು ಸಿದ್ಧರಾಮೇಶ್ವರ ಮರುಳಶಂಕರ ನಿಜಗುಣ ಇಂತಿವರೊಳಗಾದ
ನಿಜಲಿಂಗಾಂಗಿಗಳು ಮುಂತಾಗಿ ಎನ್ನ ಕಾಯಕಕ್ಕೆ ಸಾಱಿ ಹೋಗೆಂ
ದಿಕ್ಕಿದಕಟ್ಟು, ನಾ ಭಕ್ತನೆಂದು ನುಡಿದಡೆ ಎನಗೊಂದು ತಪ್ಪಿಲ್ಲ.
ಅದು ನಿಮ್ಮ ಚಿತ್ತದ ಎಚ್ಚರಿಕೆ, ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಕುರಂಗೇಶ್ವರ-
ಲಿಂಗ ಸಾಕ್ಷಿಯಾಗಿ."[೧]

ಎಚ್ಚರಿಕೆಕಾಯಕದ ಮುಕ್ತಿನಾಥಯ್ಯನು ಬಸವಣ್ಣನವರ ಸಮಕಾಲೀನನು. ಆತನು ಸಿದ್ಧರಾಮೇಶ್ವರನನ್ನು ಪ್ರಭು, ಮರುಳಶಂಕರ ಮುಂತಾದವರೊಡನೆ ನಿಜಲಿಂಗಾಂಗಿ ಎಂದು ಕರೆದಿರುವನು. ಇಷ್ಟೇ ಅಲ್ಲದೆ, ಅವರೆಲ್ಲ ತನ್ನನ್ನು ಕಾಯಕಕ್ಕೆ ಕಳಿಸಿದ ವಿಷಯ ವನ್ನು ಹೇಳುತ್ತಾನೆ. ಇದರಿಂದ ಸಿದ್ಧರಾಮನು ಕಲ್ಯಾಣದಲ್ಲಿ ಶಿವಶರಣರ ಮಧ್ಯದಲ್ಲಿದ್ದ ನೆಂದೂ ನಿಜಲಿಂಗಧಾರಿಯಾಗಿದ್ದನೆಂದೂ ತಿಳಿದುಬರುತ್ತದೆ.

ಇನ್ನೊಂದು ವಚನದಲ್ಲಿ ಸ್ಪಷ್ಟವಾಗಿ 'ನಿನ್ನ ಮನದ ಮಧ್ಯದಲ್ಲಿ ಅನಾದಿಚರರೂಪು ಚನ್ನಬಸವೇಶ್ವರ ಸ್ವಾಮಿಗಳೇ ಪ್ರಾಣಲಿಂಗ . . . . . '[೨] ಎಂದು ಸಿದ್ಧರಾಮನನ್ನು ಕುರಿತು ಹೇಳಲಾಗಿದೆ. ಹೀಗೆಯೇ ಡೋಹರ ಕಕ್ಕಯ್ಯನವರ ಒಂದು ವಚನ ಸಿದ್ಧರಾಮೇಶ್ವರ ನನ್ನು ಬಸವಾದಿ ಪ್ರಮಥರ ಮಧ್ಯದಲ್ಲಿರಿಸಿ, ಷಟ್‌ಸ್ಥಲಮಾರ್ಗದಲ್ಲಿ ನೆಲೆಗೊಳಿಸಿ ದುದನ್ನು ತೋರಿಸುತ್ತದೆ.

"ಎನಗೆ ಗುರುಸ್ಥಲವ ತೋಱಿದಾತ ಸಂಗನ ಬಸವಣ್ಣನು;
ಎನಗೆ ಲಿಂಗಸ್ಥಲವ ತೋಱಿದಾತ ಚನ್ನಬಸವಣ್ಣನು;
ಎನಗೆ ಜಂಗಮಸ್ಥಲವ ತೋಱಿದಾತ ಸಿದ್ಧರಾಮಯ್ಯನು;
ಎನಗೆ ಪ್ರಸಾದಿಸ್ಥಲವ ತೋಱಿದಾತ ಬಿಬ್ಬಬಾಚಯ್ಯನು;
ಎನಗೆ ಪ್ರಾಣಲಿಂಗಿಸ್ಥಲವ ತೋಱಿದಾತ ಚಂದಯ್ಯನು;
ಎನಗೆ ಶರಣಸ್ಥಲವ ತೋಱಿದಾತ ಸೊಡ್ಡಳಬಾಚರಸನು;
ಎನಗೆ ಐಕ್ಯಸ್ಥಲವ ತೋಱಿದಾತ ಅಜಗಣ್ಣನು;
ಎನಗೆ ನಿಜಸ್ಥಲವ ತೋಱಿದಾತ ಪ್ರಭುದೇವರು.

---

೧. ತಾಪ್ರ ೩೭, ಪು. ೧೨೦, ವ. ೮.
೨. ವಸಾ ೩, ಪು. ೭೩, ವ. ೧.

**ಇಂತೀ ಸ್ಥಳಗಳ ಕಂಡು, ಏಳನೂಱೆಪ್ಪತ್ತಮರಗಣಂಗಳ ಶ್ರೀಪಾದಕ್ಕೆ ಶರಣೆಂದು ಬದುಕಿದೆನು ಕಾಣಾ, ಅಭಿನವಮಲ್ಲಿಕಾರ್ಜುನಾ."[೧]**

ಇದರಿಂದ ಸಿದ್ಧರಾಮಯ್ಯನು ಶಿವಶರಣರ ಮಧ್ಯದಲ್ಲಿದ್ದುದು, ಇಷ್ಟಲಿಂಗಧಾರಿಯಾಗಿ ಷಟ್‌ಸ್ಥಲಮಾರ್ಗದಲ್ಲಿ ನಿಂದುದು ವ್ಯಕ್ತವಾಗುತ್ತದೆ. ಇದರಂತೆ ಇನ್ನೂ ಅನೇಕ ಜನ ತಮ್ಮ ವಚನಗಳಲ್ಲಿ ಈ ವಿಷಯವನ್ನು ಉಲ್ಲೇಖಿಸಿರುವರು.[೨] ಸಕಲೇಶ ಮಾದರಸರ ಒಂದು ವಚನವೂ ಇದೇ ಸಾಲಿನಲ್ಲಿ ನಿಲ್ಲುತ್ತದೆ. ಅದು ಹೀಗೆ :

**"ಪುರುಷಮೃಗ ಬಂದು ನಿಂದಲ್ಲಿ ಜನ್ಮಭಯವಾಗದೆ ಧರ್ಮಂಗೆ?**
**ಲಿಂಗ ಜಂಗಮ ಭಕ್ತಿ ಪ್ರಜ್ವಲಿಸದೆ ಸಿರಿಯಾಳಂಗೆ?**
**ಪ್ರಸಾದವ ಬಬ್ಬಬಾಚಯ್ಯ ಮೆಱೆಯುತ ಬಪ್ಪಲ್ಲಿ ಅಱಿಯದೆ ನಿಂದಿಸಿದಡೆ ಹಱಿದು ಹತ್ತದೇ ಉರಿಯ ನಾಲಗೆ ಗ್ರಾಮದಿ?**
**ಹರನಿತ್ತ ನಿರೂಪವಿಡಿಸಿದ ಮಾರ್ಗದಲ್ಲಿ ಮಾರಾರಿಯ ಶರಣರು ಬಂದು ನಿಂದಲ್ಲಿ ಅರ್ಥಗೃಹಂಗಳುಳಿಯವೆ?**
**ಸದ್ಯೋಜಾತ ಶರಣ, ಧರೆಯಲ್ಲರಿಯ ನಾಲಗೆ ಅಂಗಣವ ಮೆಟ್ಟಲಾಗದೆಂದಡೆ ಉರಿಯ ಜ್ವಾಲೆಯ ಬಿಟ್ಟಡೆ ಪರಿಹಾರವಾಗದೆ ಕುಂಚಿಗೆಯ ತುದಿಯಲ್ಲಿ?**
**ಪರಮನೊಲಿದ ಶರಣರು ಸ್ವತಂತ್ರ ಮಹಿಮರು ಅದೆಂತೆಂದಡೆ: ಅವರೆಂದಂತೆ ಅಹುದೆನ್ನಲು ಅಂಗದಮೇಲೆ ಲಿಂಗ ಪ್ರತಿಷ್ಠೆಯಾಗದೆ ಶಿವಯೋಗಿ ಸಿದ್ಧರಾಮಯ್ಯಂಗೆ?**
**ಸಕಲ ದುರಿತಂಗಳು ಬಿಟ್ಟೋಡುತ್ತಿದ್ದುವು, ಸಕಳೇಶ್ವರದೇವಾ ನಿಮ್ಮ ಶರಣರ ದೇವತ್ವಕಂಜಿ."[೩]**

---

೧. ಶಾಪ್ರ ೧೧೫, ೨೦೭. ೩೧.

೨. ವಸಾ ೩. ಪು. ೮೭. ವ. ೧೮; ಪು. ೧೮೪. ವ. ೧೦೫; ಪು. ೨೨೧. ವ. ೧೩೮; ಪು. ೨೩೪. ವ. ೩೯.

೩. ಸವಾಪ ೭೨. ಶ್ರೀ. ಫ. ಗು. ಹಳಕಟ್ಟಿಯವರು ಸಂಪಾದಿಸಿದ ಶ್ರೀ ಸಕಲೇಶ ಮಾದರಸರ ವಚನಗಳು ಎಂಬ ಮುದ್ರಿತ ಗ್ರಂಥದಿಂದ ಮೊದಲು ಈ ವಚನವನ್ನು ಗುರುತಿಸಿದವರು ಶ್ರೀ. ಎಸ್. ನಾರಾಯಣ ಶೆಟ್ಟಿ, ಎಂ. ಎ. ಅವರು. ಅದನ್ನು ಬಹಿರಂಗಪಡಿಸಿದವರು ಸಿದ್ಧರಾಮನ ವೀರಶೈವತ್ವದ ಬಗೆಗೆ ಸಂದೇಹವನ್ನೆತ್ತಿದ ಪ್ರೊ. ಡಿ. ಎಲ್. ನರಸಿಂಹಾಚಾರ್. ಎಂ. ಎ. ಅವರು. ಕಳೆದ ಕಾಲುಶತಮಾನದ ವರೆಗೆ ಸಿದ್ಧರಾಮನ ವೀರಶೈವತ್ವವನ್ನು ಉದ್ಘೋಷಿಸುವ ಅನೇಕ ಆಧಾರಗಳನ್ನು ವಚನ ಹಾಗೂ ಕಾವ್ಯಗಳಿಂದ ೩-೪ ಜನ ಸಂಶೋಧಕರು ಎತ್ತಿತೋರಿಸಿದರೂ ಅವನ್ನು ಊಹೆ. ಯುಕ್ತಿವಾದ ಎಂದು ಮುಂತಾಗಿ ಅಲ್ಲಗಳೆದು ಈಗ ಇದೊಂದು ವಚನದ ಆಧಾರದ ಮೇಲಿಂದ ಸಿದ್ಧರಾಮನ ವೀರಶೈವತ್ವವನ್ನು ಒಪ್ಪಿಕೊಂಡುದು ಅತ್ಯಾಶ್ಚರ್ಯಜನಿಸಿದೆ. ಸಿದ್ಧರಾಮೇಶ್ವರನ ವಚನಗಳಲ್ಲಿಯೂ ಲಿಂಗಲೀಲಾವಿಲಾಸಚಾರಿತ್ರ, ಶೂನ್ಯಸಂಪಾದನೆ ಮುಂತಾದ ಮಹತ್ವದ ಗ್ರಂಥಗಳಲ್ಲಿಯೂ ಬರುವ ಏತತ್ಸಂಬಂಧದ ವಚನಗಳಲ್ಲಿ

ಹೀಗೆ ಮಿಕ್ಕ ವಚನಕಾರರೂ ಸಿದ್ಧರಾಮನಿಗೆ ಇಷ್ಟಲಿಂಗೋಪದೇಶವಾದುದನ್ನೂ ಅದು ಚನ್ನಬಸವಣ್ಣನವರಿಂದ ನೆರವೇರಿತೆಂಬುದನ್ನೂ ಸೂಚಿಸಿರುವರು.

ಇದುವರೆಗೆ ಚನ್ನಬಸವಣ್ಣ ಸಿದ್ಧರಾಮಾದಿಗಳ ಸಮಕಾಲೀನ ವಚನಕಾರರ ವಚನಗಳನ್ನು ನೇರವಾಗಿ ಆಧರಿಸಿದರೆ ಇನ್ನುಮುಂದೆ ವಚನದ ಸಂಕಲನ ಗ್ರಂಥಗಳನ್ನು ಅವಲೋಕಿಸಬಹುದು.

ವಚನವಾಙ್ಮಯದಲ್ಲಿ ಲಿಂಗಲೀಲಾವಿಲಾಸ ಚಾರಿತ್ರ, ಶೂನ್ಯಸಂಪಾದನೆ, ಆಚರಣೆಯ ವಚನಗಳು, ಗಣಭಾಷಿತರತ್ನಮಾಲೆ ಮುಂತಾದ ಸಂಕಲನ ಗ್ರಂಥಗಳಿಗೆ ವಿಶಿಷ್ಟ ಸ್ಥಾನವುಂಟು. ಮೂಲ ಆಕರಗಳನ್ನು ಶೋಧಿಸಿ ಒಂದೊಂದು ಸೂತ್ರವನ್ನು ಹಿಡಿದು ಸಂಕಲನಕಾರರು ಆ ವಚನಗಳನ್ನು ಪವಣಿಸಿದರು. ಅಲ್ಲಿ ಬಂದಿರುವ ವಚನಗಳು ಮೂಲ ಆಕರಗಳಿಂದಲೇ ಉದ್ಧೃತವಾಗಿರುವುದರಿಂದ ಅವುಗಳಿಗೆ ವಚನವಾಙ್ಮಯದ ಮೂಲ ಮಾತೃಕೆಗಳ ಬೆಲೆಯನ್ನೇ ಕೊಡಬೇಕಾಗುತ್ತದೆ. ಕೆಲವು ಸಂಕಲನಕಾರರು ಸಂಭಾಷಣೆ, ಸಂವಾದಗಳ ರೂಪದಲ್ಲಿ ವಚನಗಳನ್ನು ಜೋಡಿಸಿದರೆ ಮತ್ತೆ ಕೆಲವರು ಸ್ಥಲಕಟ್ಟಿಗನುಸರಿಸಿ ಅವನ್ನು ಹೊಂದಿಸಿದರು. ಈ ಪ್ರಯತ್ನದಲ್ಲಿ ವಚನಗಳ ಸ್ವರೂಪದಲ್ಲಿ ಅಂದರೆ, ಆದಿಯಲ್ಲಿಯೂ ಮುಕ್ತಾಯದಲ್ಲಿಯೂ ಅವನ್ನು ಹಿಂದು ಮುಂದೆ ಹೊಂದಿಸುವ ಸಂದರ್ಭಕ್ಕನುಗುಣವಾಗಿ ಅಲ್ಲಿ ಸ್ವಲ್ಪ ವ್ಯತ್ಯಾಸ ಕಂಡುಬಂದರೂ ಮೂಲ ಆಶಯದಲ್ಲಿ ಅರ್ಥದಲ್ಲಿ ಯಾವ ಬದಲಾವಣೆಗಳೂ ಆದಂತಿಲ್ಲ. ತಮಗೆ ಹೇಳಬೇಕೆಂದೆನಿಸಿದುದನ್ನು ನಡುವೆ ಗದ್ಯದಲ್ಲಿಯೂ ಟೀಕಿನಲ್ಲಿಯೂ ವಿವರಿಸುವರು. ಆದುದರಿಂದ ಶೂನ್ಯಸಂಪಾದನೆ, ಲಿಂಗಲೀಲಾವಿಲಾಸ ಚಾರಿತ್ರ ಮುಂತಾದ ಗ್ರಂಥಗಳನ್ನು ಮೂಲ ಮಾತೃಕೆಗಳೆಂದು ಪರಿಗ್ರಹಿಸಿ ಸಿದ್ಧರಾಮೇಶ್ವರನಿಗೆ ಚನ್ನಬಸವಣ್ಣನವರು ಲಿಂಗದೀಕ್ಷೆಯನ್ನಿತ್ತ ಸನ್ನಿವೇಶವನ್ನು ಪರೀಕ್ಷಿಸಬಹುದು.

## ಶೂನ್ಯಸಂಪಾದನೆಗಳು

ಶೂನ್ಯಸಂಪಾದನೆಯೆಂಬ ಹೆಸರಿನ ಸಂಕಲನಗಳು ಈಗ ನಾಲ್ಕು ಉಪಲಬ್ಧವಾಗಿವೆ. ಅವು:

(೧) ಶಿವಗಣಪ್ರಸಾದಿ ಮಹಾದೇವಯ್ಯಗಳ ಸಂಪಾದನೆ.

(೨) ಹಲಗೆ ದೇವರ ಸಂಪಾದನೆ.[೧]

---

ಪ್ರಕ್ಷಿಪ್ತವೆಂದು ಗ್ರಹಿಸಿದ ಶ್ರೀಯುತರು ಸಕಲೇಶ ಮಾದರಸರ ಈ ವಚನವನ್ನು ಪ್ರಕ್ಷಿಪ್ತವಲ್ಲವೆನ್ನಲಿಕ್ಕೆ ಏನು ಕಾರಣವಾಯಿತೋ ತಿಳಿಯದಾಗಿದೆ. ಇದು ಜಟಿಲಸಮಸ್ಯೆ ಎಂದು ಭಾವಿಸಿದ ಅವರು ತಾವೇ ಎತ್ತಿದ ಸಂದೇಹಾಂಶಗಳಿಗೆ ಸಮರ್ಪಕವಾದ ಉತ್ತರಕೊಡದೆ ಕೇವಲ ಈ ಒಂದು ವಚನವನ್ನು ಆಧರಿಸಿ ಈ ಸಮಸ್ಯೆಯನ್ನು ಬಗೆಹರಿಸತೊಡಗಿದುದು ಈ ವಾದದಿಂದ ಜಾರಿಕೊಳ್ಳಲು ಪ್ರಯತ್ನಿಸಿದಂತಿದೆ.

೧. . . . . . . ಇದು ಕೆಂಚವೀರಣ್ಣೊಡೆಯಾದಿಗಳು ಸಂಪಾದಿಸಿದ ಸಂಪಾದನೆಯೆಂದು ಮೈಸೂರು ಪ್ರಾಚ್ಯ ಸಂಸ್ಥೆಯವರು ಪ್ರಕಟಿಸಿದ ಕನ್ನಡ ಹಸ್ತಪ್ರತಿಗಳ ಪರಿಚಯಾತ್ಮಕ ಸಂಚಿಕೆಯಲ್ಲಿ ಕಾಣಿಸಲಾಗಿದೆ.

(೩) ಗುಮ್ಮಳಾಪುರ ಸಿದ್ಧಲಿಂಗದೇವರ ಸಂಪಾದನೆ.

(೪) ಗೂಳೂರು ಸಿದ್ಧವೀರಣಾರ್ಯರ ಸಂಪಾದನೆ.

ಇದಲ್ಲದೆ ಇನ್ನೂ ಒಂದು ಸಂಪಾದನೆ ಇರಬಹುದೆಂದು ಗುಮ್ಮಳಾಪುರ ಸಿದ್ಧಲಿಂಗದೇವರ ಶೂನ್ಯಸಂಪಾದನೆಯ ಕೊನೆಯ ಗದ್ಯದಲ್ಲಿ ಬರುವ“ . . . . . .ಕೆಂಚ ವೀರಣ್ಣೊಡೆಯ ದೇವರು ಪುರಾತನರ ವಚನವಿಡಿದು ಸಾವಿರದೇಳುನೂಱು ವಚನಂಗಳಿಂದ ಸಿದ್ಧರಾಮೇಶ್ವರದೇವರಿಗೆ ದೀಕ್ಷಾಕ್ರಮದ ಭೇದವನ್ನು ಪ್ರತಿಷ್ಠಿಸಲು . . . . .” ಎಂಬ ಉದ್ಧರಣೆಯಿಂದ ತಿಳಿದುಬರುತ್ತದೆ. ಗುರು ಹಲಗೆಯಾರ್ಯರ ಶೂನ್ಯಸಂಪಾದನೆಯಲ್ಲಿ ೧೬೦೦ ವಚನಗಳಿದ್ದರೆ, ಕೆಂಚವೀರಣ್ಣೊಡೆಯರು ಮತ್ತೆ ನೂರು ವಚನಗಳನ್ನು ಸೇರಿಸಿ ಇನ್ನೊಂದು ಸಂಪಾದನೆಯನ್ನು ಮಾಡಿದಂತಿದೆ.

ಗುಮ್ಮಳಾಪುರ ಸಿದ್ಧಲಿಂಗದೇವರ ಕಾಲವನ್ನು ಸಹಜವಾಗಿಯೇ ನಿರ್ಣಯಿಸಬಹುದಾಗಿದೆ. ಅವರು ತೋಂಟದ ಸಿದ್ಧಲಿಂಗಯತಿಗಳ ಕಾಲದಲ್ಲಿದ್ದು ಅವರ ಶಿಷ್ಯರಾಗಿ[1] ನಿರಂಜನಪೀಠವನ್ನೇರಿರುವರು. ಸಿದ್ಧಲಿಂಗಯತಿಗಳ ಕಾಲ ಕ್ರಿ. ಶ. ೧೪೮೦.[2] ಆದುದರಿಂದ ಅವರ ಶಿಷ್ಯರಾದ ಗುಮ್ಮಳಾಪುರ ಸಿದ್ಧಲಿಂಗದೇವರ ಕಾಲವನ್ನು ಕ್ರಿ. ಶ. ೧೪೯೦ ಎಂದು ಇಟ್ಟುಕೊಳ್ಳಬಹುದು. ಗೂಳೂರ ಸಿದ್ಧವೀರಣಾರ್ಯರು ತಮ್ಮ ಶೂನ್ಯಸಂಪಾದನೆಯನ್ನು ಗುಮ್ಮಳಾಪುರ ಸಿದ್ಧಲಿಂಗದೇವರ ಶೂನ್ಯಸಂಪಾದನೆಯನ್ನನುಸರಿಸಿಯೇ ಹೇಳಿರುವುದರಿಂದಲೂ ಅವರು ಗುಮ್ಮಳಾಪುರ ಸಿದ್ಧಲಿಂಗದೇವರ ಸಮಕಾಲೀನರಾದ ಬೋಳ ಬಸವಾರ್ಯರ ಸುಜ್ಞಾನ ಪ್ರಸಾದವಿಡಿದು ತಮ್ಮ ಶೂನ್ಯಸಂಪಾದನೆಯನ್ನು ರಚಿಸಿರುವುದರಿಂದಲೂ ಅವರು ತಮ್ಮ ಸಂಪಾದನೆಯನ್ನು ೧೪೯೦ರ ತರುವಾಯ ಸುಮಾರು ೪–೬ ವರ್ಷಗಳ ಮೇಲೆಯೇ ರಚಿಸಿರಬೇಕು. ಅಂದ ಮೇಲೆ ಗೂಳೂರ ಸಿದ್ಧವೀರಣಾರ್ಯರ ಸಂಪಾದನೆ ಕ್ರಿ. ಶ. ೧೪೯೫ರ ಸುಮಾರು ರಚಿತವಾಗಿರಬೇಕು. ಈ ಶೂನ್ಯಸಂಪಾದನೆಗಳಲ್ಲೆಲ್ಲಾ ಮೊತ್ತಮೊದಲನೆಯದು ಶಿವಗಣಪ್ರಸಾದಿ ಮಹಾದೇವಯ್ಯನವರದು. ಇವರು ಕಲ್ಮಠದ ಪ್ರಭುದೇವರ ಕಾಲಕ್ಕಿಂತ ಸ್ವಲ್ಪ ಮುಂಚಿನವರಾಗಿರಬೇಕು. ಏಕೆಂದರೆ ಶಿವಗಣಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆಯಲ್ಲಿ ಸಿದ್ಧರಾಮಯ್ಯ ದೇವರ ದೀಕ್ಷಾಕ್ರಮವಿಲ್ಲದುದರಿಂದ ಅದನ್ನು ಸೇರಿಸಿ ತಾವು ಶೂನ್ಯಸಂಪಾದನೆ ರಚಿಸಿರುವುದಾಗಿ ಇನ್ನುಳಿದ ಮೂವರು ಶೂನ್ಯಸಂಪಾದನೆಕಾರರು ವಾಚ್ಯವಾಗಿ ಹೇಳಿದ್ದರೆ. ಕಲ್ಮಠದ ಪ್ರಭುದೇವರು ಪ್ರಾಯಶಃ ಇದನ್ನು ದೃಷ್ಟಿಯಲ್ಲಿಟ್ಟುಕೊಂಡೇ ತಾವು ಸ್ಥಲಕಟ್ಟಿಗನುಸರಿಸಿ ವಚನಗಳನ್ನು ಸಂಗ್ರಹಿಸುವಲ್ಲಿ ತಟ್ಟನೇ ಗುರುಕಾರುಣ್ಯಸ್ಥಲ ಬಂದೊಡನೆಯೇ ಸಿದ್ಧರಾಮಯ್ಯ ದೇವರ ಪ್ರಸ್ತಾಪವನ್ನೆತ್ತಿ ಅವರ ದೀಕ್ಷಾಕ್ರಮಕ್ಕೆ ಸಂಬಂಧಪಟ್ಟ ವಚನಗಳನ್ನು ಉದ್ಧರಿಸಿರುವರು. ಮಿಕ್ಕ ಸ್ಥಲಗಳಲ್ಲಿ ಎಲ್ಲಿಯೂ ಹೀಗೆ ಮಾಡದೆ ಕೇವಲ ಗುರುಕಾರುಣ್ಯಸ್ಥಲದಲ್ಲಿ ಕೈಕೊಂಡ

---

೧. “ತೋಂಟದ ಸಿದ್ಧೇಶ್ವರನ ವರಪುತ್ರರಾಗಿ ಜಗಹಿತಾರ್ಥವಾಗಿ ಗುಮ್ಮಳಾಪುರ ಸಿದ್ಧಲಿಂಗದೇವರೆಂಬ ನಾಮವಿಡಿದು . . . .” (ಗುಮ್ಮಳಾಪುರ ಸಿದ್ಧಲಿಂಗದೇವರ ಶೂನ್ಯಸಂಪಾದನೆ).

೨. ತೋಂಸಿಪು ಪು. ೨೯.

ಈ ಉಪಕ್ರಮ ನಮ್ಮ, ಮೇಲಿನ ಊಹೆಗೆ ಅವಕಾಶವನ್ನು ಕೊಡುತ್ತದೆ. ಆದುದರಿಂದ ಶಿವಗಣಪ್ರಸಾದಿ ಮಹಾದೇವಯ್ಯಗಳ ಕಾಲ ಕಲ್ಮಠದ ಪ್ರಭುದೇವರ ಕಾಲಕ್ಕಿಂತ ಅಂದರೆ ಕ್ರಿ. ಶ. ೧೪೩೦ಕ್ಕಿಂತ ಹಿಂದೆ ಎಂದು ಇಟ್ಟುಕೊಳ್ಳಬೇಕಾಗುತ್ತದೆ. ಎಷ್ಟು ಹಿಂದೆ ಎಂಬುದೊಂದು ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ೧೫ನೆಯ ಶತಮಾನದಲ್ಲಿ ಪ್ರಾರಂಭದಲ್ಲಿ, ವೀರಶೈವದ ಪುನರುತ್ಥಾನ ಪ್ರೌಢದೇವರಾಯನ ಕಾಲ (ಕ್ರಿ. ಶ. ೧೪೧೯–೧೪೪೬) ದಲ್ಲಿ ಆರಂಭವಾದಂತೆ ಊಹಿಸಬಹುದಾಗಿದೆ. ಪ್ರಭುಲಿಂಗಲೀಲೆ, ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ ಇವು ಪ್ರೌಢದೇವರಾಯನ ಕಾಲದ ಆರಂಭದ ಕೃತಿಗಳೆಂದು ತೋರುತ್ತದೆ. ಹಾಗಿದ್ದರೆ ಶಿವಗಣಪ್ರಸಾದಿ ಮಹಾದೇವಯ್ಯನವರ ಕಾಲವನ್ನು ಸುಮಾರು ಕ್ರಿ. ಶ. ೧೪೨೫ ಎಂದು ಇಟ್ಟುಕೊಳ್ಳಬಹುದು.

ಹಲಗೆದೇವರ ಸಂಪಾದನೆ ಈ ಸಮುದಾಯದಲ್ಲಿ ಎರಡನೆಯದು ಎಂದು ಗುಮ್ಮಳಾಪುರ ಸಿದ್ಧಲಿಂಗದೇವರ ಸಂಪಾದನೆಯ ಕೊನೆಯ ಈ ಗದ್ಯದಿಂದ ಅರಿಯಬಹುದಾಗಿದೆ. ". . . . . ಅಸಂಖ್ಯಾತ ಮಹಾಗಣಂಗಳ ವಚನಂಗಳಿಂದ ಶಿವಗಣಪ್ರಸಾದಿ ಮಹಾದೇವಯ್ಯಗಳು ಶೂನ್ಯಸಂಪಾದನೆಯ ರಚಿಸಲು, ಅಲ್ಲಿ ಸಿದ್ಧರಾಮಯ್ಯ ದೇವರಿಗೆ ದೀಕ್ಷಾಕ್ರಮವಿಲ್ಲದಿರಲು ಇದಕ್ಕೆ ಕೆಂಚವೀರಣ್ಣೊಡೆಯ ದೇವರು ಪುರಾತನರ ವಚನವಿಡಿದು . . . ." ಅಂದರೆ ಕೆಂಚವೀರಣ್ಣೊಡೆಯರ ಸಂಪಾದನೆ ಶಿವಗಣಪ್ರಸಾದಿ ಮಹಾದೇವಯ್ಯಗಳ ಹಾಗೂ ಗುಮ್ಮಳಾಪುರ ಸಿದ್ಧಲಿಂಗದೇವರ ಶೂನ್ಯಸಂಪಾದನೆಗಳ ನಡುವಣ ಅವಧಿಯಲ್ಲಿ (ಕ್ರಿ. ಶ. ೧೪೨೫ರಿಂದ ೧೪೭೦) ರಚಿತವಾಗಿರಬೇಕು. ಗುಮ್ಮಳಾಪುರದವರ ಸಂಪಾದನೆಯ ಹತ್ತಿರದಲ್ಲಿಯೇ ಇದು ಹುಟ್ಟಿಬಂದಿರುವುದು ಹೆಚ್ಚು ಸಂಭವನೀಯ. ಏಕೆಂದರೆ ಈತನ ಗುರು ಹಲಗೆಯಾರ್ಯ. ಹಲಗೆಯಾರ್ಯನ ಶಿಷ್ಯರಲ್ಲೊಬ್ಬ ಗುಬ್ಬಿಯ ಮಲ್ಲಣಾರ್ಯ. ಇವರೆಲ್ಲರೂ ಒಂದೆರಡು ದಶಕಗಳ ಕಾಲಾವಧಿಯಲ್ಲಿ ಇದ್ದವರು. ಮಲ್ಲಣಾರ್ಯರು ಕ್ರಿ. ಶ. ೧೫೧೦ರ ಸುಮಾರು ಜೀವಿಸಿದ್ದರು.[೧] ಆದುದರಿಂದ ಹಲಗೆದೇವರು ಕ್ರಿ. ಶ. ೧೪೪೫ರ ಸುಮಾರು ಜೀವಿಸಿರಬಹುದು.

ಈ ವಿವೇಚನೆಯಿಂದ ಶೂನ್ಯಸಂಪಾದನೆಗಳ ರಚನೆಯ ಕಾಲ ಕೆಳಗಿನಂತೆ ಆದಂತಾಯಿತು :

ಶಿವಗಣಪ್ರಸಾದಿ ಮಹಾದೇವಯ್ಯಗಳ ಸಂಪಾದನೆ ಕ್ರಿ. ಶ. ೧೪೨೫.
ಹಲಗೆದೇವರ ಸಂಪಾದನೆ ಕ್ರಿ. ಶ. ೧೪೪೫.
ಗುಮ್ಮಳಾಪುರ ಸಿದ್ಧಲಿಂಗದೇವರ ಸಂಪಾದನೆ ಕ್ರಿ. ಶ. ೧೪೭೦.
ಗೂಳೂರ ಸಿದ್ಧವೀರಣಾರ್ಯರ ಸಂಪಾದನೆ ಕ್ರಿ. ಶ. ೧೪೭೫.

ಅಂದರೆ, ಈ ಶೂನ್ಯಸಂಪಾದನೆಗಳೆಲ್ಲ ಮುಕ್ಕಾಲು ಶತಮಾನದ ಅವಧಿಯಲ್ಲಿ ರಚಿತವಾಗಿರುವಂತೆ ತೋರುತ್ತದೆ. ಈ ಸಂಪಾದನೆಗಳಲ್ಲಿ ಒಂದೊಂದಕ್ಕೆ ಸಾಮ್ಯವಿದ್ದರೂ, ಆಂತರಿಕ ಭೇದವು ಇದ್ದೇ ಇದೆ. ಇವು ಏಕೆ ಹುಟ್ಟಿದುವೆಂಬುದು, ರಚನಾಕ್ರಮದಲ್ಲಿದ್ದ ವೈಶಿಷ್ಟ್ಯ, ಅವರವರಿಗೆ ದೊರೆತ ಹೆಚ್ಚಿನ ವಚನಸಾಮಗ್ರಿ ಇವುಗಳನ್ನವಲಂಬಿಸಿದೆ. ಈ

೧. ಅವರು ಭಾವಚಿಂತಾರತ್ನವನ್ನು ರಚಿಸಿದ ಕಾಲ ಕ್ರಿ. ಶ. ೧೫೧೩.

ಹಿನ್ನೆಲೆಯಲ್ಲಿ ಸಿದ್ಧರಾಮಯ್ಯನಿಗೆ ಚನ್ನಬಸವೇಶ್ವರರು ಲಿಂಗದೀಕ್ಷೆಯನ್ನು ಕೊಟ್ಟ ವಿಚಾರವನ್ನು ಪರೀಕ್ಷಿಸಬಹುದು.

ಸಿದ್ಧರಾಮಯ್ಯನ ವೀರಶೈವತ್ವವನ್ನು ಅಲ್ಲಗಳೆದು, ಆತನು ಭವಿಯೆಂದು ಪ್ರತಿಪಾದಿಸಿದವರು[೧] ಹೀಗೆ ಹೇಳುವರು: "ಮೊದಲನೆಯ ಸಂಕಲನದಲ್ಲಿ[೨] ಅವನಿಗೆ ದೀಕ್ಷಾ ಕ್ರಮವಿಲ್ಲದ್ದರಿಂದ ಕೆಂಚವೀರಣ್ಣೊಡೆಯನು ೧೬೦೦ ವಚನಗಳನ್ನು ಸಂಕಲಿಸಿ ಸಿದ್ಧರಾಮನಿಗೆ ದೀಕ್ಷೆಯನ್ನು ಪ್ರತಿಷ್ಠಿಸಿದನು. ಇದರಿಂದ ಸಿದ್ಧರಾಮನಿಗೆ ಇಷ್ಟಲಿಂಗವಿರಲಿಲ್ಲವೆಂದೂ ಅವನು ಭವಿಯಾಗಿದ್ದನೆಂದೂ ಸ್ಪಷ್ಟವಾಗಿದೆ."[೩] ಈ ಉದ್ಧರಣೆಯಿಂದ ಮೊದಲನೆಯ ಸಂಪಾದನೆಯ ಕರ್ತೃಗಳಾದ ಶಿವಗಣಪ್ರಸಾದಿ ಮಹಾದೇವಯ್ಯನವರ ದೃಷ್ಟಿಯಲ್ಲಿ ಸಿದ್ಧರಾಮನು ಇಷ್ಟಲಿಂಗವಿಲ್ಲದ ಭವಿಯೆಂದು ಅರ್ಥವಾಗುತ್ತದೆ. ಇದು ಎಷ್ಟರಮಟ್ಟಿಗೆ ನಿಜವೆಂಬುದನ್ನು ಆ ಗ್ರಂಥವನ್ನವಲೋಕಿಸಿಯೇ ನೋಡೋಣ.

ಪ್ರಭುದೇವರು ಮುಕ್ತಾಯಕ್ಕನನ್ನು "ನಿರವಯ ಸಮಾಧಿಯೊಳು ನಿಲಿಸಿ . . . . . ಸಿದ್ಧರಾಮಯ್ಯದೇವರ ದರುಶನವಾಗಬೇಕೆಂಬ ಕೃಪೆಯಿಂ ಸೊನ್ನಲಿಗೆಯ ಪುರಕ್ಕೆ" ಬಿಜಯಂಗೈಯುವನು. ಕೆರೆಕಟ್ಟಿಸುವ ಕಾರ್ಯದಲ್ಲಿ ನಿರತರಾದ ಸಿದ್ಧರಾಮನ ಗುಡ್ಡರನ್ನು ಕಂಡು ಅವರನ್ನು ಕೆಣಕಿ ಸಿದ್ಧರಾಮನನ್ನು ಅಲ್ಲಿಗೆ ತರಬೇಕೆಂಬ ಉದ್ದೇಶದಿಂದ 'ಒಡ್ಡರ ರಾಮಯ್ಯನೇನಾಗಿದ್ದಹ'ನೆಂದು ಕೇಳುವನು. ಗುಡ್ಡರು ಮುನಿದು ಕಲ್ಲುಗುಂಡುಗಳನ್ನೆಸೆದರೆ ಅವು ಪ್ರಭುವನ್ನು ತಾಗದಾಗುವವು. ಕೊನೆಗೆ ಸಿದ್ಧರಾಮನೇ ಬಂದು ಕೋಪದಿಂದ ಉರಿಗಣ್ಣ ತೆರೆಯಲು, ಆ ಜ್ವಾಲೆ ಪ್ರಭುವನ್ನು ಸೋಂಕದೆ ಅಖಂಡ ಬ್ರಹ್ಮಾಂಡವನ್ನೇ ನುಂಗಿ ನೊಣೆಯುತ್ತಿರಲು, ಕರುಣೆಯಿಂದ ಪ್ರಭು, ಆ ಜ್ವಾಲೆಯನ್ನು ತನ್ನ ಶ್ರೀಪಾದದಲ್ಲಿ ಅಡಗಿಸಿಕೊಳ್ಳುವನು. ಸಿದ್ಧರಾಮನು ತನ್ನ ತಪ್ಪಿಗಾಗಿ ಮಮ್ಮಲ ಮರುಗುವನು. ಪ್ರಭುವಿನ ಪಾದಗಳನ್ನು ಕಣ್ಣೀರಿನಿಂದ ತೊಳೆದು ತನ್ನನ್ನು ಉದ್ಧರಿಸಬೇಕೆಂದು ಪ್ರಾರ್ಥಿಸುವನು.

> **'ನಿಮ್ಮ ಕಂಡಬಳಿಕಲಿನ್ನು ಕರ್ಮವುಂಟೇ? . . .'[೪]**
> **'ಎನ್ನ ಕರ್ಮಬಂಧನ ಬಿಡುವಂತೆ ಮಾಡಯ್ಯಾ . . .'[೫]**
> **'ಎನ್ನ ಅಂತರಂಗದಲುಳ್ಳ ಅವಗುಣವ ಹೋಗಿಸಿ ನಿನ್ನಂತೆ ಮಾಡಿದಡೆ**
> **ಆನು ಉಳಿವೆನಲ್ಲದಡೆ ಬೇಱೆ ಗತಿಯ ಕಾಣೆ ನೋಡಯ್ಯಾ . . .'[೬]**

ಎಂದು ಮುಂತಾಗಿ ಅನನ್ಯಭಾವನೆಯಿಂದ ಸಿದ್ಧರಾಮಯ್ಯನು ಪ್ರಾರ್ಥಿಸುವಲ್ಲಿ ತನ್ನ ಭವಿತನವನ್ನು ನೀಗಿಕೊಳ್ಳಬೇಕೆಂಬ ಅಪೇಕ್ಷೆಯನ್ನು ವ್ಯಕ್ತಪಡಿಸುವನು. ಇದೇ ಸಂದರ್ಭ

---

೧. ಶ್ರೀ. ಡಿ. ಎಲ್. ನರಸಿಂಹಾಚಾರ್.
೨. ಶಿಪ್ರಮುಶೂಸಂ.
೩. ಶ್ರೀ. ಡಿ. ಎಲ್. ಎನ್., ಸಿಚಾ. ಪ್ರಸ್ತಾವನೆ, ಪುಟ v.
೪. ಶಿಪ್ರಮುಶೂಸಂ. ಪು. ೩೯; ಪಶೂಸಂ. ಪು. ೫೮. ಗುಶೂಸಂ. ಪು. ೩೯; ಶೂಸಂ. ಪು. ೫೦
೫. ಶಿಪ್ರಮುಶೂಸಂ. ಪು. ೩೯; ಪಶೂಸಂ. ಗುಶೂಸಂ. ಪು. ೩೯; ಶೂಸಂ. ಪು. ೫೦.
೬. ಶಿಪ್ರಮುಶೂಸಂ. ಪು. ೪೭; ಪಶೂಸಂ. ಗುಶೂಸಂ. ಪು. ೪೪; ಶೂಸಂ. ಪು. ೬೦.

ದಲ್ಲಿ ಬರುವ ಕೆಳಗಣ ವಚನದಲ್ಲಿ ತನುತ್ರಯುಗಳಲ್ಲಿ ಲಿಂಗತ್ರಯವನ್ನು ಅಳವಡಿಸಿಕೊಳ್ಳ ಬೇಕೆಂಬ ಸಿದ್ಧರಾಮನ ಬಯಕೆಯೂ ಧ್ವನಿತವಾಗುತ್ತದೆ.

> "ಕಾಣಬಾರದ ಘನವ ಕಾಯುದಲ್ಲಿರಿಸಿ,
> ಹೇಳಬಾರದ ನಿಜವ ಮನದಲ್ಲಿ ನೆಲೆಗೊಳಿಸಿ,
> ತೋಱಬಾರದ ಕುಱುಹ ಎನ್ನ ಅಱಿವಿನಲ್ಲಿ ಇರಿಸಿ
> ನಿಮ್ಮ ಕಾಬಂತೆ ಮಾಡಾ ಕಪಿಲಸಿದ್ಧಮಲ್ಲಿಕಾರ್ಜುನಾ."[೧]

ಸಿದ್ಧರಾಮಯ್ಯದೇವರು ಪ್ರಭುದೇವರನ್ನು ಕುರಿತು ಪ್ರಾರ್ಥಿಸುವ ಈ ವಚನದಲ್ಲಿ ಇಷ್ಟ ಪ್ರಾಣ ಭಾವಲಿಂಗಗಳ ಕಲ್ಪನೆ ಇದೆಯೆಂದು ಸ್ಪಷ್ಟವಾಗಿ ಹೇಳಬಯಸುತ್ತೇವೆ. ಕಾಯಂದಲ್ಲಿರಿಸಬೇಕೆಂದು ಕೋರುವ ಕಾಣಬಾರದ ಘನವು, ಸ್ಥೂಲತನುವಿಗೆ ಸಂಬಂಧಪಟ್ಟ ಇಷ್ಟಲಿಂಗ; ಮನದಲ್ಲಿ ನೆಲೆಗೊಳಿಸಬೇಕೆಂದು ಕೇಳುವ ಹೇಳಬಾರದ ನಿಜವು. ಸೂಕ್ಷ್ಮ ತನುವಿಗೆ ಸಂಬಂಧಪಟ್ಟ ಪ್ರಾಣಲಿಂಗ; ಅರಿವಿನಲ್ಲಿ ಇರಿಸಬೇಕೆಂದು ಬಿನ್ನವಿಸುವ ತೋರ ಬಾರದ ಕುರುಹು, ಕಾರಣತನುವಿಗೆ ಸಂಬಂಭಪಟ್ಟ ಭಾವಲಿಂಗ. ಹೀಗೆ ಇಷ್ಟ ಪ್ರಾಣ ಭಾವಲಿಂಗಗಳನ್ನು ಪ್ರಭುವಿನ ಕರುಣೆಯಿಂದ ಪಡೆಯಬೇಕೆಂದು ಸಿದ್ಧರಾಮನು ತನ್ನ ಅಭೀಪ್ಸೆಯನ್ನು ವ್ಯಕ್ತಪಡಿಸುವನು. ಮುಂದೆ ಪ್ರಭುದೇವರ ಕರಸ್ಥಲದ ಲಿಂಗದ ಆದ್ಯಂತಮಂ[೨] ಆತನು ಕೇಳಿಯೇಬಿಡುವನು.

> "ಅಯ್ಯಾ, ಸರವುಂಡ ಸಬುದವೆನ್ನ ಮನಕ್ಕೆ ವೇದ್ಯವಾಯಿತ್ತು,
> ನಿಮ್ಮ ನಿಜವುಂಡ ನಿರ್ಣಯುವೆನ್ನ ಮತಿಗೆ ವೇದ್ಯವಾಯಿತ್ತು,
> ನಿಮ್ಮ ಕರುಣಪ್ರಸಾದವೆನ್ನ ಸರ್ವಾಂಗವೇದ್ಯವಾಯಿತ್ತು,
> ನಿಮ್ಮ ಕಾಯುವಿಡಿದಿಪ್ಪ, ಕರಸ್ಥಲದ ಕಾರಣವ ಹೇಳಾ
> ಕಪಿಲಸಿದ್ಧಮಲ್ಲಿನಾಥಾ . . . ."[೩]

ಹೀಗೆ ಕಾಯಂವಿಡಿದಿಪ್ಪ ಕರಸ್ಥಲದ ಇಷ್ಟಲಿಂಗದ ಕಾರಣವನ್ನು ಬೆಸಗೊಂಡ ಸಿದ್ಧರಾಮನು "ಇಷ್ಟಲಿಂಗವಿಡಿದು ನಿಜಲಿಂಗೈಕ್ಯವ ಕಾಬ ಪರಿ ಹೇಗೆ?"[೪] ಎಂದು ಪ್ರಾರ್ಥಿಸುವನು. ಆತನ ಪ್ರಾರ್ಥನೆಯನ್ನು ಮನ್ನಿಸಿ "ಕುಱುಹುವಿಡಿದು ನಿರವಯಲಿಂಗವ ಕಾಬ ಪರಿ" ಯನ್ನು[೫] ವಿವರಿಸಲು ಸಿದ್ಧರಾಮಯ್ಯದೇವರು ಪರಮ ಹರುಷಿತರಾಗಿ "ಆ ಕರಸ್ಥಲದ ಲಿಂಗದಲ್ಲಿ ಆತನಿಪ್ಪ ಸ್ಥಳನಿರ್ದೇಶವೆಷ್ಟು ಭೇದ"[೬] ಎಂಬುದನ್ನು ತಿಳಿಸಬೇಕೆಂದು—

---

೧. ಶಿಪ್ರಮಶೂಸಂ. ಪು. ೫೧; ಹಶೂಸಂ. ಪು. ೭೦; ಗುಶೂಸಂ. ಪು. ೪೮; ಶೂಸಂ. ಪು. ೬೮.

೨. ಶಿಪ್ರಮಶೂಸಂ. ಪು. ೫೮; ಹಶೂಸಂ. ಪು. ೯೧; ಗುಶೂಸಂ. ಪು. ೫೩; ಶೂಸಂ. ಪು. ೭೭.

೩. ಶಿಪ್ರಮಶೂಸಂ. ಪು. ೫೮; ಹಶೂಸಂ. ಪು. ೯೧; ಗುಶೂಸಂ. ಪು. ೫೩; ಶೂಸಂ. ಪು. ೭೭.

೪. ಶಿಪ್ರಮಶೂಸಂ. ಪು. ೫೮; ಹಶೂಸಂ. ಪು. ೯೧; ಗುಶೂಸಂ. ಪು. ೫೪; ಶೂಸಂ. ಪು. ೭೮.

೫. ಶಿಪ್ರಮಶೂಸಂ. ಪು. ೫೯; ಹಶೂಸಂ. ಪು. ೯೧; ಗುಶೂಸಂ. ಪು. ೫೪; ಶೂಸಂ. ಪು. ೭೮.

೬. ಶಿಪ್ರಮಶೂಸಂ. ಪು. ೫೯; ಹಶೂಸಂ. ಪು. ೯೧; ಗುಶೂಸಂ. ಪು. ೫೪; ಶೂಸಂ. ಪು. ೭೮.

**“ಅಯ್ಯಾ, ನಿಮ್ಮ ಕರಸ್ಥಳದ ಘನವನು ಉಪಮಿಸಬಲ್ಲವರಿಲ್ಲ**
**ಅಯ್ಯಾ, ನಿಮ್ಮ ಮಹಿಮೆಯನರಿವರೆ ನಾನೇತರೊಳಗೇನಯ್ಯಾ!**
**ಅಯ್ಯಾ, ಇಷ್ಟಲಿಂಗವ ಮುಟ್ಟಿದ ಶರಣನೊಳಗೆ ಹುಟ್ಟಿದ**
**ಸ್ಥಳವೆಷ್ಟೆಂಬುದ ತಿಳುಹಿ ಎನ್ನನುಳುಹಿಕೊಳ್ಳಾ ಕಪಿಲಸಿದ್ಧಮಲ್ಲಿಕಾರ್ಜುನಾ.”**[೧]

ಹೀಗೆಂದು ಸಿದ್ಧರಾಮಯ್ಯದೇವರು ಇಷ್ಟಲಿಂಗದೊಳಗಣ ಸೂಕ್ಷ್ಮಭೇದಮಂ ಕೇಳಲು ಪ್ರಭುದೇವರು “ಈ ಸೂಕ್ಷ್ಮದ ಸ್ಥಿತಿಗತಿಯ ಸಂಗನಬಸವಣ್ಣ ಬಲ್ಲನು. ಆತನ ಕೈಯಲಿ ನಿನಗೆ ತಿಳಿಹಿಕೊಡಿಸಿಹೆನು, ನಡೆ” ಎಂದು ನುಡಿವನು.

ಇದುವರೆಗೆ ಉದ್ಧರಿಸಿದ ವಚನಗಳೂ ಗದ್ಯಭಾಗಗಳೂ ಶಿವಗಣಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆಯಿಂದ ಎತ್ತಿಕೊಂಡುವು.[೨] ಇಲ್ಲಿ ನಿರೂಪಿತನಾದ ಸಿದ್ಧರಾಮನು ಇಂತಿರುವನು:

೧. ಕರ್ಮಬಂಧನದಲ್ಲಿ ಸಿಲುಕಿ, ಅದಕ್ಕೆ ಪೋಷಕವಾಗುವ ಲಿಂಗಪ್ರತಿಷ್ಠಾಪನಕಾರ್ಯದಲ್ಲಿ ನಿರತನಾಗಿರುವನು.

೨. ಪ್ರಭುಸಂದರ್ಶನದಿಂದ ಪುನೀತನಾದ ಸಿದ್ಧರಾಮನು ಕರ್ಮಪಾಶದಿಂದ ಬಿಡುಗಡೆಹೊಂದುವ ಮಾರ್ಗವನ್ನು ತೋರಿಸಬೇಕೆಂದು ಪ್ರಾರ್ಥಿಸುವನು.

೩. ಇಷ್ಟಲಿಂಗದಿಂದಲ್ಲದೆ ಕರ್ಮ ನಷ್ಟವಾಗದೆಂದು ಹೇಳಿದ ಪ್ರಭುವಿನ ಉಪದೇಶಕ್ಕೆ ಒಪ್ಪಿ “ಇಷ್ಟಲಿಂಗವ ಮುಟ್ಟಿದ ಶರಣನೊಳಗೆ ಹುಟ್ಟಿದ ಸ್ಥಳವೆಷ್ಟೆಂದು” (ಅಂದರೆ ‘ಷಟ್‌ಸ್ಥಳ’ಗಳನ್ನು) ತಿಳುಹಿ ಎನ್ನನುಳುಹಿಕೊಳ್ಳಬೇಕೆಂದು ಪ್ರಾರ್ಥಿಸುವನು.

೪. ಇಷ್ಟಲಿಂಗದ ಸೂಕ್ಷ್ಮಭೇದವ ಕಲ್ಯಾಣದಲ್ಲಿದ್ದ ಬಸವಣ್ಣ ಬಲ್ಲ. ಆತನ ಕೈಯಲಿ ತಿಳಿಸಿಕೊಡುವೆನೆಂದು ಪ್ರಭುದೇವರು ಹೇಳಲು. ಅದನ್ನು ಒಪ್ಪಿ, ಭಕ್ತ್ಯುದ್ರೇಕದಿಂದ ಬಸವಣ್ಣನವರನ್ನು ಕಾಣಲು ಪ್ರಭುವಿನೊಡನೆ ಕಲ್ಯಾಣದತ್ತ ಅಭಿಮುಖನಾಗಿ ಹೊರಡುವನು.

ಶಿವಗಣಪ್ರಸಾದಿ ಮಹಾದೇವಯ್ಯನವರ ಈ ನಿರೂಪಣೆಯಿಂದ ಇಷ್ಟಲಿಂಗೋಪದೇಶವನ್ನು ಪಡೆದು ಉದ್ಧಾರವಾಗಬೇಕೆಂಬ ದೃಷ್ಟಿಯಿಂದ ಸಿದ್ಧರಾಮನು ಕಲ್ಯಾಣಕ್ಕೆ ಹೋದನೆಂಬುದು ಸ್ಪಷ್ಟವಾಗುತ್ತದೆ. ಕಲ್ಯಾಣವನ್ನು ಕಾಣುತ್ತಲೇ

**‘ನಿಮ್ಮ ಶರಣರು ಮೆಟ್ಟಿನಿಂದ ಧರೆ ಪಾವನವೆಂಬುದು**
**ಇಂದೆನಗೆ ಅರಿಯಬಂದಿತ್ತಯ್ಯಾ’**[೩]

---

೧. ಶಿಪ್ರಮಶೂಸಂ. ಪು. ೫೯; ಹ.ಶೂಸಂ. ಪು. ೯೧; ಗುಶೂಸಂ. ಪು. ೫೪; ಶೂಸಂ. ಪು. ೭೮.
೨. ಇವು ಮಿಕ್ಕ ಮೂರೂ ಶೂನ್ಯಸಂಪಾದನೆಗಳಲ್ಲಿ ಇದೇ ಕ್ರಮದಲ್ಲಿ ಇದೇ ಅರ್ಥದಲ್ಲಿ ಹೀಗೆಯೇ ಬಂದಿವೆ.
೩. ಶಿಪ್ರಮಶೂಸಂ. ಪು. ೭೩.

ಎಂದು ಶರಣರ ಮಹಿಮೆಯನ್ನು ಕೊಂಡಾಡುವನು. ಮಹಾಮನೆಯನ್ನು ಕಂಡೊಡನೆಯೇ ಸಿದ್ಧರಾಮನ ಬಾಯಿಂದ ಬರುವ ಉದ್ಗಾರಗಳನ್ನು ಕೇಳಬೇಕು:

**'ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರೂ ನಿಜಲಿಂಗಪದವಂ ಪಡೆದರು.**
**ಆ ಗೃಹವ ನೋಡಬೇಕೆಂದು ಹಲವು ಕಾಲ ತಪಿಸಿದ್ದೆನು.'**[೧]

ಹಲವು ಕಾಲ ತಪಿಸಿದ್ದರ ಫಲದಿಂದ ಈಗ ಮಹಮನೆಯನ್ನು ಹೊಕ್ಕು ನಿಜಲಿಂಗ ಪದವನ್ನು ಪಡೆಯಬೇಕೆಂದು ಸಿದ್ಧರಾಮನ ಆಶಯ. ಪ್ರಭುವಿನೊಡನೆ ಆಗಮಿಸಿದ ಸಿದ್ಧರಾಮನು ಶರಣಸಂದೋಹದ ಸಮಸ್ತ ಕಾರ್ಯಕಲಾಪಗಳನ್ನೂ ಆಸ್ಥೆಯಿಂದ ನಿರೀಕ್ಷಿಸುತ್ತಿರುವನು. ಅವರ ಅನುಭಾವಗೋಷ್ಠಿಯಲ್ಲಿ ತಾನೂ ಭಾಗವಹಿಸುವನು.

"ಮಡಿವಾಳ ತಂದೆಗಳೂ ಚಿಕ್ಕದಣ್ಣಾಯಕರೂ ಮಹಾನುಭಾವಗೋಷ್ಠಿಯ ಮಾಡುತ್ತಿರಲು ಆ ಪ್ರಸ್ತಾವದಲ್ಲಿ ಸಿದ್ಧರಾಮತಂದೆಗಳು ಪರಮಹರುಷಿತರಾಗಿ" ಹೀಗೆ ನುಡಿವರು:

**"ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಅಳಿವುದಯ್ಯಾ;**
**ಶರಣರು ಶರಣರು ಮಹಾನುಭಾವಗೋಷ್ಠಿಯ ಮಾಡುವಲ್ಲಿ,**
**ಸಂಗದೊಳಗಿದ್ದವರ ಅಜ್ಞಾನವಳಿದು ನಿಜವನೈದುವರಯ್ಯಾ!**
**ನಿಮ್ಮ ಮಹಾನುಭಾವರ ಸೋಂಕಿನ ಸೆರಗಿನೊಳಗಿದ್ದು**
**ನಾನು ಪರಮಸುಖಿಯಾಗಿ ಮಡಿವಾಳನ ಪಾದದಲ್ಲಿದ್ದು ಮಗ್ನನಾದೆನು ಕಾಣಾ,**
**ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನಾ."**[೨]

ಸಿದ್ಧರಾಮನು ಈಗ ಶರಣಸಂಗದ ಸೋಂಕಿನಲ್ಲಿ ಪರಮ ಹರುಷಿತನಾಗಿದ್ದಾನೆ. ಆ ಸತ್ಸಂಗದಲ್ಲಿ ತನ್ನ ಅಜ್ಞಾನತಿಮಿರ ಹರಿದುಹೋಗಿದೆಯೆಂಬ ಭಾವನೆಯೂ ಅವನಿಗುಂಟಾಗಿದೆ. ಇಷ್ಟಲಿಂಗವನ್ನು ಕೋರಿ, ಕಲ್ಯಾಣದತ್ತ ಬಂದ ಸಿದ್ಧರಾಮನು ಈಗ ಶರಣ ಸಂಗಮಾತ್ರದಿಂದಲೇ ತೃಪ್ತನಾದಂತೆ ತೋರುತ್ತದೆ. ಇದರ ಇಂಗಿತವನ್ನರಿತು ಚನ್ನಬಸವೇಶ್ವರಾದಿಗಳು ಸಿದ್ಧರಾಮನ ಇಷ್ಟಲಿಂಗದ ಪ್ರಶ್ನೆಯನ್ನು ಎತ್ತಿಯೇ ಬಿಡುವರು. 'ಚನ್ನಬಸವಣ್ಣನವರು ಸಿದ್ಧರಾಮದೇವರ ಅಂತಃಸ್ಥಿತಿಯನೊರೆದು ನೋಡಲೆಂದು'[೩] ಹೀಗೆ ಪ್ರಸ್ತಾಪಿಸುವರು:

**"ಅಂಗದಲ್ಲಿ ಲಿಂಗವಿಲ್ಲದನ್ನಕ್ಕರ**
**ಪ್ರಾಣದಲ್ಲಿ ಲಿಂಗದ ಪರಿಣಾಮವೆಂತಪ್ಪುದಯ್ಯಾ?**
**ಅಂಗತ್ರಯವುಳ್ಳವರು ಲಿಂಗತ್ರಯಸಂಪನ್ನರಾಗಬೇಕು;**
**ಒಂದೊಂದಂಗ ವಿರಹಿತರಾಗಿಪ್ಪರುಂಟೇ?**
**ಕಂಗಳ ನೋಟಕ್ಕೆ ಇಂಬಾವುದು ಹೇಳಾ.**

---

೧. ಶಿಪ್ರಮಶೂಸಂ. ಪು. ೧೬೨. ೨. ಶಿಪ್ರಮಶೂಸಂ. ವ. ೫೮೯.
೩. ಶಿಪ್ರಮಶೂಸಂ. ವ. ೫೮೯ ಗದ್ಯ.

**ಒಂದ ಬಿಟ್ಟು ಒಂದು ತೋಱದಾಗಿ, ಸಂದುಭೇದವಿಲ್ಲದಿಪ್ಪ ಮಡಿವಾಳನ ನಿಲವು,**
**ಕೂಡಲಚನ್ನಸಂಗಯ್ಯನಲ್ಲಿ**
**ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯಾ?"[೧]**

ಇಲ್ಲಿ ಚನ್ನಬಸವಣ್ಣನವರು ಇಷ್ಟಲಿಂಗದ ಸೂಕ್ಷ್ಮಪ್ರಶ್ನೆಯನ್ನೇ ಎತ್ತುವರು. ಅಂಗ-ತ್ರಯಗಳು ಇರುವಲ್ಲಿ ಒಂದು ಇನ್ನೊಂದರಿಂದ ತಾತ್ವಿಕವಾಗಿ ಭಿನ್ನವಲ್ಲ. ಸ್ಥೂಲತನುವಿನ ಅವ್ಯಕ್ತರೂಪ ಮನಸ್ಸು; ಮನಸ್ಸಿನ ಸೂಕ್ಷ್ಮರೂಪ ಭಾವ. ಹೀಗೆ ಒಂದೇ ವಸ್ತು ಭಾವ ಮನಸ್ಸು ದೇಹವೆಂದು ತ್ರಿವಿಧವಾಗಿದೆ. ಪ್ರಾಣವೇ ಲಿಂಗವಾಗಿದೆಯೆಂದು ಹೇಳುವ ಸಿದ್ಧರಾಮನ ಇಷ್ಟದಲ್ಲಿ ಲಿಂಗವಿಲ್ಲ. ಅನುಭಾವದಲ್ಲಿ ಇಷ್ಟದಿಂದ ಪ್ರಾಣಕ್ಕೆ. ಪ್ರಾಣದಿಂದ ಭಾವಕ್ಕೆ, ಭಾವದಿಂದ ಆತ್ಮಕ್ಕೆ ಮುಟ್ಟಬೇಕಾಗುತ್ತದೆ; ಇಷ್ಟವು ಲಿಂಗವಿರಹಿತಭವಿಯಾಗಿ ಇರುವ ಪ್ರಸಂಗದಲ್ಲಿ ಅಲ್ಲಿಂದ ಪ್ರಾಣಕ್ಕೆ ಹೋಗುವ ಅನುಭಾವಗಳು ಲಿಂಗದ ಪರಿಣಾಮವಾಗಲಾರವು. ಇದನ್ನೇ ಚನ್ನಬಸವಣ್ಣನವರು "ಅಂಗದಲ್ಲಿ ಲಿಂಗವಿಲ್ಲದನ್ನಕ್ಕರ ಪ್ರಾಣದಲ್ಲಿ ಲಿಂಗದ ಪರಿಣಾಮವೆಂತಪ್ಪುದೆ"ಂದು ಕೇಳುವರು. ಸಿದ್ಧರಾಮನಿಗೆ ಶರಣಸಂಗದಲ್ಲಿ ಉಂಟಾದ ಪರಿಣಾಮ, ಲಿಂಗಪ್ರಸಾದವಿಲ್ಲವೆಂದು ಚನ್ನಬಸವಣ್ಣನವರ ಸಿದ್ಧಾಂತ. ಲಿಂಗಪ್ರಸಾದವನ್ನನುಭವಿಸುವ ಮಡಿವಾಳಯ್ಯನ ತ್ರಿವಿಧದಲ್ಲಿ ಸಂದಿಲ್ಲದಂತೆ ಲಿಂಗಗಳು ನೆಲೆಗೊಂಡಿವೆ. ಸಿದ್ಧರಾಮನಿಗಾದರೋ ಆ ಸಂದು ಇನ್ನೂ ಉಳಿದಿದೆ. ಆ ಸಂದು ಬೆಸುಗೆಯಾಗಲು ಇಷ್ಟಲಿಂಗ ಬೇಕೆಂದು ಚನ್ನಬಸವಣ್ಣನವರ ಮತ. ಸಿದ್ಧರಾಮನು ಇಷ್ಟಕ್ಕೇ ಅವರ ಸಿದ್ಧಾಂತವನ್ನೊಪ್ಪಿಕೊಳ್ಳುವುದಿಲ್ಲ.

**"ತನುವುಂಟೆಂಬ ಭಾವ ಮನದಲ್ಲಿ ಇಲ್ಲವಯ್ಯಾ.**
**ಮನವುಂಟೆಂಬ ಭಾವ ಭಾವದಲ್ಲಿ ಇಲ್ಲವಯ್ಯಾ.**
**ಅಱಿವುಂಟೆಂಬ ಭಾವ ನುಡಿಯೊಳಗಿಲ್ಲವಯ್ಯಾ.**
**ಇಂತು ತನು ಮನ ಭಾವವೆಂಬ ತ್ರಿವಿಧವೂ ಏಕಾರ್ಥವಾದ ಬಳಿಕ,**
**ಆವ ತನುವಿನ ಮೇಲೆ ಸ್ವಾಯತವ ಮಾಡುವೆನು?**
**ಎನ್ನ ಕಾಯವೇ ಬಸವಣ್ಣ, ಎನ್ನ ಪ್ರಾಣಲಿಂಗವೇ ಪ್ರಭುದೇವರು!**
**ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಒಳಹೊಱಗೆಂಬುದಿಲ್ಲ ಕಾಣಾ,**
**ಚನ್ನಬಸವಣ್ಣಾ."**

ಸಿದ್ಧರಾಮನು ಒಳಹೊರಗೆಂಬ ಉಭಯವನ್ನಳಿದಿರುವೆನೆಂದು ತನ್ನ ಸ್ಥಿತಿಯನ್ನು ತಿಳಿಸುವನು. ಆತನಿಗೆ ತನು ಉಂಟು, ಮನ ಉಂಟು ಎಂದು ಪರಿಗ್ರಹಿಸುವ ವೃತ್ತಿಜ್ಞಾನ-ವಳಿದಿದೆ. ಆತನ ತನು ಬಸವಣ್ಣನ ರೂಪಾಗಿದೆ: ಅಂದರೆ ಸತ್‍ಸ್ವರೂಪವಾಗಿದೆ: ಆತನ ಪ್ರಾಣ ಪ್ರಭುಸ್ವರೂಪವಾಗಿದೆ: ಚಿತ್ತು ಲಿಂಗಸ್ವರೂಪವಾಗಿದೆ. ಹೀಗೆ ತನು ಉಂಟೆಂಬ ಭಾವನೆಯೇ ಇಲ್ಲದಮೇಲೆ ಇಷ್ಟಲಿಂಗಧಾರಣೆಮಾಡುವುದು ಯಾವ ತನುವಿನಲ್ಲಿ? ಎಂದು ಅಷ್ಟೇ ಸೂಕ್ಷ್ಮ ಪ್ರಶ್ನೆ ಮಾಡುವನು. ಇದಕ್ಕೆ ಚನ್ನಬಸವಣ್ಣನವರು—'ಇಲ್ಲ' 'ಉಂಟು'

೧. ಶಿಪ್ರಮಶೂಸಂ. ವ. ೫೯೦ ಗದ್ಯ.

ಎಂಬಿವುಗಳ ತಾತ್ವಿಕಸ್ವರೂಪವನ್ನೇ ಬಿಚ್ಚಿ ತೋರಿಸುವರು. ಇಲ್ಲ ಎಂಬುದು ಉಂಟು ಎಂಬುದರ ಇನ್ನೊಂದು ರೂಪ. ಇಲ್ಲವೆಂದು ಹೇಳಬೇಕಾದರೆ, ಉಂಟು ಎಂಬುದೊಂದು ಇರಬೇಕಾಗುತ್ತದೆ. ಆ ಉಂಟೆಂಬುದರ ಮರವೆಯೆ ಇಲ್ಲ ಎಂಬುದು. ಆದುದರಿಂದ ಲಿಂಗವಿಲ್ಲವೆಂದು ಹೇಳಿದ ಸಿದ್ಧರಾಮನ ಮಾತಿನಲ್ಲಿಯೇ ಉಂಟೆಂಬುದರ ಅಸ್ತಿತ್ವವನ್ನು ಚನ್ನಬಸವಣ್ಣನವರು ತೋರಿಸಿಕೊಡುವರು. ಬೆಳಗು ಬೆಳಗು ಹಳಚುವ ಈ ಪ್ರಸಂಗ ದಲ್ಲಿ ಸಿದ್ಧರಾಮಯ್ಯದೇವರ ಸಂದೇಹ ನಿರಸನವಾಗುತ್ತದೆ. ಪ್ರಭುದೇವರು ಕರಸ್ಥಳದ ಇಷ್ಟಲಿಂಗವನ್ನು ಸಾಧಿಸಿದ, ತನ್ಮೂಲಕ ಅವರಿಗೆ ಪ್ರಾಣಲಿಂಗವೇದ್ಯವಾದ ಪರಿಯನ್ನು ವಿವರಿಸಬೇಕೆಂದು ಸಿದ್ಧರಾಮದೇವರು ಪ್ರಭುವನ್ನು ಹೀಗೆ ಪ್ರಾರ್ಥಿಸುವರು:

**"ಕಾಯ ಲಿಂಗವೋ, ಕಾಯದಲ್ಲಿ ಸಾಧಿಸಿಪ್ಪ ಲಿಂಗ ಲಿಂಗವೋ?**
**ಪ್ರಾಣ ಲಿಂಗವೋ, ಪ್ರಾಣದಲ್ಲಿ ಸಾಧಿಸಿಪ್ಪ ಲಿಂಗ ಲಿಂಗವೋ?**
**ಜ್ಞಾನ ಲಿಂಗವೋ, ಜ್ಞಾನದ ಮೊನೆಯ ಮೇಲೆ ತೋಱುವ**
**ಬೆಳಗು ಲಿಂಗವೋ?**
**ಲಿಂಗ ಪ್ರಾಣವೋ, ಪ್ರಾಣ ಲಿಂಗವೋ ಎಂಬುದನಱಿಯೆನು.**
**ನಿಮ್ಮ ಕಾಯದ ಕರಸ್ಥಳವ ಸಾಧಿಸಿದ ಲಿಂಗ**
**ಪ್ರಾಣದೊಳು ವೇದ್ಯವಾದ ಪರಿಯ ಹೇಳಾ,**
**ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನಾ."**[೧]

ಕರಸ್ಥಲದಲ್ಲಿ ಇಷ್ಟಲಿಂಗವನ್ನು, ಪ್ರಾಣದಲ್ಲಿ ಪ್ರಾಣಲಿಂಗವನ್ನು ನೀವು ಸಾಧಿಸಿದ ಪರಿ-ಯೆಂತೆಂದು ಸಿದ್ಧರಾಮನು ಕೇಳಲು, ಪ್ರಭುದೇವರು ಅದರ ಸಂಬಂಧವನ್ನು ವಿವರವಾಗಿ ತಿಳಿಸುವರು. ಆಗ ಸಿದ್ಧರಾಮನು ಪ್ರಭುದೇವರ ಲಿಂಗಾಂಗಸಾಮರಸ್ಯವನ್ನು ಕಂಡು ಪರಮ ಹರುಷಿತನಾಗಿ ಸ್ತುತಿಸುವನು. ಹೀಗೆ ಶರಣವೃಂದವನ್ನು ಸ್ತುತಿಸುವ ಸನ್ನಿವೇಶ ದಲ್ಲಿ ಸಿದ್ಧರಾಮಯ್ಯನು ಚನ್ನಬಸವಣ್ಣನವರನ್ನು ಸ್ತುತಿಸುವ ಮಾರ್ಮಿಕವಾದ ವಚನ ವೊಂದು ಶಿವಗಣಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆಯಲ್ಲಿ ಉಕ್ತವಾಗಿದೆ:

**"ಅಯ್ಯಾ, ಮೂಱು ಪುರದ ಮೇಲುಪ್ಪರಿಗೆಯ ಕೆಲಸವನೇನೆಂಬೆನಯ್ಯಾ,**
**ಮುತ್ತಿನ ಕಳಸದ ಮೇಲೆ ಒಂದು ಅರಳಿದ ಪುಷ್ಪ,**
**ಆ ಪುಷ್ಪದೊಳಗೆ ಅಗ್ನಿಯ ಕಂಡೆನಾಗಿ**
**ಕಪಿಲಸಿದ್ಧಮಲ್ಲಿನಾಥಾ, ನಿಮ್ಮ ಚನ್ನಬಸವಣ್ಣ ತೋಱಿದ ಹಾದಿ**
**ಸುಪಥವಾಯಿತ್ತಾಗಿ,**
**ನಾನು ಚನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು."**[೨]

ಈ ವಚನದರ್ಥವಿಷ್ಟು: ಮೂರು ಪುರಗಳೆಂದರೆ, ಸ್ಥೂಲ, ಸೂಕ್ಷ್ಮ, ಕಾರಣ ತನುಗಳು. ಈ ಸಂಕೇತವನ್ನು ವಚನವಾಙ್ಮಯದಲ್ಲಿ ಬೇರೆ ಕಡೆಗೂ ಬಳಸಲಾಗಿದೆ.[೩]

---

೧. ಶಿಪ್ರಮಶೂಸಂ. ವ. ೬೧೦. ೨. ಶಿಪ್ರಮಶೂಸಂ. ವ. ೬೧೩.

೩. ಮೂರು ಕಟ್ಟಿಗೆಯನ್ನು ಮುಯ್ಯೂರಲಿರಿಸಿದನು. (ಮೋಳಿಗಯ್ಯಗಳ ಸಂಪಾದನೆ. ಶೂಸಂ. ವ. ೧೭).

ಆ ಮೂರು ಪುರದ ಮೇಲೆ ಇದ್ದ ಉಪ್ಪರಿಗೆ ಇಷ್ಟಲಿಂಗ. ಆ ಇಷ್ಟಲಿಂಗದಲ್ಲಿ ಸ್ವಾನು-ಭಾವಪುಷ್ಪ ಅರಳಿದೆ. ಆ ಸ್ವಾನುಭಾವದಿಂದ ನಿಜಜ್ಞಾನಾಗ್ನಿ ಗೋಚರವಾಗುತ್ತದೆ. ಸಿದ್ಧರಾಮಯ್ಯನು ಈಗ ಇಷ್ಟಲಿಂಗದ ಆರಾಧನೆಯಿಂದ ಶಿವಾನುಭಾವದ ಪರಿಮಳ ವನ್ನು ಕಂಡಿರುವನೆಂಬುದು ಸ್ಪಷ್ಟವಾಗುತ್ತದೆ. ಹಿಂದೆ ಕಾಣಬಾರದ ಘನವನ್ನು ಕಾಯದಲ್ಲಿ, ಹೇಳಬಾರದ ನಿಜವನ್ನು ಮನದಲ್ಲಿ, ತೋರಬಾರದ ಕುರುಹನ್ನು ಅರಿವಿನಲ್ಲಿ ನೆಲೆಗೊಳಿಸ ಬೇಕೆಂದು ಪ್ರಾರ್ಥಿಸಿದ ಸಿದ್ಧರಾಮನು, ಈಗ ಅವನ್ನು ನೆಲೆಗೊಳಿಸಿಕೊಂಡಿರುವ-ನೆಂಬುದು ಈ ವಚನದಿಂದ ಸ್ಪಷ್ಟವಾಗುತ್ತದೆ. ಅದನ್ನು ನೆಲೆಗೊಳಿಸಿದವರಾರು ಎಂಬುದೂ ಅಲ್ಲಿಯೇ ಉಕ್ತವಾಗಿದೆ. "ಕಪಿಲಸಿದ್ಧಮಲ್ಲಿನಾಥಾ, ನಿಮ್ಮ ಶರಣ ಚನ್ನ-ಬಸವಣ್ಣ ತೋಱಿದ ಹಾದಿ ಸುಪಥವಾಯಿತ್ತು" ಎಂದು ಹೇಳುವ ಮಾತಿನಲ್ಲಿ ಚನ್ನ-ಬಸವಣ್ಣನೇ ಗುರುವಾಗಿ, ಈತನಿಗೆ ಆ ಸುಪಥವನ್ನು ತೋರಿರುವನೆಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಿದೆ. ಆ ಸುಪಥದಿಂದಲೇ ತಾನು ಅಗ್ನಿಯನ್ನು ಕಂಡುದಾಗಿ ಹೇಳಿರುವನು. ಇದರಿಂದ ಚನ್ನಬಸವಣ್ಣನವರು ಸಿದ್ಧರಾಮನಿಗೆ ಇಷ್ಟಲಿಂಗವನ್ನು ಕೊಟ್ಟಿರುವರೆಂಬುದು ಶಿವಗಣಪ್ರಸಾದಿ ಮಹಾದೇವಯ್ಯಗಳ ಪರಿವಿಡಿಯಲ್ಲಿಯೇ ವ್ಯಕ್ತ ವಾಗುತ್ತದೆ. ಹಾಗಿಲ್ಲದಿದ್ದರೆ, ಸಿದ್ಧರಾಮಯ್ಯನವರ ಬಾಯಿಂದ ಇಂತಹ ಮಾತುಗಳು ಬರಬಲ್ಲುವೇ?

**"ಅಯ್ಯಾ, ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು**
**ಒಳಗೆ ಬೈಚಿಟ್ಟುಕೊಂಡೆನಯ್ಯಾ.**
**ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಹಾಸಿ ಹೊದೆದುಕೊಂಡೆನು.**
**ನಿಮ್ಮ ಶರಣ ಬಸವಣ್ಣನಿಂದ ನಿರವಯನಾದೆನು,**
**ಎಲೆ ಕಪಿಲಸಿದ್ಧಮಲ್ಲಿನಾಥಯ್ಯಾ."**[೧]

ಈ ವಚನದಲ್ಲಿ ಸಿದ್ಧರಾಮಯ್ಯದೇವರು ಇಷ್ಟಲಿಂಗವನ್ನು ಪಡೆದುಕೊಂಡು ಅದರಿಂದ ಉದ್ಧಾರವಾದುದನ್ನು ತಿಳಿಯಪಡಿಸಿರುವರು. ಶರಣರು ಸಿದ್ಧರಾಮನ ಮನದ ಕೊನೆಯ ಮೊನೆಯ ಮೇಲಿದ್ದ ಸಂದು ಸಂಶಯವನ್ನು ಬಿಡಿಸಿ, ಇಷ್ಟಲಿಂಗೋಪದೇಶ ಮಾಡಿದುದನ್ನು ಸಿದ್ಧರಾಮೇಶ್ವರನ ಕೆಳಗಿನ ವಚನ ಧ್ವನಿಸುತ್ತದೆ:

**"ಎಲೆ ಅಯ್ಯಾ, ಗಾರುಡವ ಬಲ್ಲನಯ್ಯಾ, ಮತ್ತೆ ಗಾರುಡನಲ್ಲ ನೋಡಯ್ಯಾ!**
**ಎನ್ನ ಮನದ ಮೇಲೆ ಇಪ್ಪ ಶಂಕೆಯೆಂಬ ವಿಷವ,**
**ಗಾರುಡಿಸಿ ಮಾಣಿಸಿ ನಿಶ್ಶಂಕನ ಮಾಡಿದ,**
**ಕಪಿಲಸಿದ್ಧಮಲ್ಲಿನಾಥನಲ್ಲಿ ಮಡಿವಾಳ ಮಾಚಿ ತಂದೆಯ ಪಾದಕ್ಕೆ**
**ನಮೋ ನಮೋ ಎಂಬೆನು."**[೨]

ಈ ವಚನದಿಂದ ಮಡಿವಾಳ ಮಾಚಿದೇವ ಮೊದಲಾದ ಶರಣರು ಸಿದ್ಧರಾಮನಿಗೆ ಇಷ್ಟ-ಲಿಂಗದ ಆವಶ್ಯಕತೆಯನ್ನು ಕುರಿತು ನಡೆದ ಚರ್ಚೆಯಲ್ಲಿ ಭಾಗವಹಿಸಿದ್ದರೆಂದು ಸ್ಪಷ್ಟ ವಾಗುತ್ತದೆ. ಸಂಕ್ಷಿಪ್ತದಲ್ಲಿ ಆ ಚಿತ್ರವನ್ನು ರೂಪಿಸಹೊರಟ ಮಹಾದೇವಯ್ಯನು ಜಬ್ಬುರ

೧. ಶಿಪ್ರಮಶೂಸಂ. ವ. ೬೧೪.  ೨. ಶಿಪ್ರಮಶೂಸಂ. ವ. ೬೧೫.

ವಿಷಯುವನ್ನು ಹೇಳಿ ಮುಂದುವರಿಯುವನು. ಸಿದ್ಧರಾಮನಿಗೆ ಇಷ್ಟಲಿಂಗೋಪದೇಶ-ವಾದುದನ್ನು ಕಂಡು ಪರಮಾನಂದತುಂದಿಲರಾಗಿ ಮಡಿವಾಳ ಮಾಚಿದೇವರು ಹಾಡುವ ಸ್ತೋತ್ರವನ್ನು ಕೇಳಬೇಕು.

> "ಅಕ್ಕತಂಗಿಯರೈವರು ಒಬ್ಬನ ಅರಸಿಯರು.
> ಕಿಱಿಯಾಕೆಯು ಕೂಡುವರೆ ಹಿರಿಯರಸಿ ಕುಂಟಣಿ.
> ಹಿರಿಯರಸಿಯು ಕೂಡುವರೆ ಕಿಱಿಯರಸಿ ಕುಂಟಣಿ.
> ಈ ಇಬ್ಬರನೂ ಕೂಡುವರೆ ಬೇಱೆ ಮಾಡಿ ಬೆರಸಬಾರದೆಂದಱಿದು,
> ಒಂದಾಗಿ ಕೂಡಲು, ಒಬ್ಬಾಕೆ ಕಣ್ಣ ಕೆಚ್ಚನೆ ಮಾಡುವಳು;
>   ಒಬ್ಬಾಕೆ ಬುದ್ಧಿಹೇಳುವಳು; ಒಬ್ಬಾಕೆ ಹಾಸಿಕೊಡುವಳು.
> ಇವರಿಬ್ಬರನೂ ಅಪ್ಪಿಕೊಂಡು ಒಂದೆಬಾರಿ ಬೆರಸಲು,
>   ನೀರು ನೀರು ಬೆರಸಿದಂತಾಯಿತ್ತು. ಕಲಿದೇವಯ್ಯಾ!
> ಕಲಿದೇವಯ್ಯಾ, ನಿಮ್ಮ ಶರಣ ಸಿದ್ಧರಾಮಯ್ಯದೇವರು,
>   ಎನಗೆಯೂ ಈ ಪಥವ ಕಲಿಸಿ, ನಿಜನಿವಾಸದಲ್ಲಿ ಇರಿಸಿದ ಕಾರಣ,
>   ಆನು ನಮೋ ನಮೋ ಎನುತಿರ್ದೆನು."[1]

ಹೀಗೆ ನೀರು ನೀರು ಬೆರಸಿದಂತಾದ ಶರಣ ಸಿದ್ಧರಾಮಯ್ಯನನ್ನು ಮಿಕ್ಕ ಶರಣರು ಮನ ವಾರೆ ಹೊಗಳಿರುವುದು, ಆತನು ಷಟ್‌ಸ್ಥಲ ಮಾರ್ಗವನ್ನು ಹಿಡಿದುದರ ಕುರುಹಾಗಿದೆ. ಸಿದ್ಧರಾಮಯ್ಯದೇವರು ಪ್ರಭುದೇವ, ಬಸವರಾಜದೇವ, ಚಿಕ್ಕದಣ್ಣಾಯಕ, ಮಡಿವಾಳ ಮಾಚಿತಂದೆ ಮೊದಲಾದವರೊಡನೆ ಮಹಾನುಭಾವಗೋಷ್ಠಿಯನ್ನು ಮಾಡುತ್ತಿದ್ದು ದನ್ನು ಕೆಲಬಲದಲ್ಲಿದ್ದ ಸೊಡ್ಡಳ ಬಾಚರಸರು, ಹಡಪದ ಅಪ್ಪಣ್ಣಗಳು, ಪಡಿಹಾರಿ ಉತ್ತಣ್ಣಗಳು, ಅಕ್ಕನಾಗಾಯಿಗಳು, ಮೋಳಿಗೆಯ ಮಾರಯ್ಯ ಮೊದಲಾದ ಅಸಂಖ್ಯಾತ ಗಣಂಗಳು ಕೇಳಿ, ನಿತ್ಯ ನಿಜತತ್ವದಲ್ಲಿ ಸಮರಸವಾಗಿ ಪರಮಾನಂದದಲ್ಲಿ ಓಲಾಡಿದರು.[2] ಎಂದು ಶಿವಗಣಪ್ರಸಾದಿ ಮಹಾದೇವಯ್ಯಗಳು ಹೇಳುವಲ್ಲಿ, ಸಿದ್ಧರಾಮನಿಗೆ ಇಷ್ಟಲಿಂಗ ದೀಕ್ಷೆಯಾಗಿ ಆತನು ಶರಣಸಮೂಹದಲ್ಲಿ ಪರಿಗಣಿತನಾದುದರ ಕುರುಹು ಕಾಣುತ್ತಿದೆ.

ಇದರಿಂದ ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆಯ ಅನು-ಮಿಡಿದು ಸಿದ್ಧರಾಮನಿಗೆ ಚನ್ನಬಸವಣ್ಣನವರಿಂದ ಇಷ್ಟಲಿಂಗದೀಕ್ಷೆಯಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ.

ನಿಜಸ್ಥಿತಿ ಹೀಗಿದ್ದರೂ "ಮೊದಲನೆಯ ಸಂಕಲನದಲ್ಲಿ ಅವನಿಗೆ ದೀಕ್ಷಾಕ್ರಮ-ವಿಲ್ಲದ್ದರಿಂದ ಕೆಂಚವೀರಣ್ಣೊಡೆಯನು ೧೭೦೦ ವಚನಗಳನ್ನು ಸಂಕಲ್ಪಿಸಿ, ಸಿದ್ಧರಾಮನಿಗೆ ದೀಕ್ಷೆಯನ್ನು ಪ್ರತಿಷ್ಠಿಸಿದನು"[3] ಎಂದು ಹೇಳಿರುವುದು ಆಶ್ಚರ್ಯವೆನಿಸುತ್ತದೆ. ಸಿದ್ಧರಾಮನಿಗೆ ದೀಕ್ಷೆಯಾದುದನ್ನು ಈ ಹಿಂದೆ ನೋಡಿದಂತೆ ಮೊದಲನೆಯ ಸಂಕಲನವೇ ಪ್ರತಿಷ್ಠಿಸಿದೆ. ಅದು ಕೂಡ ಚನ್ನಬಸವಣ್ಣನವರಿಂದಲೇ ಆತನ ಲಿಂಗದೀಕ್ಷೆಯಾಗಿದೆ-

೧. ಶಿಪ್ರಮಶೂಸಂ. ೨. ಶಿಪ್ರಮಶೂಸಂ. ೩. ಸಿಚಾ. LV.

ಯೆಂಬುದು ಅಲ್ಲಿಯೇ ವ್ಯಕ್ತವಾಗಿದೆ. ಆದರೆ, ಮಹಾದೇವಯ್ಯನವರ ಕ್ರಮ, ಸಂಗ್ರಹ ರೂಪವಾದುದು. ಅವರಿಗೆ ದೊರೆತ ವಚನಸಾಮಗ್ರಿಯಲ್ಲಿ ಈ ವಿಷಯ ಖಚಿತವಾಗುವಷ್ಟರಮಟ್ಟಿಗೆ ಸ್ಪಷ್ಟಪಡಿಸಿರುವರು.

ಸಿದ್ಧರಾಮನಿಗೆ ಇಷ್ಟಲಿಂಗದೀಕ್ಷೆ ಆಗಿಲ್ಲವೆನ್ನುವುದಕ್ಕಿಂತ ಅದು ಆಗಿದೆ; ಆದರೆ, ಆ ಕ್ರಮದ ವಿವರಣೆ ಅಲ್ಲಿ ಇಲ್ಲವೆಂಬುದು ಸತ್ಯ. ಮುಂದಿನ ಸಂಕಲನಕಾರರು ಪೂರೈಸಿದುದು ಈ ಕ್ರಮವನ್ನು ಮಾತ್ರ. ಅವರೂ ಸಿದ್ಧರಾಮನ ವೀರಶೈವತ್ವವನ್ನಾಗಲಿ, ಇಷ್ಟ ಲಿಂಗದೀಕ್ಷೆಯನ್ನಾಗಲಿ ಪ್ರತಿಷ್ಠಾಪಿಸಹೊರಟವರಲ್ಲ.

೧. **"ಶಿವಗಣಪ್ರಸಾದಿ ಮಹಾದೇವಯ್ಯಗಳ ನಿರೂಪವಿಡಿದು ಸಿದ್ಧರಾಮೇಶ್ವರ ದೇವರೇ ಮೊದಲಾದವರ ಶೈವಮಾರ್ಗವಂ ಬಿಡಿಸಿ ವೀರಶೈವ ದೀಕ್ಷೆಯಿಂದ ಅಂಗಲಿಂಗ ಸಮರಸವಾದ ವಚನ ಬರೆವ . . . ."**[೧]

೨. **"ಪ್ರಸಾದ ಮಹಾದೇವಯ್ಯಗಳು ಶೂನ್ಯಸಂಪಾದನೆಯ ರಚಿಸಲು ಅಲ್ಲಿ ಸಿದ್ಧರಾಮಯ್ಯದೇವರಿಗೆ ದೀಕ್ಷಾಕ್ರಮವಿಲ್ಲದಿರಲು . . . ಅತಿ ಸೂಕ್ಷ್ಮವಾಗಿ ಸೇರಿಸಿ ಸಮರ್ಪಿಸಿದ ಶೂನ್ಯಸಂಪಾದನೆಯು."**[೨]

೩. **"ಶಿವಗಣಪ್ರಸಾದಿ ಮಹಾದೇವಯ್ಯಗಳು ಮರ್ತ್ಯಲೋಕದ ಮಹಾಗಣಂಗಳಿಗೆ ಆ ಮಹಾಪ್ರಸಂಗವ ಸಮರ್ಪಿಸಿ, ಅಲ್ಲಿ ಸಿದ್ಧರಾಮೇಶ್ವರದೇವರಿಗೆ ಉಪದೇಶಕ್ರಮವಿಲ್ಲದಿರ್ದೊಡೆ, ಆ ಕ್ರಮವಿಡಿದು ಈ ಶೂನ್ಯಸಂಪಾದನೆಯ ಸೇರಿಸಿ, ಶಿವಗಣಂಗಳಿಗೆ ಸಮರ್ಪಿಸಿದೆವು."**[೩]

ಎಂದು ಅವರೇ ಹೇಳಿರುವರು. ತಾವು ಹೇಳಿದಂತೆ ಅಲ್ಲಿ ಇಲ್ಲಿಲ್ಲದ ದೀಕ್ಷಾಕ್ರಮವನ್ನು ಪೂರೈಸಿರುವರು. ಅದು ಹೀಗೆ:

ದೀಕ್ಷೆಗೆ ಪೂರ್ವಭಾವಿಯಾಗಿ ಇಷ್ಟಲಿಂಗದ ಅವಶ್ಯಕತೆಯನ್ನು ಕುರಿತು ವಾದವಿವಾದ ನಡೆದಿದೆ. ಇದು ನಾಲ್ಕೂ ಶೂನ್ಯಸಂಪಾದನೆಗಳಲ್ಲಿದೆ. ಮೊದಲನೆಯ ಶೂನ್ಯಸಂಪಾದನೆಯ ಅನ್ವಯ ಈ ಚರ್ಚೆಯೊಳಗೆ ಭಾಗವಹಿಸುವವರು ಚನ್ನಬಸವಣ್ಣ, ಸಿದ್ಧರಾಮ, ಪ್ರಭುದೇವ ಈ ಮೂವರು ಮಾತ್ರ; ಅದು ನಾಲ್ಕೈದು ವಚನಗಳಲ್ಲಿ ಮುಗಿದುಹೋಗುತ್ತದೆ. ಹಲಗೆದೇವರ ಶೂನ್ಯಸಂಪಾದನೆಯಲ್ಲಿ ಈ ಮೂವರೊಡನೆ ಬಸವಣ್ಣ, ದಾಸೋಹದ ಸಂಗಣ್ಣ, ಅರಿವಿನ ಮಾರಣ್ಣ, ರಾಯಸದ ಮಂಚಣ್ಣ, ವೀರ ಗೊಲ್ಲಳ, ಕೋಲ ಶಾಂತಯ್ಯ, ಬಿಬ್ಬ ಬಾಚಯ್ಯ, ಶಿವಲೆಂಕ ಮಂಚಣ್ಣ, ಢಕ್ಕೆಯ ಬೊಮ್ಮಣ್ಣ, ಉರಿಲಿಂಗದೇವ, ಉರಿಲಿಂಗಪೆದ್ದಿ, ಬೊಕ್ಕಸದ ಚಿಕ್ಕಣ್ಣ, ಅಮುಗಿ ದೇವಯ್ಯನವರು ಭಾಗವಹಿಸಿದ್ದು, ಚರ್ಚೆ ಸುದೀರ್ಘವಾದ ೨೪ ವಚನಗಳ ವರೆಗೆ ಹಬ್ಬುತ್ತದೆ.

---

೧. ಹಶೂಸಂ. ಆರಂಭದ ಗದ್ಯ. ೨. ಗುಶೂಸಂ. ಸಮಾಪ್ತಿವಾಕ್ಯ. ೩. ಶೂಸಂ. ಪು. ೯.

ಮುಂದಿನ ಇಬ್ಬರು ಸಂಕಲನಕಾರರಲ್ಲಿ ಗುಮ್ಮಳಾಪುರ ಸಿದ್ಧಲಿಂಗದೇವರು[೧] ಅದನ್ನು ಇನ್ನೂ ವಿಸ್ತರಿಸಿದರೆ, ಗೂಳೂರ ಸಿದ್ಧವೀರಣಾರ್ಯರು, ಪ್ರಸಾದಿ ಮಹಾದೇವಯ್ಯ ನವರಿಗಿಂತ ಆ ಚರ್ಚೆಯನ್ನು ಹೆಚ್ಚು ಹಿಗ್ಗಿಸಿದರೂ ಉಳಿದವರಿಗಿಂತ ಅದರ ಗಾತ್ರವನ್ನು ಕಡಿಮೆಮಾಡಿರುವರು.

ಪ್ರಸ್ತುತ ದೀಕ್ಷೆಗೆ ಪೂರ್ವ ಪೀಠಿಕೆಯೆನಿಸಿದ ಚರ್ಚೆ ನಾಲ್ಕೂ ಸಂಪಾದನೆಗಳಲ್ಲಿದೆ. ಅಂದರೆ, ಸಿದ್ಧರಾಮಯ್ಯನವರಿಗೆ ಇಷ್ಟಲಿಂಗದ ಬಗ್ಗೆ ಸಂದೇಹವಿರುವುದು, ಅದನ್ನು ಮಿಕ್ಕ ಶರಣರು ಖಂಡಿಸುವುದು ಎಲ್ಲ ಸಂಪಾದನೆಗಳಲ್ಲಿಯೂ ಬಂದಿದೆ. ಅದನ್ನು ಪ್ರಸಾದಿ ಮಹಾದೇವಯ್ಯನವರು ಕೇವಲ ೫ ವಚನಗಳಲ್ಲಿ ಮುಗಿಸಿದರೆ ಹಲಗೆದೇವರು ಸುಮಾರು ೫೦ಕ್ಕೇರಿಸಿರುತ್ತಾರೆ. ಈ ಕ್ರಮ ಮುಂದಿನ ಸಂಪಾದನೆಗಳಲ್ಲಿಯೂ ಕಂಡುಬರುತ್ತದೆ. ಇದರಿಂದ ಮೂಲಭೂತ ಅಂಶದಲ್ಲಿ ಏನೂ ಹೆಚ್ಚುಕಡಿಮೆಯಾಗಿಲ್ಲ. ಸಿದ್ಧರಾಮನಿಗೆ ಇಷ್ಟಲಿಂಗದೀಕ್ಷೆಯಾಗಬೇಕೆಂದು ಎಲ್ಲ ಸಂಪಾದನೆಗಳ ಮತ.

ಚರ್ಚೆಯ ಪ್ರತಿಫಲವಾಗಿ ಸಿದ್ಧರಾಮಯ್ಯನ ಸಂದೇಹ ನಿರಸನವಾಗುತ್ತದೆ. ಇದು ನಾಲ್ಕು ಸಂಪಾದನೆಗಳಲ್ಲಿಯೂ ಕಂಡುಬರುತ್ತದೆ. ಶಿವಗಣಪ್ರಸಾದಿ ಮಹಾ ದೇವಯ್ಯಗಳ ಸಂಪಾದನೆಯಲ್ಲಿ ಈ ವಿಷಯ ಹತ್ತೆಂಟು ವಚನಗಳಲ್ಲಿ ಮುಗಿದಿದ್ದರೆ, ಹಲಗೆದೇವರು ಇದನ್ನು ಐವಡಿಯಾಗಿ ಬೆಳೆಸುವರು. ಎಲ್ಲದರ ಮಥಿತಾರ್ಥವೂ ಒಂದೇ. ಸಿದ್ಧರಾಮನು ಇಷ್ಟಲಿಂಗದ ತತ್ವವನ್ನು ಒಪ್ಪಿಕೊಳ್ಳುವನು. ಅದು ತನ್ನ ಸ್ಥೂಲ, ಸೂಕ್ಷ್ಮ, ಕಾರಣತನುಗಳಲ್ಲಿ ನೆಲೆಗೊಳ್ಳಬೇಕೆಂದೂ ಹಾಗೆ ಮಾಡಿ ತನ್ನನ್ನು ಉಳುಹಿ ಕೊಳ್ಳಬೇಕೆಂದೂ ಮೊದಲನೆಯ ಸಂಪಾದನೆಯಲ್ಲಿ ಬಂದಿದ್ದರೆ, ಮಿಕ್ಕ ಸಂಪಾದನೆಗಳಲ್ಲಿ ಎನಗೆ ಇಷ್ಟಲಿಂಗಧಾರಣೆಮಾಡಿ ಉಳುಹಿಕೊಳ್ಳಬೇಕೆಂದು ಸ್ಪಷ್ಟವಾಗಿ ಕೇಳಿಕೊಳ್ಳುತ್ತಾನೆ. ಈ ಪ್ರಾರ್ಥನೆಯೇ ಹಲಗೆದೇವರ ಸಂಪಾದನೆಯಲ್ಲಿ ಸುಮಾರು ೪೦ ವಚನಗಳನ್ನು ವ್ಯಾಪಿಸಿದೆ. ಮೂರು ನಾಲ್ಕು ಕಡೆಗೆ ಅಲ್ಲಿ ಬರುವ ವಚನಗಳಲ್ಲಿಯೇ ಇಷ್ಟಲಿಂಗ ಧಾರ-ಣೆಯ ವಿಷಯ ವಾಚ್ಯವಾಗಿ ಬಂದಿದ್ದರೆ ಮತ್ತೆ ನಾಲ್ಕೆಂಟು ಸಲ ಅದು ವ್ಯಾಖ್ಯಾನದಲ್ಲಿ ಕಂಡುಬರುತ್ತದೆ. ಇದರಿಂದಲೂ ತತ್ವತಃ ಯಾವ ಹೆಚ್ಚು ಕಡಿಮೆಯೂ ಅಲ್ಲಿ ಕಂಡು ಬಾರದೆಂದು ನಮ್ಮ ಮತ.

ಮುಂದೆ ಸಿದ್ಧರಾಮಯ್ಯನವರನ್ನು ಚನ್ನಬಸವಣ್ಣನವರಲ್ಲಿ ಕರೆದೊಯ್ದು ಅವರಿಗೆ ಇಷ್ಟಲಿಂಗೋಪದೇಶ ಮಾಡಬೇಕೆಂದು ಪ್ರಭುದೇವರು ನಿರೂಪಿಸುವರು. ಅಮುಗಿ-ದೇವಯ್ಯ ಮೊದಲಾದವರು ಅದನ್ನು ಎತ್ತಿಹಿಡಿಯುವರು. ಸಿದ್ಧರಾಮನ ಪ್ರಾರ್ಥನೆ

---

೧. ಗುಮ್ಮಳಾಪುರಸಂಪಾದನೆಯಲ್ಲಿ ಈ ವಿಷಯವನ್ನು ಚರ್ಚೆಮಾಡಿದ ಶಿವಶರಣರು–ಬಸವಣ್ಣ, ಚನ್ನಬಸವಣ್ಣ, ಪ್ರಭುದೇವ, ಸಿದ್ಧರಾಮ, ದಾಸಿಮಯ್ಯ. ಮೋಳಿಗಯ್ಯ, ಮೆರೆಮಿಂಡದೇವ, ಉರಿಲಿಂಗಪೆದ್ದಿ, ಪ್ರಸಾದಿ ಭೋಗಣ್ಣ, ಅರಿವಿನ ಮಾರಿತಂದೆ, ಕೋಲ ಶಾಂತಯ್ಯ, ಶಿವಲೆಂಕ ಮಂಚಣ್ಣ, ಅಂಬಿಗರ ಚೌಡಯ್ಯ, ಮನಸಂದ ಮಾರಯ್ಯ, ಏಕಾಂತ ರಾಮಯ್ಯ, ರಾಯಸದ ಮಂಚಣ್ಣ, ಬಿಬ್ಬಬಾಚಯ್ಯ. ಘಕ್ಕೆಯ ಬೊಮ್ಮಣ್ಣ, ಅಮುಗಿ ದೇವಯ್ಯ, ಶಿವನಾಗಮಯ್ಯ, ತೆಲುಗು ಜೊಮ್ಮಣ್ಣ.

ಯಂತೂ ಮತ್ತೆ ಮತ್ತೆ ಎದ್ದು ಪ್ರಜ್ವಲಿಸುತ್ತಿದೆ. ಈ ಸನ್ನಿವೇಶದಲ್ಲಿ ಚನ್ನಬಸವಣ್ಣ-ನವರು ಸಿದ್ಧರಾಮಯ್ಯನವರಿಗೆ ಇಷ್ಟಲಿಂಗೋಪದೇಶ ಮಾಡುವರು. ಈ ಪ್ರಸ್ತಾಪ ಶಿವಗಣಪ್ರಸಾದಿ ಮಹಾದೇವಯ್ಯನವರ ಸಂಪಾದನೆಯಲ್ಲಿ ಬಂದಿರುವುದಿಲ್ಲ. ಹಲಗೆ-ದೇವರು ಇದನ್ನೆತ್ತಿ ಮುಂದೆ ದೀಕ್ಷಾಕ್ರಮವನ್ನು ಸಾದ್ಯಂತವಾಗಿ ಪೂರೈಸುವರು ಸುಮಾರು ೫೦ ವಚನಗಳನ್ನು ಅಲ್ಲಿ ಉದ್ಧರಿಸುವರು.

ಹಲಗೆದೇವರ ಸಂಪಾದನೆಯಲ್ಲಿ ವಿಸ್ತೃತವಾಗಿ ಬಂದ ಈ ದೀಕ್ಷಾವಿವರಣೆ ಗುಮ್ಮಳಾಪುರದವರ ಸಂಪಾದನೆಯಲ್ಲಿ ಶುದ್ಧ ಸಿದ್ಧ ಕ್ರಮವಾಗಿ ದೀಕ್ಷಾವಿಧಾನವೇ ಆಗಿ ಖಚಿತಗೊಂಡಿದೆ. ಅನಂತರ ಬಂದ ಕೊನೆಯ ಶೂನ್ಯಸಂಪಾದನೆಯಲ್ಲಿ ಆ ಕ್ರಮ-ವಂತೂ ಇಲ್ಲವೇ ಇಲ್ಲ. ಅದರ ವಿವರಣೆ ಒಂದು ವಚನದಲ್ಲಿ ಮುಗಿದುಹೋಗುತ್ತದೆ. ಶಿವಗಣಪ್ರಸಾದಿ ಮಹಾದೇವಯ್ಯನವರ ಸಂಪಾದನೆಯಲ್ಲಿ ದೀಕ್ಷಾಕ್ರಮವಿಲ್ಲದಿರಲು ಅದನ್ನು ಪೂರೈಸುವೆವೆಂದು ಪೂಣ್ಬು ಸಂಕಲನಗೈಯ ಹೊರಟವರಲ್ಲಿ ನಿಜವಾಗಿಯೂ ಆ ದೀಕ್ಷಾಕ್ರಮವನ್ನು ಪೂರೈಸಿದವರು ಗುಮ್ಮಳಾಪುರ ಸಿದ್ಧಲಿಂಗದೇವರೊಬ್ಬರೇ. ಪಾವನಾತ್ಮಕ ಗುರು ಚನ್ನಬಸವಣ್ಣನು ಮುಯ್ಯೇಳು ಬಗೆಯ ದೀಕ್ಷೆಗಳನ್ನು ವಿಧ್ಯುಕ್ತ-ವಾಗಿ ಮಾಡಿದ ವಿವರಣೆ ಅಲ್ಲಿ ಬಂದಿದೆ.

ಇದನ್ನು ನೋಡಿದರೆ ದೀಕ್ಷಾಕ್ರಮವಿವರಣೆಯಲ್ಲಿ ಮೂವರೂ ಮೂರು ಹಾದಿ ಯನ್ನು ಹಿಡಿದಿರುವರು. ಗೂಳೂರ ಸಿದ್ಧವೀರಣಾರ್ಯರಂತೂ ಒಂದೇ ವಚನದಲ್ಲಿ ಅದನ್ನು ಸೂಚಿಸಿಬಿಡುವರು. ಸಿದ್ಧರಾಮನಿಗೆ ಚನ್ನಬಸವಣ್ಣನವರಿಂದ ಇಷ್ಟಲಿಂಗೋಪ ದೇಶವಾಗಿದೆಯೆಂಬುದನ್ನು ಸ್ಥಾಪಿಸುವುದಕ್ಕೆ ಈ ದೀಕ್ಷಾಕ್ರಮ ಅಷ್ಟೊಂದು ಅವಶ್ಯ-ವಲ್ಲವೆಂದು ಈ ಸಂಕಲನಕಾರರೊಳಗಿನ ಕೆಲವರ ಅಭಿಮತವಾದರೂ ಇದ್ದಂತೆ ತೋರು ತ್ತದೆ. ಈ ಗುಂಪಿನಲ್ಲಿ ಶಿವಗಣಪ್ರಸಾದಿ ಮಹಾದೇವಯ್ಯಗಳು ಬರುತ್ತಾರೆ. ಗೂಳೂರ ಸಿದ್ಧವೀರಣಾರ್ಯರೂ ಸ್ವಲ್ಪ ಇವರ ಹತ್ತಿರ ಹತ್ತಿರವೇ ನಿಲ್ಲುತ್ತಿರುವುದು ಗಮನಾರ್ಹ ವಾಗಿದೆ. ದೀಕ್ಷಾಕ್ರಮದ ಪ್ರಸ್ತಾಪವನ್ನೆತ್ತಿದವನು ಹಲಗೆದೇವನು. ಆತನ ಶೂನ್ಯ ಸಂಪಾದನೆಯನ್ನು ಸೂಕ್ಷ್ಮವಾಗಿ ಅವಲೋಕನಮಾಡಿದರೆ, ಇಡೀ ಸಂಪಾದನೆಯ ತುಂಬ ಷಟ್‌ಸ್ಥಲತತ್ವವನ್ನು ವಿವರಿಸಲಾಗಿದೆಯೆಂಬುದು ವೇದ್ಯವಾಗುತ್ತದೆ. ಸಿದ್ಧರಾಮನ ದೀಕ್ಷಾಕ್ರಮವನ್ನು ಪ್ರತಿಷ್ಠಾಪಿಸುವುದಕ್ಕಾಗಿ ಆತನು ಶೂನ್ಯಸಂಪಾದನೆಯನ್ನು ರೂಪಿಸಿ-ರುವನೆನ್ನುವುದಕ್ಕಿಂತಲೂ ಷಟ್‌ಸ್ಥಲತತ್ವವನ್ನು ವಿವರಿಸುವುದಕ್ಕಾಗಿ ರಚಿಸಿರುವನೆಂಬುದು ಹೆಚ್ಚು ಸೂಕ್ತವಾಗಬಲ್ಲುದು. ಆದುದರಿಂದ ಶಿವಗಣಪ್ರಸಾದಿ ಮಹಾದೇವಯ್ಯಗಳ ಸಂಪಾದನೆಯಲ್ಲಿ ಕಾಣದ ದೀಕ್ಷಾಕ್ರಮ, ಸಿದ್ಧರಾಮನಿಗೆ ಇಷ್ಟಲಿಂಗೋಪದೇಶವಾಗಿದೆ-ಯೆಂಬುದಕ್ಕೆ ಬಾಧಕವೇನೂ ಆಗಲಾರದು.

ದೀಕ್ಷೆಯ ಫಲ ಸಿದ್ಧರಾಮೇಶ್ವರನಿಗೆ ಇಷ್ಟಲಿಂಗಧಾರಣೆ: ಅದರಿಂದ ಆತನು ಪುನೀತನಾಗಿರುವುದು: ಸದ್ಗುರುವನ್ನೂ ಶರಣವೃಂದವನ್ನೂ ಸ್ತೋತ್ರಮಾಡಿರುವುದು; ಇದು ನಾಲ್ಕು ಸಂಪಾದನೆಗಳಲ್ಲಿಯೂ ಕಂಡುಬರುತ್ತದೆ.

ಇದರಿಂದ ಶಿವಗಣಪ್ರಸಾದಿ ಮಹಾದೇವಯ್ಯಗಳ ಸಿದ್ಧರಾಮನು ಭವಿ ಎಂದು ನಿರ್ಣಯಿಸುವುದು ಸಾಹಸದ ಮಾತಾದೀತು. ಸಿದ್ಧರಾಮನಿಗೆ ದೀಕ್ಷೆಯನ್ನು ಕೊಡಿಸು ವುದಕ್ಕಾಗಿಯೇ ಮುಂದಿನ ಸಂಪಾದನೆಗಳು ಹುಟ್ಟಿದವೆನ್ನುವ ಮಾತೂ ಅಷ್ಟೇ ಸಾಹಸ ಪೂರ್ಣವಾದುದು. ಸಿದ್ಧರಾಮನ ದೀಕ್ಷೆ ನಾಲ್ಕೂ ಶೂನ್ಯಸಂಪಾದನೆಗಳಲ್ಲಿಯೂ ಇದೆ. ಅದರ ವಿವಿಧ ಹಂತಗಳು–ಎಂದರೆ, ಶಿಷ್ಯನ ಸಂದೇಹ, ಗುರುವಿನ ಕೃಪೆ, ಸಂದೇಹನಿರಸನ, ಸ್ತೋತ್ರ ಇವು ಎಲ್ಲ ಸಂಪಾದನೆಗಳ ಮೂಲಭೂತ ಅಂಶ. ಕ್ರಮವೇನೋ ಹೆಚ್ಚು ಕಡಿಮೆ ಮಿಕ್ಕ ಸಂಪಾದನೆಗಳಲ್ಲಿ ವಿವರವಾಗಿರುವುದು ನಿಜ. ಆದರೆ, ಈ ಎಲ್ಲಾ ಶೂನ್ಯಸಂಪಾ-ದನೆಗಳಲ್ಲಿಯೂ ವ್ಯತ್ಯಾಸ ಕಂಡುಬರುವುದು ಕೇವಲ ಸಿದ್ಧರಾಮನ ದೀಕ್ಷಾಪ್ರಸಂಗ ಒಂದರಲ್ಲಿಯೇ ಮಾತ್ರವಲ್ಲ; ಕೆಲವರು ಶೂನ್ಯಸಂಪಾದನೆಯ ಪಾಠಭೇದಕ್ಕೆ ಸಿದ್ಧರಾಮನ ದೀಕ್ಷಾಪ್ರಸಂಗವೇ ಕಾರಣವೆಂದು ಊಹಿಸಿರುವುದು ಸಮಂಜಸವಲ್ಲ. ಹಲಕೆಲವು ಹೊಸ ಸನ್ನಿವೇಶಗಳೂ ಇತರ ಸಂಪಾದನೆಗಳಲ್ಲಿ ಕಂಡುಬರುವುದನ್ನು ಗಮನಿಸಬೇಕು.[೧] ಇದ್ದ ಸನ್ನಿವೇಶಗಳು ಹೆಚ್ಚಿನ ವಚನಗಳಿಂದ ಹಿಗ್ಗಿರುವುದನ್ನೂ ಕಾಣಬೇಕು.

## ಲಿಂಗಲೀಲಾವಿಲಾಸ ಚಾರಿತ್ರ

ಭವಿಯಾಗಿದ್ದ ಸಿದ್ಧರಾಮನಿಗೆ ಇಷ್ಟಲಿಂಗದೀಕ್ಷೆಯನ್ನು ಪ್ರತಿಷ್ಠಾಪಿಸಿ ಆತನಿಗೆ ವೀರಶೈವತ್ವವನ್ನು ಆರೋಪಿಸಿದುವು, ಹಲಗೆದೇವರು, ಗುಮ್ಮಳಾಪುರದ ಸಿದ್ಧಲಿಂಗ ದೇವರು ಹಾಗೂ ಗೂಳೂರ ಸಿದ್ಧವೀರಣಾರ್ಯರು ರಚಿಸಿದ ಶೂನ್ಯಸಂಪಾದನೆಗಳು ಎನ್ನುವ ಮಾತಿನಲ್ಲಿ ಅರ್ಥವಿಲ್ಲವೆನ್ನುವುದು ಇದುವರೆಗಿನ ವಿವೇಚನೆಯಿಂದ ಸ್ಪಷ್ಟ ವಾಗಿರಲು ಸಾಕು.

ಸಿದ್ಧರಾಮನಿಗೆ ಚನ್ನಬಸವಣ್ಣನವರಿಂದ ನಡೆದ ಇಷ್ಟಲಿಂಗೋಪದೇಶವನ್ನು ಮೇಗಣ ಮೂರೂ ಶೂನ್ಯಸಂಪಾದನೆಗಳಿಗಿಂತ ಮೊದಲೇ ಹುಟ್ಟಿದ ಕಲ್ಲುಮಠದ ಪ್ರಭು ದೇವರ (ಕ್ರಿ.ಶ. ೧೪೩೦) ಲಿಂಗಲೀಲಾವಿಲಾಸ ಚಾರಿತ್ರ ಖಚಿತಪಡಿಸುತ್ತದೆ.

ಲಿಂಗಲೀಲಾವಿಲಾಸಚಾರಿತ್ರ ಷಟ್‌ಸ್ಥಲಸಿದ್ಧಾಂತವನ್ನು ವಿವರಿಸುವ ಗ್ರಂಥ. ಕಲ್ಲುಮಠದ ಪ್ರಭುದೇವರು ಆದಿಯ ಗದ್ಯದಲ್ಲಿ ಇದನ್ನು ಹೀಗೆ ಸ್ಪಷ್ಟಪಡಿಸಿರುವರು:

**"ಷಟ್‌ಸ್ಥಲಮಾರ್ಗವೇ ಲಿಂಗಲೀಲಾವಿಲಾಸ ಚಾರಿತ್ರವೆಂದು ನಿರೂಪಿಸಿದ ಗುರುವಚನ ವಿಡಿದು ಗುರುಪ್ರಸಾದಜ್ಞಾನದಿಂದ ವಿದ್ಯಾನಗರದ ಕಲ್ಲುಮಠದ ಪ್ರಭುದೇವಾರ್ಯನು ಪುರಾತನ ವಚನಂಗಳಲ್ಲಿ ಸಾರವಾದ ವಚನಂಗಳ ತೆಕ್ಕೊಂಡು ಷೋಡಶಸ್ಥಲ ಪರಿಕ್ರಮ ದಿಂದ ಸೇರಿಸಿ ಆರ್ಥೈಸಿದ ವಚನಾಗಮವಿದು."**

ಗ್ರಂಥರಚನೆಯ ಕ್ರಮದಲ್ಲಿ ಲಿಂಗಲೀಲಾವಿಲಾಸ ಚಾರಿತ್ರಕ್ಕೂ ಶೂನ್ಯಸಂಪಾದನೆ ಗಳಿಗೂ ಅಂತರವಿದೆ. ಶೂನ್ಯಸಂಪಾದನೆಗಳು, ಪ್ರಭುದೇವರು ಶರಣರನ್ನು ಉದ್ಧರಿಸಿದ

೧. ಅಯ್ದಕ್ಕಿ ಮಾರಯ್ಯಗಳ ಸಂಪಾದನೆ, ಮೋಳಿಗಯ್ಯಗಳ ಸಂಪಾದನೆ, ನುಲಿಯ ಚಂದಯ್ಯಗಳ ಸಂಪಾದನೆ—ಇವು ಗೂಳೂರವರ ಸಂಪಾದನೆಯಲ್ಲಿ ಹೆಚ್ಚಿನವಾಗಿ ಬಂದಿವೆ.

ವಿಷಯುವನ್ನು ವಿವರಿಸುತ್ತವೆ. ಅಲ್ಲಿ ತತ್ವಮಥನ. ಚರಿತ್ರೆಯು ರೂಹುದಳಿದಿದೆ. ಲಿಂಗ-ಲೀಲಾವಿಲಾಸ ಚಾರಿತ್ರದಲ್ಲಿ ಚರಿತ್ರೆಯೆಂಬುದೆಲ್ಲ ಲಿಂಗದ ತಾತ್ವಿಕಚರಿತ್ರೆ. ಅದು ಷಟ್‌ಸ್ಥಲ ಸಿದ್ಧಾಂತದ ಸ್ವರೂಪವನ್ನು ವಿವರಿಸಲು ಹೊರಟ ಗ್ರಂಥ.

ಇಲ್ಲಿ ಬಂದಿರುವ ಷೋಡಶ ಸ್ಥಲಗಳಲ್ಲಿ ಗುರುಕರುಣಸ್ಥಲವೊಂದು. ಅಲ್ಲಿ ಆ ಸ್ಥಲಸ್ವರೂಪವನ್ನು ವಿವರಿಸಲು ಮುಕ್ತಾಯಕ್ಕ, ಪ್ರಭುದೇವರು, ಬಸವಣ್ಣ, ತೆಲುಗು ಜೊಮ್ಮಯ್ಯ, ದೇವರ ದಾಸಿಮಯ್ಯ, ಸಿದ್ಧರಾಮೇಶ್ವರ ಮುಂತಾದ ಶರಣರ ವಚನ-ಗಳನ್ನು ಆಯ್ದುಕೊಳ್ಳಲಾಗಿದೆ. ಇಲ್ಲಿ ಉಕ್ತರಾದ ಶರಣರ ದೀಕ್ಷೆ ಗಮನಾರ್ಹವಾದ ರೀತಿಯಲ್ಲಿ ಆಗಿರುವುದು ಅವರವರ ಚರಿತ್ರೆಗಳಿಂದ ವೇದ್ಯವಾಗುತ್ತದೆ.[೧] ಅವುಗಳಲ್ಲೆಲ್ಲ ವೀರಶೈವದ ದೃಷ್ಟಿಯಿಂದ ಚರಿತ್ರಾರ್ಹವಾದುದೆಂದರೆ ಸಿದ್ಧರಾಮನ ಇಷ್ಟಲಿಂಗದೀಕ್ಷೆ. ಅಂತೆಯೇ ಕಲ್ಲುಮಠದ ಪ್ರಭುದೇವರು ಈ ಸ್ಥಲದಲ್ಲಿ ಮಿಕ್ಕವರ ಒಂದೊಂದೋ. ಎರಡೆರಡೋ ವಚನಗಳನ್ನು ಆಯ್ದುಕೊಂಡರೆ, ಸಿದ್ಧರಾಮೇಶ್ವರನಿಗೆ ಸಂಬಂಧಪಟ್ಟ ೫೦ ವಚನಗಳನ್ನು ಸಿದ್ಧರಾಮನ ಸಂದೇಹ, ಇಷ್ಟಲಿಂಗದ ಆವಶ್ಯಕತೆಯ ಬಗೆಗೆ ಶರಣರಲ್ಲಿ ನಡೆದ ಚರ್ಚೆ, ಸಿದ್ಧರಾಮನ ಸಮ್ಮತಿ, ಚನ್ನಬಸವಣ್ಣನವರಿಂದ ಅವನಿಗೆ ಇಷ್ಟಲಿಂಗ-ಧಾರಣೆ—ಶೂನ್ಯಸಂಪಾದನೆಗಳ ಆನುಪೂರ್ವಿಯಲ್ಲಿ ಸೇರಿಸಿರುವುದು ಮಹತ್ವವಾದುದು. ಕಲ್ಲುಮಠದ ಪ್ರಭುದೇವರು ಇದೊಂದು ಸ್ಥಲದಲ್ಲಿ ಮಾತ್ರ ಈ ವಿಶಿಷ್ಟ ಕ್ರಮವನ್ನು ಕೈಕೊಂಡುದಕ್ಕೆ ಪ್ರಾಯಶಃ ಮೊದಲನೆಯ ಶೂನ್ಯಸಂಪಾದನೆಯೇ ಕಾರಣವಾಗಿರುವ ಸಂಭವವು ಉಂಟು. ಈ ವಿಷಯಕವಾದ ಅನೇಕ ಹೆಚ್ಚಿನ ವಚನಗಳು ತಮಗೆ ಉಪಲಬ್ಧ ವಾಗಿದ್ದುದರಿಂದ ಅದನ್ನು ನಿರೂಪಿಸಿ, ಸಿದ್ಧರಾಮನ ಇಷ್ಟಲಿಂಗದೀಕ್ಷೆಯನ್ನು ಘಂಟಾ-ಘೋಷವಾಗಿ ಸಾರಿದರು.

## ಹರಿಹರ ರಾಘವಾಂಕರು

ಸಿದ್ಧರಾಮನ ವೀರಶೈವತ್ವವನ್ನು ಶಂಕಿಸುವವರು ಹರಿಹರ ರಾಘವಾಂಕರನ್ನು ವಿಶೇಷವಾಗಿ ಆಧರಿಸುವರು. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅಲ್ಲಿಯೂ ಈ ವಿಷಯ ಉಕ್ತವಾಗಿರುವುದೆಂದು ಊಹಿಸಲು ಬರುವಂತಿದೆ. ಹರಿಹರನ 'ಬಸವರಾಜ-ದೇವರ ರಗಳೆ' ಇಪ್ಪತ್ತೈದು ಸ್ಥಲಗಳನ್ನೊಳಗೊಂಡಿತ್ತೆಂಬುದು 'ರಾಘವಾಂಕಚಾರಿತ್ರ' ದಿಂದ[೨] ತಿಳಿದುಬರುತ್ತದೆ. ಈಗ ಉಪಲಬ್ಧವಿರುವ ಕಾವ್ಯವನ್ನು ನೋಡಿದರೆ, ಅದು ಇದ್ದಕ್ಕಿದ್ದಂತೆಯೇ ಹದಿಮೂರನೆಯ ಸ್ಥಲಕ್ಕೆ ನಿಂತುಬಿಡುತ್ತದೆ. ಕಥೆ ಅಪೂರ್ಣವಾಗು-ತ್ತದೆ. ಅಲ್ಲದೆ ಹದಿಮೂರನೆಯ ಸ್ಥಲದಲ್ಲಿಯೇ ಅವಸರವಸರದ ಚರಣಗಳು ಬಂದು ಹೋಗುತ್ತವೆ. ಅಪೂರ್ಣವಾಗಿ ಹದಿಮೂರನೆಯ ಸ್ಥಲಕ್ಕೆ ನಿಲ್ಲುವ ಸಂಪ್ರದಾಯ

---

೧. ಬಸವಣ್ಣನವರಿಗೆ ಸಂದಿಯು ಬಾಯಿಂದ. ಪ್ರಭುದೇವರಿಗೆ ಅನಿಮಿಷದೇವರಿಂದ ಇಷ್ಟಲಿಂಗ ಪ್ರಾಪ್ತವಾದುದು ಅಸಾಮಾನ್ಯ ರೀತಿಯಲ್ಲಿಯೇ. ಅಜಗಣ್ಣ ಮುಕ್ತಾಯಿಯರ ಗುರುಶಿಷ್ಯ ಸಂಬಂಧ ಅತ್ಯಂತ ವೈಶಿಷ್ಟ್ಯಪೂರ್ಣವಾದುದೆಂದು ಬೇರೆ ಹೇಳುವ ಕಾರಣವಿಲ್ಲ.

೨. "... ಬಸವನಿಪ್ಪತ್ತೈದು ಸ್ಥಲದ ರಗಳೆಯುಮಾಡಿ"—ರಾಚಾ ೧೪–೧೨೦.

ವೀರಶೈವದಲ್ಲಿ ಇಲ್ಲವೇ ಇಲ್ಲ. ಆದುದರಿಂದ ಸಿದ್ಧನಂಜೇಶನು ಹೇಳುವಂತೆ ಇನ್ನೂ ೧೨ ಸ್ಥಲಗಳ ವರೆಗೆ ಕಥೆ ಹಬ್ಬಿರುವುದರಲ್ಲಿ ಸಂದೇಹವಿಲ್ಲ. ಅಲ್ಲಿ ಬಂದಿರಬಹುದಾದ ವಿಷಯ ಗಳಲ್ಲಿ ಚನ್ನಬಸವಣ್ಣನವರ ಚರಿತ್ರೆ, ಅದರಲ್ಲಿಯೂ ಅವರು ಸಿದ್ಧರಾಮನಿಗೆ ಇಷ್ಟಲಿಂಗ ಧಾರಣೆಮಾಡಿದ ವಿಷಯ ಮಹತ್ವದ ಸ್ಥಾನವನ್ನು ಆಕ್ರಮಿಸಿರುವ ಸಂಭವವಿದೆ. ಮಹತ್ವದ ಈ ಭಾಗವನ್ನು ಯಾವುದೋ ಒಂದು ಉದ್ದೇಶದಿಂದ ಭಿನ್ನಾಭಿಪ್ರಾಯ-ವುಳ್ಳವರು ವ್ಯವಸ್ಥಿತ ರೀತಿಯಿಂದ ನಾಶಮಾಡಿದಂತೆ ತೋರುತ್ತದೆ.

ಅನೇಕ ಶರಣರನ್ನು ಕುರಿತು ರಗಳೆಗಳನ್ನು ಬರೆದ ಹರಿಹರನು ಚನ್ನಬಸವಣ್ಣ, ಸಿದ್ಧರಾಮೇಶ್ವರರಂತಹ ಮಹಿಮಾನ್ವಿತರನ್ನು ಕುರಿತು ಬರೆದಿಲ್ಲವೆಂಬುದು ನಂಬದ ಮಾತಾಗಿದೆ. ಹರಿಹರನಿಗೆ ಇವರಿಬ್ಬರ ಪರಿಚಯವಿದ್ದಿತೆಂಬುದಕ್ಕೆ ಆತನ ಇತರ ರಗಳೆ ಗಳಲ್ಲಿ ಆಧಾರಗಳು ದೊರೆಯುತ್ತವೆ.

೧. **"ಕಾಳಿದಾಸನ ಕಣ್ಣಪನ ಚನ್ನಬಸವನಂ"[೧]**

೨. **"ಸಿದ್ಧರಾಮನಲ್ಲಮನ ಮುಲುಹಣಯ್ಯನಂ"[೨]**

೩. **"ಸೊನ್ನಲಿಗೆಯೊಳು ಜಗದ್ಗುರು ಸಿದ್ಧರಾಮಂಗೆ**
**ನಿನ್ನಪ್ರಸಾದವನೀಯೆನುತ ಕರುಣಿಂಬಡುಗೆ"[೩]**

೪. **"ಸೊನ್ನಲಿಗೆಗೈತಂದು ಶಿವಸಿದ್ಧನಂ ಕಂಡು**
**ಉನ್ನತಜ್ಞಾನಿ ವೈರಾಗ್ಯನಿಧಿಯುಂ ಕಂಡು"[೪]**

೫. **"ನಡೆತಂದು ಸೊನ್ನಲಿಗೆಯ ಪುರಕ್ಕೈತಂದು**
**ಮೃಡಮೂರ್ತಿ ಸಿದ್ಧರಾಮನನಱಿದುಸುರುತಂದು"[೫]**

ಈ ಆಧಾರಗಳಲ್ಲಿ ಹರಿಹರನು ಚನ್ನಬಸವೇಶ್ವರ ಮತ್ತು ಸಿದ್ಧರಾಮೇಶ್ವರರನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಉಲ್ಲೇಖಿಸಿರುವನು. ಆತನು ಮಿಕ್ಕವರಂತೆ ಇವರ ರಗಳೆ ಗಳನ್ನೂ ಸ್ವತಂತ್ರವಾಗಿ ಬರೆದಿರುವ ಸಂಭವವಿದೆ. ಆದರೆ, ಅವುಗಳಿಗೂ 'ಬಸವರಾಜ ದೇವರ ರಗಳೆ'ಯ ಉತ್ತರಾರ್ಧಕ್ಕೆ ಒದಗಿದ ದುಃಸ್ಥಿತಿ ಪ್ರಾಪ್ತವಾಗಿರುವ ಸಂಭವವಿದೆ.

ಇನ್ನು ಈ ವಿಷಯದಲ್ಲಿ ಅತ್ಯಂತ ಮಹತ್ವವಾದುದು ರಾಘವಾಂಕನ 'ಸಿದ್ಧರಾಮ ಚಾರಿತ್ರ'. ಅಲ್ಲಿಯೂ ಸಿದ್ಧರಾಮೇಶ್ವರನು ಚನ್ನಬಸವಣ್ಣನವರಿಂದ ದೀಕ್ಷೆಹೊಂದಿರುವ, ಅಲ್ಲಿಯ ಶರಣವೃಂದದೊಡನೆ ಮಹಾನುಭಾವಗೋಷ್ಠಿಯನ್ನು ಮಾಡಿರುವ ಭಾಗಗಳು ಇದ್ದು ಅವು ಮೇಲೆ ನಿರ್ದೇಶಿಸಿದ ಕಾರಣಕ್ಕಾಗಿಯೇ ಕಣ್ಮರೆಯಾಗಿರುವಂತೆ ತೋರುತ್ತದೆ. ಈ ಪರಿಸ್ಥಿತಿಯಲ್ಲಿ ಈಗಿದ್ದ ಸಿದ್ಧರಾಮ ಪುರಾಣ ಬಸವರಾಜದೇವರ ರಗಳೆಯಂತೆಯೇ ಅಪೂರ್ಣವೆಂದೇ ಭಾವಿಸಬೇಕಾಗುತ್ತದೆ. ಈ ಊಹೆಗೆ ಊರುಗೋಲು ಕೆಳಗಿದೆ:

---

೧. ಲಿಂರ ಪು. ೧೨. ೨. ಲಿಂರ ಪು. ೧೧. ೩. ಏರಾರ ಪು. ೧೨.

೪. ಹಾಕರ ಪು. ೭೯. ಇದಲ್ಲದೆ ಈ ರಗಳೆಯಲ್ಲಿ ಇನ್ನೂ ಹಲವೆಡೆ ಸಿದ್ಧರಾಮನ ಹೆಸರು ಉಕ್ತವಾಗಿದೆ.

೫. ಪ್ರದೇರ ಪು. ೧೭.

ಸಿದ್ಧನಂಜೇಶನು ರಾಘವಾಂಕಚಾರಿತ್ರದಲ್ಲಿ ಕಥಾನಾಯಕನು ರಚಿಸಿರುವ ಎಲ್ಲ ಕಾವ್ಯಗಳ ಸಾರವನ್ನೂ ಯಥಾವತ್ತಾಗಿ ನಿರೂಪಿಸಿರುವನು. ಹರಿಶ್ಚಂದ್ರ ಕಾವ್ಯ, ವೀರೇಶ ಚರಿತೆ, ಇವುಗಳ ಸಂಗ್ರಹ ಮೂಲಕಾವ್ಯಗಳಲ್ಲಿದ್ದಂತೆಯೇ ಇದೆ. ಸಿದ್ಧನಂಜೇಶನು ರಾಘವಾಂಕನ ದಾಟಿಯಲ್ಲಿಯೇ ಕಥೆಯನ್ನು ಹೇಳಿ. ಅಲ್ಲಲ್ಲಿ ಕವಿಯು ಸುಂದರವಾದ ಪದ-ಪ್ರಯೋಗಗಳನ್ನೂ ಬಳಸುತ್ತ ಸಹೃದಯರಿಗೆ ಮೂಲಕಾವ್ಯದ ಪರಿಚಯವನ್ನೂ ರಸಾ-ಸ್ವಾದವನ್ನೂ ಮಾಡಿಕೊಟ್ಟಿರುವನು. ಈ ಸಂಗ್ರಹಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ರಾಘವಾಂಕನ ಪ್ರತಿಯೊಂದು ಕಾವ್ಯ ಸಿದ್ಧನಂಜೇಶನ ಕಣ್ಣಮುಂದೆ ಲಾಸ್ಯವಾಡುತ್ತಿದ್ದಿತೆಂದು ಹೇಳಬಹುದು. ಸಿದ್ಧರಾಮಚಾರಿತ್ರವನ್ನು ಪ್ರಸ್ತಾಪಮಾಡುತ್ತಾ ಸಿದ್ಧನಂಜೇಶನು:

> **"ಶಿವಭಕ್ತಸಂದೋಹದೊಡನೆ ಸುಖಮಿರುತ ರಾ**
> **ಘವದೇವ ಪರಮಶಿವ ಸಿದ್ಧರಾಮೇಶ್ವರನ**
> **ತನೆ ಸತ್ಕಥಾಮೃತವನೊರೆದನಾಶ್ಚರ್ಯವಡೆ ವಿಬುಧತತಿಯೆಂತೆಂದೆನೆ"**

ಇಲ್ಲಿ 'ಎಂತೆಂದೆನೆ' ಎಂಬ ಮಾತು ಬಹಳ ಮಹತ್ವವಾದುದು. ಪೇಳ್ದವನು ರಾಘವಾಂಕ; ಹೀಗೆ ಹೇಳಿದನೆಂದು ಅವನೊಡನೆ ದನಿಗೂಡಿಸುವವ ಸಿದ್ಧನಂಜೇಶ. ಆದುದರಿಂದ ಸಿದ್ಧನಂಜೇಶನಲ್ಲಿ ದೊರೆವ ಸಿದ್ಧರಾಮ ಚಾರಿತ್ರ, ಮೂಲ ಸಿದ್ಧರಾಮ ಚಾರಿತ್ರದ ವಿಶ್ವಸನೀಯವಾದ ಸಂಗ್ರಹವೆಂದು ತೋರುತ್ತದೆ. ಕರಿಯು ಕನ್ನಡಿಯಲ್ಲಿ ಅಡಗಿದಂತೆ ಸಿದ್ಧರಾಮಚಾರಿತ್ರ, ರಾಘವಾಂಕಚಾರಿತ್ರದಲ್ಲಿ ಅಡಗಿದೆಯೆಂದರೆ ಅತ್ಯುಕ್ತಿಯಲ್ಲ.

ಆ ಕಥೆಯ ಗತಿಯನ್ನು ಹೀಗೆ ರೇಖಿಸಬಹುದು:—ಶಿವಸಭೆ– ಅದ್ರಿಶಿರ, ಊರ್ಧ್ವ-ಶಿರರಿಗೆ ಮರ್ತ್ಯದಂಪತಿಗಳಾಗಲು ಭೃಂಗಿಯ ಶಾಪ—ಆಗುಳಿಸದುಣ್ಣದ ಮಗನ ಜನನದಿಂದ ನಿಶ್ಶಾಪ—ಸೊನ್ನಲಿಗೆಯಲ್ಲಿ ಮೊರಡಿಯ ಮುದ್ದಗೌಡ, ಸುಗ್ಗಲೆಯರ ಜನನ—ಮುಪ್ಪಿನ ಅವಸ್ಥೆಯಲ್ಲಿ ರೇವಣ ಸಿದ್ಧೇಶ್ವರನ ಸಂದರ್ಶನ—ಪುತ್ರೋದಯದ ಸೂಚನೆ—ಸಿದ್ಧರಾಮನ ಜನನ—ಧೂಳಿಮಾಕಾಳನೆಂಬ—ನಾಮಕರಣ--ಮಗು ಮುಗ್ಧನಾಗಿರುವುದು—ದನಕಾಯಲು ಕಳುಹಿಸುವುದು—ಮಲ್ಲಿಕಾರ್ಜುನ ದರ್ಶನ—ಹುಚ್ಚಕ್ಕಿಯನ್ನು ಬೇಡಿದುದು—ಕಟ್ಟೋಗರವನ್ನು ತರುವುದು—ಮಲ್ಲಿಕಾರ್ಜುನನು ಅದೃಶ್ಯನಾಗಿರುವುದು—ಆತನನ್ನು ಹುಡುಕುತ್ತ ಪರುಷೆಯೊಡನೆ ಶ್ರೀಶೈಲ ಪ್ರಯಾಣ—ಅಣ್ಣ ಬೊಮ್ಮಣ್ಣ ಆತನನ್ನು ಹುಡುಕುವುದು—ಮಲ್ಲಿಕಾರ್ಜುನನ್ನು ಕಾಣದೆ ಕೊಳ್ಳದಲ್ಲಿ ಹಾರಲು ಉದ್ಯುಕ್ತನಾದುದು—ಮಲ್ಲಿಕಾರ್ಜುನ ದರ್ಶನ—ಭೈರವನಿಂದ ಶ್ರೀಶೈಲ ದರ್ಶನ—ಸೊನ್ನಲಾಪುರಕ್ಕೆ ಲಿಂಗರೂಪವಾಗಿ ಶಿವ ಬರುವ ಭರವಸೆ—ಸೊನ್ನಲಾಪುರ ನಿರ್ಗಮನ,—ಗುಡುಗುಮಿಂಚುಗಳ ಮಧ್ಯದಲ್ಲಿ ಲಿಂಗವಿಳಿದು ತೋರುವುದು—ಅದನ್ನು ನಿತ್ಯಪೂಜಿಸುವುದು—ತಂದೆತಾಯಿಗಳು ಧೂಳಿಮಾಕಾಳನಿಗೆ ನೋಡುವುದು—ಸಿದ್ಧರಾಮನು—ಅದನ್ನು ಪ್ರತಿಭಟಿಸಿ ಮನೆಬಿಡುವುದು—ಬೊಮ್ಮಣ್ಣ ಆತನೊಡನೆ

ಹೋಗುವುದು—ಅವನಿಗೆ ಲಿಂಗದೀಕ್ಷೆ—ಚಾಮವ್ವೆಯ ಭೂದಾನ—ಸೊನ್ನಲಿಗೆಯಲ್ಲಿ ಲಿಂಗಪ್ರತಿಷ್ಠಾಪನೆ. ಪವಾಡಗಳು—ಮೇಘಚೂಡನೆಂಬ ಗಂಧರ್ವನ ಶಾಪವಿಮೋಚನೆ—ಅತಿಹಂಸನ ಶಾಪವಿಮೋಚನೆ—ಎರಳೆಯ ರೂಪ ತಾಳಿದ ಮಯೂರಕನ ವಿಶಾಪ—ಕೇತಾರಕ್ಕೆ ಹೋಗಿ ಕಂಗೆಟ್ಟ ಅಣ್ಣ ಬೊಮ್ಮಣ್ಣನ ಮನದ ಸಂದೇಹನಿರಸನ—ಕುಮುದಶೇಖರನೆಂಬ ಗಂಧರ್ವನ ವಿಶಾಪ—ಕಾಮನು ಹೆಣ್ಣುರೂಪವನ್ನು ಮುಂದಿಟ್ಟು ಸಿದ್ಧರಾಮನನ್ನು ಗೆಲ್ಲದೆ ಹೋಗುವುದು—ಮೊರಬದ ವಿಪ್ರರ ಪವಾಡ—ಕೈಲಾಸಕ್ಕೆ ಹೋಗಿ ಗಿರಿಜೆಯ ಯೋಗಮಜ್ಜನವರಿದು ಚೌಕವನ್ನು ಸೊನ್ನಲಿಗೆಗೆ ತರುವುದು... ಸೆಳ್ಳಿಗೆಯ ಗಜವದನನನ್ನು ಸೊನ್ನಲಿಗೆಯಲ್ಲಿ ಪ್ರತಿಷ್ಠಾಪಿಸಿದುದು—ರಕ್ಕಸಿಯ ವಿಷವನ್ನು ಅಮೃತವನ್ನಾಗಿ ಮಾಡಿದುದು—ಕಾಳರಕ್ಕಸಿಯ ಪವಾಡ—ಅಮೃತೇಶ್ವರ ಲಿಂಗಪ್ರತಿಷ್ಠಾಪನೆ—ಹಾವಿನಹಾಳ ಕಲ್ಲಯ್ಯನ ಅಭಿಮತದಂತೆ ಸೊನ್ನಲಿಗೆಯ ಮಹಿಮೆಯನ್ನು ತೋರಲು ಕಾದ ಕಬ್ಬಿಣದ ಗುಂಡನ್ನು ಹಿಡಿವುದು—ಖರ್ಪರನ ಪವಾಡ—ಸುರಿಗೆಯಿಂದ ಸಿಡಿಲನಿರಿದುದು—ಕಾಳ ಶುನಕನನ್ನು ಉದ್ಧರಿಸಿದುದು—

ಇಲ್ಲಿಯವರೆಗೆ ಸಿದ್ಧರಾಮಪುರಾಣ ಮತ್ತು ರಾಘವಾಂಕಚಾರಿತ್ರಗಳಲ್ಲಿ ಕಥೆ ಮೇಲೆ ನಿರ್ದೇಶಿಸಿದಷ್ಟು ಸೂಕ್ಷ್ಮಾಂಶಗಳಲ್ಲಿಯೂ ಒಂದೇ ಆನುಪೂರ್ವಿಯಲ್ಲಿ ಸಾಗಿದೆ. ಇಲ್ಲಿಂದ ಮುಂದೆ ಮಾತ್ರ ಎರಡೂ ಕಾವ್ಯಗಳ ಕಥಾನಿರೂಪಣೆಯಲ್ಲಿ ವ್ಯತ್ಯಾಸ ಕಂಡು ಬರುತ್ತದೆ. ಅದು ಹೀಗೆ:

| | ಸಿದ್ಧರಾಮಪುರಾಣ | ರಾಘವಾಂಕ ಚಾರಿತ್ರ |
|---|---|---|
| ೧. | — | ಕಿಚ್ಚಿನಲ್ಲಿ ಬಿದ್ದು ಪ್ರಾಣಹೋದ ಬೆಕ್ಕಿಗೆ ಜೀವದಾನ. |
| ೨. | — | ಹಾವು ಕಚ್ಚಿ ಸತ್ತ ಕಾಳಪ್ಪನಿಗೆ ಪ್ರಾಣದಾನ. |
| ೩. | ಬಿಲ್ಲೇಶ ಬೊಮ್ಮಯ್ಯನ ಕಥೆ | ಬಿಲ್ಲೇಶ ಬೊಮ್ಮಯ್ಯನ ಕಥೆ |
| ೪. | ನಾರಕಿಗಳ ಉದ್ಧಾರ | ನಾರಕಿಗಳ ಉದ್ಧಾರ |
| ೫. | ಕ್ಷೇತ್ರಪೂಜೆಯ ಸಿದ್ಧತೆ | ಕ್ಷೇತ್ರಪೂಜೆಯ ಸಿದ್ಧತೆ |
| ೬. | — | ಅಮುಗಿದೇವಯ್ಯಗಳ ಕಥೆ |
| ೭. | ಕ್ಷೇತ್ರಪೂಜೆಯ ಮುಕ್ತಾಯ | ಕ್ಷೇತ್ರಪೂಜೆಯ ಮುಕ್ತಾಯ |
| ೮. | — | ಪ್ರಭು-ಸಿದ್ಧರಾಮ ಸಂದರ್ಶನ |
| ೯. | — | ಪ್ರಭುವಿನೊಡನೆ ಕಲ್ಯಾಣಗಮನ |
| ೧೦. | — | ಚನ್ನಬಸವಣ್ಣನವರಿಂದ ವೀರಶೈವೋಪದೇಶ |
| ೧೧. | — | ಸೊನ್ನಲಿಗೆಗೆ ತಿರುಗಿ ಬಂದುದು |

| | | |
|---|---|---|
| ೧೨. | — | ಕಲ್ಯಾಣದಲ್ಲಿ ಹರಳಯ್ಯ-ಮಧುವಯ್ಯಗಳ ಪ್ರಸಂಗ |
| ೧೩. | ಭೂಪ ಬಿಜ್ಜಳನಳಿದ | ಬಿಜ್ಜಳನ ಮರಣ |
| ೧೪. | ಕರ್ಣದೇವ ವೃತ್ತಾಂತ | ಕರ್ಣದೇವ ವೃತ್ತಾಂತ |
| ೧೫. | ಕಿಚ್ಚಿನಲ್ಲಿ ಬಿದ್ದು ಪ್ರಾಣ ಹೋದ ಬೆಕ್ಕಿಗೆ ಜೀವದಾನ | — |
| ೧೬. | ಹಾವು ಕಚ್ಚಿ ಸತ್ತ ಕಾಳವ್ವೆಗೆ ಪ್ರಾಣದಾನ | — |
| ೧೭. | ಏಲೇಶನಿಗೆ ಪ್ರಾಣದಾನ | — |
| ೧೮. | ಪ್ರಭು-ಸಿದ್ಧರಾಮ ಸಂದರ್ಶನ | — |
| ೧೯. | ಸಿದ್ಧರಾಮನ ಸಮಾಧಿ | ಸಿದ್ಧರಾಮನ ಸಮಾಧಿ |

ಮೇಲಿನ ವ್ಯತ್ಯಾಸಕ್ಕೆ ಕಾರಣವೇನೆಂಬುದನ್ನು ಕುರಿತು ವಿಚಾರಿಸಿದರೆ ಎರಡು ಅಂಶಗಳು ಎದ್ದು ನಿಲ್ಲುತ್ತವೆ—

೧. ರಾಘವಾಂಕ ಚಾರಿತ್ರದಲ್ಲಿ ಮೂಲದಲ್ಲಿಲ್ಲದ ಭಾಗಗಳು ಸಿದ್ಧನಂಜೇಶಕೃತ-ವಾಗಿರಬೇಕು.

೨. ಮೂಲಕಾವ್ಯದ ಈ ಭಾಗಗಳು ಕಾರಣಾಂತರದಿಂದ ಅಸ್ತವ್ಯಸ್ತವಾಗಿರಬೇಕು.

ಇವುಗಳಲ್ಲಿ ಎರಡನೆಯದೇ ಹೆಚ್ಚು ಸಂಭವನೀಯವೆಂದು ತೋರುತ್ತದೆ. ಇದರಿಂದ ಸಿದ್ಧರಾಮಚಾರಿತ್ರದ ಉತ್ತರಾರ್ಧ ಅಸ್ತವ್ಯಸ್ತ ಸ್ವರೂಪವನ್ನು ಪಡೆದಂತಾಗಿದೆ.

೧. ಸಿದ್ಧರಾಮಚಾರಿತ್ರದ ೮ನೆಯ ಸಂಧಿಯೊಳಗೆ ಕ್ಷೇತ್ರಪೂಜೆಯ ವಿವರವನ್ನು ಹೇಳಿ ಕೊನೆಯ ಷಟ್ಪದಿಯ ಕಡೆಯ ಚರಣದಲ್ಲಿ ಇದ್ದಕ್ಕಿದ್ದಂತೆಯೇ 'ಭೂಪ ಬಿಜ್ಜಳ-ನಳಿದ ವೀರ ಜಗದೇವನಿಂ ಸಿದ್ಧ ಸಂಕೇತದಂತೆ' ಎಂಬ ಉಕ್ತಿ ಕಾವ್ಯದ ಕಥೆಗೂ, ಅಲ್ಲಿಯ ಸನ್ನಿವೇಶಗಳಿಗೂ ಹೊಂದಿಕೆಯಾಗದಂತೆ ಎಲ್ಲಿಂದಲೋ ಬಂದು ತೇಪೆಯಾಗಿ ಹತ್ತಿ ಕೊಂಡಂತಾಗಿದೆ. ಬಿಜ್ಜಳನಾರು? ಈ ಘಟನೆ ನಡೆದುದೆಲ್ಲಿ? ಬಿಜ್ಜಳನ ವಧೆಗೆ ಕಾರಣ ವೇನು? ಇತ್ಯಾದಿ ಪ್ರಸ್ತುತ ವಿಷಯಗಳ ಉಲ್ಲೇಖವಿಲ್ಲದೆ. ಪೂರ್ವೋತ್ತರ ಸಂಬಂಧ ವಿಲ್ಲದ ಮಾತನ್ನು ಸಿದ್ಧರಾಮ ಚಾರಿತ್ರದಲ್ಲಿ ಹೇಳುತ್ತಿರುವುದನ್ನು ಗಮನಿಸಿದರೆ ಅಲ್ಲಿ ಒಂದು ದೊಡ್ಡ ಕೊರತೆಯಿದೆ ಎಂಬ ಅನುಭವ ಆಗದಿರದು. ರಾಘವಾಂಕ ಚಾರಿತ್ರದಲ್ಲಿ ಮೇಲಿನ ಎಲ್ಲ ಪ್ರಶ್ನೆಗಳಿಗೂ ಸಮರ್ಪಕವಾದ ಉತ್ತರ ದೊರೆತು ಕೊರತೆ ತುಂಬಿ ಕಥೆ ಸರಾಗವಾಗಿ ಸಾಗುತ್ತದೆ. ಇದರಿಂದ ಸಿದ್ಧರಾಮ ಚಾರಿತ್ರಕ್ಕಿಂತ ರಾಘವಾಂಕ ಚಾರಿತ್ರದ ಕಥಾಭಾಗ ಹೆಚ್ಚು ಕ್ರಮಬದ್ಧವೆನಿಸುತ್ತದೆ. ಸಿದ್ಧರಾಮ ಚಾರಿತ್ರದ ಕಥೆಯ ಚೌಕಟ್ಟು ಹೀಗಿರುವಂತೆ ತೋರುತ್ತದೆ:—

1. ಸಿದ್ಧರಾಮನ ಜನನ. ಬಾಲ್ಯ. ಮಲ್ಲಿಕಾರ್ಜುನ ಸಾಕ್ಷಾತ್ಕಾರ.
2. ಸಿದ್ಧರಾಮನ ಪವಾಡಗಳು.

3. ಸಿದ್ಧರಾಮುನಿಗೆ ಸಂಬಂಧಪಟ್ಟ ಕರ್ಣದೇವನ ವೃತ್ತಾಂತ, ಪ್ರಭು ಸಂದರ್ಶನ.
4. ಗುಡ್ಡರಿಗೆ ಕೊನೆಯ ಉಪದೇಶ ಮತ್ತು ಸಮಾಧಿ.

೨. ಈ ನಾಲ್ಕು ಘಟ್ಟಗಳಲ್ಲಿ ಒಂದಾದ ಎರಡನೆಯ ಘಟ್ಟದ ಕೆಲವು ಪವಾಡಗಳು—ಬೆಕ್ಕಿಗೆ ಜೀವದಾನ. ಕಾಳಪ್ಪೆ ಬೊಮ್ಮಿಸೆಟ್ಟಿಯರ ಕಥೆ, ಏಲೇಶನಿಗೆ ಪ್ರಾಣದಾನ—ಮೂರನೆಯ ಘಟ್ಟದ ಚಾರಿತ್ರಿಕ ಅಂಶಗಳ ಮಧ್ಯದಲ್ಲಿ ಬಂದು ಸೇರಿಕೊಂಡಿವೆ. ಅಲ್ಲಿ ಅವುಗಳಿಗೆ ಹಿಂದು ಮುಂದಣ ಕೊಂಡಿ ಇಲ್ಲದೆ ಇರುವುದರಿಂದ ಎಲ್ಲಿಂದಲೋ ಎತ್ತಿ ತಂದು ಇಟ್ಟಂತಾಗಿದೆ.

ಆದರೆ ರಾಘವಾಂಕ ಚಾರಿತ್ರದಲ್ಲಿ ಇವು ಪವಾಡಗಳಿಗೆ ಮೀಸಲಾಗಿದ್ದ ಎರಡನೆಯ ಘಟ್ಟದಲ್ಲಿಯೇ ಉಘೇಕಾಳನ ವಿಶಾಪ ಸನ್ನಿವೇಶವಾದೊಡನೆಯೇ ಬರುತ್ತವೆ. ಇದನ್ನು ನೋಡಿದರೆ ಸಿದ್ಧರಾಮ ಚಾರಿತ್ರದಲ್ಲಿ ಕ್ರಮವಿಪರ್ಯಾಸವಾಗಿರುವ ಸಂಗತಿಗಳು ಅದೇ ರಾಘವಾಂಕಚಾರಿತ್ರದಲ್ಲಿ ಸಮುಚಿತವಾದ ಸ್ಥಳದಲ್ಲಿಯೇ ಬಂದಿವೆ ಎಂದು ಮೇಲು ನೋಟಕ್ಕೆ ತೋರುತ್ತದೆ.

೩. ಷಟ್ಪದಿ ಕಾವ್ಯಗಳಲ್ಲಿ ಸಂಧಿಯ ಆರಂಭದೊಳಗೆ ಸೂಚನಾಪದ್ಯಾರ್ಧವೊಂದು ಬರುವ ಸಂಪ್ರದಾಯವಿದೆ. ಅಲ್ಲಿ ಆ ಸಂಧಿಯ ಮುಖ್ಯ ಘಟನೆಗಳ ಸೂಚಿ, ಸಾರ ಬರುವುದುಂಟು. ಈ ದೃಷ್ಟಿಯಿಂದ ಒಂಬತ್ತನೆಯ ಸಂಧಿಯ ಸೂಚನಾಪದ್ಯ ವಿಮರ್ಶಾರ್ಹವಾಗಿದೆ.

**ಸೂ॥ ಸತ್ತ ಪ್ರಾಣಿಗಳು ಜೀವನ ಪಡೆಯುತಿರೆ ಜಗವು**
**ಚಿತ್ತಮುಟ್ಟಿಬೆಗುತ್ತಿರಲು ಸಿದ್ಧೇಂದ್ರಂಗೆ**
**ಉತ್ತಮಜ್ಞಾನಿಯುಲ್ಲಮಪ್ರಭು ಬಂದನಾ ಸಿದ್ಧಕುಲತಿಲಕನೆಡೆಗೆ ॥**

ಇಲ್ಲಿ ಎರಡು ವಿಷಯಗಳು ವ್ಯಕ್ತವಾಗಿವೆ—(೧) ಸತ್ತ ಪ್ರಾಣಿಗಳಿಗೆ ಜೀವದಾನ ಮಾಡಿದುದು. (೨) ಪ್ರಭು ಸಿದ್ಧರಾಮನಲ್ಲಿಗೆ ಬಂದುದು. ಸೂಚನೆ ಈ ಎರಡು ವಿಷಯಗಳನ್ನು ಸೂಚಿಸಿದರೆ, ಸಂಧಿ ಕರ್ಣದೇವನ ಕಥೆಯಿಂದ ಆರಂಭವಾಗುತ್ತದೆ. ಇಡೀ ಸಂಧಿಯನ್ನು ನೋಡಿದರೆ ರಾಘವಾಂಕನಿಗೆ ಕರ್ಣದೇವನ ಸನ್ನಿವೇಶದ ಬಗೆಗೆ ಹೆಚ್ಚು ಆಸ್ಥೆ ಇದ್ದಂತೆ ತೋರುತ್ತದೆ. ೬೩ ಪದ್ಯಗಳ ಈ ಸಂಧಿಯಲ್ಲಿ ೨೦ ಪದ್ಯಗಳು ಕರ್ಣದೇವನ ಕಥೆಗಾಗಿ ಮೀಸಲಾಗಿದ್ದರೂ ಸೂಚನೆಯಲ್ಲಿ ಅದರ ಉಲ್ಲೇಖವಿಲ್ಲದಿರುವುದೇಕೆ?

ಇದಲ್ಲದೆ, ಇದೇ ಸಂಧಿಯ ಕೊನೆಯಲ್ಲಿ ಸಿದ್ಧರಾಮನು ಗೊಪೆಯನ್ನು ಪ್ರವೇಶಿಸಿದ ಮಹತ್ವದ ಸನ್ನಿವೇಶ ಬರುತ್ತದೆ. ಅಲ್ಲಿಗೆ ಸಿದ್ಧರಾಮನ ಪವಿತ್ರ ಜೀವನ ಹಾಗೂ ರಾಘವಾಂಕನ ಸಿದ್ಧರಾಮಚಾರಿತ್ರ ಎರಡೂ ಮುಕ್ತಾಯವಾಗುತ್ತವೆ. ಇಂತಹ ಸನ್ಮಂಗಲಕರವಾದ ವಿಷಯದ ನಿರೂಪಣೆ ಸೂಚನೆಯಲ್ಲಿಲ್ಲದಿರುವುದು ವಿಮರ್ಶಕರ ಚಿತ್ತವನ್ನು ಇನ್ನೂ ಕೆರಳಿಸುವಂತಿದೆ.

ಇನ್ನು ಸೂಚನಾಪದ್ಯದ ರಚನೆಯನ್ನೇ ಪರೀಕ್ಷಿಸಬಹುದು. ಅಲ್ಲಿ ಕೆಳಗಣ ದೋಷಗಳು ಎದ್ದು ಕಾಣುತ್ತವೆ.

**ಛಂದೋದೋಷ**

(೧) ಮೂರನೆಯ ಚರಣದ ಮೂರನೆಯ ಗಣ ದೋಷಪೂರ್ಣವಾಗಿದ್ದು ಲಯಕ್ಕೆ ಚ್ಯುತಿ ಬರುತ್ತದೆ. ರಾಘವಾಂಕನಂತಹ ಕವಿಯು ಹೀಗೆ ಎಡವಿರಲು ಸಾಧ್ಯವಿಲ್ಲ.

(೨) ಸೂತ್ರರೂಪವಾಗಿರಬೇಕಾದ ಸೂಚನಾಪದ್ಯದಲ್ಲಿ ಎರಡನೆಯ ಚರಣ ಈಗಿರುವ ರೀತಿಯಲ್ಲಿ

(ಅ) ಅನವಶ್ಯವೆನಿಸುತ್ತದೆ.

(ಬ) ಪ್ರಾಸಸ್ಥಾನದಲ್ಲಿರುವ "ಭಕ್ತಿಯಿದೆ" ಎಂಬ ಭಿನ್ನಪಾಠ ಈ ಚರಣದ ಅಸ್ತಿತ್ವದ ಬಗೆಗೆ ಸಂದೇಹವನ್ನು ಹುಟ್ಟಿಸುತ್ತದೆ.

(೩) ಈ ಸೂತ್ರಪದ್ಯದಲ್ಲಿ ಬರುವ 'ಸಿದ್ಧೇಂದ್ರಂಗೆ' ಮತ್ತು 'ಸಿದ್ಧಕುಲತಿಲಕ ನೆಡೆಗೆ' ಎಂಬ ದ್ವಿರುಕ್ತಿಗಳು ಸೂಚನಾಪದ್ಯದ ಲಕ್ಷಣಕ್ಕೆ ವಿರೋಧವೆನಿಸುವಂತಿವೆ.

ಈ ಎಲ್ಲ ಕಾರಣಗಳ ಮೂಲಕ ಪ್ರಸ್ತುತ ಸೂಚನಾಪದ್ಯ ಮೂಲಸ್ವರೂಪದಿಂದ ವಿಕೃತವಾಗಿದೆ ಎಂದು ನಿರ್ಣಯಿಸಬಹುದಾಗಿದೆ.

೪. ಸಿದ್ಧರಾಮ ಚಾರಿತ್ರದಲ್ಲಿ ಪ್ರಭುದೇವರು ಬಿಜ್ಜಳನಳಿದ ಮೇಲೆ ಸಿದ್ಧರಾಮನನ್ನು ಕಂಡು ಬೋಧಿಸಿದನೆಂದು ಉಕ್ತವಾಗಿದೆ. ರಾಘವಾಂಕನ ಕಥಾಸರಣಿಯನ್ನೇ ಹೋಲುವ ಹರಿಹರನ ಪ್ರಭುದೇವರ ರಗಳೆಯಲ್ಲಿ ಬಿಜ್ಜಳನಳಿದ ಮೇಲೆ ಅವರಿಬ್ಬರ ಸಂದರ್ಶನವಾಯಿತೆಂದು ಹೇಳಲಾಗಿರುವುದಿಲ್ಲ. ಇದರಿಂದಲೂ, ಇದುವರೆಗಣ ನಮ್ಮ ಇತರತ್ರ ಆಧಾರಗಳಿಂದಲೂ ಬಿಜ್ಜಳನಳಿದ ಮೇಲೆ ಪ್ರಭು ಸಿದ್ಧರಾಮನನ್ನು ಕಂಡನೆಂದು ನಂಬಲಿಕ್ಕಾಗದು. ಆದುದರಿಂದ ಆ ಸನ್ನಿವೇಶ (ಸಂದರ್ಶನ ಸನ್ನಿವೇಶ) ಈಗಿದ್ದ ಸ್ಥಿತಿಯಲ್ಲಿ ಸ್ಥಳಾಂತರಹೊಂದಿದಂತೆ ತೋರುತ್ತದೆ.

೫. ರಾಘವಾಂಕನಿಗೆ ಪ್ರಭು-ಸಿದ್ಧರಾಮರ ಸಂದರ್ಶನದ ಸನ್ನಿವೇಶ ನಾಟ್ಯ ಪ್ರತಿಭಾವಿಲಾಸಕ್ಕೆ ಉತ್ತಮವಾದ ವೇದಿಕೆ. ಕವಿ ತನ್ನ ಕಾವ್ಯವನ್ನು ಲೀಲಾಜಾಲವಾಗಿ ಕುಣಿಸುವ ಅವಕಾಶವನ್ನು ಎಂದೂ ಕಳೆದುಕೊಳ್ಳಲಿಕ್ಕಿಲ್ಲ. ಪರಿಸ್ಥಿತಿ ಹೀಗಿರುವಾಗ ಸಿದ್ಧರಾಮಚಾರಿತ್ರದಲ್ಲಿ ಯಾವುದೋ ಒಂದು ಸಂಧಿಯು ನಟ್ಟನಡುವೆ. ಮಹತ್ವವೂ. ಪ್ರಸ್ತುತವೂ ಅಲ್ಲದ ಘಟನೆಗಳೂ, ಪವಾಡಗಳೂ ನಡೆದ ಮೇಲೆ ಈ ಸನ್ನಿವೇಶ ಕೇವಲ ೬–೭ ಪದ್ಯಗಳಲ್ಲಿ ಮುಗಿದುಹೋಗುತ್ತದೆ. ಇದೇ ಸಂಧಿಯಲ್ಲಿ ಕರ್ಣದೇವನ ವೃತ್ತಾಂತವನ್ನು ೨೦ ಪದ್ಯಗಳಲ್ಲಿ ವಿವರಿಸಿ ಅನಾವಶ್ಯಕವಾದ ಮೂರು ಪವಾಡಗಳನ್ನು ೧೭ ಪದ್ಯಗಳಲ್ಲಿ ಹೇಳಿ. ಪ್ರಭುಸಂದರ್ಶನದ ವಿಷಯವನ್ನು ೭ ಪದ್ಯಗಳಲ್ಲಿ 'ಮಹಾಲಿಂಗ ಭಕ್ತರ ಭಕ್ತನೆನಿಸಿದ' ರಾಘವಾಂಕನು ಹೇಳುವುದು ಸಾಧ್ಯವೆ?

೬. ಸಿದ್ಧರಾಮಚಾರಿತ್ರದಲ್ಲಿ 'ಬಸವರಾಜನ ಜಾಣಿಸುತ್ತ' ಬಂದ ಪ್ರಭುದೇವನು 'ಕದಳಿಯ ಬಟ್ಟೆಗೊಂಡ'ನೆಂದು ಹೇಳಿದುದು ಪರಸ್ಪರ ಸಂಬಂಧವಿಲ್ಲದ ಮಾತೆಂಬಂತೆ ತೋರುತ್ತದೆ. ಬಸವರಾಜನನ್ನು ಜಾಣಿಸುತ್ತ ಬಂದ ಪ್ರಭು ಆತನನ್ನು ಕಾಣಬೇಕೆಂಬ ತವಕದಲ್ಲಿ ಇದ್ದಂತೆ ಅರ್ಥಮಾಡಬಹುದಾಗಿದೆ. ಆದುದರಿಂದ ಆತನು ಬಸವರಾಜನಿದ್ದ ಕಲ್ಯಾಣಾಭಿಮುಖವಾಗಿ ಹೊರಟಿರುವುದು. ಹಾದಿಯಲ್ಲಿ ಸಿದ್ಧರಾಮ

ನನ್ನು ಕಂಡಿರುವುದು ಸಹಜ. ಶೂನ್ಯಸಂಪಾದನೆ ಮೊದಲಾದ ಗ್ರಂಥಗಳಲ್ಲಿ ದೊರೆಯುವ ವಚನಗಳೂ ಇದಕ್ಕೆ ಪೋಷಕವಾಗಿವೆ. ಹೀಗಿದ್ದರೂ ಪ್ರಭುದೇವರು ಸಿದ್ಧರಾಮನಿಗೆ **'ಇರ್ದುವಿಲ್ಲೆಂಬ ಬಯಲಿನ ಭ್ರಮೆಯು ಬೆದರ ಬಿಸುಡು'** ಎಂದು ಹೇಳಿ ಕದಳಿಗೆ ಹೊರಟಿರುವುದು ಸೋಜಿಗ. ಯಾರು ಮೂಲೋದ್ದೇಶವನ್ನು ಮರೆತರು? ಬಸವರಾಜನನ್ನು ಜಾಸಿಸುತ್ತ ಬಂದ ಪ್ರಭುವು ಅದನ್ನು ಮರೆತನೆ? ಇಲ್ಲವೆ ಅದನ್ನು ನಡೆಸಿಕೊಂಡುಹೋದ ಕವಿ ಮರೆತನೆ? ಪ್ರಾಯಶಃ ಇವರಿಬ್ಬರೂ ಮರೆತಿರಲಾರರು. ವಿಸ್ತಾರವಾಗಿದ್ದ ಈ ಭಾಗದ ಮಹತ್ವದ ಅಂಶ ನಷ್ಟವಾಗಿ ಹೋಗಿ ಮೊಟಕಾಗಿ ಈಗಿರುವ ರೂಪದಲ್ಲಿ ಉಳಿದಿರುವುದರಿಂದ ಪರಸ್ಪರ ವಿಸಂಗತವೆನಿಸುವ ಈ ಮಾತುಗಳು ಆ ಭಾಗದಲ್ಲಿ ತಲೆದೋರಿವೆ.

ಇದುವರೆಗಣ ವಿವೇಚನೆಯಿಂದ ರಾಘವಾಂಕನ ಸಿದ್ಧರಾಮಚಾರಿತ್ರದ ೭ನೆಯ ಸಂಧಿಯ ಮುಗಿತಾಯದಿಂದ ಕೊನೆಯುವರೆಗಿನ ಕಥಾಭಾಗವು ಮೂಲಸ್ವರೂಪದಿಂದ ವ್ಯತ್ಯಸ್ತವಾಗಿದೆ ಎಂದು ಊಹಿಸಲವಕಾಶವಿದೆ. ಇದಕ್ಕೆ ಪುಷ್ಟಿಕೊಡುವಂತೆ ರಾಘವಾಂಕ ಚಾರಿತ್ರದ ಈ ಭಾಗದ ಕಥೆ ಕ್ರಮಬದ್ಧವಾಗಿ ಸನ್ನಿವೇಶಗಳ ಆನುಪೂರ್ವಿಯೊಡನೆ ಸರಾಗವಾಗಿ ಸಾಗುತ್ತದೆ. ಸಿದ್ಧರಾಮಚಾರಿತ್ರವಾದರೋ ಕಥೆಯು ಓಟದಲ್ಲಿ ಕುಂಠಿತ ವಾಗುತ್ತ, ಸನ್ನಿವೇಶ ರಚನೆಯಲ್ಲಿ ವಿಪರ್ಯಾಸವಾಗುತ್ತ ಹೋಗುತ್ತದೆ. ಅವೆರಡೂ ಕಥೆಗಳನ್ನು ತೂಗಿನೋಡಿದರೆ ಈ ಮಾತಿನ ಸತ್ಯಾಂಶ ಅರ್ಥವಾಗದಿರದು.[೧]

ಇಲ್ಲಿ ಸಿದ್ಧನಂಜೇಶನೇ ರಾಘವಾಂಕಚಾರಿತ್ರದಲ್ಲಿ ಈ ಮಾರ್ಪಾಟುಗಳನ್ನು ಮಾಡಿಕೊಂಡಿರಬಾರದೇಕೆ? ಎಂಬ ಪ್ರಶ್ನೆ ಉದ್ಭವಿಸುವುದು ಸಹಜವಾಗಿದೆ. ಅಮುಗಿ ದೇವಯ್ಯನ ಕಥೆಯು ವಿಷಯವಾಗಿ ಪ್ರೊ. ಡಿ. ಎಲ್. ನರಸಿಂಹಾಚಾರ್, ಎಂ. ಎ.

---

೧. **ಸಿದ್ಧರಾಮ ಚಾರಿತ್ರ:**—ಸಿದ್ಧರಾಮನು ಉಘೇಕಾಳನಿಗೆ ಸಮಾಧಿಯನ್ನು ಕಲ್ಪಿಸಿ ಶೈವಸಾಮ್ರಾಜ್ಯ ಸುಖದಲ್ಲಿರುವನು. ಆಗ ಬಿಲ್ಲೇಶ ಬೊಮ್ಮಯ್ಯನೆಂಬ ಮೋಸಗಾರನು ಸಿದ್ಧರಾಮ ನಲ್ಲಿಗೆ ಬಂದು ಕಪಟಶಿಷ್ಯನಾಗಿ ಆತ್ಮಹತ್ಯಮಾಡಿಕೊಂಡು ನರಕಕ್ಕೆ ಹೋಗುವನು. ಕೈಲಾಸಕ್ಕೆ ಹೋಗಿಬರುವ ಸಮಯದಲ್ಲಿ ಗಂಧರ್ವನೊಬ್ಬನಿಂದ (ಉಘೇಕಾಳ) ಬಿಲ್ಲೇಶ ಬೊಮ್ಮಯ್ಯನು ನರಕಯಾತನೆಯಲ್ಲಿದ್ದು ತನ್ನನ್ನು ಕುರಿತು ಪ್ರಾರ್ಥಿಸಿರುವುದನ್ನು ತಿಳಿದುಕೊಳ್ಳುವನು. ಆತನನ್ನು ಉದ್ಧರಿಸಬೇಕೆಂದು ಶಿವನ ಅಪ್ಪಣೆಯನ್ನು ಕೇಳುವನು. ಕ್ಷೇತ್ರಪೂಜೆ, ಮದುವೆ, ಅಭಿಷೇಕ ಮುಂತಾದುವುಗಳ ಲಂಚವನ್ನು ಕೊಡಬೇಕೆಂದು ನಿರೂಪಿಸಿ, ಸರ್ವನಾರಕಿಗಳನ್ನು ಉದ್ಧರಿಸಲು ಶಿವನು ಅಪ್ಪಣೆಕೊಡುವನು. ಅವರನ್ನು ಉದ್ಧರಿಸಿ ಕ್ಷೇತ್ರಪೂಜೆಯನ್ನು ನೆರವೇರಿಸಲು ಬಿಜ್ಜಳನು ಅಳಿವನು. ಬಿಜ್ಜಳನ ಪಟ್ಟವನ್ನು ತನಗೆ ಕಟ್ಟಲು ಬರಬೇಕೆಂದು ಕರ್ಣದೇವನು ಅಮಾತ್ಯರ ಶಿಷ್ಯಮಂಡಲವನ್ನು ಸಿದ್ಧರಾಮನಲ್ಲಿಗೆ ಕಳಿಸುವನು. ಅವರ ಆಗ್ರಹಕ್ಕೆ ಒಪ್ಪಿಹೋದ ಸಿದ್ಧರಾಮನು ಹಾದಿಯಲ್ಲಿಯೇ ಎರಡು ಸಲ ಮಾಯವಾಗಿ ಸೊನ್ನಲಿಗೆಗೆ ಬರುವನು. ಮತ್ತೆ ಕರೆಯಲು ಬಂದ ಬಾಚರಸರಿಗೆ ಸೊನ್ನಲಿಗೆಯಲ್ಲಿಯೇ ಶಿವಸಮಾಧಿಯಾಗುವುದು. ಕಿಚ್ಚಿನಲ್ಲಿ ಬಿದ್ದು ಸತ್ತ ಬೆಕ್ಕಿಗೆ, ಹಾವು ಕಡಿದು ಮರಣಹೊಂದಿದ ಕಾಳವ್ವೆಗೆ ಜೀವದಾನ ನೀಡುವನು. ಇದರಂತೆ ಏಲೇಶ್ವರನಿಗೂ ಜೀವದಾನ ಮಾಡುವನು. ಅಷ್ಟರಲ್ಲಿ ಪ್ರಭು ಸಿದ್ಧರಾಮನಲ್ಲಿಗೆ ಬಂದು 'ಮಾನವರ ನಡುವಿರಲು ಬೇಡ ಸಿದ್ಧೇಂದ್ರ' ಎಂದು ಬೋಧಿಸಿ ಕದಳಿಯತ್ತ ಹೋಗು ವನು. ಇತ್ತ ಸಿದ್ಧರಾಮನು ಹಾವಿನಹಾಳ ಕಲ್ಲಯ್ಯ ಮೊದಲಾದ ಗುಡ್ಡರಿಗೆ ಉಪದೇಶವಿತ್ತು

ಅವರು ಹೀಗೆ ಹೇಳಿರುವರು: "ಸಿದ್ಧರಾಮನು ಕೊಟ್ಟಣವಿಕ್ಕಿಸಿದ ವಿಷಯ ರಾಘವಾಂಕನಿಗೆ ತಿಳಿದಿತ್ತು. ಅಮುಗಿ ದೇವಯ್ಯನ ಪರಿಚಯ ಸಿದ್ಧರಾಮನಿಗೆ ಇದ್ದಿತೆಂಬುದಕ್ಕೆ ಅವನ ಒಂದು ವಚನದ ಆಧಾರವಿದೆ. ಈ ಸಂದರ್ಭದಲ್ಲಿ ಒಂದು ಕಥೆಯನ್ನು ಸೇರಿಸುವುದೇನೂ ಕಷ್ಟವಲ್ಲ. ಯಾರೋ ಜಾಣರು ಇದನ್ನು ಕಟ್ಟಿರಬೇಕೆಂದು ಕಾಣುತ್ತದೆ."[1] ಇಲ್ಲಿ ಲೇಖಕರ ಅಭಿಪ್ರಾಯವೇನೆಂದು ಖಚಿತವಾಗಿರುವುದಿಲ್ಲ. ಅಮುಗಿ ದೇವಯ್ಯ, ಸಿದ್ಧರಾಮರಿಗೆ ಪರಸ್ಪರ ಪರಿಚಯವಿದ್ದುದು ಅವರ ಒಂದೇಕೆ ಎರಡು ವಚನಗಳಿಂದ ವಿದಿತವಾಗುವುದು ಸತ್ಯಸಂಗತಿ. ಸಿದ್ಧರಾಮನು ಕೊಟ್ಟಣವಿಕ್ಕಿಸಿದ ವಿಷಯವನ್ನು

---

ಗೊಪೆಯನ್ನು ಪ್ರವೇಶಿಸಿ ಶಿವಸಮಾಧಿಯನ್ನು ಹೊಂದುವನು. ಇಲ್ಲಿಗೆ ಕಾವ್ಯ ಮುಕ್ತಾಯವಾಗುವುದು.

**ರಾಘವಾಂಕ ಚಾರಿತ್ರ:**—ಉಘೇಕಾಲನು ಹಲವು ಕಾಲ ಇರ್ದು ಅಳಿಯೆ ಸಿದ್ಧಪತಿಯು ಪುಷ್ಪಕದೊಳಗೆ ಅದನ್ನು ಮೆರೆಸಿ ತಾನೇ ನಿಕ್ಷೇಪಿಸಿ ಮೋಕ್ಷವನ್ನು ದಯಪಾಲಿಸಿದನು. ಮಹಾಮನೆಯ ಬೆಕ್ಕು ಕಿಚ್ಚಿನೊಳಗೆ ಬಿದ್ದು ಸಾಯಲು ಅದಕ್ಕೆ ಪ್ರಾಣದಾನಮಾಡುವನು. ಹಾವು ಕಚ್ಚಿ ಸತ್ತ ಕಾಳವ್ವೆಗೆ ಪ್ರಸಾದವನ್ನು ಕೊಟ್ಟು ಜೀವ ಬರುವಂತೆ ಮಾಡುವನು. ಬಿಲ್ಲೇಶ ಬೊಮ್ಮಯ್ಯನು ಮೋಸಮಾಡಿ ಕಪಟ ಶಿಷ್ಯನಾಗಿ ಇರಿದುಕೊಂಡು ನರಕಕ್ಕೆ ಹೋಗುವನು. ಸಿದ್ಧಪತಿಯು ಎಂದಿನಂತೆ ಶಿವಸಭೆಗೆ ಹೋಗುತ್ತಿರಲು ಮಾರ್ಗದಲ್ಲಿ ಗಂಧರ್ವನು ಆತನ ಶಿಷ್ಯ ಬೊಮ್ಮಯ್ಯನು ನರಕದಲ್ಲಿ ತನ್ನನ್ನು ಪ್ರಾರ್ಥಿಸುವುದಾಗಿ ತಿಳಿಸಿದನು. ಕ್ಷೇತ್ರಪೂಜೆಯ ಲಂಚವನ್ನು ಕೊಡುವೆನೆಂದು ಶಿವನಿಗೆ ಒಪ್ಪಿಗೆಯಿತ್ತು ತತ್ಪ್ರಸಾದದಿಂದ ಸಿದ್ಧರಾಮನು ನಾರಕಿಗಳನ್ನೆಲ್ಲ ಉದ್ಧರಿಸುವನು. ಕ್ಷೇತ್ರ-ಪೂಜೆಯು ಸಿದ್ಧತೆ ನಡೆಯುವುದು. ಎಲ್ಲರೂ ಕೊಟ್ಟಣ ಕುಟ್ಟಿಕೊಟ್ಟರೆ ಅದನ್ನೊಪ್ಪದ ವೀರಶೈವ ಅಮುಗಿದೇವಯ್ಯನು ಊರುಬಿಟ್ಟು ಹೊರಗೆ ಹೋಗಬೇಕಾಗಲು, ಮಲ್ಲಿಕಾರ್ಜುನನು ಆತನೊಡನೆ ಹೊರೆಹೊತ್ತುಕೊಂಡು ಹೋಗುವನು. ಮರುದಿನ ಮಲ್ಲಿಕಾರ್ಜುನನಿಂದಲೇ ಈ ವಿಷಯ ತಿಳಿದು ಸಿದ್ಧರಾಮನು ಪಶ್ಚಾತ್ತಾಪಪಟ್ಟು, ಆತನಲ್ಲಿ ಕ್ಷಮೆ ಕೇಳಿ ಅವನ ಗಂಟು ತಾನೇ ಹೊತ್ತುಕೊಂಡು ಅವನೊಡನೆ ಸೊನ್ನಲಿಗೆಗೆ ಬರುವನು. ಆ ಮೇಲೆ ಸಿದ್ಧಪತಿಯು ಕ್ಷೇತ್ರಪೂಜೆ, ವಿವಾಹ, ಮೊದಲಾದುವುಗಳನ್ನು ಪೂರೈಸುವನು. ಹೀಗೆ ಸಿದ್ಧರಾಮನು ಕೆರೆ ಕಟ್ಟಿಸುವುದೂ, ಶಿವಾಲಯಗಳನ್ನು ನಿರ್ಮಿಸುವುದೂ ಮುಂತಾದ ಕಾರ್ಯಗಳಲ್ಲಿ ನಿರತನಾಗಿರಲು ಪ್ರಭು-ದೇವರು ಅಲ್ಲಿಗೈತರುವರು. ಆತನು ಒಡ್ಡ ರಾಮಯ್ಯನೆಂದು ಜರೆಯಲು ಕಲ್ಲಿಂದಿಟ್ಟು ಕದನ-ವಾಡುವರು. ಕಲ್ಲು ತಾಕದಿರಲು ಸಿದ್ಧರಾಮನು ತಾನೇ ಅಲ್ಲಿಗೆ ಬಂದು ನೊಸಲಕಣ್ಣನ್ನು ತೆಗೆಯಲು ಪ್ರಭುವು ಅದನ್ನು ತನ್ನ ಅಂಗಾಲಿನಲ್ಲಿ ಅಡಗಿಸುವನು. ಮತ್ತೆ ಅದಕ್ಕೆ ಅಪ್ಪಣೆ ಕೊಡಲು ಅದು ಪುರವನ್ನೇ ಸುಡುವುದು. ಸಿದ್ಧರಾಮನಿಗೆ ಪಶ್ಚಾತ್ತಾಪವಾಗುವುದು. ಪ್ರಭು-ವಿನ ಕೃಪೆಗೆ ಪಾತ್ರವಾಗಿ ಇಷ್ಟಲಿಂಗದ ರಹಸ್ಯವನ್ನು ಅರಿಯಲು ಆತನೊಡನೆ ಕಲ್ಯಾಣಕ್ಕೆ ತೆರಳುವನು. ಅಲ್ಲಿ ಚನ್ನಬಸವಣ್ಣನವರಿಂದ ಲಿಂಗದೀಕ್ಷೆ ಪಡೆದು ಸೊನ್ನಲಿಗೆಗೆ ಬಂದು ಸುಖ-ದಿಂದಿರುವನು.

ಬಿಜ್ಜಳನು ಹಳ್ಳಯ್ಯ ಮಧುವಯ್ಯಗಳ ಕಣ್ಣುಗಳನ್ನು ಕೀಳಿಸಲು ಆತನ ವಧೆಯಾಗುವುದು. ಕರ್ಣದೇವನು ತನ್ನ ಅಣ್ಣನ ಪಟ್ಟವನ್ನು ತನಗೆ ಕಟ್ಟಬೇಕೆಂದು ಸಿದ್ಧರಾಮನಲ್ಲಿಗೆ ಎರಡು ಸಲ ಮಂತ್ರಿಗಳ ಶಿಷ್ಟಮಂಡಲವನ್ನು ಕಳಿಸಿ ವಿಫಲನಾಗುವನು. ಮತ್ತೆ ಕರೆಯಲು ಬಂದ ಚಾಚರಸನಿಗೆ ಸೊನ್ನಲಿಗೆಯಲ್ಲಿ ಸಿದ್ಧರಾಮನ ಸಾನ್ನಿಧ್ಯದಲ್ಲಿ ಶಿವಸಾಯುಜ್ಯವಾಗುವುದು.

೧. ಶಿಚಾ ಪು. XLIX.  ೨. ಸಿಷವ ೩೭೫; ಮಿಸ್ರೋವ ೬೦.

ರಾಘವಾಂಕನು ವಿವರಿಸುತ್ತಾನೆ. ಆದರೆ, ಈ ಆಧಾರಗಳಿಂದ ಒಂದು ಕಥೆಯನ್ನು ಯಾರೋ ಜಾಣರು ಕಟ್ಟಿರಬೇಕೆಂದು ನಿರ್ಣಯಿಸಿಬಿಡುವಷ್ಟು ಈ ಸಮಸ್ಯೆ ಸುಲಭ-ವಾಗಿಲ್ಲ. ರಾಘವಾಂಕನ ಮೂಲಕಾವ್ಯದಲ್ಲಿಯೇ ಇದು ಇದ್ದಿರಬಾರದೇಕೆ ಎಂಬ ಪ್ರಶ್ನೆಯೂ ಅದರ ಬೆನ್ನಹಿಂದೆಯೇ ಉದ್ಭವಿಸಬಹುದಾಗಿದೆ. ಸಿದ್ಧನಂಜೇಶನೇ ಮೂಲ-ದಲ್ಲಿಲ್ಲದ ಇದೊಂದು ಕಥೆಯನ್ನು ತನ್ನ ಸಂಗ್ರಹದಲ್ಲಿ ಸೇರಿಸಿರಬೇಕೆಂದು ಹೇಗೆ ವಾದಿಸು ವರೋ ಅದೇ ರೀತಿಯಲ್ಲಿ ಸಿದ್ಧನಂಜೇಶನು ಅನುಸರಿಸಿದ ಮೂಲ ಸಿದ್ಧರಾಮಚಾರಿತ್ರ ದಲ್ಲಿಯೇ ಈ ಕಥೆ ಇದ್ದು ಅದನ್ನು ಅನಂತರ ಯಾರೋ ಜಾಣರು ಬೇರೊಂದು ಉದ್ದೇಶ ದಿಂದ ತೆಗೆದುಹಾಕಿರಬೇಕೆಂದು ಊಹಿಸಲೂ ಸಾಧ್ಯವಿದೆ.

ಸಿದ್ಧನಂಜೇಶನಿಗೆ ರಾಘವಾಂಕನ ಮಿಕ್ಕ ಕಾವ್ಯಗಳಂತೆ ಸಿದ್ಧರಾಮಚಾರಿತ್ರದ ಗಾಢ ಪರಿಚಯವಿದ್ದುದು ಸುಸ್ಪಷ್ಟ. ಏಳನೆಯ ಸಂಧಿಯ ಮುಕ್ತಾಯದ ವರೆಗೆ ಸಿದ್ಧರಾಮಚಾರಿತ್ರದ ಸನ್ನಿವೇಶ, ಘಟನೆ ಮುಂತಾದುವು ಚಾಚೂ ತಪ್ಪದೆ ಅದೇ ಕ್ರಮದಲ್ಲಿ ಬಂದ ವಿಷಯವನ್ನು ಹಿಂದೆ ವಿವರಿಸಲಾಗಿದೆ. ಈ ಉಕ್ತಿಗೆ ಉಪಷ್ಟಂಭಕ ವಾಗುವಂತೆ ಇವೆರಡು ಕಾವ್ಯಗಳಲ್ಲಿರುವ ಕೆಲವು ಪದ್ಯಪ್ರಯೋಗ ಸಾಮ್ಯಗಳನ್ನು ಉದ್ಧರಿಸಬಹುದು:

| ಸಂ. ಪ. | ಸಿದ್ಧರಾಮಚಾರಿತ್ರ | ಸಂ. ಪ. | ರಾಘವಾಂಕಚಾರಿತ್ರ |
|---|---|---|---|
| ೧–೮ | 'ಧರೆಗೆ ಸೊನ್ನಲಿಗೆ ಕೈಲಾಸ...' | ೧೫–೯೫ | 'ಧರೆಗೆ ನಿಜಕೈಲಾಸ...' |
| ೧–೪೦ | 'ಅಪ್ರತಿಮ ಶಿವಯೋಗಯುತ ನಿಮಗೆ ಪುತ್ರನಾದಪಂ.' | ೧೫–೧೪ | 'ಅಪ್ರತಿಮ ಶಿವಯೋಗಿ ನಿಮಗೊಲಿದು ಸುತನಪ್ಪ....' |
| | (ಜನನ ಸಂದರ್ಭ) | | |
| ೨–೨೮ | 'ಹಂಜಕ್ಕಿಯಂ ಬೇಡಿ ಮೊಲ ಬಂದೆನೆಂದು ನುಡಿಯೆ.' | ೧೫–೧೭ | 'ಹಂಜಕ್ಕಿಯಂ ಮೊಲಲೆಳಸಿ ಬಂದೆನೆನಲು...' |
| | (ಮಲ್ಲಿಕಾರ್ಜುನ ಸಂದರ್ಶನ) | | |
| ೪–೭೩ | 'ಆತನಂ ಕಳುಪಿ ಗುರು ವಚನವಂ ಹಾಡುತಿರಲು' | ೧೫–೩೯ | 'ಬಿಲ್ಲಂ ಬಿಸುಟು ಪೋದನುಂ ಶಿವಗೀತವಂ ಪಾಡಿ ಸಿದ್ಧೇಶ ಸುಖವಿರ್ದು' |
| | (ಕಾಮನನು ಜಯಿಸಲು ಬಂದ ಸನ್ನಿವೇಶ) | | |
| ೮–೧ | 'ಬಡತನಂ ಹೆಚ್ಚಿ... ದಾಯದೊಡವೆಯುಕೊಂಡು' | ೧೫–೫೮ | 'ದಾರಿದ್ರ್ಯ ಹೆಚ್ಚಿ... ದಾಯಾದ್ಯರೊಡವೆಯು ಕೊಂಡು' |
| | (ಬಿಲ್ಲೇಶ ಬೊಮ್ಮಯ್ಯ) | | |
| ೮–೧೮ | 'ಹುಡುಕುನೀರದ್ದುವೀ' | ೧೫–೬೭ | 'ಹುಡುಕುನೀರೆದ್ದುತಿಹ' |
| | (ನರಕದ ವರ್ಣನೆ) | | |
| ೯–೪೭ | 'ಶಿವನ ಕೂಟಣಿಯೆ ಬಾ....' (ಕಲ್ಲಯ್ಯನನ್ನುದ್ದೇಶಿಸಿ) | ೧೫–೯೨ | 'ಶಿವನಕುಂಟಣಿಯೆ ಬಾ....' (ಬಾಚರಸನನ್ನು ಕುರಿತು) |

ಹೀಗೆ ಎರಡೂ ಕಾವ್ಯಗಳುದ್ದಕ್ಕೂ ಸೂರೆಗೊಂಡ ಸಾದೃಶ್ಯಗಳು ಸಿದ್ಧನಂಜೇಶನು ರಾಘವಾಂಕನ ಸಿದ್ಧರಾಮಚಾರಿತ್ರವನ್ನು ಅರಗಿಸಿಕೊಂಡು, ಅದನ್ನೇ ಆಧರಿಸಿ ಕಥೆಯನ್ನು ಹೇಳಿರುವನೆಂಬುದಕ್ಕೆ ಸಾಕ್ಷ್ಯಗಳಾಗಿವೆ; ರಾಘವಾಂಕ ಚಾರಿತ್ರದಲ್ಲಿ ಬರುವ ಈ ಕಥೆಗೆ ಸಿದ್ಧರಾಮ ಚಾರಿತ್ರವೇ ಮೂಲಪ್ರಮಾಣ ಎಂಬುದನ್ನು ಎತ್ತಿ ಹೇಳುತ್ತವೆ; ಒತ್ತಿ ಹೇಳುತ್ತವೆ. ಅಲ್ಲದೆ, ಆ ಚಂದ್ರ ತಾರಂಬರಂ ನಿಲ್ಲುವ ಮೂಲಕಾವ್ಯ ಲೋಕದ ಮುಂದೆ ಇರುವಾಗ, ಅದರ ಸಾರವನ್ನು ಕವಿ ಇಂತೆಂದನೆಂದು ಅವನ ಹೆಸರಿನಲ್ಲಿಯೇ ಹೇಳುವಾಗ ಮನಬಂದಂತೆ ಮಾರ್ಪಾಟುಗಳನ್ನು ಮಾಡಿಕೊಳ್ಳುವ ಧೈರ್ಯ, ಸಾಹಸ ಸಿದ್ಧನಂಜೇಶ ನಿಗೆ ಉಂಟಾಗಬಹುದೆ? ಹಾಗೆ ಮಾಡಿದರೆ, ಅಪ್ರಮಾಣಿಕತೆಯ ದೋಷವನ್ನು ಅಂದಿನ ಮತ್ತು ಮುಂದಿನ ಲೋಕ ತನ್ನ ತಲೆಗೆ ಕಟ್ಟಬಹುದೆಂಬ ಭಯ, ಭಕ್ತನಾದ ಸಿದ್ಧನಂಜೇಶ ನಿಗೆ ಬಂದಿರಲಿಕ್ಕಿಲ್ಲವೆ? ಅಲ್ಲದೆ, ಏಳನೆಯ ಸಂಧಿಯ ಮುಂದಿನ ಕಥಾಭಾಗದಲ್ಲಿ ಒಂದು ಕಡೆಗೆ ಮಾತ್ರವಲ್ಲ ಹಲವಾರು ಕಡೆಗೆ ವ್ಯತ್ಯಾಸಗಳು ಉಂಟಾಗಿವೆ. ಉದಾಹರಣೆಗೆ ಸಿದ್ಧರಾಮಚಾರಿತ್ರದ ಒಂಬತ್ತನೆಯ ಸಂಧಿಯ ನಡುವೆ ಬರುವ ಬೆಕ್ಕಿನ ಹಾಗೂ ಕಾಳವ್ವೆಯ ಪವಾಡಗಳು ರಾಘವಾಂಕ ಚಾರಿತ್ರದಲ್ಲಿ ಉಳಿದ ಪವಾಡಗಳ ಸಾಲಿನಲ್ಲಿಯೇ ಸೇರಿಹೋಗಿವೆ, ಇತ್ಯಾದಿ.....

ಆದುದರಿಂದ ಸಿದ್ಧನಂಜೇಶನ ರಾಘವಾಂಕಚಾರಿತ್ರದಲ್ಲಿ ಬರುವ ಕಥಾನಿರೂಪಣೆ, ಸನ್ನಿವೇಶಗಳ ಆನುಪೂರ್ವಿ, ಘಟನೆಗಳು, ರಾಘವಾಂಕನ ಸಿದ್ಧರಾಮ ಚಾರಿತ್ರದ ಮೂಲಸ್ವರೂಪವನ್ನು ಪ್ರಕಟಿಸುತ್ತಿದ್ದು ಈಗ ಉಪಲಬ್ಧವಿರುವ ಸಿದ್ಧರಾಮ ಚಾರಿತ್ರದ ಕಥಾಭಾಗ ಏಳನೆಯ ಸಂಧಿಯಿಂದ ಮುಂದೆ ಅಸ್ತವ್ಯಸ್ತವಾಗಿ ಹಸ್ತಕ್ಷೇಪಕ್ಕೆ ಗುರಿಯಾ-ಗಿದೆಯೆಂದು ಹೇಳಬೇಕಾಗುತ್ತದೆ.

## ಅಸ್ತವ್ಯಸ್ತರೂಪ

(೧) ಸಿದ್ಧರಾಮ ಚಾರಿತ್ರದ ಒಂಬತ್ತನೆಯ ಸಂಧಿಯಲ್ಲಿ ಬರುವ ಸತ್ತ ಪ್ರಾಣಿಗಳಿಗೆ ಜೀವವಿತ್ತ ಪವಾಡಗಳ ಸನ್ನಿವೇಶ[೧] ಈ ಕಾವ್ಯದಲ್ಲಿ ಪವಾಡಗಳಿಗೆ ಮೀಸಲಾದ ಭಾಗದಲ್ಲಿ ಅಂದರೆ ನಾಲ್ಕರಿಂದ ಏಳನೆಯ ಸಂಧಿಯವರೆಗಣ ಭಾಗದಲ್ಲಿ ಬರಬೇಕು. ರಾಘವಾಂಕ ಚಾರಿತ್ರ ಹೇಳುವಂತೆ ಈಗಿನ ಏಳನೆಯ ಸಂಧಿಯ ಕೊನೆಗೆ ಬರುವ ಉಘೇಕಾಳನ ಪವಾಡದ ನಂತರ ಇದ್ದಿರಬಹುದು.

(೨) ಎಂಟನೆಯ ಸಂಧಿಯಲ್ಲಿ ಕ್ಷೇತ್ರಪೂಜೆಯ ನಿಮಿತ್ತ ಕೊಟ್ಟಣವನ್ನು ಕೊಟ್ಟ ಸಂದರ್ಭವನ್ನು ವಿವರಿಸುವಲ್ಲಿ ೫೨ನೆಯ ಪದ್ಯದಿಂದ ಮುಂದೆ ೫೩ರ ನಡುವೆ ಇರಬಹುದಾದ ಅಮುಗಿ ದೇವಯ್ಯಗಳ ಪ್ರಸಂಗವನ್ನು ತೆಗೆದು ಹಾಕಿರುವಂತೆ ಕಾಣುತ್ತದೆ.

(೩) ೯ನೆಯ ಸಂಧಿಯಲ್ಲಿ ಸತ್ತ ಪ್ರಾಣಿಗಳಿಗೆ ಜೀವವಿತ್ತ ಪವಾಡಗಳ ನಿರೂ-ಪಣೆಯ ನಂತರ ಬರುವ ಪ್ರಭು-ಸಿದ್ಧರಾಮರ ಸಂದರ್ಶನದ ಭಾಗ ಎಂಟನೆಯ ಸಂಧಿಯ ೯೫ನೆಯ ಪದ್ಯದ ೫ನೆಯ ಚರಣವಾದೊಡನೆ ಆರಂಭವಾಗಬೇಕು.

೧. ಪ. ೨೧–೩೬.

(೪) ಆ ಭಾಗ ಈಗಿನಂತೆ ಸಂಕ್ಷಿಪ್ತವೂ, ಆನುಪೂರ್ವಿ ತಪ್ಪಿದುದೂ ಆಗಿರದೆ ವಿಸ್ತೃತವೂ ಕ್ರಮಬದ್ಧವೂ ಆಗಿದ್ದು, ಅಲ್ಲಿ ಸಿದ್ಧರಾಮನು ಪ್ರಭುದೇವರೊಡನೆ ಕಲ್ಯಾಣಕ್ಕೆ ಹೋಗಿ, ಚನ್ನಬಸವಣ್ಣನವರಿಂದ ಇಷ್ಟಲಿಂಗದೀಕ್ಷೆವಡೆದು ಮರಳಿ ಸೊನ್ನಲಿಗೆಗೆ ಬಂದಿರಬೇಕು.

(೫) ಮೇಗಣ ಸನ್ನಿವೇಶವಾದೊಡನೆಯೇ ಹರಳಯ್ಯ ಮಧುವಯ್ಯಗಳ ಪ್ರಸಂಗ ಬಂದು, ಅದಾದ ಮೇಲೆ. ಈಗ ಸೂತ್ರ ತಪ್ಪಿ ಬಂದಿರುವ ಎಂಟನೆಯ ಸಂಧಿಯ ೯೫ನೆಯ ಪದ್ಯದ ಕೊನೆಯ ಚರಣ 'ಭೂಪ ಬಿಜ್ಜಳನಳಿದ ವೀರಜಗದೇವನಿಂ ಸಿದ್ಧ ಸಂಕೇತ ದಂತೆ' ಎಂಬ ಚರಣ ಬರಬೇಕಾಗುತ್ತದೆ.

(೬) ಆ ಮೇಲೆ ಕರ್ಣದೇವನ ಸನ್ನಿವೇಶ.

(೭) ಪ್ರಭು ಸಂದರ್ಶನ, ಹರಳಯ್ಯ ಮಧುವಯ್ಯಗಳ ಪ್ರಸಂಗ—ಇವೆಲ್ಲ ಒಟ್ಟಾಗಿ ಬೇರೆ ಒಂದು ಸಂಧಿಯಾಗಿರುವ ಸಂಭವವೂ ಇದೆ. ಏಕೆಂದರೆ ಈಗಿನ ಒಂಬತ್ತನೆಯ ಸಂಧಿಯ ಸೂಚನೆ ಅಲ್ಲಿ ಅಪ್ರಸ್ತುತವೂ ದೋಷಪೂರ್ಣವೂ ಆಗಿರುವುದನ್ನು ಹಿಂದೆ ವಿವರಿಸಲಾಗಿದೆ.

(೮) ಮೂಲ ಸಿದ್ಧರಾಮಚಾರಿತ್ರ ಈಗಿನಂತೆ ಒಂಬತ್ತು ಸಂಧಿಗಳನ್ನೊಳಗೊಂಡಿರದೆ ಕನಿಷ್ಠ ಹತ್ತು ಸಂಧಿಗಳಷ್ಟನ್ನಾದರೂ ಒಳಗೊಂಡಿರಬೇಕು—ಗಿರಿಜಾಕಲ್ಯಾಣದಂತೆ.

## ಉದ್ದೇಶ

ಸಿದ್ಧರಾಮ ಚಾರಿತ್ರದ ಅತ್ಯಂತ ಮಹತ್ವದ ಕೆಲ ಭಾಗಗಳನ್ನು ಕೆಲವೊಂದು ಉದ್ದೇಶಪೂರ್ವಕವಾಗಿ ನಾಶಪಡಿಸಿ, ಉಳಿದ ಭಾಗಗಳನ್ನು ಜೋಡಿಸುವ ಅಚಾತುರ್ಯದಲ್ಲಿ ಮೇಗಣ ಅಸ್ತವ್ಯಸ್ತಸ್ವರೂಪ ಪ್ರಾಪ್ತವಾದಂತಿದೆ. ಕಲಾಭಿಜ್ಞನೂ ಮಹಾಕವಿಯೂ ವಿವೇಚನೆ ಹಾಗೂ ವಿಮರ್ಶನ ಶಕ್ತಿಯುತನೂ ಆದ ರಾಘವಾಂಕನು ಹೀಗೆ ಬರೆದಿರಲಾರನೆಂಬುದು ನಮ್ಮ ಖಚಿತವಾದ ಅಭಿಪ್ರಾಯ.

ಹಾಗಾದರೆ, ಈ ರೀತಿ ಗ್ರಂಥದ ಕೆಲಭಾಗವನ್ನು ವಿನಾಶಪಡಿಸುವುದಕ್ಕೆ ಕಾರಣ ವೇನು? ಸಿದ್ಧರಾಮ ಚಾರಿತ್ರದಲ್ಲಿ ಇದ್ದಿರಬಹುದಾದ ಅಮುಗಿದೇವಯ್ಯಗಳ ಕಥೆ, ಆ ಸಿದ್ಧರಾಮನು ಭವಿಯಾಗಿದ್ದನೆಂಬುದನ್ನೂ ಅದಕ್ಕಾಗಿಯೇ ಆತನು ಕೊಟ್ಟ ಕೊಟ್ಟಣವನ್ನು ಕುಟ್ಟದೆ ಹಿಂದೆ ಕಳಿಸಿದನೆಂಬುದನ್ನೂ ಸ್ಪಷ್ಟಪಡಿಸುತ್ತದೆ. ಮಲ್ಲಿಕಾರ್ಜುನನು ಅಮುಗಿ ದೇವಯ್ಯಗಳ ಹೊರೆಹೊತ್ತು ತಲೆನೋಯಿಸಿಕೊಂಡು ಮರುದಿನ ಸಿದ್ಧರಾಮನಿಗೆ ಈ ವಿಷಯವನ್ನು ತಿಳಿಸಲು ಆತನು ಪಶ್ಚಾತ್ತಾಪ ಪಟ್ಟು ಅಮುಗಿ ದೇವಯ್ಯಗಳಲ್ಲಿ ಕ್ಷಮೆ ಕೇಳುವನು; ಆತನಿಂದ ಇಷ್ಟಲಿಂಗದ ಅವಶ್ಯಕತೆಯನ್ನೂ ಅರಿತುಕೊಳ್ಳುವನು.

ಈ ಕಥೆಯಿಂದ ಸಿದ್ಧರಾಮನು ಅಮುಗಿ ದೇವಯ್ಯಗಳಿಗಿಂತ ನಿಲವಿನಲ್ಲಿ ಕೆಳಗಿನವನೆಂಬ ಭಾವನೆ ವ್ಯಕ್ತವಾಗಬಹುದೆಂಬುದನ್ನು ಶಂಕಿಸಿದ ಗುಂಡ್ಡರು ಅದನ್ನು ಮೂಲಕಾವ್ಯದಿಂದ ತೊಡೆದುಹಾಕುವ ಸಾಹಸ ಮಾಡಿದ್ದರೆ ಆಶ್ಚರ್ಯವೇನಲ್ಲ.

ಹೀಗೆಯೇ ಪ್ರಭು—ಸಿದ್ಧರಾಮ ಸಂದರ್ಶನದಲ್ಲಿ ರಾಘವಾಂಕ ಚಾರಿತ್ರವು ಸಿದ್ಧರಾಮನು 'ನೊಸಲ ಕಣ್ದೆರೆದಾಗ ಪ್ರಭುದೇವರು ತಮ್ಮ ಪಾದದಲ್ಲಿ ಆ ಜ್ವಾಲೆಯನ್ನು ಅಡಗಿಸಿಕೊಂಡರೆಂದೂ ಮತ್ತೆ ಸಿದ್ಧರಾಮನಿಗೆ ಬುದ್ಧಿಗಲಿಸಬೇಕೆಂದು ಅದಕ್ಕೆ ಅಪ್ಪಣೆ ಕೊಟ್ಟರೆಂದೂ ಉಕ್ತವಾಗಿದೆ. ಸ್ವಾಭಾವಿಕವಾಗಿ ಈ ಕಥೆಯಿಂದ ಪ್ರಭುವಿನ ಎತ್ತರ ವ್ಯೋಮದಷ್ಟಾದರೆ, ಸಿದ್ಧರಾಮನು ಭೂಮಿಯಲ್ಲಿಯೇ ನಿಲ್ಲುತ್ತಾನೆ. ಆತನ ಶಿಷ್ಯರಿಗೆ ಈ ತಾರತಮ್ಯ ಸರಿದೋರಿರಲಿಕ್ಕಿಲ್ಲ. ಅಂತೆ. ಅದನ್ನು ಮೂಲಕಾವ್ಯದಿಂದ ವಿನಾಶ ಪಡಿಸಿರುವ ಸಂಭವವಿದೆ. ಇದು ವರೆಗೆ ಒಂದು ಅಭಿಪ್ರಾಯ ಕೇಳಬರುತ್ತಿತ್ತು: 'ರಾಘವಾಂಕನ ಸಿದ್ಧರಾಮ ಚಾರಿತ್ರದಲ್ಲಿ ಸಿದ್ಧರಾಮನಿಗೆ ಚನ್ನಬಸವಣ್ಣನವರಿಂದ ಕಲ್ಯಾಣದಲ್ಲಿ ಇಷ್ಟಲಿಂಗ ದೀಕ್ಷೆಯಾಗಿರಲಿಲ್ಲ. ಭವಿಯಾಗಿದ್ದ ಸಿದ್ಧರಾಮನನ್ನು ಇಷ್ಟಲಿಂಗ ಧಾರಣೆ, ಷಟ್‌ಸ್ಥಲೋಪದೇಶಗಳಿಂದ ವೀರಶೈವನನ್ನಾಗಿ ಮಾಡುವುದರಲ್ಲಿ ಶೂನ್ಯ ಸಂಪಾದನೆ ಕೃತಕೃತ್ಯವಾಗಿದೆ—ಇದಕ್ಕಾಗಿ ಕೆಲ ಹೊಸ ವಚನಗಳು ಸೃಷ್ಟವಾಗಿ ಅಲ್ಲಮ ಸಿದ್ಧರಾಮರೇ ಮುಂತಾದ ಶೂನ್ಯಸಂಪಾದನೆಯ ಶರಣರಿಗೆ ಆರೋಪಿತವಾಗಿರಬಹುದು'[೧] ಎಂದು ಶ್ರೀ. ಡಿ. ಎಲ್. ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿರುವರು. ಭವಿಯಾಗಿದ್ದ ಸಿದ್ಧರಾಮನನ್ನು 'ಭಕ್ತ'ನನ್ನಾಗಿ ಮಾಡಲು ಹೊಸ ವಚನಗಳು ಸೃಷ್ಟವಾಗುವುದು ಸಾಧ್ಯವಿದ್ದರೆ ಕಲ್ಯಾಣದ ಶರಣರ ಪ್ರಭಾವಕ್ಕೆ ಒಳಗಾಗಿ ಇಷ್ಟಲಿಂಗ ಧಾರಣೆ ಮಾಡಿಕೊಂಡನೆಂಬ ವಿಷಯವನ್ನು ಒಪ್ಪದ ಭಿನ್ನಾಭಿಪ್ರಾಯದವರು ರಾಘವಾಂಕನಲ್ಲಿ ಘಂಟಾಘೋಷವಾಗಿರಬಹುದಾದ ಈ ಸನ್ನಿವೇಶಗಳನ್ನೆಲ್ಲ ಕಿತ್ತುಹಾಕಿರುವುದು, ಇಲ್ಲವೆ ನಾಶಪಡಿಸಿರುವುದು ಸಾಧ್ಯವಿದೆ.

ಸಿದ್ಧರಾಮನನ್ನು ಶರಣರ ಪ್ರಭಾವದಿಂದ ಬೇರಿರಿಸಬೇಕೆಂಬ ಪ್ರಯತ್ನ ಒಂದು ಕಾಲದಲ್ಲಿ ನಡೆದುಹೋಗಿರಬೇಕು. ಪ್ರಾಯಶಃ ಸಿದ್ಧನಂಜೇಶನ ಕಾಲದಿಂದೀಚೆಗೆ (೧೬೭೨) ಈ ಉದ್ದೇಶದಿಂದ ಸಿದ್ಧರಾಮಚಾರಿತ್ರದ ಮೇಲೆ ನಿರ್ದೇಶಿಸಿದ ಅತ್ಯಂತ ಮಹತ್ವದ ಭಾಗಗಳನ್ನು ಬಸವರಾಜದೇವರ ರಗಳೆಯ ಉತ್ತರಾರ್ಧ, ಚನ್ನಬಸವ. ಸಿದ್ಧರಾಮೇಶ್ವರ ರಗಳೆಗಳಂತೆ ಕಣ್ಮರೆ ಮಾಡಿರಬೇಕು. ಆತನು ಕಲ್ಯಾಣದ ಬಸವಾದಿ ಶರಣರ ಪ್ರಭಾವಕ್ಕೆ ಒಳಗಾಗಿ ಇಷ್ಟಲಿಂಗ ಧಾರಣೆಮಾಡಿಕೊಂಡನೆಂಬ ಭಾಗವನ್ನು ಅವನ ಇತ್ತೀಚಿನ ಗುಡ್ಡರು ಅಂಧಃಶ್ರದ್ಧೆಯಿಂದ ಕಿತ್ತುಹಾಕಿರುವ ಸಂಭವವಿದೆ.

ಆದರೆ, ಈ ಊಹೆಗಳಿಗೆ ಸಿದ್ಧರಾಮಚಾರಿತ್ರಸಂಸ್ಕರಣಕ್ಕೆ ಬಳಸಿದ ಪ್ರತಿಗಳಾವುವೂ ಆಧಾರವಾಗಿ ನಿಲ್ಲುವುದಿಲ್ಲ. ಸಂಪಾದಕರು ಬಳಸಿಕೊಂಡ ನಾಲ್ಕು ಪ್ರತಿಗಳಲ್ಲಿ ಎರಡು ಕಾಗದದ ಪ್ರತಿಗಳೂ. ಒಂದು ಅಚ್ಚಿನ ಪ್ರತಿಯೂ ಇದ್ದು ಅವುಗಳ ಕಾಲ ಹೀಗಿದೆ:

ಕ. ಕ್ರಿ. ಶ. ೧೭೭೯.

ಗ. ಕ್ರಿ. ಶ. ೧೮೩೭.

ಘ. ಕ್ರಿ. ಶ. ೧೮೮೩ (ಅಚ್ಚಿನ ಪ್ರತಿ).

ಒಂದೇ ಒಂದಾದ ಓಲೆಯ ಪ್ರತಿಯ ಬಹುಭಾಗ ಅಲ್ಲಲ್ಲಿ ನಷ್ಟವಾಗಿದೆ.

---

೧. ಸಿಚಾ ಪು. LX.

ಇದರಿಂದ ಮೇಲಿನ ಪ್ರತಿಗಳು ಸಿದ್ಧನಂಜೇಶನ ಕಾಲದಿಂದೀಚೆಯುವೆಂದು ಸ್ಪಷ್ಟ ವಾಗಿದೆ. ಸ್ವಲ್ಪ ಹಳೆಯದೆನಿಸುವ ತಾಳೆಯ ಗರಿಯ ಪ್ರತಿಯಲ್ಲಿ ನಷ್ಟಭಾಗ ವಿಪುಲ-ವಾಗಿರುವುದು ಇನ್ನಷ್ಟು ಸಂಶಯಕ್ಕೆ ಕಾರಣ.

೧೬೭೨ರ ಪೂರ್ವದಲ್ಲಿ ಲಿಖಿತವಾಗಿರಬಹುದಾದ ಸಿದ್ಧರಾಮ ಚಾರಿತ್ರದ ತಾಳೆಯ ಗರಿಯ ಮಾತೃಕೆ ದೊರೆಯುವವರೆಗೆ ಈ ಸಮಸ್ಯೆ ಬಗೆಹರಿಯುವಂತಿಲ್ಲ. ಸಿದ್ಧರಾಮ ಚಾರಿತ್ರದ ಮೂಲಸ್ವರೂಪದಲ್ಲಿ ಚನ್ನಬಸವಣ್ಣನವರು ಸಿದ್ಧರಾಮನಿಗೆ ಇಷ್ಟಲಿಂಗ ಧಾರಣೆಮಾಡಿದ ವಿಷಯ ಸ್ಪಷ್ಟವಾಗಿ ಸಾರುತ್ತಿದ್ದು ಈಗಿನ ರೂಪದಲ್ಲಿ ಆ ಭಾಗ ನಾಶ ವಾಗಿರಬೇಕೆಂದು ನಮ್ಮ ಅಭಿಪ್ರಾಯ.

## ಚಾಮರಸ

ಸಿದ್ಧರಾಮನ ಲಿಂಗದೀಕ್ಷೆಯ ಸಂದರ್ಭದಲ್ಲಿ ಉಲ್ಲಿಖಿತವಾದ ಮತ್ತೊಂದು ಮಹತ್ವದ ಗ್ರಂಥ ಚಾಮರಸನ ಪ್ರಭುಲಿಂಗಲೀಲೆ. "..........ಚಾಮರಸನೂ ಸಿದ್ಧ-ರಾಮನ ವೀರಶೈವತ್ವಕ್ಕೆ ಆಧಾರವನ್ನು ಒದಗಿಸಿಲ್ಲ. ಆದರೆ, ಅವನು ಹಿಂದಿನವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ, ಸಿದ್ಧರಾಮನನ್ನು ಕಲ್ಯಾಣದ ಶಿವಾನುಭವಮಂಟಪಕ್ಕೆ ಕರೆತಂದಿದ್ದಾನೆ."[೧] ಎಂದು ಶ್ರೀ. ಡಿ. ಎಲ್. ನರಸಿಂಹಾಚಾರ್ ಅವರು ಅಭಿಪ್ರಾಯ ಪಟ್ಟಿರುವರು. ಚಾಮರಸನು ಸಿದ್ಧರಾಮನ ವೀರಶೈವತ್ವಕ್ಕೆ ಕೊಟ್ಟ ಆಧಾರ, ಕಾವ್ಯಾರಂಭ ದಲ್ಲಿಯೇ ಬರುತ್ತದೆ. ನಿಷ್ಠೆಯ ವೀರಶೈವನಾದ ಚಾಮರಸನು ಅಲ್ಲಮಪ್ರಭು ಸಂಪ್ರದಾಯಕ್ಕೆ ಸಲ್ಲದವರಿಗೆ ಶರಣಾರ್ಥಿಗಳನ್ನು ಸಲ್ಲಿಸುವುದು ಸಾಧ್ಯವಿಲ್ಲ. ಆತನು ಕಾವ್ಯದಲ್ಲಿ ಪ್ರಭುದೇವ, ಬಸವಣ್ಣ, ಚನ್ನಬಸವಣ್ಣ, ಮಹಾದೇವಿಯಕ್ಕ, ಮಡಿವಾಳ ಮಾಚಿದೇವ, ಏಲೇಶ್ವರದ ಕೇತಯ್ಯ, ಮರುಳ ಶಂಕರದೇವ ಮೊದಲಾದ ಶರಣೆಯರನ್ನು ಸ್ತುತಿಸಿರುವನು. ಈ ಸಾಲಿನಲ್ಲಿಯೇ ಸಿದ್ಧರಾಮನ ಸೇರ್ಪಡೆಯಾಗಿದೆ. ಇಷ್ಟೇ ಅಲ್ಲ; ಬಸವಣ್ಣ, ಚನ್ನಬಸವಣ್ಣನವರ ತರುವಾಯ ಮೂರನೆಯದಾಗಿ ಸಿದ್ಧರಾಮನ ಸ್ತೋತ್ರ ಬರುತ್ತದೆ:

"ಕಂತುವನೆ ಕಂಗೆಡಿಸಿಯೊಳಪೊ
ಕ್ಕಂತರಂಗವಿಚಾರವೆಲ್ಲವ
ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡೈಸಿ ॥
ಚಿಂತಿತಾರ್ಥವನರ್ಥಿಗಿತ್ತು ನಿ
ರಂತರಖಿಳರಿಗಖಿವನೀವ ಮ
ಹಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ ॥"[೨]

ಇಲ್ಲಿ ಕರ್ಮಮಾರ್ಗದಲ್ಲಿ ನಿರತನಾದ ಸಿದ್ಧರಾಮಯ್ಯನ ಕೆರೆಯ ಉತ್ಖನನ, ಸ್ಥಾವರಲಿಂಗ ಪ್ರತಿಷ್ಠಾಪನೆ, ದೇಗುಲರಚನೆ ಮುಂತಾದವುಗಳ ಉಲ್ಲೇಖನವಿಲ್ಲದಿರುವುದು ಗಮ-

---

೧. ಸಿಚಾಪು. LIV. ೨. ಪ್ರಲೀ. ಮು. ೨, ಪ. ೪.

ನಾರ್ಹ. ಅಲ್ಲದೆ, ಶಿವಯೋಗದಿಂದ ಅಂತರಂಗವನ್ನೆಲ್ಲ ಕನ್ನಡಿಯಂತೆ ಮಾರ್ಪೊಳಿಯಿ-ಸಿದ ಸಿದ್ಧರಾಮನ ಚಿತ್ರ ಬಂದು ಕೊನೆಗೆ "ಮಹಂತನೆನಿಸಿದ ಸಿದ್ಧರಾಮಯ್ಯಂಗೆ ಶರ-ಣಾರ್ಥಿ" ಎಂದು ಚಾಮರಸನು ಆ ಪದ್ಯವನ್ನು ಮುಕ್ತಾಯಗೊಳಿಸಿದ್ದಾನೆ.

(೧) 'ಪೂರ್ವಾಚಾರ್ಯ ಸಂಗನಬಸವ.' (೨) 'ಷಡುಸ್ಥಲವನುದ್ಧಾರಿಸಿದ ಗುರು ಚನ್ನಸಂಗನ ಬಸವ.' (೩) 'ಮಹಂತನೆನಿಸಿದ ಸಿದ್ಧರಾಮಯ್ಯ.' (೪) 'ಶಿವೈಕ್ಯಪದವನು ನೇಮಿಸಿದ ಮಹಾದೇವಿಯಕ್ಕ'.—ಇವರೆಲ್ಲರೂ ಚಾಮರಸನ ದೃಷ್ಟಿಯಲ್ಲಿ ವೀರಶೈವ ರೆಂಬುದು ನಿಸ್ಸಂದೇಹವಾದುದು. ಈ ವ್ಯಕ್ತಿಗಳನ್ನು ವರ್ಣಿಸುವ ವಿಶೇಷಣಗಳು ವೀರಶೈವದ್ಯೋತಕವಾಗಿವೆ. ವೀರಶೈವವಿಶಿಷ್ಟವಾದ 'ಮಹಂತ'ನೆಂಬ ವಿಶೇಷಣ-ವೊಂದೇ ಸಾಕು, ಸಿದ್ಧರಾಮನ ವೀರಶೈವ ಪ್ರತಿಷ್ಠಾಪನೆಗೆ.

ಇದಲ್ಲದೆ 'ಪ್ರಭುದೇವರು ಕಲ್ಯಾಣಕ್ಕೆ ಬಂದ ಗತಿ'ಯಲ್ಲಿ ಸಿದ್ಧರಾಮನ ಉಲ್ಲೇಖ ಬಂದಿರುವುದು, ಮಹಾದೇವಿಯಕ್ಕ, ಮಡಿವಳ ಮಾಚಿದೇವ ಮುಂತಾದವರ ನಡುವೆ ಪುನಃ ಸಿದ್ಧರಾಮನನ್ನು ನಿಲ್ಲಿಸಿರುವುದು ಆತನ ವೀರಶೈವತ್ವ ಪ್ರತಿಷ್ಠಾಪನೆಗೆ ಮತ್ತೊಂದು ಆಧಾರ. ಇಲ್ಲಿ ಸಿದ್ಧರಾಮನನ್ನು ಚಾಮರಸನು 'ಪ್ರಮಥರು' ಎಂಬ ಪದವಿಶೇಷದಿಂದ ಉಲ್ಲೇಖಿಸಿರುವುದು. ಆತನಿಗೆ ಸಿದ್ಧರಾಮನ ವೀರಶೈವತ್ವದ ಬಗೆಗೆ ಎಳ್ಳಷ್ಟೂ ಸಂಶಯ ವಿರಲಿಲ್ಲವೆಂಬುದನ್ನು ದೃಢಪಡಿಸುತ್ತದೆ.

ಇನ್ನು ಚಾಮರಸನು ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆದುಕೊಂಡು ಹೋದುದು ನಿಜ. ಅಲ್ಲಿ ಪ್ರಭು, ಸಿದ್ಧರಾಮನನ್ನು ತಮ್ಮೊಡನೆ ಬಸವರಾಜನ ಮಹಾಮನೆಯ ವರೆಗೂ ಕರೆತಂದಿರುವನು. ಬಸವಣ್ಣನ ಭಕ್ತಿಯನ್ನು ಪರೀಕ್ಷಿಸುವ ಆ ಸನ್ನಿವೇಶದಲ್ಲಿ ಮಿಕ್ಕ ಶರಣ-ರಂತೆ ಸಿದ್ಧರಾಮನ ಪಾತ್ರವೂ ಹಿರಿದಾಗಿದೆ. ಉಭಯ ಪಕ್ಷಗಳಲ್ಲಿ ಸಾಮರಸ್ಯವನ್ನು ಉಂಟುಮಾಡುವ ಹೊಣೆ ವಾಸ್ತವವಾಗಿ ಸಿದ್ಧರಾಮನ ಮೇಲೆಯೇ ಇದೆ. ಆ ಕಾರ್ಯ ವನ್ನು ಚನ್ನಬಸವಣ್ಣ, ಮಡಿವಳ ಮಾಚಿದೇವ, ಹಾಗೂ ಇತರ ಶರಣರೊಡನೆ ಸಿದ್ಧ-ರಾಮನು ಸಮರ್ಥವಾಗಿಯೇ ಪೂರೈಸುವನು. ಅಲ್ಲಿಂದ ಮುಂದೆ 'ಪ್ರಭುವಿನ ಇಷ್ಟ-ಲಿಂಗೋಪದೇಶ'. ಅದನ್ನು ಮಾಡುವ ವ್ಯಕ್ತಿ ಪ್ರಭುದೇವ; ಕುಳಿತು ಕೇಳುವವರು ಬಸವಾದಿ ಪ್ರಮಥರು. ಇಷ್ಟಲಿಂಗೋಪದೇಶವಾದ ಮೇಲೆ 'ಮಹಾದೇವಿಯಕ್ಕನಿಗೆ ಪ್ರಭು ಪ್ರಸನ್ನವಾದ ಗತಿ.' ಅಲ್ಲಿಯೂ ಸಿದ್ಧರಾಮನು ಶರಣಸಮೂಹದ ಮಧ್ಯದಲ್ಲಿ ನಿಂತಿರುವನು. ಮಹಾದೇವಿಯಕ್ಕಗಳು—"ಎನ್ನ ಲಿಂಗವೆ ನೀನು; ಜಂಗಮವೆನಗೆ ರಾಮಯ್ಯ."[೧] ಎಂದು ಗೌರವಿಸಿರುವಳು. ಮಹಾದೇವಿಯಕ್ಕನವರಿಗೆ ಜಂಗಮವಾಗಿದ್ದ ಸಿದ್ಧರಾಮನ ವೀರಶೈವತ್ವದ ವಿಷಯವಾಗಿ ಚಾಮರಸನಿಗೆ ಸಂದೇಹವಿರಲಿಲ್ಲವೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟ.

'ಚಾಮರಸನು ಸಿದ್ಧರಾಮನನ್ನು ಕಲ್ಯಾಣದ ಅನುಭವಮಂಟಪಕ್ಕೆ ತಂದಿರು-ವನು.' ಎಂದು ತೇಲಿಸಿ ಹೇಳುವಷ್ಟು ಸಿದ್ಧರಾಮನ ಕಲ್ಯಾಣಸಂದರ್ಶನವಿಲ್ಲ. ಆತನು

೧. ಪ್ರಲೀ ೧೭–೧೪.

ಅಲ್ಲಿ ಶರಣರೊಡನೆ ಹಾಸುಹೊಕ್ಕಾಗಿ ಬೆರೆತಿದ್ದಾನೆ; ಮಹತ್ವದ ಘಟನೆಗಳಲ್ಲಿ ಪಾತ್ರ-ವಹಿಸಿದ್ದಾನೆ. ಎಂಬುದು ಮೇಲಿನ ವಿವೇಚನೆಯಿಂದ ಸ್ಪಷ್ಟವಾಗುವುದು.

ಮಹಾದೇವಿಯಕ್ಕನವರಿಗೆ ನಿಜೈಕ್ಯಪದವನು ತೋರಿದ ಪ್ರಭು, ಎಲ್ಲ ಪ್ರಮಥರಿಗೆ ಸಾಧಕಾಂಗದ ಸ್ವರೂಪವನ್ನು, ಶಿವಯೋಗದ ರಹಸ್ಯವನ್ನು ಬೋಧಿಸುವನು. ಅಲ್ಲಿಯೂ ಸಿದ್ಧರಾಮಯ್ಯನಿರುವುದನ್ನು ಗಮನಿಸಬೇಕು. ಗೋರಕ್ಷನಿಗೆ ಪ್ರಭು. ತನ್ನ ಲಿಂಗಲೀಲೆಯ ಮಹತ್ವವನ್ನು ತಿಳಿಸುವ ಗತಿಯ ಆರಂಭದಲ್ಲಿ:

**"ಇತ್ತಲೀ ಬಸವಣ್ಣ ಮೊದಲಾ**
**ದುತ್ತಮದ ಶಿವಭಕ್ತರೆಲ್ಲರು**
**ಚಿತ್ತದಲಿ ನಿಜಗುರುನಿರೂಪವ ಮಾಡತೊಡಗಿದರು ॥**
**ಅತ್ತ ಸೊನ್ನಲಪುರಕೆ ಹೋಗಿ ವಿ**
**ಚಿತ್ರದಿಂದಲಿ ಸಿದ್ಧರಾಮನು**
**ಮತ್ತೆ ಮನದಲಿ ಮಾಡುತಿರ್ದನು ಶಿವಸಮಾಧಿಯನು ॥"**[೧]

ಎಂದು ಹೇಳಲಾಗಿದೆ. ಇದರಿಂದ, ಪ್ರಭು ಗೋರಕ್ಷನನ್ನು ಕಾಣುವ ಹೊತ್ತಿಗೆ ಸಿದ್ಧರಾಮನು ಸೊನ್ನಲಿಗೆಗೆ ಮರಳಿದನೆಂದೂ ಅಲ್ಲಿಯವರೆಗೆ ಕಲ್ಯಾಣದಲ್ಲಿಯೇ ಪ್ರಭು ಮೊದಲಾದ ಶರಣರೊಡನೆ ಇದ್ದನೆಂದೂ ಅರ್ಥವಾಗುತ್ತದೆ.

ಇಷ್ಟು ದೀರ್ಘಕಾಲದವರೆಗೆ ಕಲ್ಯಾಣದಲ್ಲಿದ್ದ ಸಿದ್ಧರಾಮನಿಗೆ ಚನ್ನಬಸವಣ್ಣನವರಿಂದ ಲಿಂಗದೀಕ್ಷೆಯನ್ನು ಚಾಮರಸನು ಏಕೆ ಮಾಡಿಸಲಿಲ್ಲ ಎಂದು ಸಹಜವಾಗಿ ಕೇಳಬಹುದು; ಅದಕ್ಕೆ ಕಾರಣ ಇಷ್ಟು.

(೧) ಕಾವ್ಯದ ಎಲ್ಲ ವಿಷಯಗಳನ್ನೂ ಪ್ರಭುವಿನ ಮೇಲೆ ಕೇಂದ್ರೀಕರಿಸಿದ ಚಾಮರಸನ ದೃಷ್ಟಿಯಲ್ಲಿ ಸಿದ್ಧರಾಮನಿಗೆ ಚನ್ನಬಸವಣ್ಣನವರಿಂದಾದ ಇಷ್ಟಲಿಂಗಧಾರಣೆಯ ಮಾತು ವಿಷಯಾಂತರ.

(೨) ಇಷ್ಟಲಿಂಗದ ಮಹತ್ವ, ಸಾಧಕನ ನಿಲವು, ಶಿವಯೋಗದ ಸ್ವರೂಪ ಇವನ್ನೆಲ್ಲ ಸಮಸ್ತ ಶರಣರಿಗೆ ಪ್ರಭುವಿನಿಂದಲೇ ಬೋಧಿಸಿದ ಚಾಮರಸನಿಗೆ ಮತ್ತೆ ಅದನ್ನು ಚನ್ನಬಸವ ಸಿದ್ಧರಾಮರ ದೀಕ್ಷೆಯ ಪ್ರಸ್ತಾಪವನ್ನೆತ್ತಿ ಪುನರುಕ್ತಿಯನ್ನು ಮಾಡುವ ಇಷ್ಟವಿರಲಿಲ್ಲ.

(೩) ಕಲಾವಿದನಾದ ಚಾಮರಸನು ತನ್ನ ಮೂಲಕಥೆಯ ಚೌಕಟ್ಟಿನಲ್ಲಿ ಹೊಂದದ ವಿಷಯಗಳನ್ನು ಬಿಟ್ಟುಬಿಟ್ಟಿರುವನು.

ಆದರೆ, ಸಿದ್ಧರಾಮನು ಕಲ್ಯಾಣದಲ್ಲಿದ್ದ ಈ ಸಂದರ್ಭದಲ್ಲಿ ಆತನಿಗೆ ಚನ್ನಬಸವಣ್ಣನವರಿಂದ ಇಷ್ಟಲಿಂಗದೀಕ್ಷೆಯಾಗಿ, ಅವರು ಆತನಿಗೆ ಗುರುಸ್ವರೂಪದಲ್ಲಿ ನಿಂತಿದ್ದರೆಂಬುದನ್ನು ಚಾಮರಸನು ಸಾಧಕಾಂಗದ ಗತಿಯಲ್ಲಿ ಹೀಗೆ ಸೂಚಿಸುತ್ತಾನೆ:

---

೧. ಪ್ರಲೀ ೧೯–೫.

"ಪರಮಪೂರ್ವಾಚಾರ್ಯ ಬಸವೇ
ಶ್ವರನು ಘನಗುರು ಚನ್ನಬಸವನು
ನಿರುಪಮಜ್ಞಾನೈಕನಿಧಿ ಮಡಿವಾಳನಾಚಯ್ಯ ॥"[೧]

ಇಂತಹ ಶರಣರ ಮಧ್ಯದಲ್ಲಿ ನಾನೇತರವ! ಎಂದು ಸಿದ್ಧರಾಮನು ತನ್ನ ಬಣ್ಣಿಸಿದ ಪ್ರಭುವಿಗೆ ವಿನಯದಿಂದ ಪ್ರಾರ್ಥಿಸುವನು. ಇಲ್ಲಿ 'ಘನಗುರು ಚನ್ನಬಸವನು' ಎಂಬ ಮಾತು ಸಿದ್ಧರಾಮನ ಬಾಯಿಯಿಂದಲೇ ಬಂದುದು, ಆತನಿಗೆ ಈ ಅವಧಿಯಲ್ಲಿ ಚನ್ನಬಸವಣ್ಣನವರಿಂದ ಇಷ್ಟಲಿಂಗಧಾರಣೆಯಾದುದರ ಕುರುಹಾಗಿದೆ. ಇಲ್ಲವಾದರೆ, ಎಲ್ಲ ಶರಣರನ್ನು ಬಿಟ್ಟು ಚನ್ನಬಸವಣ್ಣನನ್ನೇ ಸಿದ್ಧರಾಮನು 'ಘನಗುರು' ಎಂದು ಸಂಬೋಧಿಸುವ ಕಾರಣವಿರಲಿಲ್ಲ. ವಾಸ್ತವವಾಗಿ ನೋಡಿದರೆ ಸತ್‌ಸ್ವರೂಪನಾದ ಬಸವಣ್ಣ, ಗುರುವಾಗಿರುವನು; ಚಿತ್‌ಸ್ವರೂಪದ ಚನ್ನಬಸವಣ್ಣ, ಲಿಂಗವಾಗಿರುವನು; ಆನಂದ ಸ್ವರೂಪದ ಪ್ರಭು, ಜಂಗಮವಾಗಿರುವನು. ರೂಢವಾಗಿದ್ದ ಈ ನಂಬುಗೆಗೆ ಪ್ರತಿಯಾಗಿ ಚಾಮರಸನು ಸಿದ್ಧರಾಮನ ಬಾಯಿಯಲ್ಲಿ 'ಘನಗುರು ಚನ್ನಬಸವಣ್ಣ' ಎಂಬ ಉಕ್ತಿಯನ್ನು ಹಾಕಿರುವುದು ಸಾಂಪ್ರದಾಯಿಕವಾಗಿರದೆ ವೈಶಿಷ್ಟ್ಯಪೂರ್ಣವಾಗಿದೆ. ಆ ವೈಶಿಷ್ಟ್ಯವೇ ಸಿದ್ಧರಾಮನಿಗೆ ಚನ್ನಬಸವಣ್ಣನವರು ಮಾಡಿದ ಲಿಂಗಧಾರಣೆ.

ಇದಾದ ಮೇಲೆ ಬರುವ ಪ್ರಸ್ತುತ ವ್ಯಕ್ತಿಗಳಿಗೆ ಸಂಬಂಧಪಟ್ಟ ಚನ್ನಬಸವ ಪುರಾಣ ಮೊದಲಾದ ಕಾವ್ಯಗಳಲ್ಲಿ ಮೇಲಿನ ವಿಷಯ ಖಚಿತವಾಗಿ ಉಕ್ತವಾಗಿರುವುದರಿಂದ ಆ ಪ್ರಸ್ತಾಪ ಮತ್ತೆ ಇಲ್ಲಿ ಅನವಶ್ಯ.

ಸುದೀರ್ಘವಾದ ಈ ವಿವರಣೆಯಿಂದ ವಚನವಾಙ್ಮಯ, ಶೂನ್ಯಸಂಪಾದನೆ ಹಾಗೂ ಮಹತ್ವದ ಇತರ ಕಾವ್ಯ ಇವುಗಳಿಂದ, ಚನ್ನಬಸವಣ್ಣನವರು ಸಿದ್ಧರಾಮನಿಗೆ ಇಷ್ಟಲಿಂಗಧಾರಣೆ ಮಾಡಿದ ವಿಷಯ ಖಚಿತವಾಗಿ ನಿರ್ಣಯವಾಗುತ್ತದೆ.

## ಶೂನ್ಯಪೀಠದಲ್ಲಿ

ಬಸವಣ್ಣನವರು ಕಲ್ಯಾಣದಲ್ಲಿ ಅನುಭವಮಂಟಪವನ್ನು ಸ್ಥಾಪಿಸಿದ್ದರೆಂಬುದನ್ನು ಹಿಂದೆ ಉಲ್ಲೇಖಿಸಲಾಗಿದೆ. ಆ ಪೀಠದಲ್ಲಿ ಅವರು ಪ್ರಭುದೇವರನ್ನು ಕುಳ್ಳಿರಿಸಿ ಆರಾಧಿಸಿದರೆಂಬುದು ಅನೇಕ ಆಧಾರಗಳಿಂದ ವ್ಯಕ್ತವಾಗುತ್ತದೆ. ಈ ಶೂನ್ಯಪೀಠದ ಪ್ರಥಮ ಗುರುವೆಂದರೆ ಪ್ರಭುದೇವರೇ. ಅಂತೆಯೇ ಆ ಪರಂಪರೆಗೆ 'ಪ್ರಭುಸಂಪ್ರದಾಯ' ಎಂದು ಕರೆಯಲಾಗುತ್ತಿದೆ. ಪ್ರಭುದೇವರು ನಿರಂಜನಜಂಗಮಮೂರ್ತಿ. ಆತನು ಲಿಂಗ ಲೀಲೆಯಲ್ಲಿ, ಒಂದೆಡೆ ನಿಲ್ಲದಂತೆ ನಿರಂತರ ಸಂಚಾರದಲ್ಲಿರುವನು. ಆದರೆ, ಕಲ್ಯಾಣದ ಅನುಭವಮಂಟಪದ ದೈನಂದಿನ ಕಾರ್ಯಕಲಾಪಗಳೆಲ್ಲ ಎಡೆಬಿಡದೆ ನಡೆಯಬೇಕಾಗಿತ್ತು. ಆದುದರಿಂದ ಪ್ರಭು ಶೂನ್ಯಪೀಠವನ್ನೇರಿ ಮರಳಿ ಸಂಚಾರಕ್ಕೆ ಹೊರಟಮೇಲೆ ಚನ್ನ

೧. ಪ್ರಲೀ (ಸಾಧಕಾಂಗದ ಗತಿ ಪು. ೨೧೮–೧೦).
೨. ಪ್ರಲೀ. ಪ್ರಭುದೇವರು ಶೂನ್ಯಸಿಂಹಾಸನವನ್ನೇರಿದ ಗತಿ
ಶೂನ್ಯಸಂಪಾದನೆ .. . ,, ಸಂಪಾದನೆ

ಬಸವಣ್ಣನವರನ್ನು ಪ್ರಮಥರು ಆ ಪೀಠದ ಮೇಲೆ ಕುಳ್ಳಿರಿಸಿದಂತಿದೆ. ಅದರ ಮುಖ್ಯ ಕಾರ್ಯವಾದ ಷಟ್‌ಸ್ಥಲನಿರ್ಣಯ ಹಾಗೂ ಉದ್ಧಾರಗಳು, ಶೂನ್ಯಪೀಠಸ್ಥಲದಿಂದಲೇ ನಡೆದಿರಬೇಕು. ಆದುದರಿಂದ ಚನ್ನಬಸವಣ್ಣನವರನ್ನು ಶೂನ್ಯಪೀಠದ ಎರಡನೆಯ ಅಧಿಕಾರಿಗಳೆಂದು ಕರೆಯುವ ರೂಢಿ ವೀರಶೈವರಲ್ಲಿದೆ. ಇದಕ್ಕೆ ಪುಷ್ಟಿಯನ್ನು ಕೊಡುವ ಕೆಲವು ಉಲ್ಲೇಖಗಳು ಅಲ್ಲಲ್ಲಿ ದೊರೆಯುತ್ತವೆ.

"ಚನ್ನಬಸವೇಶ್ವರಸ್ವಾಮಿಗಳು ಕಲ್ಯಾಣದಲ್ಲಿ ಅನುಭಾವಮಂಟಪದಲ್ಲಿ ಗದ್ದುಗೆಯ ಮೇಲೆ ಮೂರ್ತಮಾಡಿ ಎಲ್ಲ ಶಿವಗಣಂಗಳಿಗೆ ನಿರೂಪಿಸಿದ ಸಕೀಲಂಗಳ ವಚನ"[೧] ಎಂಬ ಉಲ್ಲೇಖವೊಂದು ವಚನಗಳ ತಾಳವೋಲೆ ಪ್ರತಿಯಲ್ಲಿ ದೊರೆಯುತ್ತದೆ. ಚನ್ನಬಸವಣ್ಣನವರು ಸಕೀಲದ ವಚನಗಳನ್ನು ಬರೆದಿರುವುದು ಸುಪ್ರಸಿದ್ಧ. ಆ ಸಕೀಲನಿರ್ಣಯವೇ ಷಟ್‌ಸ್ಥಲಸಿದ್ಧಾಂತ ನಿರ್ಣಯ. ಚನ್ನಬಸವಣ್ಣನವರನ್ನು 'ಷಡುಸ್ಥಲಮೂರ್ತಿ', 'ಷಡುಸ್ಥಲ ಬ್ರಹ್ಮ', 'ಷಡ್ವಿಧಸ್ಥಾಪನಾಚಾರ್ಯ' ಎಂದು ಸಂಬೋಧಿಸಿರುವುದು ಶೂನ್ಯಪೀಠಾಧಿಕಾರಿಗಳಾಗಿ ಷಟ್‌ಸ್ಥಲವನ್ನು ನಿರ್ಣಯಿಸಿದುದರ ದ್ಯೋತಕವಾಗಿರಬೇಕು. ಅವರು ಆ ಸ್ಥಾನದಲ್ಲಿದ್ದುದರಿಂದಲೇ ಬಸವಣ್ಣನವರಿಗೆ ಪ್ರಾಣಲಿಂಗೋಪದೇಶ ಮಾಡಿದಂತಿದೆ. ಅದು ಏನಿದ್ದರೂ ಕಲ್ಯಾಣದಲ್ಲಿ ಬಸವಣ್ಣನವರು ಕೈಕೊಂಡ ತತ್ತ್ವ, ಧರ್ಮ, ಸಮಾಜ ಹಾಗೂ ಸಾಹಿತ್ಯಗಳ ಕ್ರಾಂತಿಯ ಹೊಣೆ ವಿಶೇಷವಾಗಿ ಚನ್ನಬಸವಣ್ಣನವರ ಮೇಲೆ ಇದ್ದಂತೆ ತೋರುತ್ತದೆ. ಬಸವಣ್ಣನವರು ಭಕ್ತಿಭಾಂಡಾರಿಯಾಗಿ ತನ್ನ ಅಸದೃಶವಾದ ಶಕ್ತಿಯಿಂದ ನಾಡಿನ ಅಸಂಖ್ಯಾತರನ್ನು ನಾನಾಮುಖಗಳಿಂದ ಕಲ್ಯಾಣಕ್ಕೆ ಕರೆತಂದರು. ಅವರೆಲ್ಲರನ್ನೂ ಒಂದೆಡೆ ನಿಲಿಸಿ. ವಿಚಾರಮಥನಕ್ಕೆ ಅಣಿಮಾಡಿಕೊಟ್ಟು, ಎಲ್ಲಂದದ ಸಂಘಟನಾಕಾರ್ಯವನ್ನು ಮಾಡಿದವರು ಚನ್ನಬಸವಣ್ಣನವರೆಂದೇ ಹೇಳಬೇಕು. ತಾತ್ವಿಕ ಹಾಗೂ ಧಾರ್ಮಿಕ ಸ್ವರೂಪದ ಈ ಸಂಘಟನೆ ದಿನದಿನ ಅಧಿಕಪ್ರಮಾಣದಲ್ಲಿ ಬೆಳೆಯುತ್ತಿರುವುದನ್ನು ಕಂಡು ಕೊಂಡೆಯರು ಕರುಬುಗೊಂಡಿರಲು ಸಾಕು. ಅಂತಹರಲ್ಲಿ ಮುಖ್ಯನಾದ ಮಂಚಣ್ಣನು ಈ ವಿಷಯವನ್ನು ಕುರಿತು ಬಿಜ್ಜಳನಲ್ಲಿ ದೂರುವುದನ್ನು ಕೇಳಬೇಕು!

**"ನೋಡಿದಿರೆ! ಚನ್ನಬಸವಂಗೆ ಪಟ್ಟವ ಕಟ್ಟಿ**
**ನಾಡೆಲ್ಲವಂ ಬೇಗದಿಂ ತನ್ನ ಕೈವಶಂ**
**ಮಾಡಿಕೊಂಡೇನ ಮಾಡುವನೊ ನಿಮ್ಮಡಿಗೆಂಬ ಸಂದೆಗಂ ತೋರುತಿದೆಕೋ!**
**ಬೇಡ ಬೇಕೆಂಬುವರ ಕಾಣೆ, ಕರಿತುರಗಂಗ**
**ಳಾಡಲೇನವರ ವಶವಿನ್ನುಮೆಯ್ಮರೆದಿಹುದು**
**ಸಾಡಲ್ಲವೆಂದು ಭೂಪತಿಗೆ ಬಿನ್ನೈಸಿದಂ ಕೊಂಡೆಯರ ಮಂಚಣ್ಣನು"[೨]**

ಮಂಚಣ್ಣನ ಈ ದೂರಿನಿಂದ, ಪ್ರಮಥರ ಸಂಘಟನೆಯ ಸ್ವರೂಪ, ಭಕ್ತಿಸಾಮ್ರಾಜ್ಯಕ್ಕೆ ಪ್ರಾಪ್ತವಾದ ರಾಜವೈಭವ ಇವುಗಳ ಪರಿಚಯವಾಗುತ್ತದೆ. ಪ್ರಾಯಶಃ ಚನ್ನಬಸವಣ್ಣ

೧. ವಚನಭಂಡಾರದ ಪ್ರತಿ ನಂ. ೧೧, ಪುಟ ೫೨A.
೨. ಚೆಬಪು ಕಾಂ. ೧, ೭–೨೧.

ನವರಿಗೆ ಪ್ರಮಥರು ಕಟ್ಟಿದ ಪಟ್ಟ. ಅವರ ಶೂನ್ಯಸಿಂಹಾಸನಾರೋಹಣವನ್ನು ಸೂಚಿಸು ವಂತಿದೆ. ಶೂನ್ಯಪೀಠವನ್ನೇರಿದ ತಮ್ಮ ಅಂತಃಸ್ಥಿತಿಯನ್ನು ಚನ್ನಬಸವಣ್ಣನವರೇ ತಮ್ಮ ದೊಂದು ವಚನದಲ್ಲಿ ಹೀಗೆ ವಿವರಿಸಿರುವರು:

**"ಎನ್ನ ಮನದಲ್ಲಿ ಇದೇ ಪಥವಯ್ಯಾ, ಚಿರಸುವಡೆ:**
**ಪ್ರಾಣದ ಮಥನಭಾವ ನಟ್ಟು, ತನುಸ್ಥಿತಿ ಮಱಿದು;**
**ಭ್ರಾಂತುಸೂತಕವೆಲ್ಲಾ [ನಿವಾ]ರಿಸಿಹೋದವು ಶೂನ್ಯಸಿಂಹಾಸನದ ಮೇಲೆ,**
**ಕೂಡಲಚನ್ನಸಂಗಾ, ನಿಮ್ಮ ಶರಣನ ಪ್ರಭೆಯಿಂದ"**[೧]

ಇದರಿಂದ ಚನ್ನಬಸವಣ್ಣನವರು ಅನುಭವಮಂಟಪದಲ್ಲಿ ಶೂನ್ಯಪೀಠದ ಅಧಿಕಾರಿ ಗಳಾಗಿದ್ದರೆಂದು ವ್ಯಕ್ತವಾಗುತ್ತದೆ.

## ಚಿಕ್ಕದಣ್ಣಾಯಕರಾಗಿ

ಪ್ರಮಥವಲಯದಲ್ಲಿ ಚನ್ನಬಸವಣ್ಣನವರಿಗೆ ಶೂನ್ಯಪೀಠಾಧಿಕಾರಪ್ರದ ಹಿರಿಮೆ ಇದ್ದಂತೆ ರಾಜ್ಯಕೀಯ ವಲಯದಲ್ಲಿಯೂ ಅವರಿಗೆ ಮುಖ್ಯಸ್ಥಾನವಿದ್ದಂತೆ ತೋರುತ್ತದೆ. ಮಂಚಣ್ಣನ ದೂರನ್ನು ಕೇಳಿದ ಬಿಜ್ಜಳನು ಬಸವಣ್ಣ, ಚನ್ನಬಸವಣ್ಣ ಇಬ್ಬರನ್ನೂ ಕರೆಯಿಸಿ ಅರ್ಧಾಸನದಲ್ಲಿ ಕುಳ್ಳಿರಿಸುವನು; ಅಲ್ಲಿ ವಿಚಾರವಿನಿಮಯ ನಡೆಯುವುದು, ಬಿಜ್ಜಳ ಹಾಗೂ ಚನ್ನಬಸವಣ್ಣನವರ ನಡುವೆ. ತನ್ನ ಆಸ್ಥಾನದಲ್ಲಿ ಗಣ್ಯಸ್ಥಾನದಲ್ಲಿಲ್ಲದವ ರನ್ನು ಕರೆಸಿ ಬಿಜ್ಜಳನು ಬಸವಣ್ಣನವರೊಡನೆ ಸರಿಸಮಾನವಾದ ಪೀಠದಲ್ಲಿ ಕುಳ್ಳಿರಿಸಿ ಆತನೊಡನೆ ವಿಷಯಪ್ರಸ್ತಾಪ ಮಾಡುತ್ತಿದ್ದನೇ?

ಬಸವಣ್ಣ ದಂಡನಾಯಕಪಥದಲ್ಲಿದ್ದರೆ, ಚನ್ನಬಸವಣ್ಣ ಚಿಕ್ಕದಣ್ಣಾಯಕರಾಗಿದ್ದ ರೆಂದು ಅನೇಕ ಉದಾಹರಣೆಗಳಿಂದ ತಿಳಿದುಬರುತ್ತದೆ.

'ಬಂದುದ ಕೈಕೊಂಡು ಸಂತೃಪ್ತಿಯಲ್ಲಿರ್ಪುದೇ ಲಿಂಗಜಂಗಮ. ಇದನಱಿದ ಮೇಲೆ ಮತ್ತೊಂದು ಪ್ರಕಾರ. ಚಿಕ್ಕದಣ್ಣಾಯಕನ ಪ್ರಸಾದಮುಂಟು . . . . . ಸಂಗನ- ಬಸವೇಶ್ವರಾ.'[೨]

'ಇಂತು ನಿರ್ಲಜ್ಜ ಶಾಂತಲಿಂಗದೇಶಿಕೋತ್ತಮಂಗೆ ಪರಮ ನಿರಾಭಾರಿ ವೀರಶೈವ ಷಟ್‌ಸ್ಥಲಾಚಾರ್ಯ ಚಿಕ್ಕದಂಡಪ್ರಮಥರು ಬೋಧಿಸಿದಂತಹ . . . . ನೋಡಾ ಸಂಗನ ಬಸವೇಶ್ವರಾ'[೩]

'ಚಿಕ್ಕದಂಡಪ್ರಭುವೇ'[೪]
'ಚಿಕ್ಕದಣ್ಣಾಯಕ[೫]'
'ಚನ್ನದಂಡೇಶಮಂತ್ರಿ'[೬]

---

೧. ಚಬವ. ೧೪೬೧. ೨. ವಸಾ ೩, ಉತ್ತರಾರ್ಧ ಪು. ೪೭.
೩. ವಸಾ ೩, ಪು. ೧೧೪–೬೫. ೪. ಅಖಂಡೇಶ್ವರ ವಚನ.
೫. ಶಿಂಪು ಪು. ೪೫೨–೪೭. ೪೮: ಹಡಪದ ರೇಚಣ್ಣನ ವಚನ; ಭೈಕಾಕಸೂರ.
೬. ಶಲೀ ಪುಟ ೪೮೮.

ಚನ್ನಬಸವಣ್ಣನವರು ಚಿಕ್ಕದಣ್ಣಾಯಕರಾಗಿದ್ದಂತೆ ಈ ಉಲ್ಲೇಖಗಳಿಂದ ತಿಳಿಯ ಬಹುದು. ಚನ್ನಬಸವಪುರಾಣದಲ್ಲಿ ಬಿಜ್ಜಳನಿಗೆ ರಾಜನೀತಿಯನ್ನು ಬೋಧಿಸಿರುವುದನ್ನು ನೋಡಿದರೆ. ವಿರೂಪಾಕ್ಷಪಂಡಿತರ ಅಭಿಪ್ರಾಯದಲ್ಲಿ ಅವರು ರಾಜನೀತಿಯನ್ನು ಬಲ್ಲವ ರಾಗಿದ್ದರೆಂದು ಅರ್ಥವಾಗುತ್ತದೆ. ಅಲ್ಲದೆ. ಮಂತ್ರಿಸ್ಥಾನದಲ್ಲಿದ್ದು ನೀತಿಬೋಧೆಯನ್ನು ಮಾಡಿರುವರೆಂದು ಧ್ವನಿತವಾಗುತ್ತದೆ.

ಚನ್ನಬಸವಣ್ಣನವರಿಗೆ ಅರಸುವಿಚಾರ, ಸ್ವಭಾವಗಳ ಸೂಕ್ಷ್ಮ ಪರಿಚಯವಿದ್ದಿ ತೆಂಬುದಕ್ಕೆ ಅವರ ವಚನಗಳಲ್ಲಿ ಬರುವ ಆ ಸಂಬಂಧದ ಪ್ರತಿಮೆಗಳೇ ಸಾಕ್ಷಿಯಾಗಿವೆ. ಅವನ್ನು ಇಲ್ಲಿ ಅವಲೋಕಿಸಬಹುದು:

೧. 'ಅರಸಿನ ಹೆಸರಿಟ್ಟ ಅನಾಮಿಕನಂತೆ ನಾಮಕ್ಕಲ್ಲುಹರಲ್ಲದೆ ಪಟ್ಟಕ್ಕಲ್ಲುಹರೇ'?[೧]
೨. 'ಕೂಡಲ ಚನ್ನಸಂಗಯ್ಯನ ಬೆರಸಿದ ಹರ್ಷ ಅರಸಿಯ ನೋಟದಂತೆ.'[೨]
೩. 'ಅರಸಿನ ಭಕ್ತಿ; ಅಹಂಕಾರದಲ್ಲಿ ಹೋಯಿತ್ತು.'[೩]
೪. 'ಅರಸಿನ ಭಕ್ತಿ, ಅಹಂಕಾರದಿಂದ ಕೆಟ್ಟಿತ್ತು.'[೪]
೫. 'ಅರಸೋಕ್ತಿ ನಿಲ್ಲು. ಮಾಣು ಎಂದಲ್ಲಿ ಹೋಯಿತ್ತು.'[೫]
೬. 'ಅರಸಿನ ಹೆಸರ ಅನಾಮಿಕಂಗೆ ಅರಸೊತ್ತಿಗೆಯ ಸಿರಿ ದೊರೆಯದಂತೆ'[೬]
೭. 'ನೋಡುವ ರಾಜಕುಮಾರಿಗೆ ವಿಪರೀತ ಉಪದ್ರ'[೭]
೮. 'ಧನಸಂಪನ್ನರೆಲ್ಲ ರಾಜನಿಗೆ ಭಾಜನವಾದರು ನೋಡಯ್ಯಾ'[೮]
೯. 'ಷೋಡಶಕಳೆಯುಳ್ಳ ಜಂಗಮವ ರಾಜರು ಪೂಜಿಸುವರು: ವಿಷಯವುಳ್ಳ ಜಂಗಮವ ವೇಸೆಯರು ಪೂಜಿಸುವರು.'[೯]
೧೦. 'ಕ್ಷತ್ರಿಯ ಭಕ್ತನಾದಡೇನಯ್ಯಾ ಕ್ರೋಧ, ಹಿಂಸೆಯ ಬಿಡದನ್ನಕ್ಕ.'[೧೦]
೧೧. 'ಅರಸು ಭಕ್ತನಾದಡೇನಯ್ಯಾ ಅಹಂಕಾರವಳಿಯದನ್ನಕ್ಕ'[೧೧]
೧೨. 'ಹೊನ್ನುಳ್ಳ ದೊರೆಯಂತೆ ಭೀಷ್ಮಿಸಿಕೊಂಡಿಹನೆ ಭಕ್ತನು'[೧೨]
೧೩. 'ಆನೆಯನೇಱಿದ ಮಾವುತ ಚಕ್ರೇಶ್ವರನಾಗಬಲ್ಲನೇ ಅಯ್ಯಾ'[೧೩]
೧೪. 'ಅರಸು ಭಕ್ತನಾದಡೇನು ಅಱಿಸಿ ನೋಡಲಿಲ್ಲ'[೧೪]
೧೫. 'ಪ್ರಜರು ಪ್ರಧಾನಿಯ ಮುಂದೆ ಗಜವನೇಱಲಾಗದು'[೧೫]
೧೬. 'ಅರಸು ಮನೆಯೊಳಗಿದ್ದಲ್ಲಿ ಬಾಗಿಲಿಗೆ ಪದಾರ್ಥವ ತಂದು ಅರ್ಪಿತವೆಂದಡೆ ಅರ್ಪಿತವಹುದೇ'?[೧೬]
೧೭. 'ರಾಜಾರ್ಥದಲ್ಲಿ ಅಹುದ ಅಲ್ಲವ ಮಾಡಿ. ಅಲ್ಲವ ಅಹುದ ಮಾಡುವಾತ . . . . . ದುರುಳಮಂಕು'[೧೭].

---

೧. ಚಬವ ೬೬. ೨. ಚಬವ ೬೦. ೩. ಚಬವ ೭೩. ೪. ಚಬವ ೯೪.
೫. ಚಬವ ೯೫. ೬. ಚಬವ ೧೦೨. ೭. ಚಬವ ೧೩೨. ೮. ಚಬವ ೧೮೨.
೯. ಚಬವ ೨೦೮. ೧೦. ಚಬವ ೨೩೦. ೧೧. ಚಬವ ೨೩೧. ೧೨. ಚಬವ ೨೬೬.
೧೩. ಚಬವ ೩೬೭. ೧೪. ಚಬವ ೩೯೨. ೧೫. ಚಬವ ೪೧೭. ೧೬. ಚಬವ ೬೮೯.
೧೭. ಚಬವ ೬೨೫.

೧೮. 'ಮಾಂಸಕ್ಕೆ ಮೆಚ್ಚಿದ ಅರಸುಗಳು ನಾಯೊಂಬಲ ತಿಂದು ನರಕಕ್ಕಿಳಿದು ಹೋದರು.'[೧]

೧೯. 'ಅಷ್ಟವಿಧಾರ್ಚನೆ. ಷೋಡಶೋಪಚಾರ ಅರಸಜೀವಿಯದ ಬಿಟ್ಟಿ ಕಾಣಿಭೋ'[೨]

೨೦. 'ಅರಸನಾಳುವ ಗ್ರಾಮ ಪುರ ಪಟ್ಟಣದೊಳಗೆ ತಾಗಿರ್ದು. ಶೀಮೆ. ನಿಸ್ಸೀಮೆಂಯೆಂಬುದೇನಯ್ಯಾ'[೩]

೨೧. 'ಪರುಷದ ಅರಸಂಗೆ ಕಬ್ಬುನದ ಪರಿವಾರದಂತೆ'[೪]

ಮೇಲಿಂದ ಮೇಲೆ ಬರುವ ಈ ಪ್ರತಿಮೆಗಳ ಹಿಂದಣ ಮನೋಭಾವವನ್ನು ಪೃಥಕ್ಕರಿಸಿ ನೋಡಿದರೆ, ಚನ್ನಬಸವಣ್ಣನವರು ಅಸ್ಥಾನದ ಆವರಣದಲ್ಲಿದ್ದು ಅದರ ಓರೆಕೋರೆಗಳನ್ನು. ಒಲವು ನಿಲವುಗಳನ್ನು, ಕುಂದು ಕೊರತೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದರೆಂದು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಕಾವ್ಯಪ್ರತಿಮೆಗಳು ಜೀವನದ ಸುಪ್ತಚೇತನದಲ್ಲಿ ವ್ಯಕ್ತವಾಗಿಯೋ ಅವ್ಯಕ್ತವಾಗಿಯೋ ವಾಸಿಸುತ್ತಿದ್ದ ಭಾವನೆಗಳ ಪ್ರತೀಕ. ಆದುದರಿಂದ ಚನ್ನಬಸವಣ್ಣನವರು ಬಿಜ್ಜಳನ ಅಸ್ಥಾನದಲ್ಲಿ ಅಧಿಕಾರಿಗಳಾಗಿರಬೇಕೆಂಬ ಮಾತಿಗೆ ಇವು ಪುಷ್ಟಿಯನ್ನು ಕೊಡುತ್ತವೆ.

ಬಸವಣ್ಣನವರು ದಣ್ಣಾಯಕರಾಗಿ. ಚನ್ನಬಸವಣ್ಣನವರು ಚಿಕ್ಕದಣ್ಣಾಯಕರಾಗಿ ಮಾಡಿದ ಕಾರ್ಯಕಲಾಪಗಳ ಬಗೆಗೆ ಇತಿಹಾಸವಿನ್ನೂ ನಿಚ್ಚಳವಾಗಿ ಕಣ್ತೆರೆದಿಲ್ಲ. ಆದುದರಿಂದ ಆ ಬಗೆಗೆ ಹೆಚ್ಚಿಗೆ ಬರೆಯುವುದು ಸಾಧ್ಯವಿಲ್ಲ.

## ವಿಪ್ಲವ

ಬಸವಾದಿ ಪ್ರಮಥರು ಮಾನವಜೀವನದ ಶಾಶ್ವತವೂ ನೂತನವೂ ಎನಿಸಿದ ಮೌಲ್ಯಗಳನ್ನು ಕಂಡುಹಿಡಿದು ಕ್ರಾಂತಿಯನ್ನು ಕೈಕೊಂಡ ವಿಷಯ. ಪೀಠಿಕೆಯಲ್ಲಿ ಪ್ರಸ್ತಾಪಿತವಾಗಿದೆ. ಸಾವಿರಾರು ವರುಷಗಳಿಂದ ನಂಬಿಕೊಂಡು ಬಂದ ನಂಬುಗೆಗಳ ಬೇರು ಸಡಿಲಹತ್ತಿದುದರಿಂದ ಇತರ ಸಮಾಜ ಇವರನ್ನು ತೀಕ್ಷ್ಣದೃಷ್ಟಿಯಿಂದ ನೋಡತೊಡಗಿರಬೇಕು. ವರ್ಣವಿಲ್ಲ, ಆಶ್ರಮವಿಲ್ಲ. 'ಹಾರುವ ಮೊದಲು ಅಂತ್ಯಜ ಕಡೆಯಾಗಿ ಅಂಗದ ಮೇಲೆ ಲಿಂಗವಿದ್ದವರೆಲ್ಲ ಒಂದೇ'. 'ಮೊಲೆ. ಮುಡಿ ಬಂದರೆ ಹೆಣ್ಣೆಂಬರು; ಗಡ್ಡ. ಮೀಸೆ ಬಂದರೆ ಗಂಡೆಂಬರು. ನಡುವೆ ಸುಳಿವ ಆತ್ಮ ಗಂಡೂ ಅಲ್ಲ: ಹೆಣ್ಣೂ ಅಲ್ಲ.' ಇಂತಹ ಸಮತಾವಾದವನ್ನು ಪ್ರತ್ಯಕ್ಷ ಕೃತಿಯಲ್ಲಿ ತಂದರು. ಮಾದಾರ ಚನ್ನಯ್ಯ. ಡೋಹರ ಕಕ್ಕಯ್ಯ. ಅಂಬಿಗರ ಚೌಡಯ್ಯ. ಮೇದಾರ ಕೇತಯ್ಯ. ಹಡಪದ ಅಪ್ಪಣ್ಣ ಇಂತಹ ಅನೇಕ ಜನರು ಶರಣಸಂದೋಹದಲ್ಲಿ ಅತ್ಯಂತ ಪೂಜ್ಯರಾಗಿದ್ದುದನ್ನು ಮಿಕ್ಕವರು ನೋಡುತ್ತಿರಬೇಕು. ಶಿವಶರಣರ ಸಂದೇಶ. ಜನತೆಯ ಮನೆ ಮನೆ. ಮನ ಮನಗಳನ್ನು ಮುಟ್ಟಿ ಅವರ ಸಂಘಟನೆ. ತತ್ವಪ್ರಚಾರ. ಧರ್ಮಬೋಧೆ. ಎಲ್ಲವೂ ನೀರ ಮೇಲಿನ ಎಣ್ಣೆಯಂತೆ ಶೀಘ್ರ ಪಸರಿಸಿ. ಜನತೆಯ ಕಣ್ತೆರೆದುವು. ಬಸವಣ್ಣನವರು ಮರ್ತ್ಯವನಾಳುಹಲು ಬಂದ ಮಹಾಂತರೆಂಬ ನಂಬುಗೆ ಜನತೆಯಲ್ಲಿ ರೂಢವಾಯಿತು.

---

೧. ಚಬವ ೬೬೦. ೨. ಚಬವ ೧೪೧೨. ೩. ಚಬವ ೧೩೦೫. ೪. ಚಬವ ೧೩೦೧.

ಹೀಗೆ ದಿನ ದಿನ ಬೆಳೆಯುತ್ತಿದ್ದ ನೂತನ ಸಮಾಜದ ಬಗೆಗೆ ಸನಾತನಧರ್ಮವು ಅಸಹನೆಯನ್ನು ತಾಳಿ ಬಿಜ್ಜಳನಲ್ಲಿ ದೂರಿದ ಬಗೆಗೆ ಅನೇಕ ಉಲ್ಲೇಖಗಳು ದೊರೆಯುತ್ತವೆ.[೧] ಇದರಿಂದ ಬಸವಣ್ಣ, ಬಿಜ್ಜಳ ಇವರ ನಡುವೆ ಇದ್ದ ಮಧುರಬಾಂಧವ್ಯ ಕಹಿಯಾಗುತ್ತ ನಡೆಯಿತು.[೨]

ಇಂತಹ ವಿಷಪೂರಿತ ಮನೋಭಾವನೆಯಲ್ಲಿ ಬಿಜ್ಜಳನು ಶರಣರ ಧಾರ್ಮಿಕ ಹಾಗೂ ಸಾಮಾಜಿಕ ಚಟುವಟಿಕೆಗಳ ಅಪಾರ್ಥವನ್ನು ಮಾಡಿಕೊಂಡಿರುವುದು ಸ್ವಾಭಾವಿಕವಾಗಿದೆ. ಉನ್ಮತ್ತನಾದ ದೊರೆ, ಹರಳಯ್ಯ ಮಧುವಯ್ಯಗಳೆಂಬ ಇಬ್ಬರು ಶರಣರ ಕಣ್ಣುಕೀಳಿಸಿ,[೩] ಎಳಹೂಟೆ ಮಾಡಿಸುವನು. ಹೀಗೆ ಮಾಡುವುದಕ್ಕೆ ಹರಳಯ್ಯನವರ

---

೧. "ಮೂವತ್ತಾಱು ಕೊಂಡೆಯರ ಪರಿಹರಿಸಿ"—ಬಹೆವ ೨೪೧ ಮತ್ತು ೨೫೬.
"ಮೂವತ್ತಾಱು ಕೊಂಡೆಯರ ಗೆಲಿಸಿ . . ." ಬಹೆವ ೩೬೨.
(ಬಸವಣ್ಣನವರ ವಿಷಯವನ್ನು ಹೇಳುವ ಎಲ್ಲ ವೀರಶೈವ ಕಾವ್ಯಗಳಲ್ಲಿಯೂ ಈ ಪ್ರಸ್ತಾಪ ಬರುತ್ತದೆ.)

೨. "ಕೂಡಲಸಂಗಮದೇವನುಳ್ಳನ್ನಕ್ಕ ಬಿಜ್ಜಳನ ಭಾಂಡಾರವೆನಗೇಕಯ್ಯಾ" ಬಷವ ೭೫೪.
"ಆನೀ ಬಿಜ್ಜಳಂಗಂಜುವೆನೆ ಅಯ್ಯಾ" ಬಷವ ೭೩೬; "ಲಿಂಗವು ಹುಸಿ, ಜಂಗಮವು ಹುಸಿ ಎಂದು ಪರವಾದಿ ಬಿಜ್ಜಳನು ಸಂಪಾದಿಸುವಲ್ಲಿ . . . . ಆತನು ಭಕ್ತಿಯ ಪಥವಲ್ಲೆಂಬುದ, ನಾನಹುದೆಂಬುದ, ಈ ಎರಡನೂ ನೀ ಸೂತ್ರಧಾರಿಯಾಗಿ ಆಡಿಸುವಲ್ಲಿ . . . ." ಬಹೆವ ೨೫೧. "ಪರವಾದಿ ಬಿಜ್ಜಳನ ಒರೆಗಲ್ಲಾಗಿರಿಸಿ" ಬಹೆವ ೨೮೬; "ಪರವಾದಿ ಬಿಜ್ಜಳ ಒರೆಗಲ್ಲ ಹಿಡಿದು ಶಿವಭಕ್ತಸಂಪಾದನೆಯ ಮಾಡುವಲ್ಲಿ" ಚಬವ ೧೮೯; "ಪರವಾದಿ ಬಿಜ್ಜಳನು ಒರೆದು ನೋಡಲೆಂದಟ್ಟಿದಡೆ" ಚಬವ ೫೩೫.

೩. ". . . . . . . ಅಳ್ಳ
ಯ್ಯಗಳ ಮಧುವಯ್ಯಗಳ ನಾಗಳೆ
ಜಗತಿಪಂ ತಪ್ಪೇನುಮಿಲ್ಲದೆ ನೀತಿಯಲ್ಲೆಂದು
ಬಗೆಯುದವರಂ ಕರೆಸಿ ಕಣ್ಣಂ
ತೆಗೆಸಿದನು . . . . . ." (ಬಪು ೬-೧೪)
"ಬಸವದಂಡಾಧೀಶನ್ನೆದೆ ತತ್ಪಟ್ಟಮಂ
ವಸುಧೇಶ ಬಿಜ್ಜಳಂ ನಮಗೆ ಕಟ್ಟುವನಾಗ
ಲಸಮುಕುಲವೆಂದು ಹಳ್ಳಯ್ಯ ಮಧುವಯ್ಯಗಳನೆಳಹೂಟೆಯುಂಕಟ್ಟಿಸೆ"
(ಚೆಬಪು ಕಾಂ. ೫, ೯-೨೦)
"ಹಳ್ಳಯ್ಯ ಮಧುವಯ್ಯಗಳ ಚರಿತ್ರ ನೀತಿಯಲ್ಲವೆಂದು ಬಗೆದು
ಅವರಂ ಕರೆಸಿ ಕಣ್ಣ ತೆಗೆಯಿಸಲು . . . . ."
(ಗೋರಕ್ಷನ ಸಂಪಾದನೆ, ಮತ್ತು ಎಲ್ಲಾ ಗಣಂಗಳ ಐಕ್ಯ, ಗೂಸಿಶೂಸಂ. ೧೮)
"ಹಳ್ಳಯ್ಯ ಮಧುವಯ್ಯಗಳ ಕಣ್ಗಳಿಗೆ ಧರಾ
ವಲ್ಲಭಂ ಬಿಜ್ಜಳಂ ಮುನಿಯೆ . . . . . . ." (ರಾಚಾ, ೧೫-೧೭)
"ತತ್‌ಚರಿತ್ರವೈಭವಮಂ ಕಂಡಸೂಯೆಯಿಂ ಸೈರಿಸಲಾಱದೆ
ಪಿಸುಣ್ಗೆಡೆದ ಪರಸಮಯಿಗಳ ಕುಹಕೋಕ್ತಿಯಂ ಕೇಳ್ದು
ಬಿಜ್ಜಳನಾ ಭಕ್ತರ ಲೋಚನಂಗಳಂ ತೆಗೆಯಿಸಿದಂ." (ವೃಷಭೇಂದ್ರ ವಿಜಯ ೪೨–೫೧೫)

ಮಗನಿಗೆ ಮಧುವರಸರ ಮಗಳನ್ನು ಕೊಟ್ಟು ಮಾಡಿದ ಮದುವೆಯೇ ಕಾರಣವೆಂದು ಬಸವಪುರಾಣ, ಚನ್ನಬಸವಪುರಾಣ, ಶೂನ್ಯಸಂಪಾದನೆ, ರಾಘವಾಂಕಚಾರಿತ್ರ, ವೃಷಭೇಂದ್ರವಿಜಯ ಮುಂತಾದ ಕಾವ್ಯಗಳಲ್ಲಿ ಹೇಳಲಾಗಿರುವುದಿಲ್ಲ. ತೀರ ಇತ್ತೀಚಿನವೆನಿಸಿದ ಭೈರವೇಶ್ವರಕಾವ್ಯದ ಕಥಾಮಣಿಸೂತ್ರ ರತ್ನಾಕರ (೧೮೮೦), ಶರಣಲೀಲಾಮೃತ (೧೭೩೦) ಗಳಲ್ಲಿ ಮಾತ್ರ ಈ ಮದುವೆಯ ನಿಮಿತ್ತವಾಗಿ ಕಣ್ಣು ಕೀಳಿಸಲಾಯಿತೆಂದು ಉಕ್ತವಾಗಿದೆ.[೧]

ಪ್ರಾಚೀನ ಕಾವ್ಯಗಳಲ್ಲಿ ಅಸ್ಪಷ್ಟ ಮತ್ತು ಸೂಚ್ಯವಾಗಿ ಹೇಳಿದ ಈ ವಿಷಯವನ್ನು ಮುಂದಿನವರು ಸ್ಪಷ್ಟಪಡಿಸಿದಂತಿದೆ. ವರ್ಣಸಂಕರದ ಈ ಘಟನೆಯಿಂದ ಉದ್ರಿಕ್ತನಾದ ಬಿಜ್ಜಳನು ಶರಣದ್ರೋಹ ಮಾಡಲು. ಶಿವಶರಣರು ಮುಂದೇನು ಮಾಡಬೇಕೆಂಬುದರ ಬಗೆಗೆ ವಿಚಾರಪರರಾಗಿರಬೇಕು. ಇಂತಹ ಪ್ರಸಂಗದಲ್ಲಿ ವೀರಶೈವ ಧರ್ಮದನ್ವಯ ಇರುವುವು ಎರಡು ಮಾರ್ಗಗಳು:

(೧) ಶಿವನಿಂದೆಯಾಗುತ್ತಿದ್ದ ಸ್ಥಳದಿಂದ ಬಿಟ್ಟುಹೋಗುವುದು.

(೨) ಅದಕ್ಕೆ ತಕ್ಕ ಪ್ರತೀಕಾರವನ್ನು ಕೈಕೊಂಡು ಸ್ವಧರ್ಮವನ್ನು ಪರಿಪಾಲನೆ ಮಾಡುವುದು.

ಇವುಗಳಲ್ಲಿ ಯಾವ ಮಾರ್ಗವನ್ನು ಕೈಕೊಳ್ಳಬೇಕೆಂಬ ಬಗೆಗೆ ಶರಣರಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿದಂತೆ ಕಂಡುಬರುತ್ತದೆ. ಬಸವಣ್ಣನವರು ಮಾತ್ರ ತಮ್ಮ ಸಹಜ ಮನೋಧರ್ಮಕ್ಕನುಗುಣವಾಗಿ ಕಲ್ಯಾಣದಿಂದ ಕೂಡಲಸಂಗಮದ ಕಡೆಗೆ ಹೊರಡುವರು. ಬಿಜ್ಜಳನು ಹರಳಯ್ಯ ಮಧುವಯ್ಯಗಳ ಕಣ್ಣು ಕೀಳಿಸುವ ಪೂರ್ವದಲ್ಲಿಯೇ ಬಸವಣ್ಣನವರು ಕಲ್ಯಾಣದಿಂದ ಹೊರವಂಟರೆಂದು ಚನ್ನಬಸವಪುರಾಣ[೨] ಹಾಗೂ ಶರಣಲೀಲಾಮೃತ[೩] ಗ್ರಂಥಗಳಲ್ಲಿ ಹೇಳಲಾಗಿದೆ. ಆದರೆ. ಪ್ರಬಲವಾದ ಕಾರಣಗಳಿಲ್ಲದೆ ಬಸವಣ್ಣನವರು ಕಲ್ಯಾಣದಿಂದ ಹೊರಟಿರುವುದು ಅಸಂಭವವಾದುದರಿಂದ ಮಿಕ್ಕ ಗ್ರಂಥಗಳ ಹೇಳಿಕೆಯೇ ಈ ಸಂದರ್ಭದಲ್ಲಿ ಹೆಚ್ಚು ವಿಶ್ವಸನೀಯವೆಂದು ತೋರುತ್ತದೆ.

ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಹೊರವಂಟಮೇಲೆ ಮಿಕ್ಕ ಶರಣರೆಲ್ಲ ಹೆಚ್ಚು ಜಾಗರೂಕರಾಗಿರಬೇಕು. ಇದ್ದಷ್ಟು ಅವಧಿ ಚನ್ನಬಸವಣ್ಣನವರಿಗೆ ಅಣ್ಣ ಬಸವಣ್ಣ

---

೧. ಬ್ರಾಹ್ಮಣ ವಂಶದಲ್ಲಿ ಜನಿಸಿದ ಮಧುವರಸರ ಮಗಳನ್ನು ಅಂತ್ಯಜವಂಶದಲ್ಲಿ ಹುಟ್ಟಿದ ಹರಳಯ್ಯನವರ ಮಗನಿಗೆ ಕೊಟ್ಟು ಮದುವೆ ಮಾಡಿದುದರ ನಿಮಿತ್ತ, ಬಿಜ್ಜಳನು ಅವರ ಕಣ್ಣುಗಳನ್ನು ಕೀಳಿಸಿದನೆಂದು ಹೇಳುವ ಕಾವ್ಯಗಳು

(೧) ಭೈರವೇಶ್ವರ ಕಾವ್ಯ ಕಥಾಮಣಿಸೂತ್ರ ರತ್ನಾಕರ. ಪು. ೨೩೦.

(೨) ಶರಣಲೀಲಾಮೃತ ಸಂಧಿ ೨೧.

೨. "ಬಸವದಂಡಾಧೀಶನ್ನೈದೆ, ತತ್ಪಟ್ಟಮಂ
ವಸುಧೇಶ ಬಿಜ್ಜಳಂ ನಮಗೆ ಕಟ್ಟುವನಾಗ
ಲಸಮುಕುಲವೆಂದು ಹಳ್ಳಯ್ಯ ಮಧುವಯ್ಯಗಳನೆಳಹೂಟೆಯಂ ಕಟ್ಟಿಸೆ"

ಚೆಬಪು ಕಾ. ೫, ೯-೨೦.

೩. ಶಲೀ. ಸಂ-೨೧. ಬಸವೇಶ್ವರನು ಐಕ್ಯವಾದ ವಿಷಯ: ಸಂ-೨೨ ಹರಳಯ್ಯ ಮಧುವಯ್ಯಗಳ ಎಳಹೂಟೆ.

ನವರ ಪಟ್ಟವಾಗಿದೆ. ಶಿವದ್ರೋಹದ ಪ್ರತೀಕಾರ ಇಷ್ಟರಲ್ಲಿಯೇ ನಡೆದುಹೋಗುತ್ತದೆ. ವೀರ ಜಗದೇವನಿಂದ ಭೂಪ ಬಿಜ್ಜಳನ ಕೊಲೆಯಾಗುತ್ತದೆ. ಮಲ್ಲಿಬೊಮ್ಮಯ್ಯ ನೆಂಬವನೂ ಅದಕ್ಕೆ ಹೊಣೆಯಾಗಿದ್ದನೆಂದು ಎಲ್ಲ ಕಾವ್ಯಗಳಿಂದ ವಿದಿತವಾಗುತ್ತದೆ.

ಬಿಜ್ಜಳನ ಕೊಲೆ ನಡೆದ ಅವಧಿಯಲ್ಲಿ ಬಸವಣ್ಣನವರು ಕಲ್ಯಾಣದಲ್ಲಿರಲಿಲ್ಲ ವೆಂಬುದು ಸ್ಪಷ್ಟ. ಆದರೆ ಪ್ರಕ್ಷಿಪ್ತವೆಂದು ಸಹಜವಾಗಿಯೇ ನಿರ್ಣಯಿಸಬಹುದಾದ ಒಂದೆರಡು ಕಡೆಗೆ ಬಸವಣ್ಣನವರ ಮೇಲೆ ಈ ಆರೋಪವನ್ನು ಹೊರಿಸಲಾಗಿದೆ. ಅವನ್ನಿಲ್ಲಿ ಸಮಾಲೋಚಿಸಬಹುದು.

> "ಇಂತು ಬಸವಂ ಮರ್ತ್ಯದೊಳಗೆ ಮಹಿಮೆಯು ಬೀಱಿ
>
> . . . . . . . . . . . . . . . . . . . . . . . . . . .
>
> ಶಿವದ್ರೋಹಮುಂಗೈದ ಬಿಜ್ಜಳನ ಕೊಲಿಸುತಂ"[೧]

ಎಂದು ಬಸವರಾಜದೇವರಗಳೆಯಲ್ಲಿ ಉಕ್ತವಾಗಿದೆ. ಇಪ್ಪತ್ತೈದು ಸ್ಥಲಗಳ ಬಸವರಾಜ ದೇವರ ರಗಳೆ ಹದಿಮೂರನೆಯ ಸ್ಥಲದ ಅರ್ಧಭಾಗದವರೆಗೆ ಬಂದು ಮುಂದಿನಭಾಗ ಕಣ್ಮರೆಯಾಗಿದೆ. ಮೇಲಿನ ಚರಣದಿಂದ ಆರಂಭವಾಗಿ ಮುಕ್ತಾಯದವರೆಗೆ ಬಂದಿರುವ ಸುಮಾರು ೩೦ ಚರಣಗಳು ಕೆಲವು ಪ್ರತಿಗಳಲ್ಲಿ ದೊರೆಯದಿರುವುದು ಗಮನಾರ್ಹ. ಹನ್ನೆರಡುವರೆ ಸ್ಥಲಗಳಷ್ಟು ಭಾಗ ಕಳಚಿಹೋಗಿ, ಕೊನೆಯ ಮೂವತ್ತು ಚರಣಗಳು ಉಳಿದುಕೊಂಡು ಬಂದಿವೆಯೆಂಬುದು ನಂಬಲಿಕ್ಕಾಗದ ಮಾತು. ಬಸವರಾಜದೇವರ ರಗಳೆಯನ್ನು ಅಪೂರ್ಣವಾಗಿ ಬಿಡದೆ ಮುಗಿಸಿದಂತೆ ಮಾಡಬೇಕೆಂದು ಯಾರೋ ಆಮೇಲೆ ಬಂದವರು ಈ ಚರಣಗಳನ್ನು ಸೇರಿಸಿರಬೇಕು. ಅಲ್ಲಿ ಹರಿಹರನ ಕಾವ್ಯವಾಗಲಿ, ಶೈಲಿಯಾಗಲಿ, ವ್ಯಕ್ತಿತ್ವವಾಗಲಿ ಯಾವುದೂ ಇಲ್ಲ. ಇವೆಲ್ಲ ಕಾರಣಗಳ ಮೂಲಕ, ಮೇಲೆ ನಿರ್ದೇಶಿಸಿದ ಚರಣಗಳಿಂದ ಆರಂಭವಾಗಿ, ಕೊನೆಯವರೆಗೆ ಬರುವ ಮೂವತ್ತು ಚರಣಗಳು ಪ್ರಕ್ಷಿಪ್ತವೆಂದು ಸಿದ್ಧವಾಗುತ್ತದೆ.

ಇದರಂತೆ ಶೂನ್ಯಸಂಪಾದನೆಯಲ್ಲಿ ಬರುವ ಭಾಗವೂ[೨] ಪ್ರಕ್ಷಿಪ್ತವೆಂಬುದನ್ನು ಕೆಳಗಿನ ಕಾರಣಗಳಿಂದ ನಿರ್ಧರಿಸಬಹುದು.

(೧) ಗೂಳೂರ ಸಿದ್ಧವೀರಣಾರ್ಯರ ಶೂನ್ಯಸಂಪಾದನೆಯ ಇಪ್ಪತ್ತೊಂದನೇ ಸಂಪಾದನೆಯ ೧೭ನೆಯ ವಚನಾನಂತರ ಬರುವ ಗದ್ಯವು ಶೂನ್ಯಸಂಪಾದನೆಯಲ್ಲಿ ಬೇರೆ ಕಡೆಗೆ ಬರುವ ಗದ್ಯದ ಆವ ಲಕ್ಷಣವನ್ನೂ ಪಡೆಯದೆ ಸತ್ವಹೀನವಾಗಿದೆ. ಈ ಗದ್ಯದ ರಚನೆ ೧೭-೧೮ನೆಯ ಶತಮಾನದ ಗದ್ಯಲಕ್ಷಣಗಳನ್ನು ಒಳಗೊಂಡಿರುವುದು ಗಮನಾರ್ಹ.

(೨) ಸೊಡ್ಡಳ ಬಾಚರಸರು ಲಿಂಗೈಕ್ಯವಾದ ಮೇಲೆ ಬಸವರಾಜದೇವರು ನಿರೂಪಿಸಿದ 'ಎಮ್ಮವರಿಗೆ ಸಾವಿಲ್ಲ.....' ಹಾಗೂ 'ಅರಸುವಿಚಾರವು ಸಿರಿಯುಂ ಶೃಂಗಾರ, ಸ್ಥಿರವಲ್ಲ' ಎಂಬೀ ಎರಡು ವಚನಗಳು ಶಿವಗಣಪ್ರಸಾದಿಮಹಾದೇವಯ್ಯ ಹಾಗೂ ಹಲಗೆ ದೇವರ ಶೂನ್ಯಸಂಪಾದನೆಗಳಲ್ಲಿ ಬಂದಿದ್ದರೂ ಅವೆರಡರ ನಡುವೆ

---

೧. ಬದೇರ ಸ್ಥಲ ೧೩.

೨. ಗೋರಕ್ಷನ ಸಂಪಾದನೆ ಮತ್ತು ಎಲ್ಲಾ ಗಣಂಗಳ ಐಕ್ಯ (ಪು. ೪೫೩, ೪೫೮)

ಬರುವ ಪ್ರಸ್ತುತಗದ್ಯ ಮತ್ತು ಅನಂತರ ಬರುವ ಗದ್ಯ ಭಾಗಗಳು ಅಲ್ಲಿ ಕಂಡುಬರುವು ದಿಲ್ಲ. ಆದುದರಿಂದ ಬಸವಣ್ಣನವರು ಬಿಜ್ಜಳನ ಕೊಲೆಗೆ ಅಪ್ಪಣೆ ಕೊಟ್ಟು ಅದಾದ ಮೇಲೆ ಆನಂದಪಟ್ಟರೆಂಬ ವಿಚಾರ ಮೊದಲಿನವೆರಡು ಶೂನ್ಯಸಂಪಾದನೆಕಾರರ ಕಾಲ ದಲ್ಲಿರದೆ ಮುಂದೆ ಹುಟ್ಟಿದಂತೆ ತೋರುತ್ತದೆ.

(೩) 'ಅರಸು ವಿಚಾರ ಸಿರಿಯು ಶೃಂಗಾರ' ಎಂಬ ವಚನ ಬಸವಣ್ಣನವರ ಷಟ್ಸ್ಥಲವಚನಗಳ ಕಟ್ಟಿನಲ್ಲಿ ಹೀಗೆ ಉಕ್ತವಾಗಿದೆ.

**"ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವಾ**
**ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ!**
**ಒಬ್ಬ ಜಂಗಮದಭಿಮಾನದಿಂದ**
**ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು.**
**ಸಂದಿತ್ತು ಕೂಡಲಸಂಗಮದೇವಾ. ನಿಮ್ಮ ಕವಳಿಗೆಗೆ ॥"[೧]**

ಶೂನ್ಯಸಂಪಾದನೆಯಲ್ಲಿ ಬರುವ ಇದೇ ವಚನದಲ್ಲಿ

**'ಲೋಕವಱಿಯಲು ಶಿವಾಚಾರದಭಿಮಾನದಲಿ**
**ಜಗದೇವ ಮೊಲ್ಲೆಯ ಬೊಮ್ಮಣ್ಣಗಳ ಕೈಯಲ್ಲಿ**
**ಮಡಿದಿಹನು ಬಿಜ್ಜಳನು.'**

ಎಂಬ ಹೆಚ್ಚಿನಭಾಗ ದೊರೆಯುತ್ತದೆ. ಹೀಗೆ ಒಂದೇ ವಚನದ ಭಿನ್ನರೂಪಗಳು ಇದ್ದಲ್ಲಿ ಷಟ್ಸ್ಥಲ ವಚನದ ಕಟ್ಟುಗಳಿಗೆ ಹೆಚ್ಚಿನ ಪ್ರಾಮಾಣ್ಯವನ್ನು ಕೊಡಬೇಕಾಗುತ್ತದೆ. ಆದುದ ರಿಂದ ಶೂನ್ಯಸಂಪಾದನೆಯಲ್ಲಿ ಬರುವ ಮೇಲಿನ ಭಾಗ ಪ್ರಕ್ಷಿಪ್ತವೆಂದು ತೋರುತ್ತದೆ.

ಈ ಎಲ್ಲ ಕಾರಣಗಳಿಂದ ಗುಮ್ಮಳಾಪುರ ಸಿದ್ಧಲಿಂಗದೇವರು, ಹಾಗೂ ಗೂಳೂರ ಸಿದ್ಧವೀರಣಾರ್ಯರು ರಚಿಸಿದ ಶೂನ್ಯಸಂಪಾದನೆಗಳಲ್ಲಿ ಬಸವಣ್ಣನವರು ಬಿಜ್ಜಳನ ವಧೆಗೆ ಕಾರಣರೆಂಬ ಬಗೆಗೆ ಬರುವ ಭಾಗ ಪ್ರಕ್ಷಿಪ್ತವೆಂದೇ ನಿರ್ಣಯವಾಗುತ್ತದೆ. ಅಂದಮೇಲೆ ಬಸವಣ್ಣನವರು ಮನನೊಂದು ಆಕಡೆ ಸಂಗಮಕ್ಕೆ ಹೋದ ತರುವಾಯ ಈಕಡೆ ಬಿಜ್ಜಳನ ಕೊಲೆಯಾಗಿದೆ. ಹರಳಯ್ಯ ಮಧುವಯ್ಯ ಹಾಗೂ ಬಿಜ್ಜಳ ಇವರ ಕೊಲೆಯಿಂದ ಕಲ್ಯಾಣದಲ್ಲಿ ಅಲ್ಲೋಲಕಲ್ಲೋಲ ಪರಿಸ್ಥಿತಿ ಉಂಟಾಗಿರಲು ಸಾಕು. ಅದರ ದಾರುಣಚಿತ್ರ ಎಲ್ಲ ಕಾವ್ಯಗಳಲ್ಲಿಯೂ ಕಂಡುಬರುತ್ತದೆ. ಬಸವಣ್ಣನವರು ಭಕ್ತಿ ರಸವೆಂಬ ತೈಲವನೆರೆದು ಹೊತ್ತಿಸಿದ ನಂದಾದೀಪ ಆರುವ ಸಮಯ ಪ್ರಾಪ್ತವಾಯಿತು. ಆಗ ಬಸವಣ್ಣನವರು ಚನ್ನಬಸವಣ್ಣನವರನ್ನು ಕರೆದು.

**".....ಕಲ್ಯಾಣವೆಂಬುದು ಪ್ರಣತಿಯಾಯಿತ್ತು.**
**ನಾನು ತೈಲವಾದೆನು, ನೀವು ಬತ್ತಿಯಾದಿರಿ, ಪ್ರಭುದೇವರು ಜ್ಯೋತಿಯಾದರು.**
**ಪ್ರಣತಿ ಒಡೆಯಿತ್ತು, ತೈಲವಱಿತಿತ್ತು, ಜ್ಯೋತಿ ಬಯಲಾಗಿತ್ತು"**

೧. ಬಸವ, ೬೨೬

ಎಂದು ಅಪ್ಪಣೆಕೊಡಿಸಿದ ಮಾತು ಸತ್ಯವಾಯಿತು. ಶರಣರು ವಿಪ್ಲವದ ಹಾಲಾಹಲದಲ್ಲಿ ನೊಂದು ಬೆಂದು ಚನ್ನಬಸವಣ್ಣನವರ ನೇತೃತ್ವದಲ್ಲಿ ಕಲ್ಯಾಣದಿಂದ ಉಳಿವೆಯತ್ತ ಸಾಗಿದರು.

## ಕಲ್ಯಾಣದಿಂದ ಉಳಿವೆಗೆ

"ಬಂದಿತ್ತು ದಿನ ಬಸವಣ್ಣ ಕಲ್ಲಿಗೆ
ಚನ್ನಬಸವಣ್ಣ ಉಳುವೆಯಲ್ಲಿಗೆ
ಪ್ರಭು ಅಕ್ಕ ಕದಳಿದ್ವಾರಕ್ಕೆ
ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ಲಕ್ಷ್ಯಕ್ಕೆ
ನಾನು ತುಱುವಿನ ಬೆಂಬಳಿಯಲ್ಲಿ ಹೋದಮುಱಿಯಲ್ಲಿ
ಅಡಗಿಹರೆಲ್ಲರೂ ಅಡಗಿದುದ ಕೇಳಿ
ನಾ ಗೋಪತಿನಾಥ ವಿಶ್ವೇಶ್ವರಲಿಂಗದಲ್ಲಿಯೆ ಉಡುಗುವೆನು"[೧]

ಕ್ರಾಂತಿ, ವಿಪ್ಲವದಲ್ಲಿ ಕೊನೆಗೊಳ್ಳಲು ಶರಣರು ತಂತಮ್ಮ ಲಕ್ಷ್ಯಸ್ಥಳಗಳಿಗೆ ತೆರಳುವರು. ಶ್ರೀಶೈಲದ ಕಡೆಗೆ ಪ್ರಭುದೇವರು ಹೋದರೆ, ಕಪ್ಪಡಿಯತ್ತ ಬಸವಣ್ಣನವರು ಸಾಗಿರುವರು. ಆದರೆ, ಚನ್ನಬಸವಣ್ಣನವರೇ ಮೊದಲಾದ ಅಸಂಖ್ಯಾತರು ಉಳಿವೆಯ ಕಡೆಗೆ ಸಾಗಿರುವ ಕಥೆ, ದಾರುಣವೂ ರೋಮಾಂಚನಕಾರಿಯೂ ಆಗಿದೆ. ಬಿಜ್ಜಳನ ವಧೆಯಾದೊಡನೆ ಅಳಿಯಬಿಜ್ಜಳನು[೨] ಚನ್ನಬಸವಣ್ಣನವರ ಅರಮನೆಯನ್ನು ಮುತ್ತುವನು. ಆಗ ಚನ್ನಬಸವಣ್ಣ, ಅಕ್ಕನಾಗಮ್ಮ, ಮಡಿವಾಳ ಮಾಚಿದೇವ, ಕಿನ್ನರಿ ಬೊಮ್ಮಯ್ಯ, ಕೂಗಿನಮಾರಿತಂದೆ, ಪಡಿಹಾರಿ ಉತ್ತಣ್ಣ, ಹಡಪದ ರೇಚಣ್ಣ ಮುಂತಾದ ಶರಣರ ನೇತೃತ್ವದಲ್ಲಿ ಅಸಂಖ್ಯಾತರು, ಕಲ್ಯಾಣದಿಂದ ಹೊರಟುಹೋಗುವರು. ವಿಸ್ತಾರವಾದ ಬಿಜ್ಜಳನ ಸಾಮ್ರಾಜ್ಯದಲ್ಲಿ ಅವರು ಎಲ್ಲಿಯೂ ತಂಗಿದಂತಿಲ್ಲ. ಅಳಿಯಬಿಜ್ಜಳನ ಸೈನ್ಯ ಅವರೊಡನೆ ಕಾದಿದ ಪ್ರಸ್ತಾಪಗಳೇ ಬರುವುದಿಲ್ಲ. ಚದುರಿ ಹೋಗುತ್ತಿರುವ ಶರಣರು ತದ್ದೇವಾಡಿಯ ಬರ್ಮದೇವನಿಂದ ಸಹಾಯವನ್ನು ಅಪೇಕ್ಷಿಸಿದಂತೆ ತೋರುತ್ತದೆ. ಯಾಕಂದರೆ ಆತನು ಶೈವಪಕ್ಷಪಾತಿಯಾದಂತೆ ಊಹಿಸಬಹುದಾಗಿದೆ. ಆದರೆ, ಬಿಜ್ಜಳನು ಎಲ್ಲ ಸಾಮಂತರ ಮೇಲೆ ಸಂಪೂರ್ಣ ಪ್ರಭುತ್ವ ಉಳ್ಳವನಾಗಿದ್ದುದರಿಂದ ಆತನನ್ನು ಎದುರಿಸಿ ಶರಣರಿಗೆ ಸಹಾಯಮಾಡುವ ಧೈರ್ಯ ಯಾರಿಗೂ ಆದಂತೆ ಕಂಡು ಬರುವುದಿಲ್ಲ. ಶರಣವೃಂದ ಕಲ್ಯಾಣದಿಂದ ತದ್ದೇವಾಡಿಯ ವಿಸ್ತಾರವಾದ ಪ್ರದೇಶವನ್ನು ದಾಟಿ ಮಲಪ್ರಭಾನದಿಯ ತೀರದಲ್ಲಿ ತಂಗಿ, ಮುಂದೆ ಉಳಿವೆಯ ಕಡೆಗೆ ಸಾಗಿದೆ. ಅದನ್ನು ಕಾವ್ಯಗಳು ಬೇರೆ ಬೇರೆಯಾಗಿ ವಿವರಿಸುತ್ತವೆ:

---

೧. ತುರುಗಾಹಿ ರಾಮಣ್ಣನ ವಚನ ೪೫.

೨. ಸೈನ್ಯಾಧಿಪತಿಯಾಗಿದ್ದ ಬಿಜ್ಜಳನ ಅಳಿಯ ಈತನನ್ನು ಸಿಂದಬಿಜ್ಜಳನೆಂದೂ ಕರೆಯುವರು.

**ಚೆನ್ನಬಸವ ಪುರಾಣದಲ್ಲಿ:**




ಹೀಗೆ ಯುದ್ಧಗಳಾದ ಸ್ಥಳಗಳನ್ನು ನಿರ್ದೇಶಿಸಲಾಗಿದೆ. ತಡಗೋಡದಲ್ಲಿ ತಡೆವಿಡಿದಿರಬೇಕೆಂದೂ ಕಾತರವಳ್ಳಿಯಲ್ಲಿ ಕಾದಿರಬೇಕೆಂದೂ ವ್ಯಕ್ತವಾಗುತ್ತದೆ. ಮುರಗೋಡದಲ್ಲಿ ಮುರಿಯ ತಿವಿದು ಮಡಿವಾಳಯ್ಯಗಳು ಹಾಗೂ ಕೂಗಿನ ಮಾರಿತಂದೆಗಳು ಅಳಿಯ ಬಿಜ್ಜಳನನ್ನು ಸೆರೆಹಿಡಿವರು. ನಾಗಾಂಬಿಕೆಯ ಉಪದೇಶದಿಂದ ಅವನಿಗೆ ಪ್ರಾಣದಾನ ಮಾಡಿ ಕಳುಹಿಸಿಕೊಟ್ಟು, ತಾವು ಉಳಿವೆಗೆ ಹೋಗುವರು. ಮಾಚಯ್ಯ ತಮ್ಮ ಗುರು ಲಿಂಗಣಾರ್ಯರ ಪಾದದಲ್ಲಿ ಐಕ್ಯನಾಗಲು ಹಿಪ್ಪರಿಗೆಗೆ ಹೋಗುವರು.

**ಶರಣಲೀಲಾಮೃತದಲ್ಲಿ:**




ಉಳಿವೆ ಮಹಾಮನೆ (ಬಯಲುಬಸವನಲ್ಲಿ ಚನ್ನಬಸವಣ್ಣನವರು ತಮ್ಮ ಪಾದುಕೆಗಳನ್ನು ಬಿಟ್ಟಿದ್ದು, ಅವನ್ನು ತರಲು ರೇಚಣ್ಣನು ಹೋಗುವನು.)

ರೇಚಣ್ಣನು ಬರೆದಿರುವನೆಂದು ಹೇಳಲಾಗುತ್ತಿರುವ ಒಂದು ವಚನದಲ್ಲಿ ಚನ್ನ ಬಸವಣ್ಣನವರು ಕಲ್ಯಾಣದಿಂದ ಉಳಿವೆಗೆ ಹೋದ ಮಾರ್ಗ ಹೀಗೆ ಉಕ್ತವಾಗಿದೆ:

ಕಲ್ಯಾಣ



ಕಾತರವಳ್ಳಿ (ಕಾಳಗ)



ಮುರಗೋಡ (ಅದ್ಭುತಯುದ್ಧ. ಅಳಿಯಬಿಜ್ಜಳನ ಸೋಲು, ಮಡಿವಾಳದೇವರು ಹಿಪ್ಪರಿಗೆಗೆ ಹೋಗುವ ವಿಚಾರ).



ಉಳಿವೆ (ಬಯಲುಬಸವ ಎಂಬ ಸ್ಥಾನದಲ್ಲಿ ಚನ್ನಬಸವಣ್ಣನವರು ಪಾದುಕೆ ಬಿಟ್ಟ ವಿಚಾರ).

ಇದಲ್ಲದೆ ಎಲ್ಲ ಪುರಾತನರು ನಿರೂಪಿಸಿದ ಕಾಲಜ್ಞಾನದ ವಚನದಲ್ಲಿ ಈ ವಿಷಯ ಪ್ರಸ್ತಾಪಿತವಾಗಿದೆ. ಅದು ಹೀಗೆ:

೧. ಗೊಡಚಿಯ ಗಿಡದ ಹುತ್ತಿನಲ್ಲಿ ಚಿಕ್ಕಗುಡಿಯ ಕಟ್ಟಿ ಅಲ್ಲಿ ಮಡಿವಾಳಯ್ಯಗಳ ಇಟ್ಟರು.
೨. ಸತ್ತಿಗೇರಿಯಲ್ಲಿ ಸತ್ತಿಗೆಯ ಕಳಸ ತೆಗೆದುಕೊಂಡರು.
೩. ಕಡಕೋಳದಲ್ಲಿ ಶಿವಪೂಜೆಯ ಮಾಡಿಕೊಂಡರು.
೪. ಮೊದಲೂರು—ಕಾಳಗ.
೫. ತಲವೂರು—ತಲೆಕಡಿದರು.
೬. ಮುರಗೋಡ—ಮುರಿಯ ಕಡಿದರು.
೭. ಮೂಗಬಸವ—ಜಾಗಟೆಯ ಹೊಯ್ಸಿದರು.
೮. ಕಾದರವಳ್ಳಿ—ಕಾದಾಟ.
೯. ಸಾಂಬ್ರಾಣಿ—ಕೆಲವು ಶರಣರ ಲಿಂಗೈಕ್ಯ.
೧೦. ಮೇಲುಗೈಯಲ್ಲಾಪುರ—ಕೂಗಿನ ಮಾರಯ್ಯಗಳು ಕೂಗಿದರು, ಕರಿಯ ಹೊಳೆಯನ್ನು ದಾಟಿದರು, ಉಳಿವೆಗೆ ಗಮನ.
೧೧. ಜೈನ ಸೈನ್ಯ ಬೆಂಬತ್ತುವುದು, ಮಹಾಮನೆಯ ಹೊಕ್ಕು ನದಿಯ ಪ್ರವಾಹ ತಿರುಗಿಸುವರು.
೧೨. ಹೊನ್ನರಳಿಯ ಮರಕ್ಕೆ ಮಹದುಯ್ಯಾಲೆಯ ಕಟ್ಟಿ ಕೈಲಾಸಕ್ಕೆ ಬಿಜಯಂಗೈದರು.

ಗ್ರಂಥಸ್ಥವಾದ ಈ ಆಧಾರಗಳನ್ನು ಪುಷ್ಟೀಕರಿಸುವಂತೆ ಅನೇಕ ಸ್ಥಳಗಳಲ್ಲಿ ಶರಣರ ಕುರುಹುಗಳು ಇಂದಿಗೂ ಕಂಡುಬರುತ್ತವೆ. ಕಡಕೋಳ, ಮುರಗೋಡ, ಗೊಡಚಿ ಈ ಸ್ಥಳಗಳ ಕುರುಹುಗಳು ಇತಿಹಾಸ ಪ್ರಸಿದ್ಧವಾಗಿವೆ. ಗೊಡಚಿಯಲ್ಲಿ ಮುದಿವೀರಭದ್ರನೆಂದು ಪೂಜಿಸುವ ವಿಗ್ರಹ ನಿಸ್ಸಂದೇಹವಾಗಿ ಒಬ್ಬ ಶರಣನದು. ಇಷ್ಟಲಿಂಗ, ಕಟ್ಟಿದಕಾಶಿ, ಜಂಬೆ, ರುದ್ರಾಕ್ಷಿಮಾಲೆ ಇವುಗಳಿಂದೊಡಗೂಡಿದ ಆ ವಿಗ್ರಹ ಮಡಿವಾಳ ಮಾಚಿದೇವರ ಮೂರ್ತಿಯಾಗಿರುವುದು ಸಂಭವನೀಯವಾಗಿದೆ. ಮಾಚಿ

ದೇವರು ವೀರಭದ್ರನ ಅವತಾರವೆಂದು ಜನತೆ ನಂಬುತ್ತ ಬಂದಿರುವುದು ಗಮನಾರ್ಹ. ಮುರಗೋಡದಲ್ಲಿ ಉಳಿವೆಯ ಬಾಗಿಲವೆಂಬುದನ್ನು ತೋರಿಸಲಾಗುತ್ತಿದೆ. ಸಮೀಪದ ಕೆಂಗೇರಿಯಲ್ಲಿ ಶರಣರು ಆಯುಧಗಳನ್ನು ತೊಳೆದರೆಂಬ ನಂಬುಗೆಯೂ ಇದೆ. ಮೂಗ ಬಸವ ನಾಗಲಾಪುರಗಳಲ್ಲಿಯ ಕುರುಹುಗಳೂ ಇಷ್ಟೇ ಮಹತ್ವಪೂರ್ಣವಾಗಿವೆ. ನಾಗಲಾಪುರದಲ್ಲಿ ಒಂದು ಗುಡಿಯಿದ್ದು ಅದು ಅಕ್ಕನಾಗಮ್ಮನ ಗುಡಿ ಎಂದು ಜನತೆ ನಂಬಿದೆ. ತುರಮರಿ, ಹುಣಸೀಕಟ್ಟಿ, ಕಾದರೊಳ್ಳಿ ಇವು ಕೇಂದ್ರ ಸ್ಥಳಗಳಂತೆ ತೋರುತ್ತವೆ. ಕಾದರವಳ್ಳಿಯಲ್ಲಿ ಯುದ್ಧದ ಕುರುಹುಗಳು ಇಂದಿಗೂ ಸ್ಪಷ್ಟವಾಗಿ ಕಂಡುಬರುತ್ತವೆ. ಸಮೀಪದ ಹುಣಸೀಕಟ್ಟೆಯಲ್ಲಿ ರುದ್ರಮುನೀಶ್ವರನ ಗುಡಿಯಿದೆ. ತೂರಮರಿಯಲ್ಲಿ ಚನ್ನಬಸವೇಶ್ವರನು ತಂಗಿದನೆಂದು ಹೇಳುವ ದಿನ್ನೆ, ಗುಡಿ ಇವೆ. ನಂದಿಹಳ್ಳಿಯ ದೊಡ್ಡ ಬಸವಣ್ಣ, ಶರಣರ ಸ್ಮಾರಕವಾಗಿರುವ ಸಂಭವವಿದೆ. ಕಿತ್ತೂರ ನೆರೆಯ 'ರಣಗಟ್ಟಿ' ಎಂಬ ಹೆಸರು ಈ ಯುದ್ಧದ್ಯೋತಕವೆಂದು ಜನಗಳ ನಂಬುಗೆ, ಕಕ್ಕೇರಿಯಲ್ಲಿ ಕಕ್ಕಯ್ಯನವರು ಲಿಂಗೈಕ್ಯವಾದರೆಂಬ ಪ್ರತೀತಿಯಿದೆ. ಧಾರವಾಡದಲ್ಲಿರುವ ಉಳವಿ ಚನ್ನಬಸವೇಶ್ವರದೇವಾಲಯ ಶರಣರು ನಿಂತುದರ ಕುರುಹೆಂದು ಕಂಡುಬರುತ್ತದೆ. ಜಗಳಬೆಟ್ಟ, ಕಿನ್ನರಿಬ್ರಹ್ಮಯ್ಯನ ಹೊಳೆ ಮುಂತಾದ ಹೆಸರುಗಳು ಅರ್ಥಪೂರ್ಣವಾಗಿದ್ದು ಅಂದಿನ ಇತಿಹಾಸದ ಮೇಲೆ ಬೆಳಕನ್ನು ಬೀರಬಲ್ಲುವು. ಇಂತಿವೇ ಮೊದಲಾದ ಆಧಾರ ಗಳಿಂದ ಚನ್ನಬಸವಣ್ಣನವರು ಕಲ್ಯಾಣದಿಂದ ಉಳಿವೆಗೆ ಹೋದ ಮಾರ್ಗವನ್ನು ಹೀಗೆ ರೇಖಿಸಬಹುದು:






ಮೇಲೆ ನಿರ್ದೇಶಿಸಿದ ಆನುಪೂರ್ವಿಯಲ್ಲಿಯೇ ಶರಣರು ಸ್ಥಲದಿಂದ ಸ್ಥಲಕ್ಕೆ ಸಂಚರಿಸಿದರೆಂದು ಅರ್ಥಮಾಡಲು ಬರುವಂತಿಲ್ಲ. ಈ ಸ್ಥಲಗಳು ಒಂದೊಂದು ಗುಂಪಾಗಿದ್ದು ಶರಣರು ಒಂದು ಕಡೆಗೆ ಬೀಡು ಬಿಟ್ಟಾಗ ಅನೇಕ ಠಾಣ್ಯಗಳನ್ನು ನಿರ್ಮಿಸಿಕೊಂಡಿರುವಂತೆ ತೋರುತ್ತದೆ. ಮುರಗೋಡದಲ್ಲಿ ಯುದ್ಧವಾಗಬೇಕಾದರೆ ಸನಿಹದ ಕೆಂಗೆರೆ ಮೊದಲಾದ ಸ್ಥಳಗಳಲ್ಲಿ ಶರಣರು ನಿಂತಿರುವುದು ಸ್ವಾಭಾವಿಕ. ಇದೇ ಪ್ರಕಾರ ಕಾತರವಳ್ಳಿ ಯುದ್ಧದಲ್ಲಿ ಸನಿಹದ ಹುಣಸೀಕಟ್ಟಿ ತೂರಮರಿ ನಾಗಲಾಪುರ ಮೂಗಬಸವ ಮುಂತಾದವು ಪಾಳಯುಗಳಾಗಿರುವ ಸಂಭವವಿದೆ. ಅಂತೆಯೇ ಆ ಸ್ಥಳಗಳಲ್ಲಿ ಚನ್ನಬಸವಣ್ಣನವರ ಹಾಗೂ ಇತರ ಶರಣರ ಕುರುಹುಗಳು ಕಂಡುಬರುತ್ತವೆ.

ಹಾಗೆಯೇ ರಣಗಟ್ಟೆಯ ಕಾಳಗಕ್ಕೆ ನಂದೀಹಳ್ಳಿ. ಕಿತ್ತೂರು, ಕಕ್ಕೇರಿ ಮುಂತಾದವುಗಳಲ್ಲಿ ಶರಣರು ಬೀಡು ಬಿಟ್ಟಿರಬೇಕು. ಸತ್ತೂರು ಕಾಳಗಕ್ಕೆ ಧಾರವಾಡ ಮೊದಲಾದುವು ಹಿನ್ನೆಲೆಯ ಸ್ಥಲಗಳಾದಂತೆ ತೋರುತ್ತವೆ. ಹಿಂದೆ ಶತ್ರುಸೈನ್ಯ ಬೆನ್ನಟ್ಟಿ ಬರುವಾಗ ಅತ್ತಿತ್ತ ಅಲೆಯುವ ಶರಣರು ಒಂದು ನಿರ್ದಿಷ್ಟಪಥದಲ್ಲಿಯೇ ಮುಂದೆ ಹೋದರೆಂದು ನಿರ್ಣಯಿಸುವುದು ಕಷ್ಟವಾಗಬಹುದು. ಆದರೂ, ಅಂದಿನಿಂದ ಇಂದಿನವರೆಗೆ ಉಳಿದು ಬಂದ ಜನತೆಯ ನಂಬುಗೆ, ಶರಣರು ಸಾಗಿದ ಹಾದಿಯನ್ನು ನಿರ್ಧರಿಸಲು ಸಹಾಯಕ ವಾಗುವಂತಿದೆ, ಮಿಕ್ಕ ಆಧಾರಗಳ ಅಭಾವವಿರುವಲ್ಲಿ ಈ ನಂಬುಗೆಗೆ ಪ್ರಾಶಸ್ತ್ಯವನ್ನು ಕೊಡಲೇ ಬೇಕಾಗುತ್ತದೆ. ಈ ನಂಬುಗೆಯನ್ನು ದೃಢಪಡಿಸುವಂತೆ ಮೇಲೆ ನಿರ್ದೇಶಿಸಿದ ಚನ್ನಬಸವ ಪುರಾಣ, ಶರಣಲೀಲಾಮೃತ ಹಾಗೂ ಕಾಲಜ್ಞಾನದ ವಚನಗಳು ಇವು ಗಳು ಅನೇಕ ಸ್ಥಳಗಳನ್ನು ಉಲ್ಲೇಖಿಸುತ್ತಿವೆ. ನಾವು ಮೇಲೆ ಸೂಚಿಸಿದ ಪಟ್ಟಿಯು ದಿಗ್ದರ್ಶನ ಮಾತ್ರ. ಈ ದಿಸೆಯಲ್ಲಿ ಕೆಲಸಮಾಡಿದ ಡಾ. ಪಿ. ಜಿ. ಹಳಕಟ್ಟಿಯವರು ಕಾದರವಳ್ಳಿಯಿಂದ ಶರಣರು ಇತ್ತಂಡವಾಗಿ ಹೋದರೆಂದೂ ಒಂದು ತಂಡದವರು ಬೀಡಿ, ಹಲಸಿಗೆ, ಕಕ್ಕೇರಿ, ಲಿಂಗನಮಠ, ಜಂಗಮಹಟ್ಟಿ, ಜಗಳಬೆಟ್ಟ, ಸಾಂಬ್ರಾಣಿಯ ಮೇಲಿಂದ ಮೇಲುಗೈಯಲ್ಲಾಪುರಕ್ಕೆ ಬಂದರೆಂದೂ ಇನ್ನೊಂದು ತಂಡದವರು ನಂದೀ ಹಳ್ಳಿ, ಕಿತ್ತೂರು, ಧಾರವಾಡ, ಸತ್ತೂರು, ಮೊದಲಾದವುಗಳ ಮೇಲಿಂದ ಯಲ್ಲಾಪುರಕ್ಕೆ ಬಂದರೆಂದೂ ಅಲ್ಲಿಂದ ಮುಂದೆ ಕಾದುತ್ತ ಉಳಿವೆಗೆ ಹೋದರೆಂದೂ ಅಭಿಪ್ರಾಯ ಪಡುವರು.[೧] ಆದರೆ, ಇದಕ್ಕೆ ಪ್ರಬಲವಾದ ಕಾರಣಗಳೇನೂ ತಿಳಿಯುವಂತಿಲ್ಲ. ಪ್ರಾಯಶಃ ತೊರಗಲ್ಲು ಮೊದಲಾದ ದೊರೆಗಳ ಸಹಾಯವನ್ನಪೇಕ್ಷಿಸಿ ಗೊಡಚಿ ಕಡೆಗೂ ಸೌಂದತ್ತಿ ರಟ್ಟರಲ್ಲಿ ಸಹಾಯವನ್ನು ಕೋರಿ ಮತ್ತೊಂದು ತಂಡವು ಧಾರವಾಡ ಕಡೆಗೂ ಹೊರಟಿರುವಂತೆ ತೋರುತ್ತದೆ. ಆದರೆ, ಅವರಿಗೆ ಅದಾವ ಸಹಾಯವೂ ದೊರೆತಂತೆ ಕಾಣುವುದಿಲ್ಲ. ಮೇಲಿನ ಊಹೆ ನಿಜವಿದ್ದರೆ ಚನ್ನಬಸವಣ್ಣನವರ ಉಳಿವೆಯ ನಿರ್ಗಮನದ ಹಾದಿಯನ್ನು ಕೆಳಗಿನಂತೆ ರೂಪಿಸಬೇಕಾಗುತ್ತದೆ.

ಕಲ್ಯಾಣ
|
ತೊರಗಲ್
|
ಕಡಕೋಳ
|
ಮೊದಲೂರು [ಸಮೀಪದಲ್ಲಿ ತಲ್ಲೂರು (ತಲೆಯೂರು)]
|
ಮುರಗೋಡ (ಕೆಂಗೆರೆಯಲ್ಲಿ ಆಯುಧ ತೊಳೆದರೆಂಬ ನಂಬುಗೆ)
|
ಮೂಗಬಸವ

೧. ಶಿವಾನುಭವಸಂಪುಟ ೨೭. ಸಂಚಿಕೆ ೨, ಫೆಬ್ರುವರಿ ೧೯೫೩.




ಇಲ್ಲಿ ಒಂದೆರಡು ಮಹತ್ವದ ಪ್ರಶ್ನೆಗಳೇಳುತ್ತವೆ.

(೧) ಚನ್ನಬಸವಣ್ಣನವರು ಉಳಿವೆಯ ಕಡೆಗೆಯೇ ಬಂದುದೇಕೆ?

(೨) ಕಲ್ಯಾಣದಿಂದ ಮಲಪ್ರಭಾನದಿ ದಂಡೆಯವರೆಗೆ ಎಲ್ಲಿಯೂ ಯುದ್ಧಗಳ ವಿವರ ಬಾರದಿರುವುದೇಕೆ?

ಈ ಪ್ರಶ್ನೆಗಳಿಗೆ ಹೀಗೆ ಸಮಾಧಾನಗಳನ್ನು ಕಂಡುಕೊಳ್ಳಬಹುದು.

ಬಸವಾದಿ ಪ್ರಮಥರು ತಮ್ಮ ತಮ್ಮ ಐಕ್ಯಸ್ಥಲಗಳನ್ನು ಮೊದಲು ಸಂಕಲ್ಪ ಮಾಡಿಕೊಂಡಂತೆ ತೋರುತ್ತದೆ: ಪ್ರಭು ಮತ್ತು ಮಹಾದೇವಿಯಕ್ಕನವರು ಶ್ರೀಶೈಲದತ್ತ ಹೋದುದು, ಬಸವಣ್ಣ ಗಂಗಾಂಬಿಕೆಯರು ಕೂಡಲ ಸಂಗಮನಾಥನಲ್ಲಿಗೆ ತೆರಳಿದುದು, ಮಿಕ್ಕಾದ ಶರಣರು ತಂತಮ್ಮ ಐಕ್ಯಸ್ಥಲಗಳಿಗೆ ತೆರಳಿರುವುದು. ತುರುಗಾಹಿ ರಾಮಣ್ಣನ ಒಂದು ವಚನ ಈ ಮಾತಿಗೆ ಪುಷ್ಟಿಯನ್ನು ಕೊಡುತ್ತದೆ. ಆದುದರಿಂದ ಚನ್ನಬಸವಣ್ಣನವರು ತಮ್ಮ ಐಕ್ಯ ಉಳಿವೆಯಲ್ಲಾಗಬೇಕೆಂದು ಸಂಕಲ್ಪ ಮಾಡಿಕೊಂಡಿರುವ

ಸಂಭವವೂ ಉಂಟು. ಶ್ರೀಶೈಲದಂತೆ ಉಳಿವೆಯೂ ಒಂದು ಪ್ರಶಾಂತವಾದ ಸ್ಥಲವಾಗಿದ್ದು ಶಿವಯೋಗಸಮಾಧಿಗೆ ಅನುಕೂಲವಾಗಿರಬೇಕು. ಅಲ್ಲದೆ, ಶ್ರೀಶೈಲದಂತೆ ಅದೂ ಒಂದು ಶರಣರ ಕೇಂದ್ರವಾಗಿದ್ದು ನಿತಾಂತವೂ ಪ್ರಶಾಂತವೂ ಆಗಿರಬೇಕು. ಅದು ಹೇಗೋ ಚನ್ನಬಸವಣ್ಣನವರ ದೃಷ್ಟಿ ಉಳಿವೆಯತ್ತ ಹರಿದು ಅದು ತಮ್ಮ ಐಕ್ಯಸ್ಥಳವಾಗಬೇಕೆಂಬ ಸಂಕಲ್ಪವನ್ನವರು ಮಾಡಿಕೊಂಡಿರುವ ಸಂಭವವಿದೆ.

ಮೇಲಿನ ಕಲ್ಪನೆಯನ್ನು ಒಪ್ಪಿಕೊಳ್ಳದಿದ್ದರೆ, ಎರಡನೆಯದಾಗಿ ದುರ್ಧರವಾದ ಹಳುವಿನಲ್ಲಿ ಪ್ರವೇಶಮಾಡಿದರೆ ಬೆನ್ನಟ್ಟಿ ಬರುವವರ ಕಾಟ ಕಡಿಮೆಯಾಗಬಹುದೆಂಬ ವಿಚಾರದಿಂದ ಉಳಿವೆಯ ಕಡೆಗೆ ಅವರು ಹೋಗಿರುವ ಸಂಭವವಿದೆ. ಉಳಿವೆಯ ಕ್ಷೇತ್ರ ನೆಲಸಿರುವುದು ಪಶ್ಚಿಮಘಟ್ಟದ ದೊಡ್ಡ ಹಳುವಿನ ಮಧ್ಯದಲ್ಲಿ ಎಂಬುದು ಎಲ್ಲರಿಗೂ ವೇದ್ಯವಾದ ವಿಷಯ. ಎಂಟುನೂರು ವರುಷಗಳ ಹಿಂದೆ ಅದರ ಈ ಭೌಗೋಲಿಕ ಪರಿಸ್ಥಿತಿಯಲ್ಲಿ ವಿಶೇಷ ವ್ಯತ್ಯಾಸವಿರಲಿಕ್ಕಿಲ್ಲವೆಂದು ನಂಬಬಹುದಾದರೂ ಆಗ ಆ ಹಳುವು ಈಗಿರುವುದಕ್ಕಿಂತಲೂ ಹೆಚ್ಚು ದಟ್ಟವಾಗಿರುವ ಸಂಭವವಿದೆ.

ಮೂರನೆಯದಾಗಿ ಗುರಿ ಇಲ್ಲದೆ ಹೀಗೆ ಹಳುವನ್ನು ಪ್ರವೇಶಿಸಿಲ್ಲವೆಂಬುದು ಶರಣರ ಚರಿತ್ರೆಯನ್ನು ಹೇಳುವ ಗ್ರಂಥಗಳಿಂದ ವೇದ್ಯವಾಗುತ್ತದೆ. ಕಲ್ಯಾಣದಲ್ಲಿ ಕ್ರಾಂತಿಯಾದೊಡನೆ ಚನ್ನಬಸವಣ್ಣನವರು ಉಳಿವೆಗೆ ಹೋಗಲು ನಿರ್ಧರಿಸಿದರೆಂದು ಆ ಗ್ರಂಥಗಳ ಹೇಳಿಕೆ. ಹೀಗಿದ್ದರೆ, ಅದಕ್ಕೆ ಬೇರೆ ಕೆಲವು ಕಾರಣಗಳೂ ಇರುವ ಸಂಭವವಿದೆ. ಉಳಿವೆಯು ಒಂದು ಚಿಕ್ಕ ರಾಜಧಾನಿಯಾಗಿದ್ದು ಅಲ್ಲಿ ಶರಣರ ಪ್ರಭಾವಕ್ಕೆ ಒಳಗಾಗಿ ಅವರಿಗೆ ಆಶ್ರಯವನ್ನೀಯುತ್ತಿದ್ದ ಒಬ್ಬ ಪಾಳೆಯಗಾರನು ಇದ್ದಿರುವ ಸಂಭವವಿದೆ. ಉಳಿವೆಯ ಸುತ್ತುಮುತ್ತಣ ಪ್ರದೇಶಗಳನ್ನು ಸಮೀಕ್ಷಿಸಿದರೆ. ಅಲ್ಲಿ ಕಂದಕ ಕೋಟೆ ಅಳ್ವೇರಿ ಮುಂತಾದ ಅವಶೇಷಗಳು ಇಂದಿಗೂ ಕಂಡುಬರುತ್ತವೆ. ರಾಜಧಾನಿಯಾಗಿರದ ಪಕ್ಷದಲ್ಲಿ ಇಷ್ಟೊಂದು ಭದ್ರತೆ ಆ ಸ್ಥಳಕ್ಕೆ ಆವಶ್ಯಕವಿರಲಿಲ್ಲವೆಂದು ತೋರುತ್ತದೆ. ಶರಣಸಂಗ, ಶಿವಯೋಗಸಾಮ್ರಾಜ್ಯಕ್ಕೆ ಉಚಿತವಾದ ಸ್ಥಳ, ಸಹಾಯವನ್ನು ನೀಡಬಲ್ಲ ದೊರೆ ಈ ಮುಪ್ಪರಿ ಶರಣರನ್ನು ಉಳಿವೆಯತ್ತ ಸೆಳೆದಿರುವ ಸಂಭವವಿದೆ.

ಇನ್ನು ಎರಡನೆಯ ಪ್ರಶ್ನೆ. ಅಂದರೆ ಶರಣರು ಮಲಪ್ರಭಾ ನದಿಯ ದಂಡೆಗೆ ಬರುವವರೆಗೆ ಯುದ್ಧದ ವಾರ್ತೆಗಳೇ ಕೇಳಬರುವುದಿಲ್ಲವೆಂಬುದು ರಾಜಕೀಯ ದೃಷ್ಟಿಯಿಂದ ಬಹು ಮಹತ್ವವಾದುದು. ಈ ಪ್ರಶ್ನೆಗೆ ಅಂಟಿಕೊಂಡೇ ಶರಣರು ಮಲಪ್ರಭಾ ತೀರದ ಕಡೆಗೆ ಏಕೆ ಬಂದರೆಂಬುದೂ ಉದ್ಭವಿಸುತ್ತದೆ. ಕಲ್ಯಾಣದ ಚಾಲುಕ್ಯರ ವಿಸ್ತಾರವಾದ ರಾಜ್ಯದ ಸುತ್ತೆಲ್ಲ ಬಿಜ್ಜಳನ ಸ್ನೇಹಿತರೇ ಆಳುತ್ತಿದ್ದರು. ಕರಹಾಟದ ಶಿಲಾಹಾರರು, ಓರುಗಲ್ಲಿನ ಕಾಕತೀಯರು ಸ್ವತಂತ್ರರಾಗಿದ್ದರೂ ಬಿಜ್ಜಳನ ಸ್ನೇಹಿತರಾಗಿದ್ದರೆಂಬುದನ್ನು ಹಿಂದೆ ವಿವರಿಸಲಾಗಿದೆ. ಕ್ರಿ. ಶ. ೧೧೫೬ರಲ್ಲಿ ಬಿಜ್ಜಳನು ತನ್ನ ಸ್ವತಂತ್ರ ಶಾಸನಗಳನ್ನು ಬರೆಸತೊಡಗಿದೊಡನೆಯೇ ಗೋವೆಯ ಕದಂಬರು ತಮ್ಮ ಸ್ವಾತಂತ್ರ್ಯವನ್ನು ಸಾರಿ ಬಿಜ್ಜಳನಿಗೆ ತಾವು ಅಧೀನರಲ್ಲವೆಂಬುದನ್ನು ಸ್ಪಷ್ಟಪಡಿಸಿರುವರು. ೧೧೫೬ರಿಂದ ಈಚೆಗೆ ವರುವರುಷ ಗೋವೆಯ ಕದಂಬರ ಅನೇಕ ಶಾಸನಗಳು ಲಿಖಿತವಾಗಿದ್ದರೂ ಯಾವ

ಒಂದರಲ್ಲಿಯೂ ಅವರು ಬಿಜ್ಜಳನ ಸಾರ್ವಭೌಮತ್ವವನ್ನು ಒಪ್ಪಿಕೊಂಡುದರ ಉಲ್ಲೇಖ ಗಳಿಲ್ಲ. ಆ ಶಾಸನಗಳೆಲ್ಲ ಕದಂಬರ ಸ್ವಾಯತ್ತತೆಯನ್ನು ಎತ್ತಿತೋರಿಸುತ್ತವೆ. ಹೀಗಿರು ವುದರಿಂದ ಬಿಜ್ಜಳನ ಕ್ಷೋಭೆಗೆ ಒಳಗಾದ ಜನಗಳು ಆತನ ವಿರೋಧಿಗಳ ರಾಜ್ಯವನ್ನು ಆದಷ್ಟು ಬೇಗನೆ ಸೇರಬಯಸುವುದು ಸಹಜವಾಗಿದೆ. ಇದರಿಂದ ಬಿಜ್ಜಳನ ಸೈನ್ಯ ಇನ್ನೊಬ್ಬರ ರಾಜ್ಯದಲ್ಲಿ ಬಂದು ಮೊದಲಿನ ಉಪದ್ರವವನ್ನು ಕೊಡಲಿಕ್ಕಾಗದು. ಇದಕ್ಕೆ ರಾಜ್ಯ ರಾಜ್ಯಗಳೊಳಗಿನ ಪರಸ್ಪರ ತಿಳಿವಳಿಕೆ ಕಾರಣ. ಹೀಗಾಗಿ ಗೋವೆಯ ಕದಂಬರ ರಾಜ್ಯವನ್ನು ಪ್ರವೇಶಿಸಿದರೆ, ಸಂರಕ್ಷಣೆ ಸುಲಭವಾಗಿ ದೊರೆಯಬಹುದೆಂದು ಶರಣರು ಬಯಸಿರಬಹುದಾಗಿದೆ. ಈ ಮಾತಿಗೆ ಪುಷ್ಟಿಕೊಡುವಂತೆ ಅವರು ಕಲಚೂರ್ಯ ರಾಜ್ಯದ ಮೇರೆಯನ್ನು ದಾಟುವ ವರೆಗೆ ಎಲ್ಲಿಯೂ ಎದುರಾಗಿ ನಿಂತು ಯುದ್ಧಮಾಡಿದಂತೆ ಕಂಡುಬರುವುದಿಲ್ಲ. ವೇಗದಿಂದ ಬಿಜ್ಜಳನ ರಾಜ್ಯದ ಮೇರೆಯನ್ನು ದಾಟಬೇಕೆಂದು ಅವರು ಮೊದಲು ಪ್ರಯತ್ನಿಸಿದಂತಿದೆ. ಅಲ್ಲದೆ, ಕೊಲೆಯಾದೊಡನೆಯೇ ರಾಜ್ಯದ ಸೂತ್ರಗಳನ್ನು ಯಾರು ವಹಿಸಬೇಕೆಂಬ ನಿಷ್ಕರ್ಷೆಯಾಗಲು ಒಂದೆರಡು ದಿನಗಳು ಹತ್ತಿರುವ ಸಂಭವವಿದೆ. ಬಿಜ್ಜಳನ ನಾಲ್ಕು ಜನ ಮಕ್ಕಳು, ಆತನ ತಮ್ಮ ಕರ್ಣದೇವ ಇವರಲ್ಲಿ ಪರಸ್ಪರ ತಿಳಿವಳಿಕೆ ಒಮ್ಮೆಲೆ ಉಂಟಾಗಿರಲು ಸಾಧ್ಯವಿಲ್ಲ. ಕರ್ಣದೇವನು ಸಿಂಹಾಸನಾರೋಹಣಕ್ಕಾಗಿ ಪ್ರಯತ್ನಪಟ್ಟ ವಿಷಯ ಕೆಲವು ಕಾವ್ಯಗಳಲ್ಲಿ ಬರುತ್ತದೆ. ಹೀಗೆ ಒಂದೆರಡು ದಿನ ಕಳೆಯುವಷ್ಟರಲ್ಲಿ ಶರಣರ ಪ್ರಯಾಣ ದೂರ ಸಾಗಿರಬೇಕು. ಮಲಪ್ರಭಾ ನದಿಯ ದಂಡೆಗೆ ಬಂದಾಗ ಅವರಿಗೆ ಉಸಿರಾಡಿಸಲು ಅವಕಾಶ ಸಿಕ್ಕಂತಾಗಿರಬೇಕು. ಏಕೆಂದರೆ, ಅಲ್ಲಿಗೆ ಬಿಜ್ಜಳನ ರಾಜ್ಯ ಕೊನೆಗೊಳ್ಳುತ್ತದೆ. ಇದನ್ನರಿತು ರಾಜ್ಯಕಾರಣ ದುರಂಧರರಾದ ಚನ್ನಬಸವಣ್ಣನವರು ಕಾದರವಳ್ಳಿಯಲ್ಲಿ ಬಲವಾದ ಠಾಣ್ಯವನ್ನು ಹಾಕಿ ದಂತೆ ಕಂಡುಬರುತ್ತದೆ. ಅಲ್ಲಿ ಬಹು ದೊಡ್ಡ ಕಾಳಗವಾಗಿರುವ ಲಕ್ಷಣವಿದೆ. ಶರಣರಿಗೆ ಆ ಕಾಳಗದಲ್ಲಿ ವಿಜಯವಾಗಿರುವ ಸೂಚನೆಗಳೂ ಶಿಲ್ಪದಲ್ಲಿ ಕಂಡುಬರುತ್ತವೆ. ಕಾದರ ವಳ್ಳಿಯ ನೆರೆಯ ಹುಣಶೀಕಟ್ಟೆಯಲ್ಲಿ ಒಂದು ದೊಡ್ಡ ಕಲ್ಲಿನ ಮೇಲೆ ಶರಣರು ಪಲ್ಲಕ್ಕಿ ಯಲ್ಲಿ ಒಬ್ಬ ಯೋಗಿಯನ್ನು ಕುಳ್ಳಿರಿಸಿ, ಸಂತೋಷದಿಂದ ಮೆರವಣಿಗೆ ಮಾಡುವ ಚಿಹ್ನೆ ಗಳು ಕಂಡುಬರುತ್ತವೆ. ಆ ಕಲ್ಲನ್ನು ಈಗ ಹುಣಶೀಕಟ್ಟೆಯ ಶಾಲೆಯಲ್ಲಿಡಲಾಗಿದೆ. ತೊರಗಲ್, ಕಡಕೋಳ, ಗೊಡಚಿ ಮೊದಲಾದ ಊರುಗಳೂ ಬಿಜ್ಜಳನ ರಾಜ್ಯದ ಹೊರ ವಲಯದಲ್ಲಿರುತ್ತವೆ. ಆದುದರಿಂದ ಅಲ್ಲಿಯೂ ಶರಣರು ಸೈನ್ಯಸಂಗ್ರಹಮಾಡಿ ವೈರಿ ಗಳೊಡನೆ ಹೋರಾಟಮಾಡಿದಂತೆ ತೋರುತ್ತದೆ. ಹಿಂದೆ ವಿವರಿಸಿದಂತೆ ಮಡಿವಾಳ ಮಾಚಿದೇವರ ಮರಣ ಗೊಡಚಿಯಲ್ಲಿಯೇ ಆಗಿರುವ ಸಂಭವವಿದೆ. ಅಲ್ಲಿಯ ಮುಂದಿ ವೀರಭದ್ರನ ವಿಗ್ರಹ—ಟೊಂಕಕ್ಕೆ ಕಾಸಿಯನ್ನು ಕಟ್ಟಿ, ಜಂಬೆಯನ್ನಿಟ್ಟು, ಇಷ್ಟಲಿಂಗ ಭಸ್ಮ ರುದ್ರಾಕ್ಷಿಗಳನ್ನು ಧಾರಣಮಾಡಿದ ಒಬ್ಬ ಶಿವಯೋಗಿಮೂರ್ತಿ—ಅದು ಮಾಚಿದೇವನ ಸ್ಮಾರಕವಾಗಿರುವ ಸಂಭವವಿದೆ.

ಚನ್ನಬಸವಣ್ಣನವರೇ ಮೊದಲಾದ ಶರಣರು ಬಿಜ್ಜಳನ ರಾಜ್ಯದ ಎಲ್ಲೆಯನ್ನು ಮೀರಿ ಹೊರಗೆ ನಿಂತಿರುವರು. ಅಲ್ಲಿ ವೈರಿಗಳು ಮುಂದುವರಿಯಲಾರರೆಂದು ಅವರು

ಭಾವಿಸಿರಬಹುದು: ಅಲ್ಲದೆ ಶೈವಪಕ್ಷಪಾತಿಗಳೂ ಬಿಜ್ಜಳನ ವಿರೋಧಿಗಳೂ ಎನಿಸಿದ ಕದಂಬರಿಂದ ಸಹಾಯವನ್ನು ಅಪೇಕ್ಷಿಸಿರಬಹುದು. ಆದರೆ, ಇವೆರಡೂ ಊಹೆಗಳು ಸಫಲವಾಗಲಿಲ್ಲ. ಶರಣರಿಗೆ ಕದಂಬರ ಪ್ರತ್ಯಕ್ಷ ಸಹಾಯ ಸಿಕ್ಕಂತಿಲ್ಲ; ಬಿಜ್ಜಳನ ಸೈನ್ಯ ಮುಂದಡಿಯಿಡುವುದನ್ನು ಬಿಟ್ಟಂತಿಲ್ಲ. ಅದಕ್ಕೆ ಕಾರಣ ಹೀಗಿರಬಹುದು: ಗೋವೆಯ ಕದಂಬರೇನೋ ನಾಲ್ಕಾರು ವರುಷಗಳ ಹಿಂದೆ ತಮ್ಮ ಸ್ವಾಯತ್ತತೆಯನ್ನು ಸಾರಿದ್ದರು. ಆದರೆ. ಅದನ್ನು ಬಿಜ್ಜಳನಿನ್ನೂ ಶಾಸನೋಕ್ತವಾಗಿ ಮನ್ನಿಸಿದಂತೆ ಕಂಡುಬರುವುದಿಲ್ಲ. ಆತನು ಚಾಲುಕ್ಯ ಸಿಂಹಾಸನವನ್ನೇರಿರುವುದರಿಂದ ಆ ಸಾಮ್ರಾಜ್ಯದಲ್ಲಿ ತನ್ನ ಸ್ವಾಯತ್ತತೆ ಇದೆಯೆಂದು ಬಿಜ್ಜಳನೂ ಅವನ ಸೈನಿಕರೂ ನಂಬಿದಂತೆ ಕಂಡುಬರುತ್ತದೆ. ಆದುದರಿಂದ ಮಲಪ್ರಭಾ ನದಿಯನ್ನು ದಾಟಿ ಮೇಲೆ ಬಂದಾಗ ಬಿಜ್ಜಳನ ಸೈನ್ಯ ಶರಣರನ್ನು ಬೆನ್ನಟ್ಟಿ ಹೋದಂತೆ ಕಂಡುಬರುತ್ತದೆ. ಹೀಗೆ ರೊಚ್ಚಿಗೆದ್ದ ಬಿಜ್ಜಳನ ಸೈನ್ಯ ಶರಣರನ್ನು ಸದೆ ಬಡೆಯುತ್ತ ಮಹಾಮನೆಯ ವರೆಗೂ ಹೋದಂತೆ ಊಹಿಸಬಹುದಾಗಿದೆ. ಬಯಲ ಬಸವನಲ್ಲಿ ಓಲಗವ ಕರೆದಿರಲು ಚನ್ನಬಸವಣ್ಣನವರು ಅಲ್ಲಿ ತಮ್ಮ ಹಾವುಗೆಗಳನ್ನು ಬಿಟ್ಟುಹೋಗಿದ್ದರೆಂದು ಬಂದಿರುವ ಉಲ್ಲೇಖಗಳು ಹಿಂದಿನಿಂದ ಬಂದ ದಾಳಿಯ ಸಂಜ್ಞೆಗಳಾಗಿವೆ. ಶರಣರು ಹೀಗೆ ಯುದ್ಧಮಾಡುತ್ತ ಮಹಾಮನೆಯನ್ನು ಪ್ರವೇಶಿಸಿರುವರು. ಅಲ್ಲಿ ಹರಿವ ಹೊಳೆಯ ಗತಿಯನ್ನು ತಿರುಗಿಸಿ. ಮಹಾಮನೆಯ ಬಾಗಿಲಿಗೆ ಅದು ಬರುವಂತೆ ಮಾಡಿದರೆಂದೂ ಪ್ರತೀತಿ ಇದೆ. ಹೊನ್ನರಳಿಯ ಮರಕ್ಕೆ ತೂಗುಯ್ಯಲನ್ನು ಕಟ್ಟಿ. ಶರಣರು ಜೀಕಿ ಕೈಲಾಸಕ್ಕೆ ಹೋದರೆಂಬ ಕಥೆಗಳುಂಟು. ಈ ಕೊನೆ ಹೇಗಾಗಿದ್ದರೂ ಮಹಾಮನೆಯಲ್ಲಿ ಶರಣರು ಅವಸಾನವನ್ನು ಕಂಡಿರುವರೆಂದು ತಿಳಿಯಬಹುದಾಗಿದೆ.

ಉಳಿವೆಯ ಈ ಮಹಾಮನೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಹಿಂದೆ ಬೆನ್ನಟ್ಟಿ ಬಂದ ಸೈನ್ಯದಿಂದ ಪಾರಾಗಲು ಶರಣರು ಮಹಾಮನೆಯತ್ತ ಸಾಗಿರುವರೆಂಬುದು ಸ್ಪಷ್ಟವಾಗುತ್ತದೆ. ಹತ್ತಿರದಲ್ಲಿ ಜಗಳಬೆಟ್ಟ. ರಾಕ್ಷಸಿಬೆಟ್ಟ. ಕಿನ್ನರಿ ಬ್ರಹ್ಮಯ್ಯನ ಹೊಳೆ ಮುಂತಾದುಗಳಿರುವುದನ್ನು ನೋಡಿದರೆ ಈ ದಂತಕಥೆಗಳಿಗೆ ಐತಿಹ್ಯದ ಬೆಲೆ ಇರುವುದೆಂದು ನಂಬಲೇಬೇಕಾಗುತ್ತದೆ. ಉಳಿವೆಯವರೆಗೆ ಪಶ್ಚಿಮವಾಹಿನಿಯಾಗಿ ಸಾಗಿದ ಹೊಳೆಯ ಪ್ರವಾಹವನ್ನು ತಿರುಗಿಸಿ ಮಹಾಮನೆಯವರೆಗೆ ಅದನ್ನು ಒಯ್ದಿರುವುದನ್ನು ಈಗಲೂ ಕಾಣಬಹುದು. ಆ ಹೊಳೆ ಮಹಾಮನೆಯಲ್ಲಿಯೇ ಧುಮ್ಮಿಕ್ಕುತ್ತದೆ. ಈ ಹೊಳೆ ಈಗ ಸಹಜಪ್ರಯಾಣಕ್ಕಾಗಿ ದೊಡ್ಡ ಆತಂಕವನ್ನು ತರುತ್ತದೆ. ಒಂದು ವೇಳೆ ಅದು ಮೊದಲಿನಿಂದಲೂ ಅದೇ ರೀತಿಯಾಗಿದ್ದರೆ, ದುರ್ಧರವಾದ ಆ ಹೊಳೆಯನ್ನು ದಾಟಿ. ಗವಿಯನ್ನು ಪ್ರವೇಶಿಸಿ. ಒಳಗೆ ಸಾವಿರಾರು ಜನರಿಗೆ ಕುಳಿತುಕೊಳ್ಳಲು ಬರುವ ಮಂಟಪಾದಿಗಳ ಅನುಕೂಲತೆಗಳನ್ನು ಅಲ್ಲಿ ಕಲ್ಪಿಸುವುದು ಸಾಧ್ಯವಿರಲಿಲ್ಲ. ಈಗ ಬಹು ಪ್ರಯಾಸಪಟ್ಟು. ಅನೇಕ ಸಾಧನ-ಸಾಮಗ್ರಿಗಳ ಸಹಾಯದಿಂದ ಪ್ರವಾಹವನ್ನು ದಾಟಿ. ಬಂಡೆಗಳನ್ನು ಏರಿ. ಒಂದೊಂದು ಅಂಗುಲದಷ್ಟು ಸ್ಥಳದಲ್ಲಿ ಹೆಜ್ಜೆಯನ್ನಿಟ್ಟು ಹೊಟ್ಟೆ ಹೊಸೆದು ತೆವಳಿ. ಆ ಗವಿಯನ್ನು ಪ್ರವೇಶಿಸಿದರೆ. ಅಲ್ಲಿ ವೀರಭದ್ರನ ವಿಗ್ರಹವಿರುವುದನ್ನು ನಾವು ಕಾಣುತ್ತೇವೆ. ಈ ವಿಗ್ರಹ. 'ಶರಣರ ಯುದ್ಧ ಚಿಹ್ನೆ' ಎಂದು ಕಾಣುತ್ತದೆ. ಇಂತಹ

ವಿಗ್ರಹಗಳು ಮೇಲೆ ನಿರ್ದೇಶಿಸಿದ ಅವರ ಮಾರ್ಗದಲ್ಲಿ ವಿಪುಲವಾಗಿ ದೊರೆಯುತ್ತವೆ. ಉಳಿವೆಯೊಳಗಂತೂ ಎಲ್ಲಿ ನೋಡಿದಲ್ಲಿ ವೀರಭದ್ರನ ವಿಗ್ರಹಗಳನ್ನು ಕಾಣಬಹುದು. ಇದರಿಂದ ಉಳಿವೆಯ ಕ್ಷೇತ್ರದಲ್ಲಿಯೂ ಯುದ್ಧಗಳಾದಂತೆ ಊಹಿಸಬಹುದು. ಸೋಜಿಗದ ಸಂಗತಿ ಎಂದರೆ–ಮಹಾಮನೆಯ ಗವಿಯಲ್ಲಿ ದ್ವಾರವಿದ್ದು ಅಲ್ಲಿಂದಾಚೆಗೆ ಸಾವಿರಾರು ಜನರು ಕುಳಿತುಕೊಳ್ಳಬಹುದಾದ ಆವಾರವಿದೆ; ಅಲ್ಲಲ್ಲಿ ಪೂಜಾವಿಗ್ರಹಗಳೂ ಇವೆ. ಇದರಿಂದ ಈ ಗವಿಯನ್ನು ಪ್ರವೇಶಿಸಿ ಶರಣರು ಕೆಲಕಾಲ ಅಲ್ಲಿ ನಿಂತು, ತಾವು ಕೈಕೊಂಡ ಧರ್ಮತತ್ವಪ್ರಸಾರದ ಬಗೆಗೆ ಸಮಾಲೋಚನೆಮಾಡಿ, ಯೋಗ್ಯರಾದವರನ್ನು ಅದಕ್ಕೆ ನಿಯಮಿಸಿ ಅಲ್ಲಿ ಐಕ್ಯರಾದಂತೆ ಊಹಿಸಬಹುದಾಗಿದೆ. ಇದ್ದಕ್ಕಿದ್ದಂತೆ ವಧೆಯೋ ಆತ್ಮಹತ್ಯವೋ ಆಗಿರುವುದು ಅಸಂಭವ. ಚನ್ನಬಸವಣ್ಣನವರು ತಮ್ಮ ಪೂರ್ವಸಂಕಲ್ಪದಂತೆ ಉಳಿವೆಯ ಕ್ಷೇತ್ರವನ್ನು ಮುಟ್ಟಿ, ಕೈಕೊಂಡ ಕಾರ್ಯದ ಭರಭಾರವನ್ನು ಯೋಗ್ಯರಾದ ಶರಣರ ಮೇಲೆ ಇರಿಸಿ ತಾವು ನಿಜದಲ್ಲಿ ನಿರಾಳವನ್ನೈದಿರುವರು.

## ಚನ್ನಬಸವಣ್ಣನವರ ಜೀವಿತಕಾಲಾವಧಿ

ಇದುವರೆಗಣ ಸುದೀರ್ಘವಾದ ವಿವರದಿಂದ ಚನ್ನಬಸವಣ್ಣನವರು, ಬಸವಣ್ಣನವರು ಕೈಕೊಂಡ ಕ್ರಾಂತಿಯಲ್ಲಿ ಮಹತ್ವದ ಪಾತ್ರವನ್ನಾಡಿರುವರೆಂಬುದು ಸ್ಪಷ್ಟವಾಗುತ್ತದೆ. ಆದರೆ, ಚನ್ನಬಸವಣ್ಣನವರ ಖಚಿತವಾದ ಜೀವಾವಧಿ ಯಾವುದು ಎಂಬುದು ಇನ್ನೂ ಸಮಸ್ಯೆಯಾಗೆಯೇ ಉಳಿದಿದೆ. ಅವರು ನಂದನಾಮ ಸಂವತ್ಸರದ ವೈಶಾಖ ಶುದ್ಧ ಪಾಡ್ಯ ಮಂಗಳವಾರ ಕೃತ್ತಿಕಾನಕ್ಷತ್ರದ ಪ್ರಾತಃಕಾಲದಲ್ಲಿ ಜನಿಸಿದರೆಂದು ಒಂದು ಕಾಲಜ್ಞಾನದ ವಚನದಲ್ಲಿ ಬರೆದಿದೆ. ಬಸವಣ್ಣನವರು ಮಂಗಳವಾಡದಲ್ಲಿಯೂ ಕಲ್ಯಾಣದಲ್ಲಿಯೂ ಬಿಜ್ಜಳನಲ್ಲಿ ಭಂಡಾರಿಗಳಾಗಿದ್ದು ಅನುಭವಮಂಟಪದ ಕಾರ್ಯವನ್ನು ಹಮ್ಮಿದ ಮಂಗಲಮಯ ವಾತಾವರಣದಲ್ಲಿ ಚನ್ನಬಸವಣ್ಣನವರು, ಜನ್ಮವೆತ್ತಿದಂತೆ ತೋರುತ್ತದೆ. ಬಸವಣ್ಣನವರು ಕಲ್ಯಾಣಕ್ಕೆ ಬಂದುದು ವಿಕ್ರಮನಾಮ ಸಂವತ್ಸರದ ಶ್ರಾವಣ ಶುದ್ಧ ಪಂಚಮಿ ಸೋಮವಾರದ ಅರುಣೋದಯಕಾಲದಲ್ಲಿ. ಆದುದರಿಂದ ಅವರು ಕಲ್ಯಾಣಕ್ಕೆ ಬಂದ ಹನ್ನೆರಡು ವರ್ಷಗಳ ತರುವಾಯ ಚನ್ನಬಸವಣ್ಣನವರ ಜನನವಾಗಿರಬೇಕು. ತತ್ಪೂರ್ವದಲ್ಲಿ ಮೂರು ವರ್ಷಗಳ ಹಿಂದೆ ಅನುಭವಮಂಟಪದ ರಚನೆಯಾಗಿರಬೇಕು. ಬಸವಣ್ಣನವರು ಕಲ್ಯಾಣದಲ್ಲಿ ಅಡಿಯಿಟ್ಟ ವಿಕ್ರಮಸಂವತ್ಸರ ಮೊದಲುಗೊಂಡು ಅವರ ಜೀವನದ ಕೊನೆಯ ರಾಕ್ಷಸ ಸಂವತ್ಸರದ ವರೆಗೆ ಮೂವತ್ತಾರು ವರ್ಷಗಳಾಗುತ್ತವೆ. ಇದನ್ನು ಅವರ ಇನ್ನೊಂದು ವಚನ ಸ್ಪಷ್ಟಪಡಿಸುತ್ತದೆ:

> **"ಅಯ್ಯಾ ಭಕ್ತಿಗೆ ಬೀಡಾದುದು ಕಲ್ಯಾಣ ಮೂವತ್ತಾರು ವರ್ಷ.**
> **ಅಯ್ಯಾ ಅಭವಕ್ಕೆ ಶಿವಸದನವಾದುದು ಇಪ್ಪತ್ತೇಳು ವರ್ಷ.**
> . . . . . . . . ."[೩]

---

೧. ಫ. ಗು. ಹಳಕಟ್ಟಿ: ಕಾಲಜ್ಞಾನದ ವಚನಗಳು, ಪುಟ, ೪೦
೨. " " " " "
೩. ಮುಕ್ತಿಕಂಠಾಭರಣ. ವಚನ ೨೫೬.

ಇಲ್ಲಿ 'ಕಲ್ಯಾಣವು ಅಭವಕ್ಕೆ ಶಿವಸದನವಾದುದು ಇಪ್ಪತ್ತೇಳು ವರ್ಷ' ಎಂದು ಹೇಳಿರುವುದು ಗಮನಾರ್ಹ. ಶಿವತತ್ತ್ವವಿಚಾರಕ್ಕೆ ಸದನವಾದ ಅನುಭವಮಂಟಪವನ್ನುದ್ದೇಶಿಸಿ ಈ ಮಾತನ್ನು ಹೇಳಿರುವ ಸಂಭವವಿದೆ. ಆದುದರಿಂದ ಚನ್ನಬಸವಣ್ಣನವರ ಜನನಕ್ಕೆ ಹಿಂದೆ ಮೂರು ವರ್ಷ ಅಂದರೆ. ಸರ್ವಧಾರಿ ಸಂವತ್ಸರದಲ್ಲಿ ಅನುಭವಮಂಟಪದ ರಚನೆಯಾಗಿರಬೇಕು.

ಅನುಭವಮಂಟಪದಲ್ಲಿ ಶೂನ್ಯಪೀಠವೊಂದು ಅನಂತರ ನಿರ್ಮಿತವಾಗಿದೆ. ಪ್ರಭುದೇವರು ಸಿದ್ಧರಾಮ ದೇವರನ್ನು ಕಲ್ಯಾಣಕ್ಕೆ ಕರೆದುಕೊಂಡು ಬಂದ (ಪ್ರಭುದೇವರ ಮೊದಲಸಲ ಕಲ್ಯಾಣಾಗಮನದ) ಸಂದರ್ಭದಲ್ಲಿ ಶೂನ್ಯಪೀಠಾರೋಹಣದ ಮಾತು ಶೂನ್ಯಸಂಪಾದನೆಯಲ್ಲಿಯಾಗಲಿ, ಪ್ರಭುಲಿಂಗಲೀಲೆಯೊಳಗಾಗಲಿ ಉಕ್ತವಾಗಿರುವುದಿಲ್ಲ. ಆದರೆ, ಅದೇ ಎರಡನೆಯ ಸಾರೆ ಪ್ರಭು ಕಲ್ಯಾಣಕ್ಕೆ ಬಂದಾಗ ಶೂನ್ಯಸಿಂಹಾಸನವನ್ನು ಏರುತ್ತಾನೆ. ಅಷ್ಟರಲ್ಲಿ ಅದನ್ನು ರಚಿಸಿ ಹನ್ನೆರಡು ವರ್ಷಗಳಾಗಿವೆ. ಪ್ರಭುದೇವರು ಶೂನ್ಯಸಿಂಹಾಸನವನ್ನೇರಿ, ಆರೋಗಣೆಯನ್ನು ಮಾಡಿ, ಶರಣರಿಗೆ ಮನೋಲಯದ ಗತಿಯನ್ನು ಬೋಧಿಸಿ ಹೋಗುವಷ್ಟರಲ್ಲಿ ಕಲ್ಯಾಣದ ವಿಪ್ಲವವೇ ತೋರಿಬರುತ್ತದೆ. ಅಂದರೆ, ಪ್ರಭು ಎರಡನೆಯ ಸಾರೆ ಕಲ್ಯಾಣಕ್ಕೆ ಬಂದು ಹೋದ ಮೇಲೆ ಬಸವಾದಿ ಪ್ರಮಥರು ಅಲ್ಲಿ ಬಹುದಿನ ನಿಂದಿರದೆ ಕೆಲವು ತಿಂಗಳು ಮಾತ್ರ ಉಳಿದಂತೆ ಊಹಿಸಬಹುದಾಗಿದೆ. ಅಂದರೆ, ರಾಕ್ಷಸನಾಮ ಸಂವತ್ಸರಕ್ಕೆ ಹತ್ತಿರ ಹತ್ತಿರದಲ್ಲಿಯೇ ಶೂನ್ಯ ಸಿಂಹಾಸನಾರೋಹಣವಾಗಿರಬೇಕು. ಅದಕ್ಕೆ ಹಿಂದೆ ಹನ್ನೆರಡು ವರ್ಷ ಅಂದರೆ, ಸುಮಾರು ಶೋಭನನಾಮ ಸಂವತ್ಸರದಲ್ಲಿ ಶೂನ್ಯಸಿಂಹಾಸನವನ್ನು ಪರಿಕಲ್ಪಿಸಿರಬೇಕು. ಅದಕ್ಕೂ ಪೂರ್ವದಲ್ಲಿಯೇ ಅತ್ಯಲ್ಪ ಅವಧಿ ಮೊದಲು ಪ್ರಭುದೇವರು ಸಿದ್ಧರಾಮಯ್ಯನೊಡನೆ ಕಲ್ಯಾಣಕ್ಕೆ ಬಂದು ಹೋಗಿರಬೇಕು. ಆಗ ಚನ್ನಬಸವಣ್ಣ ಸುಮಾರು ೧೦-೧೨ ವರ್ಷದವನಾಗಿದ್ದು ಅವರೊಡನೆ ವಾದದಲ್ಲಿ ಭಾಗವಹಿಸುವಷ್ಟು ತೇಜಸ್ವಿಯಾಗಿದ್ದನು. ಆಗಲೇ ಆತನು ಸಿದ್ಧರಾಮನಿಗೆ ಲಿಂಗದೀಕ್ಷೆಯನ್ನು ಮಾಡಿದುದು. ಅಂದರೆ. ಕ್ರೋಧಿನಾಮ ಸಂವತ್ಸರದಲ್ಲಿ ಚನ್ನಬಸವಣ್ಣನವರು ಸಿದ್ಧರಾಮನಿಗೆ ಲಿಂಗದೀಕ್ಷೆ ಮಾಡಿರಬೇಕು.

ಚನ್ನಬಸವಣ್ಣನವರು ಇಪ್ಪತ್ತುನಾಲ್ಕು ವರ್ಷ ಜೀವಿಸಿದ್ದರೆಂದು ಒಂದು ವಚನದಿಂದ ವ್ಯಕ್ತವಾಗುತ್ತದೆ.[೧] ನಂದನನಾಮ ಸಂವತ್ಸರದಿಂದ ರಾಕ್ಷಸನಾಮ ಸಂವತ್ಸರದ ವರೆಗೆ ಇಪ್ಪತ್ತುನಾಲ್ಕು ವರ್ಷಗಳಾಗುವುವು. ಕೊನೆಯ ವರ್ಷ ಶಿವಶರಣರು ಕಲ್ಯಾಣದಿಂದ ಚದುರಿದ ವಿವರ ಹೀಗೆ: ರಾಕ್ಷಸ ಸಂವತ್ಸರದ ಆಷಾಢ ಶುದ್ಧ ಪಾಡ್ಯ ಸೋಮವಾರದ ಉದಯದಲ್ಲಿ ತಮ್ಮ ಗುಹೇಶ್ವರ ಲಿಂಗದೊಳಗೆ ಬಯಲಾದರು.[೨] ನಾವು ಹೋದ ತಿಂಗಳಿಗೆ ನಿಮ್ಮ ಸಂಗಮೇಶ್ವರನಲ್ಲಿ ಐಕ್ಯವಾಗಬೇಕೆಂದು ಅವರು ಬಸವಣ್ಣನವರಿಗೆ ಸೂಚಿಸುವರು.[೩] ಅದರನ್ವಯ ಬಸವಣ್ಣನವರು ರಾಕ್ಷಸನಾಮ ಸಂವತ್ಸರದ ಶ್ರಾವಣ

---

೧. ಫ.ಗು. ಹಳಕಟ್ಟಿ : ಕಾಲಜ್ಞಾನದ ವಚನಗಳು. ಪುಟ ೪೧. ಇತ್ತ ಬಸವರಾಜದೇವರು ೨೪ ವರ್ಷವಿದ್ದರು.
೨. ,, ,, ,, ಪುಟ ೩೩ ಮತ್ತು ೪೧.
೩. ,, ,, ,, ಪುಟ ೩೩,

ಶುದ್ಧ ಪಾಡ್ಯ ಮಂಗಳವಾರದ ಉದಯಕ್ಕೆ ಕೂಡಲಸಂಗಮನಾಥನಲ್ಲಿ ಐಕ್ಯವಾಗುವರು.[೧] 'ನಾನು ಹೋದ ಮೂರುವರೆ ತಿಂಗಳಿಗೆ ತಾಯಿ ಸೋಮಾಯಕ್ಕನು ಪರವಾದಿಯ ಕೊಲಿಸಿ ಪವಾಡಗಳ ಮೆಱಿದಾಳು' ಎಂದು ಬಸವಣ್ಣನವರ ಹೆಸರಿನಲ್ಲಿರುವ ಕಾಲ ಜ್ಞಾನದ ವಚನದಲ್ಲಿ ಉಕ್ತವಾಗಿದೆ. ಈ ವಿಚಾರಕ್ಕೆ ಹೊಂದಿಕೆಯಾಗುವಂತೆ ರಾಕ್ಷಸ ನಾಮ ಸಂವತ್ಸರದ ಕಾರ್ತಿಕಶುದ್ಧ ಪೌರ್ಣಮೆ ಮಂಗಳವಾರ ರಾತ್ರಿಯಲ್ಲಿ ಬಿಜ್ಜಳನ ವಧೆಯಾಗಿರುವುದು.[೨] 'ಬುಧವಾರ ರಾತ್ರಿ ಮಡಿವಾಳಯ್ಯಗಳು ಕಾದಿ ಸೇನೆಯನ್ನು ಸಂಹರಿಸಿ, ಉದಯದಲ್ಲಿ ಚನ್ನದಣ್ಣಾಯಕರು ಉಳಿವೆಗೆ ಹೋಹಲ್ಲಿ ಅಳಿಯ ಬಿಜ್ಜಳನ ಸಕಲ ಸೇನೆಯನ್ನೆಲ್ಲ ಮಡಿವಾಳಯ್ಯಗಳು ಸಂಹಾರವಮಾಡಿ ಉಳಿವೆಯ ಮಹಾಮನೆಗೆ ಬಂದರು. ಬಂದ ರಾತ್ರಿಯಲ್ಲಿಯೇ ಕೈಲಾಸಕ್ಕೆ ಬಿಜಯಂಗೈದರು. ಅವರು ಹೋದ ನಾಲ್ಕು ಗಳಿಗೆಗೆ ಚನ್ನಬಸವರಾಜದೇವರು ಚಿತ್ತೈಸಿದರು.[೩]' ಎಂದಿರುವುದರಿಂದ ಬುಧ ವಾರ ಬೆಳಗಿನ ಜಾವದಿಂದಲೇ ರಣಾಂಗಣ ಪ್ರಾರಂಭವಾಗಿದೆಯೆಂದು ವ್ಯಕ್ತವಾಗುತ್ತದೆ. 'ಬುಧವಾರ ರಣಾಂಗಣವ ಮಾಡುತ್ತ ಬಂದು, ಗೊಡಚಿಯ ಗಿಡದ ಹುತ್ತದಲ್ಲಿ ಚಿಕ್ಕ ಗುಡಿಯ ಕಟ್ಟಿ[೪]' ಎಂದಿರುವುದರಿಂದ ಒಂದು ದಿನದ ಅವಧಿಯಲ್ಲಿಯೇ ವೇಗದಿಂದ ಹೋಗಿ ಶರಣರು ಬಿಜ್ಜಳನ ರಾಜ್ಯದ ಎಲ್ಲೆಯನ್ನು ಮೀರಿದಂತೆ ಕಂಡುಬರುತ್ತದೆ. ಇದಾದ ಮೇಲೆ ಚನ್ನಬಸವಣ್ಣನವರು ಬಹುಕಾಲ ಬದುಕಿರಲಿಕ್ಕಿಲ್ಲ. ಅಳಿಯಬಿಜ್ಜಳನ ಸೈನ್ಯ ಮಹಾ ಮನೆಯ ವರೆಗೂ ಬೆನ್ನಟ್ಟಿದ ವಿಷಯವನ್ನು ಹಿಂದೆ ವಿವರಿಸಿದೆ. ಮಹಾಮನೆಯನ್ನು ಮುಟ್ಟಿ ಶತ್ರುಗಳ ಭೀತಿಯಿಂದ ಕೆಲಕಾಲ ವಿಮುಕ್ತರಾಗಿದ್ದು ಅಲ್ಲಿ ಮುಂದಿನ ಧಾರ್ಮಿಕ ಸಾಮಾಜಿಕ ಕಾರ್ಯದ ರೂಪರೇಷೆಯನ್ನು ಪರಿಕಲ್ಪಿಸಿ ಬಳಿಕ ಅನುಷ್ಠಾನಗೈದು ಅವರು ಶಿವಸಮಾಧಿಯನ್ನು ಸೇರಿರಬೇಕು. ಈ ವಿವರಣೆಯ ಫಲಶ್ರುತಿ ಇಷ್ಟು:

| | | |
|---|---|---|
| ೧. | ಕಲ್ಯಾಣಕ್ಕೆ ಬಸವಣ್ಣನವರ ಆಗಮನ | ವಿಕ್ರಮ ಸಂವತ್ಸರ. |
| ೨. | ಅನುಭವಮಂಟಪ ಸ್ಥಾಪನೆ | ಸರ್ವಧಾರೀನಾಮ ಸಂವತ್ಸರ. |
| ೩. | ಚನ್ನಬಸವಣ್ಣನವರ ಜನನ | ನಂದನನಾಮ ಸಂವತ್ಸರ. |
| ೪. | ಸಿದ್ಧರಾಮನಿಗೆ ಲಿಂಗದೀಕ್ಷೆ ಹಾಗೂ ಶೂನ್ಯಸಿಂಹಾಸನದ ಸೃಷ್ಟಿ | ಕ್ರೋಧಿನಾಮ ಸಂವತ್ಸರ. |
| ೫. | ಪ್ರಭುವಿನಿಂದ ಶೂನ್ಯಸಿಂಹಾಸನಾರೋಹಣ | ಆನಂದನಾಮ ಸಂವತ್ಸರ. |
| ೬. | ಐಕ್ಯ | ರಾಕ್ಷಸನಾಮ ಸಂವತ್ಸರ. |

ಮೇಗಣ ವಿವರಗಳನ್ನು ಪೂರೈಸುವಲ್ಲಿ ಎಲ್ಲ ಕಾವ್ಯಗಳೂ ಕಾಲಜ್ಞಾನ ವಚನ ಗಳೂ ಒಮ್ಮುಖವಾಗಿವೆ. ಆದರೆ, ದುರ್ದೈವದ ಸಂಗತಿಯೆಂದರೆ: ಈ ವಿವರಗಳು

---

೧. ಫ. ಗು. ಹಳಕಟ್ಟಿ: ಕಾಲಜ್ಞಾನದ ವಚನಗಳು. ಪುಟ ೪೧.
೨. ,, ,, ,, ಪುಟ ೩೪,
೩. ,, ,, ,, ಪುಟ ೪೧,
೪. ,, ,, ,, ಪುಟ ೩೨.
೫. ,, ,, ,, ,,

ಸ್ವಾಮಿ ಕಣ್ಣು ಪಿಳ್ಳೆಯವರ ಪಂಚಾಂಗದನ್ವಯ ಸರಿಯಾಗಿ ಹೊಂದಿಕೆಯಾಗುವುದಿಲ್ಲ. ಕವಿಗಳು, ಕಾಲಜ್ಞಾನದ ವಚನಕಾರರು ಹೇಳುವುದನ್ನು ಕೇಳಿದರೆ, ಅವರಿಗೆ ತಮ್ಮ ಹೇಳಿಕೆಯಲ್ಲಿ ದೃಢ ವಿಶ್ವಾಸವಿರುವಂತೆ ಕಂಡುಬರುತ್ತದೆ. ಆದುದರಿಂದ ಪಂಚಾಂಗಕ್ಕೆ ಹೊಂದಿಕೆಯಾಗುವುದಿಲ್ಲವೆಂದು ಅವನ್ನು ಒಮ್ಮೆಲೆ ತಿರಸ್ಕರಿಸಿ ಬಿಡುವಂತಿಲ್ಲ. ಮೂಲಭೂತ ವಿಷಯಗಳನ್ನು ಎತ್ತಿಕೊಂಡು, ಮಿಕ್ಕವನ್ನು ಪರಿಶೋಧಿಸುವುದು ಅವಶ್ಯವಿದೆ. ಸಂವತ್ಸರ ಮಿಂತಿ ವಾರ ನಕ್ಷತ್ರಗಳಲ್ಲಿ ಪಂಚಾಂಗ ಭಿನ್ನತೆಯನ್ನು ತೋರುವುದೇನೋ ನಿಜ. ಅದು ಒಮ್ಮೆ ಒಬ್ಬರಿಂದ ಲಿಖಿತವಾದರೆ ಮುಂದಿನವರು ಅದನ್ನೇ ಅನುಸರಿಸುವ ಸಂಭವವಿದೆ. ಆದರೆ. ಬಸವಣ್ಣನವರು ಕಲ್ಯಾಣದಲ್ಲಿ ಮೂವತ್ತಾರು ವರ್ಷ ನಿಂದುದು, ಚನ್ನಬಸವಣ್ಣನವರು ಇಪ್ಪತ್ತುನಾಲ್ಕು ವರ್ಷಕಾಲ ಬಾಳಿದುದು ಆ ನಡುವಣ ಅವಧಿಯಲ್ಲಿ ಅನುಭವ ಮಂಟಪ, ಶೂನ್ಯಸಿಂಹಾಸನಗಳನ್ನು ಸ್ಥಾಪಿಸಿದುದು ಐತಿಹಾಸಿಕ ಸತ್ಯವಾಗಿರುವಂತೆ ತೋರುತ್ತವೆ.

ಬಸವಣ್ಣನವರು ಮೂವತ್ತಾರು (೩೬) ವರ್ಷ ಬಾಳಿದರೆಂಬ ನಂಬುಗೆ ಜನತೆಯಲ್ಲಿ ರೂಢವಾಗಿದೆ. ಪ್ರಾಯಶಃ ಇದು ಅವರ ಕಲ್ಯಾಣದ ವಾಸ್ತವ್ಯವನ್ನು ಸೂಚಿಸುವಂತಿದೆ.[1] ಆದರೆ. ಅದಕ್ಕೂ ಪೂರ್ವದಲ್ಲಿಯೇ ಅವರ ಜನನವಾಗಿರಬೇಕು. ಅರ್ಜುನವಾಡದ ಶಿಲಾಲೇಖದಲ್ಲಿ ಬಸವಣ್ಣನವರ ವಂಶವೃಕ್ಷ ಹೀಗೆ ಉಕ್ತವಾಗಿದೆ:




ಈ ಶಾಸನದ ಕಾಲ ಶಾ. ಶ. ೧೧೮೨ನೆಯ ಸಿದ್ಧಾರ್ಥಿನಾಮಸಂವತ್ಸರ ಚೈತ್ರ ಬಹುಳ ಅಮಾವಾಸ್ಯೆ ಸೋಮವಾರ. ಅಂದರೆ, ಕ್ರಿ. ಶ. ೧೨೬೦ನೇ ಎಪ್ರಿಲ್ ೧೨ನೆಯ ಸೋಮವಾರ. ಹಾಲಬಸವಿದೇವನ ಕಾಲದಲ್ಲಿ ಕೆತ್ತಿದ ಈ ಶಾಸನದಲ್ಲಿ ಆತನನ್ನು ಮುನೀಶನೆಂದೂ ಅಶನ-ವಸನಗಳನ್ನು ಗೆದ್ದಾತನೆಂದೂ ವರ್ಣಿಸಿರುವುದರಿಂದ ಆಗ ಆತನಿಗೆ ಸುಮಾರು ೫೦ ವರ್ಷಗಳಿಗೆ ಮಿಕ್ಕಿ ವಯಸ್ಸಾಗಿರಬೇಕು. ಅಲ್ಲಿಂದ ಹಿಂದೆ ತಲೆಗೆ ಇಪ್ಪ

೧. ನಿರಂಜನ ವಂಶರತ್ನಾಕರದಲ್ಲಿ ಬಸವಣ್ಣನವರು ೩೬ ವರ್ಷ ಬಿಜ್ಜಳನ ಓಲೈಸಿದರೆಂದು ಹೇಳಲಾಗಿದೆ. ಶರಣಲೀಲಾಮೃತ. ಕಾಲಜ್ಞಾನದ ವಚನಗಳು ಈ ಮಾತಿಗೆ ಪುಷ್ಟಿಯನ್ನು ಕೊಡುತ್ತವೆ.

ತ್ತೈದು ವರ್ಷಗಳಂತೆ ಗಣನೆಮಾಡಿದರೆ, ಬಸವಣ್ಣನವರ ಕಾಲ, ಹಾಲಬಸವಿದೇವನ ಹಿಂದೆ ಸುಮಾರು ೧೩೦ ವರ್ಷ ಇರಬೇಕು. ಅಂದರೆ, ಕ್ರಿ. ಶ. ಸುಮಾರು ೧೧೩೦ ಬಸವಣ್ಣನವರ ಕಾಲವೆಂದು ಇಟ್ಟುಕೊಳ್ಳಬೇಕಾಗುತ್ತದೆ. ಇದರಿಂದ ಬಸವಣ್ಣನವರ ಜನನ, ಬಾಲ್ಯ. ವಿದ್ಯಾಭ್ಯಾಸ ಮುಂತಾದುವೆಲ್ಲ ಕ್ರಿ. ಶ. ೧೧೩೦ರ ಪೂರ್ವದಲ್ಲಿಯೇ ಆಗಿರುವ ಸಂಭವವಿದೆ.

ಬಸವಣ್ಣನವರ ಜನ್ಮವರ್ಷದ ವಿಷಯು ಹೀಗೆ ವಾದಗ್ರಸ್ತವಾಗಿದ್ದರೂ ಅವರ ಲಿಂಗೈಕ್ಯದ ಕಾಲವು ಖಚಿತವಾಗಿ ನಿರ್ಣಯಿಸಲು ಬರುವಂತಿದೆ. ಬಸವಣ್ಣನವರು ಬಿಜ್ಜಳನನ್ನು ಓಲೈಸಿದ್ದರೆಂಬುದು ಅವರ ವಚನಗಳಿಂದಲೇ ಸ್ಪಷ್ಟವಾಗಿದೆ.[೧] ಅದನ್ನು ಅವರ ಚರಿತ್ರೆಯನ್ನು ಒದಗಿಸುವ ಎಲ್ಲ ಕಾವ್ಯಗಳೂ ಉಲ್ಲೇಖಿಸುತ್ತವೆ. ಈ ಬಿಜ್ಜಳ, ಕಲ್ಯಾಣದ ಚಾಲುಕ್ಯಸಾಮ್ರಾಜ್ಯವನ್ನು ಆಕ್ರಮಿಸಿದ ಕಲಚೂರ್ಯ ಬಿಜ್ಜಳನೆಂಬುದೂ ಅದೇ ಸಾಹಿತ್ಯದಿಂದಲೇ ಸ್ಪಷ್ಟವಾಗುತ್ತದೆ.[೨] ಬಿಜ್ಜಳನು ಕಲ್ಯಾಣಕ್ಕೆ ಬಂದು ತೈಲಪನ ಮಹಾ ಮಂತ್ರಿಯಾದುದು ಕ್ರಿ. ಶ. ೧೧೫೬ರ ಸುಮಾರಿಗೆ. ೧೧೫೬ರಿಂದ ೧೧೬೨ರ ವರೆಗೆ ಬಿಜ್ಜಳನು ಸಾಮ್ರಾಜ್ಯದ ಆಕ್ರಮಣದ ಸಿದ್ಧತೆಯಲ್ಲಿದ್ದಂತೆ ತೋರುತ್ತದೆ. ೧೧೬೨–೧೧೬೩ರ ಸುಮಾರಿಗೆ ದಂಗೆಯೆದ್ದ ತನ್ನ ಸಾಮಂತನಾದ ಕಾಕತೀಯ ಪ್ರೋಲನಿಗೆ ತೈಲಪನು ಸೋತು ಸೆರೆಸಿಕ್ಕು. ಅವನಿಂದ ಜೀವದಾನಪಡೆದು ಮರಳಿ ಕಲ್ಯಾಣಕ್ಕೆ ಬಾರದೆ ಅಣ್ಣಿಗೇರಿಯಲ್ಲಿಯೇ ಬಂದು ನಿಲ್ಲುವನು. ಅಂದಿನಿಂದ ಬಿಜ್ಜಳನು ಸಾರ್ವಭೌಮತ್ವವನ್ನು ಸಾರುವನು. ಕ್ರಿ. ಶ. ೧೧೬೨ರಿಂದ ೧೧೬೭ರ ವರೆಗಿನ ಕಾಲಾವಧಿಯಲ್ಲಿ ಬಿಜ್ಜಳನ ಸಾರ್ವಭೌಮತ್ವವನ್ನು ಸಾರುವ ಅನೇಕ ಶಾಸನಗಳು[೩] ನಿರ್ಮಿತವಾಗಿವೆ. ೧೧೬೮ನೇ ಇಸ್ವಿಯ ಶಿಕಾರಿಪುರದ ೯೨ನೆಯ ಶಾಸನದಲ್ಲಿ ಬಿಜ್ಜಳನು ತನ್ನ ಮಗನಾದ ರಾಯಮುರಾರಿ ಸೋವಿದೇವನಿಗೆ ಅಧಿಕಾರವನ್ನು ವಹಿಸಿಕೊಟ್ಟಂತೆ ತೋರುತ್ತದೆ. 'ರಾಯಮುರಾರಿ ಸೋವಿದೇವ ಚಕ್ರೇಶ್ವರಂ' ಎಂದು ಆ ಶಾಸನದಲ್ಲಿ ಸ್ಪಷ್ಟವಾಗಿರುವುದರಿಂದ ಆತನ ಆಳಿಕೆ ೧೧೬೮ರಿಂದ ಆರಂಭವಾಗುತ್ತದೆಯೆಂದು ಇಟ್ಟುಕೊಳ್ಳಬೇಕಾಗುತ್ತದೆ. ಬಿಜ್ಜಳನ ಆಳಿಕೆಯ ಕೊನೆ, ಶರಣರ ಅವಸಾನ ಘಟನೆ ಇವು ಪರಸ್ಪರ ಸಂಬಂಧವಾಗಿದ್ದು ಏಕಕಾಲಕ್ಕೆ ನಡೆದಿರುವುದರಿಂದ ೧೧೬೭ನೆಯ ಇಸ್ವಿ ಬಸವಾದಿ ಪ್ರಮಥರ ಜೀವಾವಧಿಯ ಕೊನೆಯ ವರ್ಷವೆಂದು ಇಟ್ಟುಕೊಳ್ಳಬೇಕಾಗುತ್ತದೆ. ಇದರಿಂದ ಬಸವಣ್ಣನವರು ಕಲ್ಯಾಣದಲ್ಲಿ ಮೂವತ್ತಾರು ವರ್ಷ ಇದ್ದರೆಂಬ ಮಾತಿಗೂ ಪುಷ್ಟಿ ದೊರೆಯುತ್ತದೆ. ಆದರೆ, ಬಿಜ್ಜಳನೇ ಕ್ರಿ. ಶ. ೧೧೫೬ಕ್ಕೆ ಕಲ್ಯಾಣಕ್ಕೆ ಬಂದಿರುವನೆಂದರೆ, ಬಸವಣ್ಣನವರು ಅದಕ್ಕೂ ಪೂರ್ವದಲ್ಲಿ ಕಲ್ಯಾಣಕ್ಕೆ ಬಂದಿರಲು ಸಾಧ್ಯವಿಲ್ಲ. ಆದರೆ ಬಸವಣ್ಣ ಹಾಗೂ ಬಿಜ್ಜಳ ಇವರ ಸಂಬಂಧ, ಬಿಜ್ಜಳನು ಕಲ್ಯಾಣಕ್ಕೆ ಬರುವ ಪೂರ್ವದಲ್ಲಿಯೇ ಇದ್ದಂತೆ ತೋರುತ್ತದೆ. ಹರಿಹರನು–

---

೧. ಬಸವ, ೭೮೯, ೭೫೪ ಇತ್ಯಾದಿ.

೨. ,, ೬೨೬.

೩. ಅಣ್ಣಿಗೇರಿಯ ಶಾಸನ F. K. D. 474; ಶಿಕಾರಿಪುರ ಶಾಸನ E. C. VII ೧೦೨; ಹೂಲಿ ಶಾಸನ F. K. D. 475.

"ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು"[೧] ಎಂದು ಹೇಳಿರುವ ಮಾತು ಅರ್ಥಪೂರ್ಣವಾಗಿದೆ. ಕಲ್ಯಾಣಕ್ಕೆ ಮಹಾಮಂತ್ರಿಯಾಗಿ ಬರುವ ಪೂರ್ವದಲ್ಲಿ ಬಿಜ್ಜಳನು ಮಂಗಳವಾಡದಲ್ಲಿ ಸಾಮಂತನಾಗಿದ್ದನು. ಹರಿಹರನು ಹೇಳುವಂತೆ ಬಸವಣ್ಣನವರು ಮೊದಲು ಮಂಗಳವಾಡಕ್ಕೆ ಹೋಗಿ, ಅಲ್ಲಿಯೇ ತನ್ನ ಆತ್ಮೋನ್ನತಿಯ ಹಾಗೂ ಸಮಾಜೋನ್ನತಿಯ ಕಾರ್ಯರಂಗವನ್ನು ಕಲ್ಪಿಸಿಕೊಂಡು, ಮುಂದೆ ಬಿಜ್ಜಳನೊಡನೆ ಕಲ್ಯಾಣಕ್ಕೆ ಆಗಮಿಸಿರಬೇಕು. ಬಸವಣ್ಣನವರ ಧಾರ್ಮಿಕ ಹಾಗೂ ಸಾಮಾಜಿಕ ಜೀವನದ ಉನ್ನತಿಯ ಕಾರ್ಯರಂಗ ಮಂಗಳವಾಡದಲ್ಲಿಯೇ ಪ್ರಾರಂಭವಾಗಿರುವ ಸಂಭವವಿದೆ. ಮಂಗಳವಾಡ ಮತ್ತು ಕಲ್ಯಾಣ ಎರಡೂ ಒಂದೇ ಎಂಬ ಭಾವನೆಯಿಂದ ಮುಂದಣ ಕವಿಗಳು ಅವರ ಕಾರ್ಯಕ್ಷೇತ್ರ ಕಲ್ಯಾಣವೆಂದೇ ಉಲ್ಲೇಖಿಸಿದಂತೆ ತೋರಿಬರುತ್ತದೆ. ಬಸವಣ್ಣನವರು ಕ್ರಿ. ಶ. ೧೧೩೦ರ ಸುಮಾರಿಗೆ ಮಂಗಳವಾಡಕ್ಕೆ ಹೋಗಿರಬೇಕಾಗುತ್ತದೆ. ಆಗ ಮಂಗಳವಾಡವನ್ನು ಬಿಜ್ಜಳನ ತಂದೆ ಪೆರ್ಮಾಡಿ ಆಳುತ್ತಿದ್ದು ಬಿಜ್ಜಳನು ಯುವ ರಾಜನಾಗಿರಬೇಕು. ಕ್ರಿ. ಶ. ೧೧೨೮ನೆಯ ಇಸ್ವಿ ಇಂಗಳೇಶ್ವರದ ಶಾಸನದಿಂದ ಕಲಚುರಿಯ ಪೆರ್ಮಾಡಿಯು ಚಾಲುಕ್ಯಸಾಮ್ರಾಟ ಭೂಲೋಕಮಲ್ಲ ೩ನೆಯ ಸೋಮೇಶ್ವರನ (೧೧೨೬-೧೧೩೭) ಕೈಕೆಳಗೆ ತರ್ದವಾಡಿಯ ಮಹಾಮಂಡಳೇಶ್ವರನಾಗಿರ್ದನೆಂದು ತಿಳಿದುಬರುತ್ತದೆ. ಈ ಅವಧಿಯಲ್ಲಿ ಬಸವಣ್ಣನವರು ಮಂಗಳವಾಡಕ್ಕೆ ಹೋಗಿರುವ ಸಂಭವವಿದೆ.

ಇದರಿಂದ ಚರಿತ್ರೆ ಮತ್ತು ಸಾಹಿತ್ಯ ಗ್ರಂಥಗಳ ಸಮನ್ವಯ ಮಾಡಿದಂತಾಗುವುದು. ಹಾಗೆ ಮಾಡದೆಹೋದರೆ, ಶರಣರ ಚರಿತ್ರೆಯನ್ನು ನಿರ್ಮಿಸುವುದು ಕರಕಷ್ಟವಾಗುತ್ತದೆ. ಈ ಸಮನ್ವಯದೃಷ್ಟಿಯಿಂದ ಕ್ರಿ. ಶ. ೧೧೩೦ ಹಾಗೂ ೧೧೬೭ ಈ ಇಸ್ವಿಗಳನ್ನು ಬಸವಣ್ಣನವರ ಕಾರ್ಯರಂಗದ ಕಾಲಾವಧಿಯೆಂದು ಚರಿತ್ರೆಯಿಂದ ಸಂಗ್ರಹಿಸಬೇಕಾಗುತ್ತದೆ. ಈ ಅವಧಿಯಲ್ಲಿ ಮಂಗಳವಾಡ ಕಲ್ಯಾಣಗಳೆರಡೂ ಅವರ ಕಾರ್ಯಕ್ಷೇತ್ರವಾಗಿದ್ದವೆಂದು ಚರಿತ್ರೆಯಿಂದಲೇ ನಿರ್ಣಯಿಸಬೇಕಾಗುತ್ತದೆ. ಈ ಮೂವತ್ತಾರು ವರ್ಷಗಳ ಅವಧಿಯಲ್ಲಿ ಆರಂಭದಿಂದ (ಕ್ರಿ. ಶ. ೧೧೩೦) ಒಂಭತ್ತು ವರ್ಷಗಳ ನಂತರ ಅನುಭವಮಂಟಪವನ್ನು ಸ್ಥಾಪಿಸಿರಬೇಕು. ಅದಾದನಂತರ ಮೂರು ವರ್ಷಕ್ಕೆ ಚನ್ನಬಸವಣ್ಣನವರ ಜನನವಾಗಿರಬೇಕು. ಮಿಕ್ಕ ವಿಚಾರಗಳನ್ನು (ಈ ಮೂವತ್ತಾರು ವರ್ಷಗಳ ಅವಧಿಯೊಳಗಣ ಘಟನೆಗಳನ್ನು) ನಿರ್ಧರಿಸಲು ಮೇಲೆ ನಿರ್ದೇಶಿಸಿದ ಸಾಹಿತ್ಯಗ್ರಂಥಗಳ ನಿರ್ಣಯವನ್ನೇ ಒಪ್ಪಬೇಕಾಗುತ್ತದೆ. ಈ ಸಮನ್ವಯದೃಷ್ಟಿಯಿಂದ ಆ ಘಟನೆಗಳ ನಿರೂಪಣೆಯನ್ನು ಹೀಗೆ ವಿವರಿಸಬಹುದು:

| | |
|---|---|
| ಬಸವಣ್ಣನವರು ಕಲ್ಯಾಣಕ್ಕೆ ಬಂದುದು | ಕ್ರಿ. ಶ. ಸು. ೧೧೩೧ |
| ಅನುಭವಮಂಟಪ ಸ್ಥಾಪನೆ | ,, ೧೧೪೦ |
| ಚನ್ನಬಸವಣ್ಣನವರ ಜನನ | ,, ೧೧೪೩ |
| ಪ್ರಭು ಸಿದ್ಧರಾಮರು ಕಲ್ಯಾಣಕ್ಕೆ ಬಂದುಹೋದುದು ಹಾಗೂ ಸಿದ್ಧರಾಮನಿಗೆ ಲಿಂಗದೀಕ್ಷೆ | ,, ೧೧೫೬ |

೧. ಬದೇರ. ಪು. ೨೧.

ಶೂನ್ಯಸಿಂಹಾಸನದ ಸ್ಥಾಪನೆ ,, ೧೧೫೭

ಪ್ರಭುದೇವರ ದ್ವಿತೀಯ ಕಲ್ಯಾಣಾಗಮನ ಹಾಗೂ
ಶೂನ್ಯಸಿಂಹಾಸನಾರೋಹಣ ,, ೧೧೬೭

ಶರಣರ ಅವಸಾನ ಕಾಲ ,, ೧೧೬೮

ಮೇಲೆ ನಿರ್ದೇಶಿಸಿದ ಇಸವಿಗಳೂ ಹಿಂದೆ ಸೂಚಿಸಿದ ಸಂವತ್ಸರಗಳೂ ಒಂದು ಗೂಡಿದ್ದರೆ, ಈ ಸಮಸ್ಯೆ ಪರಿಹಾರವಾಯಿತೆಂದುಕೊಳ್ಳಬಹುದಾಗಿದ್ದಿತು. ಆದರೆ, ಆ ಹೊಂದಿಕೆ ಇಲ್ಲಿ ಕಂಡುಬರುವುದಿಲ್ಲ. ರಾಕ್ಷಸನಾಮ ಸಂವತ್ಸರವು ಪಂಚಾಂಗದ ಪ್ರಕಾರ ೧೧೯೫ಕ್ಕೆ ಬರುತ್ತದೆ. ಅಂದರೆ ೨೮ ವರ್ಷಗಳ ಅಂತರ ತೋರಿಬರುತ್ತದೆ. ಈ ತೊಡಕನ್ನು ಸಂಶೋಧಕರೇ ಬಗೆಹರಿಸಬೇಕು.

# ಷಟ್‌ಸ್ಥಲನಿರ್ಣಯ

ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಹಲವಾರು ಮೌಲ್ಯಗಳನ್ನು ನಿರ್ಣಯಿಸಿದಂತೆ ಷಟ್‌ಸ್ಥಲಸ್ವರೂಪವನ್ನೂ ನಿರ್ಣಯಮಾಡಿದುದಾಗಿ ತೋರಿಬರುತ್ತದೆ. ಅಂತೆಯೇ ಆಗಿನ ಕೆಲವು ಶರಣರನ್ನು ಸಂಬೋಧಿಸುವಾಗ ಮುಂದಿನ ಕವಿಗಳು ಮೇಗಣ ಅರ್ಥದ ವಿಶೇಷಣಗಳನ್ನು ಬಳಸಿರುವುದುಂಟು. ಮಗ್ಗೆಯ ಮಾಯಿದೇವರು ಬಸವಣ್ಣನವರನ್ನು 'ವೀರಶೈವ ನಿರ್ಣಯ ಪರಮಾವತಾರ'[೧] ಎಂದು ಕರೆದಿರುವರು. ಚಾಮರಸನು 'ರಾಯ ಪೂರ್ವಾಚಾರ್ಯ ಸಂಗನಬಸವ ಶರಣಾರ್ಥಿ'[೨] ಎಂದು ಪ್ರಾರ್ಥಿಸಿರುವನು. ಇದನ್ನು ನೋಡಿದರೆ, ಬಸವಾದಿ ಪ್ರಮಥರ ಕಾಲದಲ್ಲಿ ಷಟ್‌ಸ್ಥಲವನ್ನು ನಿರ್ಣಯಿಸುವ ಮಹತ್ಕಾರ್ಯವೊಂದು ನಡೆದಿದೆ ಎಂದು ಹೇಳಲು ಅಭ್ಯಂತರವಿಲ್ಲ. ಬಸವಣ್ಣನವರನ್ನು ಹೀಗೆ ಸಂಬೋಧಿಸಿದರೂ ಶಿವಾನುಭವಮಂಟಪದಲ್ಲಿ ತತ್ವಗಳನ್ನು ನಿರ್ಣಯಿಸಿ ಸಿದ್ಧಾಂತವನ್ನು ಪ್ರತಿಷ್ಠಾಪಿಸಿದ ಮಹಾವ್ಯಕ್ತಿಯೆಂದರೆ ಚನ್ನಬಸವಣ್ಣನವರೇ. ಇದನ್ನು ಸ್ವತಃ ಸಮಕಾಲೀನ ಶರಣರೇ ಒಪ್ಪಿರುವರು.

> "ಷಡ್ವಿಧಸ್ಥಾಪನಾಚಾರ್ಯನಾಗಿ ವೀರಶೈವದ ಪ್ರತಿಷ್ಠೆಯ ಮಾಡಲೋಸುಗ ಬಂದನಯ್ಯಾ"[೩]—ಸಿದ್ಧರಾಮ.
>
> "ಚನ್ನಬಸವೇಶ್ವರಸ್ವಾಮಿಗಳು ಕಲ್ಯಾಣದಲ್ಲಿ ಅನುಭಾವಮಂಟಪದ ಗದ್ದುಗೆಯ ಮೇಲೆ ಮೂರ್ತಮಾಡಿ ಎಲ್ಲ ಶಿವಗಣಂಗಳಿಗೆ ನಿರೂಪಿಸಿದ ಸಕೀಲಗಳ ವಚನ"[೪]—ಹಡಪದ ರೇಚಣ್ಣ.
>
> "ಎಂಬತ್ನಾಲ್ಕು ಲಕ್ಷ ವ್ರತಶೀಲ, ಅಱುವತ್ನಾಲ್ಕು ನೇಮ ಅಱುವತ್ತಾಱು ವ್ರತಂಗಳಲ್ಲಿ ಇವ ಪ್ರಮಾಣಿಸಿ ಇಟ್ಟೆಹೆನೆಂದಡೆ ಎನಗಾಗದು ಚನ್ನಬಸವಣ್ಣನಲ್ಲದೆ, ಆತ ಜ್ಞಾನಸೂತ್ರಧಾರಿ. ಚನ್ನಬಸವಣ್ಣಪ್ರಿಯ ಏಲೇಶ್ವರಲಿಂಗ"[೫]
>
> —ಏಲೇಶ್ವರದ ಕೇತಯ್ಯ,
>
> "ಷಡುಸ್ಥಲದ ಮೂರ್ತಿಯಾಗಿ ಬಂದೆಯಲ್ಲಾ ಚನ್ನಬಸವಣ್ಣಾ"[೬]—ಬಸವಣ್ಣ.
>
> "ಷಡುಸ್ಥಲ ಬ್ರಹ್ಮ"[೭]—ಮರುಳಶಂಕರದೇವರು.

ಇಂತಹ ಉಕ್ತಿಗಳನ್ನವಲೋಕಿಸಿದರೆ, ಚನ್ನಬಸವಣ್ಣನವರು ಷಟ್‌ಸ್ಥಲವನ್ನು ನಿರ್ಣಯಿಸಿದರೆಂಬ ಮಾತಿನಲ್ಲಿ ಅರ್ಥವಿದ್ದಂತೆ ತೋರುತ್ತದೆ. ನಿರ್ಣಯವೆಂದರೆ, ಇಲ್ಲದುದನ್ನು ಹೊಸದಾಗಿ ಹುಟ್ಟಿಸಿದರೆಂದು ಅರ್ಥವಲ್ಲ; ಇದ್ದುದನ್ನೇ ಸಂಸ್ಕಾರಗೊಳಿಸಿ, ಹೊಸ ಅರ್ಥವನ್ನು ಸಂಕಲ್ಪಿಸಿ ಅದನ್ನು ಜೀವನದಲ್ಲಿಯೂ ಸಮಾಜದಲ್ಲಿಯೂ ಅಳವಡಿಸುವುದು. ಷಟ್‌ಸ್ಥಲಾಚಾರ್ಯರು ಪೂರ್ವಾಚಾರ್ಯರು ಎಂದು ಕರೆಯುವುದು

---

೧. ಶಿಶ ೩. ೨. ಪ್ರಲಿಃ ೧, ೨. ೩. ಸಿವ, ಕ. ೧೧, ಪು. ೪೮. ೪. ಕ. ೧೧-ಪು. ೫೨ A. ೫. ಕ. ೧೧-ಪು. ೧೦. ೬. ಕ. ೧೧-ಪು. ೧೦. ೭. ಚೆಸಾ. ಪು. ೨೪೪,

ಪ್ರಾಯಶಃ ಈ ಅರ್ಥದಲ್ಲಿ. ಸ್ಥಿತಿಸ್ಥಾಪಕತ್ವ ಇಲ್ಲಿ ಗಮನಿಸಬೇಕಾದ ಅಂಶ. ಅದ್ವೈತದ ತತ್ವಕಲ್ಪನೆಗಳು ಶಂಕರಾಚಾರ್ಯರಿಗಿಂತ ಬಹುಕಾಲ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದು ಶಂಕರಾಚಾರ್ಯರು ಅವನ್ನೆಲ್ಲಾ ಬಳಸಿಕೊಂಡು ನೂತನದೃಷ್ಟಿಯಿಂದ ಅಂದಿನ ಸಿದ್ಧಾಂತ ಗಳನ್ನೆಲ್ಲಾ ಖಂಡಿಸಿ, ಅದ್ವೈತವನ್ನು ಪ್ರತಿಷ್ಠಾಪಿಸಿದರು. ಅಂತೆ ಅವರು ಅದ್ವೈತಮತ ಸ್ಥಾಪನಾಚಾರ್ಯರಾದರು. ಹೀಗೆಯೇ ಚನ್ನಬಸವಣ್ಣನವರು ಷಟ್‌ಸ್ಥಲವನ್ನು ಉದ್ಧ ರಿಸಿದುದು. ಬಸವಾದಿ ಪ್ರಮಥರ ಪೂರ್ವದ ಷಟ್‌ಸ್ಥಲ ಸ್ವರೂಪವೇನು, ಅದು ಎಂದಿ ನಿಂದ ಆರಂಭವಾಯಿತು, ಶಿವಶರಣರ ಪರುಷಹಸ್ತದಿಂದ ಅದು ಪುನೀತವಾದ ಬಗೆ ಎಂತು? ಎಂಬವುಗಳನ್ನು ಇಲ್ಲಿ ವಿಚಾರಿಸಬಹುದು:

ಷಟ್‌ಸ್ಥಲ ಸಿದ್ಧಾಂತದ ಬೇರುಗಳು ಆಗಮಗಳಲ್ಲಿಯೇ ಕಂಡುಬರುತ್ತವೆ. ಪ್ರಥ-ಮಾಗಮನವೆನಿಸಿದ '**ಕಾಮಿಕ**'ದಲ್ಲಿ ವೀರಶೈವ ಕ್ರಮದ ವಿಷಯ ಉಲ್ಲಿಖಿತವಾಗಿದೆ.

> **"ಬಿಂದು ಶಕ್ತಿಃ ಶಿವೋನಾದಃ ಶಿವಲಿಂಗಂ ತು ಕಥ್ಯತೇ ।**
> **ವೀರಶೈವ ಕ್ರಮಃಪ್ರೋಕ್ತಃ ಪ್ರಾಯಶ್ಚಿತ್ತ ವಿವರ್ಜಿತಃ ।**
> **ಯದ್ವತ್ತಂ ಗುರುಣಾ ಲಿಂಗಮವಧಾನೇನ ಧಾರಯೇತ್ ।**
> **ಪ್ರಮಾದಾತ್ ಪತಿತೇ ಲಿಂಗೇ ಪ್ರಾಣಾನಪಿ ಪರಿತ್ಯಜೇತ್ ।"**

ಹೀಗೆ 'ವೀರಶೈವ' ಎಂಬ ಪದವು ಕಾಮಿಕಾಗಮದಲ್ಲಿ ಉಕ್ತವಾಗಿರುವುದೂ 'ಇಷ್ಟ ಲಿಂಗದ ವಿಷಯ'ವನ್ನು ಅದು ಎತ್ತಿತೋರಿಸುವುದೂ ಗಮನಾರ್ಹವಾಗಿದೆ. 'ಸೂಕ್ಷ್ಮಾ-ಗಮ'ವು ಪ್ರಾಣಲಿಂಗದ ವಿಷಯವನ್ನು ಹೀಗೆ ಉಲ್ಲೇಖಿಸುತ್ತದೆ:

> **"ಲಿಂಗಾಪಾಯಾದಿ ದೋಷೇಷು ವ್ರತಚರ್ಯಾದಿ ಲೋಪನೇ ।**
> **ಪ್ರಾಣಾನ್‌ಧತ್ತೇ ಪ್ರಾಣಲಿಂಗೇ ಸೋಽರ್ಥೇ ತನುಸಿಮುಜ್ಜತಿ ॥"**

'**ಯೋಗಜಾಗಮ**'ದಲ್ಲಿ ಇಷ್ಟಲಿಂಗದ ಪ್ರಸ್ತಾಪ ಬರುತ್ತದೆ:

> **"ಇಷ್ಟಲಿಂಗಂ ವಿಭಿನ್ನಂ ಚೇತ್ ಭೂಯೋ ಭೋಕ್ತುಂ ಯದಿಚ್ಛತಿ ।**
> **ತೀರ್ಥಪಾನಂ ಸುರಾಪಾನಂ ಅನ್ನಂ ಗೋಮಾಂಸಭಕ್ಷಣಂ ।"**

ಇಷ್ಟಲಿಂಗ ವಿಕಲವಾದರೆ ಪ್ರಸಾದಸೇವನೆ ಮಾಡಕೂಡದೆಂಬುದು ಈ ಆಗಮದ ಅಭಿ ಮತ. '**ಕಿರಣಾಗಮ**'ವೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ.

> **"ಇಷ್ಟಲಿಂಗಸ್ಯ ವೈಕಲ್ಯೇ ಪ್ರಾಣತ್ಯಾಗಂ ಸಮಾಚಾರೇತ್ ।"**

ಹೀಗೆ ಬೇರೆ ಬೇರೆ ಆಗಮಗಳಲ್ಲಿ ವೀರಶೈವದ ಮುಖ್ಯ ತತ್ವಗಳೆನಿಸಿದ ಇಷ್ಟಲಿಂಗ, ಪ್ರಾಣಲಿಂಗ ಮುಂತಾದುವುಗಳ ಉಲ್ಲೇಖವಿದ್ದರೂ **ವಾತುಲ, ವೀರ, ಚಂದ್ರಜ್ಞಾನ, ಮತಂಗ, ಪಾರಮೇಶ್ವರ ಮೊದಲಾದ ಆಗಮ**ಗಳು ಷಟ್‌ಸ್ಥಲ ತತ್ವವಿವರಣೆಯ ದೃಷ್ಟಿಯಿಂದ ಬಹು ಮಹತ್ವವಾದುವು.

'ಪಾರಮೇಶ್ವರತಂತ್ರ'ದಲ್ಲಿ ಬರುವ ಷಟ್‌ಸ್ಥಲದ ವಿವರವನ್ನು ಇಲ್ಲಿ ಪರಾ ಮರ್ಶಿಸಬಹುದು. ಷಟ್‌ಸ್ಥಲಕ್ಕೆ ಅಧಿಕಾರಿ ಯಾರೆಂಬುದನ್ನು ಕುರಿತು ಅಲ್ಲಿ ಹೀಗೆ ಉಕ್ತವಾಗಿದೆ:

**"ಶಿವಭಕ್ತಿ ವಿಹೀನಾಯ ದುರಾಚಾರರತಾಯ ಚ ।**
**ನಾಸ್ತಿಕಾಯ ನ ದುಷ್ಟಾಯ ವಕ್ತವ್ಯಃ ಷಟ್‌ಸ್ಥಲ ಕ್ರಮಃ । "** ಎಂದು[೧]

ಷಟ್‌ಸ್ಥಲಕ್ಕೆ ಅಧಿಕಾರಿಯಾಗಬೇಕಾದರೆ, ಶಿವಭಕ್ತಿಯೇ ಮೂಲವೆಂದು ಹೇಳಲಾಗಿದೆ. ಷಟ್‌ಸ್ಥಲ ಜಿಜ್ಞಾಸುಗಳಿಗೆ, ಶಿವಭಕ್ತಿಗೆ ಅಲ್ಲಿರುವ ಸ್ಥಾನದ ಮಹತ್ವ ವೇದ್ಯವಾಗಿದೆ. ಶಿವಭಕ್ತಿವಿಹೀನರಿಗೆ ಷಟ್‌ಸ್ಥಲವನ್ನು ಹೇಳಕೂಡದೆಂದು 'ಪಾರಮೇಶ್ವರಾಗಮ'ವು ಪ್ರತಿಪಾದಿಸುತ್ತದೆ. ಈ ಷಡ್ವಿಧವೂ ಪರಮಾತ್ಮನ ಸ್ವರೂಪವೆಂಬುದು ಅಲ್ಲಿ ಉಕ್ತವಾಗಿದೆ.

**"ಅಹಮೇವ ಜಗತ್‌ಸ್ರಷ್ಟಾ ಪುನರ್ಮಯ್ಯೇವ ಲೀಯತೇ ।**
**ಅಹಮೇವ ಸ್ಥಲಂ ವಿದ್ಧಿ ಷಡ್ವಿಧಂ ಮಮರೂಪಕಂ ॥"**[೨]

ಸ್ಥಲವೆಂಬ ಪದದ ನಿರ್ವಚನ, ಆ ಸ್ಥಲವು ಷಡ್ವಿಧರೂಪಾದುದು, ಇಲ್ಲಿ ಗಮನಾರ್ಹವಾಗಿದೆ. ಷಟ್‌ಸ್ಥಲಗಳ ಲಕ್ಷಣಗಳನ್ನೂ ಅಲ್ಲಿ ಹೀಗೆ ವಿವರಿಸಲಾಗಿದೆ:[೩]

(೧) ಭಕ್ತಸ್ಥಲ—ಪೃಥ್ವೀತತ್ವ, ತರತಮಭಾವದಿಂದ ಗುರುಲಿಂಗಜಂಗಮ ಪೂಜೆಗೆಯ್ಯುವನು; ಆತ ಭಕ್ತ.

(೨) ಮಾಹೇಶ್ವರಸ್ಥಲ—ಜಲತತ್ವ, ಗುರೂಕ್ತಮಾರ್ಗದಿಂದ ಲಿಂಗಪೂಜಾನಿರತನಾಗಿರುವನು; ಜಂಗಮವನ್ನು ಅರ್ಚಿಸುವನು. ಆತ ಮಹೇಶ್ವರ.

(೩) ಪ್ರಸಾದಿಸ್ಥಲ—ಅಗ್ನಿತತ್ವ, ಜಂಗಮಾರ್ಚನೆ ಇಲ್ಲದೆ ಭೋಜನಮಾಡನು; ಪ್ರಸಾದವನ್ನು ತ್ಯಜಿಸದವನು; ಆತ ಪ್ರಸಾದಿ.

(೪) ಪ್ರಾಣಲಿಂಗಿಸ್ಥಲ—ವಾಯುತತ್ವ, ಪ್ರಾಣದಲ್ಲಿದ್ದಂತೆ ಲಿಂಗದಲ್ಲಿ, ಲಿಂಗದಲ್ಲಿದ್ದಂತೆ ಶಿವನಲ್ಲಿ ಏಕಬುದ್ಧಿಯುಳ್ಳವನು; ಆತ ಪ್ರಾಣಲಿಂಗಿ.

(೫) ಶರಣಸ್ಥಲ—ವ್ಯೋಮತತ್ವ, ಈಷಣತ್ರಯವಿಲ್ಲದೆ ಏಕಾಂತದಲ್ಲಿ ದಿನಾಲು ಧ್ಯಾನಮಗ್ನನಾಗುವವನು; ಆತ ಶರಣ.

(೬) ಐಕ್ಯಸ್ಥಲ—ಸಾಕ್ಷಿತತ್ವ, ಪೂಜೆ ಧ್ಯಾನ ಯೋಗಗಳ ಅವಶ್ಯಕತೆ ಇಲ್ಲದವನು; ಅಹಂಭಾವವಿಲ್ಲದವನು. ಆತ ಐಕ್ಯ.

ಈ ಆರು ಸ್ಥಲಗಳ ಲಕ್ಷಣಗಳನ್ನು ೯ರಿಂದ ೩೦ರ ವರೆಗಿನ ಶ್ಲೋಕಗಳಲ್ಲಿ ನೋಡಬಹುದು.

**"ಸರ್ವಜ್ಞತಾ ತೃಪ್ತಿರನಾದಿ ಬೋಧಃ ।**
**ಸ್ವತಂತ್ರತಾ ನಿತ್ಯಮಲುಪ್ತ ಶಕ್ತಿಃ ।**
**ಅನಂತ ಶಕ್ತಿಶ್ಚ ವಿಭೋರ್ವಿಧಿಜ್ಞಾ ।**
**ಷಡಾಹುರಂಗಾನ್ಯಥಷಟ್‌ಸ್ಥಲಾನಿ"**[೪]

ಇಲ್ಲಿ ಪರಶಿವನ ಸರ್ವಜ್ಞತ್ವವೆ ಭಕ್ತ, ಆತನ ತೃಪ್ತಿಯೇ ಮಹೇಶ್ವರ. ಆತನ ನಿರಂಕುಶವಾದ ಬೋಧೆಯೇ ಪ್ರಸಾದಿ, ಆತನ ಸ್ವಾತಂತ್ರ್ಯವೇ ಪ್ರಾಣಲಿಂಗಿ. ಆತನ ಅಲುಪ್ತ

---

೧. ಪಾತಂ. ಪ ೬-೪. ೨. ಪಾತಂ ಪ. ೬-೨೫. ೩. ಪಾತಂ ಪ. ೯-೩೦.
೪. ಪಾತಂ. ಪ. ೬-೩೩.

ಶಕ್ತಿಯೇ ಶರಣ, ಆತನ ಊರ್ಧ್ವವಾದ ಅನಂತಶಕ್ತಿಯೇ ಐಕ್ಯ ಎಂದು ಹೇಳಲಾಗಿದೆ. ಇವಕ್ಕೇ ಷಡ್ಗುಣೈಶ್ವರ್ಯವೆಂದು ಹೆಸರು.

ಉಪಾಂಗಷಟ್ಕಗಳನ್ನು ಕುರಿತು ಪಾರಮೇಶ್ವರಾಗಮದಲ್ಲಿ ಹೀಗೆ ಹೇಳಲಾಗಿದೆ:

**"ಭಕ್ತಿಃ ಕರ್ಮಕ್ಷಯೋ ಬುದ್ಧಿರ್ವಿಚಾರೋ ದರ್ಪಸಂಕ್ಷಯಃ ।**
**ಸಮ್ಯಗ್ ಜ್ಞಾನಮಿತಿಪ್ರೋಕ್ತಂ ಸ್ಥಲಷಟ್ಕಂ ಮಮಪ್ರಿಯಂ ॥ "[೧]**

ಅಂಗಷಟ್ಕ ಉಪಾಂಗಷಟ್ಕಗಳ ಸಮನ್ವಯವನ್ನು ಕುರಿತು ಹೀಗೆ ಹೇಳಲಾಗಿದೆ:

**ಉಪಾಂಗಷಟ್ಕಮೇ ತದ್ಧಿ ಭಕ್ತ್ಯಾದಿ ಸ್ಥಲಷಟ್ಕಕಂ ।**
**ಭಕ್ತ್ಯಾದಿ ಸರ್ವಜ್ಞತ್ವಾದಿ ಭಕ್ತ್ಯಾದಿ ಕ್ರಮಶಃ ಶಿವೇ ।**
**ಯಸ್ಯ ಸರ್ವಜ್ಞತಾ ಭಕ್ತಿಃ ಯಾ ತೃಪ್ತಿಃ ಕರ್ಮ ಸಂ ಕ್ಷಯಃ ।**
**ಅನಾದಿ ಬೋಧೋ ಯಾ ಬುದ್ಧಿರ್ವಿಚಾರೋ ಮೇ ಸ್ವತಂತ್ರತಾ ।**
**ಅಲುಪ್ತಶಕ್ತಿರಿತಿ ಯಾ ಸಾ ಚ ಮೇ ಗರ್ವಸಂಕ್ಷಯಃ ।**
**ಅನಂತ ಶಕ್ತಿರಿತಿ ಮೇ ಸಮ್ಯಗ್‌ಜ್ಞಾನಂ ದದಾತಿ ಸಾ ॥ "[೨]**

ಸಂಸಾರಾಬ್ಧಿಯ ಊರ್ಮಿಗಳು ಆರು:

ಕ್ಷುತ್, ಪಿಪಾಸೆ (ಪ್ರಾಣಧರ್ಮ), ಶೋಕ, ಮೋಹ (ಮನೋಧರ್ಮ); ಜನ್ಮ, ಮೃತಿ (ದೇಹಧರ್ಮ). ಅರಿಷಡ್ವರ್ಗಗಳು ಈ ಷಡೂರ್ಮಿಗಳಿಗೆ ಸಹಾಯಕವಾಗಿರುತ್ತವೆ.

ಷಡುಸ್ಥಲದ ಸಾಧನ-ಸಾಧ್ಯವನ್ನು ಕುರಿತು ಕೊನೆಯಲ್ಲಿ ಹೀಗೆ ಉಕ್ತವಾಗಿದೆ:

**"ಭಕ್ತ್ಯಾದಿ ಸಮ್ಯಗ್ ಜ್ಞಾನಾಂತಮುತ್ತರೋತ್ತರಮುತ್ತಮಂ ।**
**ಸಾಧನಂ ಪೂರ್ವಪೂರ್ವಂ ಸ್ಯಾತ್‌ಸಾಧ್ಯಂ ಸ್ಯಾದುತ್ತರೋತ್ತರಂ ॥[೩]"**

ಈ ಷಟ್‌ಸ್ಥಲಕ್ಕೆ ಅರ್ಹನಾಗಬೇಕಾದ ಭಕ್ತನು ಮೊದಲು ಮಲಯತ್ರಗಳ ಬಂಧನದಿಂದ ಬಿಡುಗಡೆಹೊಂದಬೇಕಾಗುತ್ತದೆ. ಅದು ಸದ್ಗುರುವಿನಿಂದಲೇ ಸಾಧ್ಯ. ಆ ಪಾವನಾತ್ಮಕ ಗುರುವಿನ ಸಲ್ಲಕ್ಷಣಗಳನ್ನು ಪಾರಮೇಶ್ವರತಂತ್ರವು ಬಹು ಸೂಕ್ಷ್ಮವಾಗಿ ವರ್ಣಿಸುತ್ತದೆ. ಜೊತೆಯಲ್ಲಿಯೇ ಶಿಷ್ಯನ ಲಕ್ಷಣವನ್ನೂ ವಿವರಿಸಲಾಗಿದೆ. ಗುರು, ಹಸ್ತಮಸ್ತಕ ಸಂಯೋಗದಿಂದ ದೀಕ್ಷೆಯನ್ನೆಸಗುತ್ತಾನೆ.

**"ಜ್ಞಾನಾದಿ ಗುಣಸಂಪನ್ನಂ ಅಥ ತಂ ದೀಕ್ಷಯೇತ್ ಶಿವೇ ।**
**ಹಸ್ತಮಸ್ತಕ ಸಂಯೋಗಾಚರೇಚ್ಚ ಶಿವಂ ಸ್ಮರನ್ ।"[೪]**

ದೀಕ್ಷಾತಂತ್ರದ ವಿವರಗಳನ್ನೆಲ್ಲ ಮುಂದಿನ ಶ್ಲೋಕಗಳಲ್ಲಿ ಕೊಡಲಾಗಿದೆ. ಇದಲ್ಲದೆ ಇಷ್ಟಲಿಂಗ ಪ್ರಾಣಲಿಂಗಗಳ ಸಮಾರಾಧನೆಯನ್ನು ಕುರಿತು ಸೂಕ್ಷ್ಮವಾಗಿ ವಿವರಿಸಲಾಗಿದೆ:

---

೧. ಪಾತಂ. ಪ. ೬-೪೨. ೨. ೨. ಪಾತಂ. ಪ. ೬-೬೦, ೬೧, ೬೨.
೩. ಪಾತಂ. ಪ. ೬-೭೩. ೪. ಪಾತಂ. ಪ. ೨-೭೫

"ಸಜ್ಜಿಕಾ ಗುಣಲಿಂಗಾದೌ ಯುನ್ದಷ್ಟಂ ತತ್ತಥಾಚರೇತ್ ।
ಯಲ್ಲಿಂಗವಸ್ತ್ರಾದಿತೋ ಲಬ್ಧಂ ಯಾವ ಜ್ಜೀವಂ ತದೇವ ಹಿ ।
ನಾನ್ಯಲ್ಲಿಂಗಂ ಭವೇನ್ಮರ್ತ್ಯೇ ಯದಿಸ್ಯಾತ್ ಸ ತು ಪಾತಕೀ ।
ಸಜ್ಜಿಕಾ ಗುಣ ವಸ್ತ್ರಾದಿ ಯದ್ದತ್ತಂ ಗುರುಣಾ ತತಃ ।
ಯಾವಜ್ಜೀವಂ ತದೇವಂ ಸ್ಯಾದನ್ಯಥಾ ಯಾತಿ ರೌರವಂ ।
ಯಲ್ಲಿಂಗಂ ಗುರುಣಾದತ್ತಂ ಪ್ರಾಣಲಿಂಗಂ ತದೇವ ಹಿ ॥"[೧]

ಈ ಷಟ್ಸ್ಥಲಾರಾಧನೆಯಲ್ಲಿ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ಮೊದಲಾದ ಅಷ್ಟಾವರಣಗಳ ಮಹತ್ವವನ್ನೂ ವಿವರಿಸಲಾಗಿದೆ. ಹೀಗೆ ಪಾರಮೇಶ್ವರತಂತ್ರದ ಈ ಶ್ಲೋಕಗಳಲ್ಲಿ ಷಟ್ಸ್ಥಲದ ನಿವೃತ್ತಿಯ ವಿವರವೆಲ್ಲ ಪೂರ್ತಿಯಾಗಿ ಬಂದಿದೆ. ವಾತುಲ ದಲ್ಲಿಯೂ ಹೀಗೆ ವಿವರಗಳನ್ನು ಕಾಣಬಹುದು. ಇದಲ್ಲದೆ ಪ್ರವೃತ್ತಿಯ ವಿವರಗಳನ್ನು ಅಂದರೆ, ಪರಬ್ರಹ್ಮದಿಂದ ಚರಾಚರಸೃಷ್ಟಿಯ ವ್ಯುತ್ಪತ್ತಿಯ ವಿಷಯವನ್ನು ವಿವರವಾಗಿ ಹೇಳಲಾಗಿದೆ:

"ಲಿಂಗಾತ್ಸರ್ವಂ ಸಮುತ್ಪನ್ನಂ"
ಅಮೂರ್ತಮೇವಮಾಖ್ಯಾತಂ ಸಮೂರ್ತಂ ತು ತತಃ ಶೃಣು ।
ಇಚ್ಛಾಶಕ್ತಿಶ್ಚ ವಿದ್ಯಾ ಚ ತಸ್ಯಾಃ ಪರ್ಯಾಯವಾಚಕಃ ।
ತಚ್ಛಕ್ತೇಸ್ತು ದಶಾಂಶೇನ ಜ್ಯೋತಿರೂಪಮಿಹೋಚ್ಯತೇ ।
ಇಚ್ಛಾಶಕ್ತೇರ್ಗುಣತ್ವಾಚ್ಚ ತಸ್ಮಾನ್ಮೂರ್ತಿರುದಾಹೃತಾ ।
ಮೂರ್ತತ್ವಾಚ್ಚ ಕಲಾಯುಕ್ತಂ ರೂಪಂ ಚೇತಿ ಪ್ರಕೀರ್ತಿತಂ ॥
ಜ್ವಾಲಾಗ್ನಿ ಸದೃಶಪ್ರಾಖ್ಯಾ ದಿವ್ಯಲಿಂಗಾಕೃತಿರ್ಭವೇತ್ ।
ತಸ್ಯೋರ್ಧ್ವಾಂಶೈಕಭಾಗೇ ತು ಚೈ ಕವಕ್ತ್ರಸಮನ್ವಿತಂ ॥
ತ್ರಿನೇತ್ರಂ ಚಾರುವದನಂ ಸರ್ವಾವಯವಸಂಯುತಂ ।
ಕೃಷ್ಣಾ ಪರಶು ಹಸ್ತಂ ಚ ವರಾಭಯ ಚತುರ್ಭುಜಮ್ ॥
ಏವಂ ಲಕ್ಷಣಸಂಯುಕ್ತಂ ಲಿಂಗಂಮೂರ್ತಮುದಾಹೃತಂ ।
ಏಕಮೇಕಾಸನೋಪೇತಂ ದಿವ್ಯಲಿಂಗಾಕೃತಿರ್ಭವೇತ್ ॥
ಮೂರ್ತಿಸಾದಾಖ್ಯಮಿತ್ಯುಕ್ತಂ ಕರ್ತೃಸಾದಾಖ್ಯ ಮುಚ್ಯತೇ ।
ಜ್ಞಾನಂ ಚೈವ ಪ್ರತಿಷ್ಠಾ ಚ ತಸ್ಯಾಃ ಪರ್ಯಾಯವಾಚಕಃ ॥
ಜ್ಞಾನಶಕ್ತಿ ದಶಾಂಶೇನ ಕರ್ತೃಸಾದಾಖ್ಯ ಸಂಭವಃ ।
ಜ್ಞಾನಕರ್ತೃ ಸ್ವಭಾವತ್ವಾತ್ಕರ್ತೃನಾ ಮೇತಿ ಕೀರ್ತಿತಂ ।[೨]"

ಹೀಗೆ ತತ್ತ್ವಭೇದಪಟಲದಲ್ಲಿ ಶಿವ ಶಕ್ತಿ ಅವರ ಅವಿನಾಭಾವ ಸಂಬಂಧ. ಶಕ್ತಿಯ ಸಂಕ್ಷೋಭೆ. ಪಂಚಸಾದಾಖ್ಯಗಳು. ಪಂಚಭೂತಗಳು. ಚರಾಚರಸೃಷ್ಟಿ, ಜೀವಾತ್ಮರ ಬಂಧ ಮುಂತಾದುವೆಲ್ಲ ವ್ಯಕ್ತವಾಗಿರುತ್ತವೆ.

---

೧. ಪಾತಂ. ಪ. ೧೦೦, ೧೦೧, ೧೦೨.   ೨. ವಾತಂ, ಪು. ೫.

ಈ ವಿವರಣೆಯಿಂದ ಆಗಮಗಳಲ್ಲಿ ಷಟ್‌ಸ್ಥಲಸ್ವರೂಪವಿವರಣೆ ಇದೆಯೆಂಬುದು ಸ್ಪಷ್ಟವಾಗುತ್ತದೆ. ಆದರೆ, ಆ ಆಗಮಂಗಳಲ್ಲಿ ಇಷ್ಟೇ ಇಲ್ಲ; ಇವನ್ನು ವಿವರಿಸುವಾಗ ಇತರ ಶೈವದ ಲಕ್ಷಣಗಳನ್ನೂ ಪೂಜಾವಿಧಾನಗಳನ್ನೂ ಜೊತೆ ಜೊತೆಯಾಗಿಯೇ ಕೊಡಲಾಗಿದೆ. ಪಾರಮೇಶ್ವರಾಗಮದಲ್ಲಿಯೇ ವೀರಶೈವ, ಅನಾದಿಶೈವ, ಆದಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ ಇವುಗಳ ನಾಮನಿರ್ದೇಶಮಾಡಿ, ಲಕ್ಷಣಗಳನ್ನು ಹೇಳಿ 'ವೀರಶೈವದ ವಿವರ'ಗಳನ್ನು ಕೊಡುತ್ತದೆ. 'ತಂತ್ರಗಳು ಷಡ್ವಿಧ ವಾಗಿವೆ' ಎಂದು ಅಲ್ಲಿಯೇ ಉಕ್ತವಾಗಿದೆ.

**"ತಂತ್ರಂ ತು ಷಡ್ವಿದಂ ಪ್ರೋಕ್ತಂ ಷಡ್ದರ್ಶನವಿಭೇದತಃ ।**
**ವೀರಶೈವಂ ವೈಷ್ಣವಂ ಚ ಶಾಕ್ತಂ ಸೌರಂ ವಿನಾಯಕಂ**
**ಕಾಪಾಲಿಕ ಮಿತಿ ಜ್ಞೇಯಂ ದರ್ಶನಾನಿ ಷಡೇವಹಿ ॥"[೧]**

ಹೀಗೆ ವೀರಶೈವದ ತಂತ್ರಗಳನ್ನು ಷಡ್ದರ್ಶನಗಳಲ್ಲಿ ಬೇರ್ಪಡಿಸಿ ತೋರಿಸಿರುವುದಲ್ಲದೆ ಚತುರ್ವಿಧ ಶೈವಪ್ರಭೇದಗಳನ್ನೂ ಉಲ್ಲೇಖಿಸುತ್ತದೆ.

**"ಶೈವಂ ಪಾಶುಪತಂ ಸೋಮಂ ನಕುಲಂಚ ಚತುರ್ವಿಧಂ ।"[೨]**

ಈ ಪ್ರಭೇದಗಳನ್ನು ವಿವರಿಸಿ ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಯೋಗ ಶೈವ, ವೀರಶೈವಗಳ ಲಕ್ಷಣಗಳನ್ನು ಹೇಳುತ್ತದೆ:

**"ವೀರಶೈವಮುತಂ ಸದ್ಯೋಭೋಗ ಮೋಕ್ಷೈಕ ಸಾಧನಂ**
**ಸರ್ವೋತ್ತಮಂ ಮಮಮುತಂ ಯತಃ ಸರ್ವೋತ್ತಮೋಸ್ಮ್ಯಹಂ"[೩]**

ಹೀಗೆ ಇತರ ಶೈವಗಳ ಲಕ್ಷಣ ವಿವರಣೆಗಳೊಂದಿಗೆ ವೀರಶೈವದ ಹೆಚ್ಚಳ ಕೆಲವು ಶಿವಾ ಗಮಂಗಳಲ್ಲಿ ಉಕ್ತವಾಗಿರುವುದೇನೋ ನಿಜ. ಆದರೆ, ಅಲ್ಲಿರುವುದು ಸ್ಥಾವರಲಿಂಗ ಪೂಜೆಗೆ ವಿಶೇಷ ಮಹತ್ವ. ಅದೇ ಪಾರಮೇಶ್ವರಾಗಮದಲ್ಲಿ ಸ್ಥಾವರಲಿಂಗಗಳನ್ನು ಹಾಗೂ ಅವುಗಳನ್ನು ನಿರ್ಮಿಸಲು ಉಪಯೋಗಿಸುವ ವಸ್ತುಗಳನ್ನು ಕುರಿತು ವಿವರ ವಾಗಿ ಹೇಳಲಾಗಿದೆ. ಪಾರದ, ಸುವರ್ಣ, ರಜತ, ತಾಮ್ರ, ಸೀಸ, ಸ್ಫಟಿಕ, ಕಟ್ಟಿಗೆ ಕಂಚು, ಶ್ರೀಶೈಲ ಶಿಲೆ ಮುಂತಾದುವುಗಳಿಂದ ಬದರೀಫಲಮಾನ, ಕ್ರಮುಕೀಫಲಮಾನ, ನಿಂಬೀರ ಫಲಮಾನದ ಲಿಂಗಗಳನ್ನು ಪ್ರತಿಷ್ಠಾಪಿಸಬೇಕೆಂದು ಹೇಳಲಾಗಿದೆ; ಆಯಾ ಲಿಂಗಪೂಜೆಯ ಫಲವನ್ನೂ ಹೇಳಲಾಗಿದೆ.[೪]

**"ದಯಾಭೂತೇಷು ಮದ್ಭಕ್ತಿಃ ಸರ್ವತ್ರ ಮಮದರ್ಶನಂ**
**ಷಡ್ಲಿಂಗಧಾರಣಂ ನಿತ್ಯಂ ಮುಕ್ತಿರೇಷಾ ಚತುರ್ವಿಧಾ"[೫]**

ಹೀಗೆ ದಯೆ, ಶಿವಭಕ್ತಿ, ಶಿವದರ್ಶನ, ಲಿಂಗಧಾರಣೆ ಇವೇ ಮುಕ್ತಿಗಳೆಂದು ಹೇಳಿರುವು ದನ್ನು ಗಮನಿಸಬೇಕು. ಎಲ್ಲಕ್ಕೂ ಮಹತ್ವದ ಮಾತೆಂದರೆ: ಪಾರಮೇಶ್ವರಾಗಮದಲ್ಲಿ ವೀರಶೈವದೀಕ್ಷಾಂಗವಾದ ಹೋಮಕುಂಡಕಥನ ಸಂಸ್ಕಾರವಿರುವುದು.

---

೧. ಪಾತಂ, ಪ. ೧-೧೫, ೧೬. ೨. ಪ. ೧-೨೪. ೩. ಪಾತಂ. ಪ. ೧-೪೧, ೪೨.
೪. ಪಾತಂ. ಪ. ೨-೧೬, ೧೭. ೫. ಪಾತಂ. ಪ. ೨-೩೧, ೩೨.

"ಪಂಚಗವ್ಯಾದಿಕಾಂಕೃತ್ವಾಸಭಾಂ ಚ ಶಿವಯೋಗಿನಾಂ ।
ಸಂಪೂಜ್ಯಶಕ್ತಿತೋ ಭಕ್ತ್ಯಾಗುರುರಗ್ನಿ ಮಥಾನಯೇತ್ ॥
ಯೋಗಿನೀಭಿಃಸಹೇಶಾನಿ ಚತುರ್ಭಿರ್ಲಿಂಗಧಾರಿಭಿಃ ।
ಸೂರ್ಯಾರಣಿ ಶಿವಾಗಾರ ಶಿವಯೋಗಿಗೃಹಾದಿಭಿಃ ॥
ಮೂಲಮಂತ್ರೇಣತೋದ್ದೀಪ್ಯಾಭಿಪಾದಯೇತ್ ಪಂಚಮುದ್ರಯಾ"[೧] ॥

ಶಿವದೀಕ್ಷೆಯಲ್ಲಿ ಹೋಮಕುಂಡದ ಉಲ್ಲೇಖವಾಗಿರುವುದನ್ನು ನಾವಿಲ್ಲಿ ನೋಡಬೇಕು. ಒಟ್ಟಿನಲ್ಲಿ ಆಗಮೋಕ್ತವೀರಶೈವವು ಮಿಕ್ಕ ಶೈವಗಳ ಪ್ರವಾಹದಲ್ಲಿ ಸಿಲುಕಿ ವೈದಿಕದ ಪ್ರಭಾವಕ್ಕೆ ಒಳಗಾಗಿ ಕರ್ಮಕಾಂಡಕ್ಕೆ ವಿಶೇಷ ಮಹತ್ವವನ್ನು ಕೊಟ್ಟಂತೆ ತೋರುತ್ತದೆ. ಬಸವಾದಿ ಪ್ರಮಥರ ವೀರಶೈವದಿಂದ ಅದು ಹೇಗೆ ಭಿನ್ನವಾಗಿದೆಯೆಂಬುದು ಅದರ ಗಮ್ಯಸ್ಥಾನದ ಬಗೆಗೆ ಇರುವ ಉಲ್ಲೇಖವನ್ನು ನೋಡಿದರೆ ವೇದ್ಯವಾಗುತ್ತದೆ.

"ಅನಾದಿ ಶೈವನಿಷ್ಠಸ್ಯ ಕರ್ಮೈವ ಪರಮಾಗತಿಃ ।
ಆದಿಶೈವಮತಸ್ಥಸ್ಯ ಸ್ಮರಣಂ ಸತತಂ ವಿಧಿಃ ।
ಅನುಶೈವಮತಸ್ಥಸ್ಯ ಮನನಂ ಮುಖ್ಯಸಾಧನಂ ।
ಮಹಾಶೈವ ಮತಸ್ಥಸ್ಯ ನಿಶ್ಚಯಃ ಪರಮಾಗತಿಃ ।
ಯೋಗಶೈವ ಮತಸ್ಥಸ್ಯ ಯೋಗಶ್ಚಾಷ್ಟಾಂಗಲಕ್ಷಣಂ ।
ಜ್ಞಾನಶೈವ ಮತಸ್ಥಸ್ಯ ಜ್ಞಾನಾನಾಂ ಭಾವನಾಖಿಲಾ ।
ವೀರಶೈವ ಮತಸ್ಥಸ್ಯ ಜ್ಞಾನಯೋಗೋಹಿ ಸಾಧನಂ"[೨] ॥

ಇಲ್ಲಿ 'ಜ್ಞಾನಯೋಗ'ವು ವೀರಶೈವದ ಅಂತಿಮಗುರಿ' ಎಂಬುದನ್ನು ಹೇಳಿರುವುದೇನೋ ನಿಜ. ಆದರೆ, ಲಿಂಗಾಂಗಸಾಮರಸ್ಯದಿಂದ ಆ ಮುಕ್ತಿಪದ ಭಿನ್ನವೆಂದೇ ತೋರುತ್ತದೆ. ಶೈವಾಗಮಗಳು ವೀರಶೈವವೊಂದನ್ನೇ ಎತ್ತಿಹಿಡಿಯದೆ, ಇತರ ಸಪ್ತಶೈವಗಳ ನಡುವೆ ವೀರಶೈವವನ್ನುಲ್ಲೇಖಿಸಿರುವುದು ಗಮನಾರ್ಹ. ಆ ವೀರಶೈವ, ಅಷ್ಟಾವರಣ, ಜಾತಿ ಭೇದ ನಿರ್ಮೂಲನ. ಪಂಚಸೂತಕ ನಿವಾರಣೆ, ಗುರು ಲಿಂಗ ಜಂಗಮದ ಮಹತ್ವ ಇವೇ ಮೊದಲಾದ ಸಾಮಾಜಿಕ ಸಲ್ಲಕ್ಷಣಗಳನ್ನು ಒಳಗೊಂಡಿದ್ದರೂ ಅದು ಇನ್ನೂ ಪರಿಶುದ್ಧ ವಾಗಬೇಕೆಂಬ ಕುರುಹುಗಳು ಅಲ್ಲಿ ಬೇಕಾದಷ್ಟು ಕಂಗೊಳಿಸುತ್ತವೆ. ಪೂಜಾವಿಧಾನ, ದೀಕ್ಷಾಕ್ರಮ ಮುಂತಾದ ಬಾಹ್ಯವೃತ್ತಿಗಳಿಗೆ ವಿಶೇಷ ಪ್ರಾಶಸ್ತ್ಯವಿದ್ದುದನ್ನು ಅಲ್ಲಿ ನೋಡಬೇಕು. ವೇಷ. ಲಾಂಛನ ಮೊದಲಾದುವುಗಳಿಗೂ ಸಹ ವಿಶೇಷ ಪ್ರಾಶಸ್ತ್ಯ ಬರುವು ದನ್ನೂ ಅಲ್ಲಿ ಕಾಣಬಹುದು. ಪ್ರತಿಯೊಂದು ಆಗಮದ ಕ್ರಿಯಾಪಾದ. ಚರ್ಯಾಪಾದ, ಯೋಗಪಾದ. ಜ್ಞಾನಪಾದಗಳನ್ನವಲೋಕಿಸಿದರೆ. ಅಲ್ಲಿರುವ ವೀರಶೈವ, ಶೈವ ಮಹಾ ವೃಕ್ಷದ ಮತ್ತೊಂದು ಮಹತ್ವದ ಶಾಖೆಯಾಗಿ ಪಲ್ಲವಿಸುತ್ತಿರುವ ಲಕ್ಷಣಗಳನ್ನು ಕಾಣ ಬಹುದು.

---

೧. ಪಾತಂ, ಪ. ೪-೬, ೮.
೨. ಪಾತಂ. ಪ. ೨-೩೪, ೩೮.

ಈ ವೀರಶೈವ, ಬಸವಾದಿ ಪ್ರಮಥರ ದಿವ್ಯಾನುಭಾವದಲ್ಲಿ ಸುಮಧುರ ಫಲಗಳನ್ನು ಬಿಟ್ಟಿದೆಯೆಂಬುದು ಮುಂದಿನ ವಿವರಣೆಯಿಂದ ವಿದಿತವಾಗುವುದು. ಈ ಸಂದರ್ಭದಲ್ಲಿ ಬಸವಣ್ಣ ಹಾಗೂ ಚನ್ನಬಸವಣ್ಣನವರ ಎರಡು ವಚನಗಳು ಬಹು ಮಹತ್ವವಾದುವು.

**"ಮೆಲ್ಲಮೆಲ್ಲನೆ ಭಕ್ತನಪ್ಪೆ**
**ಮೆಲ್ಲಮೆಲ್ಲನೆ ಮಹೇಶ್ವರನಪ್ಪೆ**
**ಮೆಲ್ಲಮೆಲ್ಲನೆ ಪ್ರಸಾದಿಯುಪ್ಪೆ**
**ಮೆಲ್ಲಮೆಲ್ಲನೆ ಪ್ರಾಣಲಿಂಗಿಯುಪ್ಪೆ**
**ಮೆಲ್ಲಮೆಲ್ಲನೆ ಶರಣನಪ್ಪೆ**
**ಮೆಲ್ಲಮೆಲ್ಲನೆ ಐಕ್ಯನಪ್ಪೆ . . . . ."**[೧]

ಎಂದು ಬಸವಣ್ಣನವರು ಹೇಳಿದುದನ್ನು ಚನ್ನಬಸವಣ್ಣನವರು ಖಂಡಿಸುವ ರೀತಿ ಇದು:

**"ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಾಹೇಶ್ವರ;**
**ಮೆಲ್ಲಮೆಲ್ಲನೆ ಪ್ರಸಾದಿ, ಮೆಲ್ಲಮೆಲ್ಲನೆ ಪ್ರಾಣಲಿಂಗಿ;**
**ಮೆಲ್ಲಮೆಲ್ಲನೆ, ಶರಣ, ಮೆಲ್ಲಮೆಲ್ಲನೆ ಐಕ್ಯರಾದೆವೆಂಬರು**
**ನಿಮ್ಮ ಶರಣರು.**
**ತಾವೇನು ಮರುಜೀವಣಿಯ ಕೊಂಡರೇ?**
**ಅಮೃತಸೇವನೆಯ ಮಾಡಿದರೇ?**
**ಆವ ಸ್ಥಲದಲ್ಲಿ ನಿಂದರೂ ಆ ಸ್ಥಲದಲ್ಲಿ ಷಡುಸ್ಥಲವಡಗದಿರ್ದಡೆ,**
**ಆ ಭಕ್ತನ ಬಾಯಲ್ಲಿ ಹುಡಿಮಣ್ಣು ಹುಯ್ಯುದ್ದ ಹೋಗನೆ . . ."**[೨]

ಇಲ್ಲಿ ಷಟ್‌ಸ್ಥಲದ ಎರಡು ಘಟ್ಟಗಳನ್ನು ಕಾಣುತ್ತೇವೆ. ಮೊದಲನೆಯದು ಬಸವಣ್ಣನವರ ವಚನದಲ್ಲಿ ವ್ಯಕ್ತವಾಗುವ ಕ್ರಮವಿಕಾಸ. ಅಂದರೆ, ಅಲ್ಲಿ ಸ್ಥಲಗಳನ್ನು ಒಂದೊಂದಾಗಿಯೇ ಏರಿ, ಕೊನೆಯಲ್ಲಿ ಐಕ್ಯಸ್ಥಲವನ್ನು ಮುಟ್ಟಬೇಕೆಂಬ ವಿಧಾನವಿರುತ್ತದೆ. ಅದನ್ನು ಚನ್ನಬಸವಣ್ಣನವರು ಖಂಡಿಸಿ, ಸಮವಿಕಾಸದ ಷಟ್‌ಸ್ಥಲವನ್ನು ಪ್ರತಿಷ್ಠಾಪಿಸಿರುವರು. ಇದು ಷಟ್‌ಸ್ಥಲಕ್ಕೆ ಚನ್ನಬಸವಣ್ಣನವರು ಕೊಟ್ಟ ಪರಮದೀಕ್ಷೆಯೆಂದು ಹೇಳಬಹುದು.

ಷಟ್‌ಸ್ಥಲವು ಮಾನಸಿಕವಾಗಿ ಪರಮಾತ್ಮನನ್ನನುಸಂಧಾನಮಾಡುವ ಮಹಾಮಾರ್ಗ. ಇಲ್ಲಿ ಒಂದನ್ನು ಬಿಟ್ಟು ಇನ್ನೊಂದನ್ನು ಪಡೆಯುವ ಮೋಕ್ಷವೆಂಬುದೇ ಇಲ್ಲ. ಮೋಕ್ಷಪದದ ಅರ್ಥ 'ಮುಂಚ' ಅಂದರೆ ಬಿಡು ಎಂದು ಆಗುತ್ತದೆ. ಆತ್ಮನು ದೇಹವನ್ನು ಬಿಟ್ಟು ಹೋಗುವುದೇ ಮೋಕ್ಷವೆಂದು ಕೆಲವರ ಮತ. ಆದರೆ, ಷಟ್‌ಸ್ಥಲದಲ್ಲಿ ಆತ್ಮನು ದೇಹಸಹಿತವಾಗಿಯೇ ಪ್ರಸಾದಕಾಯನಾಗುತ್ತಾನೆ. ಹೀಗೆ ಕಾಯವನ್ನು ಪ್ರಸಾದಮಯವನ್ನಾಗಿ ಮಾಡುವಲ್ಲಿ ಇಂದ್ರಿಯಗಳು ವಿಷಯವ್ಯಾಮೋಹವನ್ನು ಬಿಟ್ಟು ಲಿಂಗಪಥವನ್ನು ಹಿಡಿಯುತ್ತವೆ. ಆಂತರಿಕವಾದ ಈ ಮಾರ್ಪಾಟು ಷಟ್‌ಸ್ಥಲದ ಉದ್ದೇಶ. ಲೀಲೆಗೆಂದು

೧. **ಬಹೆವ.** ಪು. ೩೯. ವ. ೫೭.    ೨. **ಚಬವ.** ಪು. ೨೯.

ಎರಡಾದ ಲಿಂಗವು ಅಂಗನಿಗಾಗಿಯೇ ಮತ್ತೆ ಲಿಂಗವಾಗಿ ಬಂದಿತು. ಬಂದು, ಅಂಗನ ಸ್ಥೂಲ, ಸೂಕ್ಷ್ಮ, ಕಾರಣ ತನುವಿಡಿದು ಇಷ್ಟ, ಪ್ರಾಣ, ಭಾವವೆಂದು ಮೂರಾಯಿತು. ಷಡಿಂದ್ರಿಯಗಳ ಅನುವಿಡಿದು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂದು ಆರು ಬಗೆಯಾಗಿ, ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಆತ್ಮ ಈ ಷಡಿಂದ್ರಿಯಗಳಲ್ಲಿ ನೆಲೆಗೊಂಡಿತು. 'ಅಂಗದ ಕ್ರಿಯೆಗಳು ಲಿಂಗದ ಕ್ರಿಯೆಗಳಾಗಬೇಕು; ಪದಾರ್ಥ ಪ್ರಸಾದವಾಗಬೇಕು.' ಎಂಬುದೇ ಷಟ್‌ಸ್ಥಲದ ಉದ್ದೇಶ. ಇಲ್ಲಿರುವುದು ಪರಿಪೂರ್ಣಯೋಗ (Integral Philosophy). ಆ ಪರಿಪೂರ್ಣ ಯೋಗಾನುಸಂಧಾನದಲ್ಲಿ ಷಡಿಂದ್ರಿಯಗಳು ತಮ್ಮಲ್ಲಿ ನೆಲೆನಿಂದ ಲಿಂಗವನ್ನೇ ಆರಾಧಿಸಿ ಲಿಂಗವೇ ಆಗಬೇಕು; ಆ ಆ ಇಂದ್ರಿಯದ ವಿಷಯಗಳು ಪ್ರಸಾದವಾಗಿ ಲಿಂಗಭೋಗೋಪ ಭೋಗವಾಗಬೇಕು. ಇದು ಸದಾಚಾರ, ಸತ್ಕ್ರಿಯೆಗಳಿಂದ ಸಾಧ್ಯವಾಗುತ್ತದೆ. ಅದೇ ಷಟ್‌ಸ್ಥಲಾನುಸಂಧಾನ.

## ಭಕ್ತಸ್ಥಲ

ಭಕ್ತಸ್ಥಲಯುಕ್ತನಾದ ಸಾಧಕನು ಪೃಥ್ವ್ಯಂಗದಲ್ಲಿ ನಿಂತು ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗವನ್ನು ಶ್ರದ್ಧಾಭಕ್ತಿಯಿಂದ ಅರ್ಚಿಸುಬನು. ಅಂದರೆ, ಶ್ರದ್ಧೆಯಿಂದ ಆಚರಿಸಿದ ಕ್ರಿಯೆಯೇ ಲಿಂಗವಾಗುತ್ತದೆ; ಅವನ ಚಿತ್ತ ಸುಚಿತ್ತವಾಗುತ್ತದೆ. ಆ ಸುಚಿತ್ತವೇ ಹಸ್ತ ವಾಗಿ ಪೃಥ್ವಿಗುಣವಾದ ಗಂಧಪದಾರ್ಥವನ್ನು ಗ್ರಹಿಸಿ ಘ್ರಾಣೇಂದ್ರಿಯಮುಖದಲ್ಲಿ ಆಚಾರಲಿಂಗಕ್ಕೆ ಅರ್ಪಿಸುವುದು. ಇಲ್ಲಿ ಮಹತ್ವದ ಅಂಶಗಳೆಂದರೆ ಇವು:

೧. ಭಕ್ತಸ್ಥಲದಲ್ಲಿ ಭಕ್ತನ ಶ್ರದ್ಧೆ ಜಾಗ್ರತವಾಗಿರುತ್ತದೆ.
೨. ಅಲ್ಲಿ ಆಚಾರಲಿಂಗದ ಆರಾಧನೆ ನಡೆಯುತ್ತದೆ.
೩. ಆಚಾರಲಿಂಗವು ಕ್ರಿಯಾಶಕ್ತಿಯುಕ್ತವಾಗಿರುತ್ತದೆ.
೪. ಶ್ರದ್ಧೆಯಿಂದ ಆಚರಿಸಲ್ಪಟ್ಟ ಕ್ರಿಯೆ ಲಿಂಗವಾಗುತ್ತದೆ.
೫. ಚಿತ್ತ ಸುಚಿತ್ತವಾಗುತ್ತದೆ.
೬. ಆಚಾರಲಿಂಗ ಘ್ರಾಣೇಂದ್ರಿಯದಲ್ಲಿ ನೆಲೆಸಿರುವುದರಿಂದ ಘ್ರಾಣದ ವಿಷಯ ವಾದ ಗಂಧ, ಪ್ರಸಾದವಾಗುತ್ತದೆ.
೭. ಭಕ್ತನ ಪೃಥ್ವೀಕಾಯ ಪ್ರಸಾದಕಾಯವಾಗುತ್ತದೆ.
೮. ಕ್ರಿಯಾಶಕ್ತಿ ಹಾಗೂ ಶ್ರದ್ಧಾಭಕ್ತಿಗಳೆರಡೂ ಒಂದುಗೂಡಿ ಲಿಂಗಸ್ವರೂಪ ವಾಗುತ್ತದೆ.

## ಮಹೇಶ್ವರಸ್ಥಲ

ಆಚಾರಲಿಂಗದ ಗಂಧಪ್ರಸಾದವನ್ನು ಭೋಗಿಸಿದ ಲಿಂಗಭೋಗೋಪಭೋಗಿಯಾದ ಭಕ್ತನ ಶ್ರದ್ಧೆ ಬಲಿತು ನಿಷ್ಠೆಯಾಗುತ್ತದೆ. ಭಕ್ತನು ಮಹೇಶ್ವರನಾಗುತ್ತಾನೆ. ಶ್ರದ್ಧಾ

ಭಕ್ತಿಯನ್ನು ಆಚರಿಸಿದ ಸದ್ಭಕ್ತನಿಗೆ ತನ್ನ ಪ್ರಸಾದದ ಫಲವಾಗಿ ಶ್ರದ್ಧಾಭಕ್ತಿಯಲ್ಲಿ ಕೃತನಿಶ್ಚಯ ನೆಲೆಗೊಂಡು ನಿಷ್ಠೆಯಾಗುತ್ತದೆ. ವಿಷಯದ ಪರವಾಗಿದ್ದ ಪ್ರೇಮ, ವಿಶ್ವಾಸಗಳು ಭಕ್ತಸ್ಥಲದಲ್ಲಿ ಲಿಂಗದ ಪರವಾಗಿ ಶ್ರದ್ಧೆಯಾಗಿ, ಪರಮಾತ್ಮನ ವಿಷಯ ವಾಗಿದ್ದ ಆ ಪ್ರೇಮ ವಿಶ್ವಾಸಗಳೇ ನಿಷ್ಠೆಯಲ್ಲಿ ಪರಿಣಮಿಸುತ್ತವೆ. ಜಲಾಂಗದಲ್ಲಿದ್ದ ಮಹೇಶ್ವರನು ನಿಷ್ಠಾಭಕ್ತಿಯುಕ್ತನಾಗಿ ಜ್ಞಾನಶಕ್ತಿಯೊಡಗೂಡಿದ ಗುರುಲಿಂಗವನ್ನು ಪೂಜಿಸುವನು. ಇದರಿಂದ ಅವನ ಬುದ್ಧಿ ಸುಬುದ್ಧಿಯಾಗುತ್ತದೆ. ಸುಬುದ್ಧಿಯೆಂಬ ಹಸ್ತದಿಂದ ಮಹೇಶ್ವರನು ರಸಪದಾರ್ಥವನ್ನು ಗ್ರಹಿಸಿ ಜಿಹ್ವಾಮುಖದಲ್ಲಿ ಗುರು ಲಿಂಗಕ್ಕೆ ಅರ್ಪಿಸುವನು. ಇಲ್ಲಿ ರಸಪದಾರ್ಥ ಪ್ರಸಾದವಾಗುತ್ತದೆ. ಈ ಸ್ಥಲದಲ್ಲಿ ಗಮನಾರ್ಹವಾದ ವಿಷಯಗಳು ಇವು:

೧. ಅಚಲವೂ ಪ್ರಬಲವೂ ಆದ ಶ್ರದ್ಧೆಯೇ ನಿಷ್ಠೆ.
೨. ಮಹೇಶ್ವರನು ನಿಷ್ಠೆಯಿಂದ ಗುರುಲಿಂಗವನ್ನು ಆರಾಧಿಸುವನು.
೩. ಗುರುಲಿಂಗವು ಜ್ಞಾನಶಕ್ತಿಯುಕ್ತವಾಗಿರುತ್ತದೆ.
೪. ಅದು ಮಹೇಶ್ವರನ ಜಿಹ್ವೆಯಲ್ಲಿ ನೆಲೆಗೊಂಡಿರುತ್ತದೆ.
೫. ಕ್ರಿಯೆ ಹಾಗೂ ನಿಷ್ಠೆಯ ಫಲವಾಗಿ ಜಿಹ್ವೇಂದ್ರಿಯ ಲಿಂಗವಾಗುತ್ತದೆ.
೬. ಜಿಹ್ವೆಯ ವಿಷಯವಾದ ರುಚಿಪದಾರ್ಥವು ಪ್ರಸಾದವಾಗುತ್ತದೆ.
೭. ಮಹೇಶ್ವರನ ಜಲಾಂಗವು ಪ್ರಸಾದಕಾಯವಾಗುತ್ತದೆ; ಮಹೇಶ್ವರನು ಪ್ರಸಾದಿಯಾಗುತ್ತಾನೆ.
೮. ಜ್ಞಾನಶಕ್ತಿ ಹಾಗೂ ನಿಷ್ಠಾಭಕ್ತಿ ಎರಡೂ ಒಂದುಗೂಡಿ ಲಿಂಗವಾಗುತ್ತದೆ.

## ಪ್ರಸಾದಿಸ್ಥಲ

ನಿಷ್ಠಾಭಕ್ತಿಯ ಬಲದಿಂದ ಮಹೇಶ್ವರನು ಶಿವಪ್ರಸನ್ನತೆಯನ್ನು ಪಡೆಯುವನು; ಶಿವಪ್ರಸನ್ನತೆಯಿಂದ ಶಿವಪ್ರಸಾದತ್ವ ಪ್ರಾಪ್ತವಾಗುತ್ತದೆ; ಪ್ರಸಾದಿಸ್ಥಲವಾರಂಭವಾಗುತ್ತದೆ. ನಿಷ್ಠೆ ಈಗ ಅವಧಾನಸ್ವರೂಪವನ್ನು ತಳೆಯುತ್ತದೆ. ಅಂದರೆ, ಪರಮಾತ್ಮನ ಅರಿವಿನತ್ತ ಜಾಗ್ರತೆಯುಂಟಾಗುತ್ತದೆ. ನೇತ್ರೇಂದ್ರಿಯದಲ್ಲಿ ನೆಲೆಗೊಂಡ ಇಚ್ಛಾಶಕ್ತಿ ಸಮೇತವಾದ ಶಿವಲಿಂಗದ ಆರಾಧನೆ ನಡೆಯುತ್ತದೆ. ಅಹಂಕಾರ ನಿರಹಂಕಾರವಾಗುತ್ತದೆ. ನೇತ್ರೇಂದ್ರಿಯ ವಿಷಯವಾದ ರೂಪು ಪ್ರಸಾದವಾಗುತ್ತದೆ. ನಿರಹಂಕಾರಹಸ್ತ, ರೂಪುಪ್ರಸಾದವನ್ನು ಗ್ರಹಿಸಿ ಶಿವಲಿಂಗಕ್ಕರ್ಪಿಸುತ್ತದೆ. ಈ ಸ್ಥಲದ ಪ್ರತಿಫಲವಿಷ್ಟು:

೧. ನಿಷ್ಠೆ ಅವಧಾನವಾಗಿರುತ್ತದೆ. ಅಂದರೆ, ಲಿಂಗದ ಅರಿವಿನ ಬಗೆಗೆ ಜಾಗ್ರತಿಯುಂಟಾಗಿರುತ್ತದೆ.
೨. ಇಚ್ಛಾಶಕ್ತಿಸಮೇತವಾದ ಶಿವಲಿಂಗವು ನೇತ್ರೇಂದ್ರಿಯದಲ್ಲಿ ನೆಲೆಗೊಂಡಿದ್ದು ಅವಧಾನಭಕ್ತಿಯಿಂದ ಆ ಲಿಂಗದ ಆರಾಧನೆ ನಡೆಯುತ್ತದೆ.
೩. ಇಚ್ಛಾಶಕ್ತಿ ಹಾಗೂ ಅವಧಾನಭಕ್ತಿ ಎರಡೂ ಒಂದಾಗಿ ಲಿಂಗರೂಪವಾಗುತ್ತದೆ.

೪. ಆ ಲಿಂಗ ನೆಲೆಗೊಂಡ ನೇತ್ರೇಂದ್ರಿಯವೂ ಲಿಂಗವಾಗುತ್ತದೆ.
೫. ನೇತ್ರೇಂದ್ರಿಯವಿಷಯವಾದ ರೂಪು ಪ್ರಸಾದವಾಗುತ್ತದೆ.
೬. ಅಹಂಕಾರ, ನಿರಹಂಕಾರವಾಗುತ್ತದೆ.
೭. ಪ್ರಸಾದಿಯ ಅಗ್ನ್ಯಂಗ ಪ್ರಸಾದಕಾಯವಾಗುತ್ತದೆ.

## ಪ್ರಾಣಲಿಂಗಿಸ್ಥಲ

ಅವಧಾನಭಕ್ತಿ ಬಲಿತು ಶಿವಲಿಂಗದೊಳಗಿನ ಇಚ್ಛಾಶಕ್ತಿಯೊಡನೆ ಬೆರೆತು ಅನುಭಾವವಾಗಿ, ಸಾಧಕನು ಪ್ರಾಣಲಿಂಗಿಸ್ಥಲವನ್ನೈದುವನು. ಪ್ರಾಣನ ಪೂರ್ವಾಶ್ರಯ ವಳಿದು ಲಿಂಗದ ನೆನಹು ಸಂಬಂಧಿಸುವುದು. ಲಿಂಗವೇ ಪ್ರಾಣವಾಗಿ, ಪ್ರಾಣವೇ ಲಿಂಗವಾಗಿ ಭಕ್ತನು ಪ್ರಾಣಲಿಂಗಿಯೆನಿಸುವನು. ಈ ಸ್ಥಲದಲ್ಲಿ ಆತನು ತ್ವಗಿಂದ್ರಿಯದಲ್ಲಿ ನೆಲೆಗೊಂಡಿದ್ದ ಆದಿಶಕ್ತಿಸಮೇತವಾದ ಜಂಗಮಲಿಂಗವನ್ನು ಅನುಭಾವಭಕ್ತಿಯಿಂದ ಆರಾಧಿಸುವನು. ಇದರ ಪರಿಣಾಮವಾಗಿ ಆತನ ಮನಸ್ಸು ಸುಮನಸ್ಸಾಗುವುದು. ಸುಮನೋಹಸ್ತದಿಂದ ಸ್ಪರ್ಶಪದಾರ್ಥವನ್ನು ಕೈಕೊಂಡು, ತ್ವಗಿಂದ್ರಿಯಮುಖದಲ್ಲಿಟ್ಟು ಜಂಗಮಲಿಂಗಕ್ಕರ್ಪಿಸುವನು. ಈ ಸ್ಥಲದ ಫಲಶ್ರುತಿ ಇಷ್ಟು:

೧. ಅನುಭಾವ ಭಕ್ತಿಯಿಂದ ಷಟ್‌ಸ್ಥಲಸಾಧಕನು ಇಚ್ಛಾಶಕ್ತಿಯೊಡಗೂಡಿ ತ್ವಗಿಂದ್ರಿಯದಲ್ಲಿ ನೆಲೆಗೊಂಡಿದ್ದ ಜಂಗಮಲಿಂಗವನ್ನು ಆರಾಧಿಸುವನು.
೨. ಮನಸ್ಸು, ಸುಮನಸ್ಸಾಗುವುದು.
೩. ಇಚ್ಛಾಶಕ್ತಿ ಹಾಗೂ ಅನುಭಾವಭಕ್ತಿಗಳಲ್ಲಿ ಸಾಮರಸ್ಯವಾಗುವುದು: ಲಿಂಗಸ್ವರೂಪವಾಗುವುದು.
೪. ತ್ವಗಿಂದ್ರಿಯ. ಲಿಂಗಸ್ವರೂಪವನ್ನು ಪಡೆಯುವುದು.
೫. ತ್ವಗಿಂದ್ರಿಯವಿಷಯವಾದ ಸ್ಪರ್ಶ, ಪ್ರಸಾದವಾಗುವುದು.
೬. ಪ್ರಾಣಲಿಂಗಿಯ ವಾಯ್ವಂಗ ಪ್ರಸಾದಕಾಯವಾಗುವುದು.
೭. ತ್ವಗಿಂದ್ರಿಯ, ಕ್ರಿಯೆ ಅಂದರೆ ಲಿಂಗವಾಗುವುದು, ಲಿಂಗಕ್ರಿಯೆಯಾಗುವುದು.

## ಶರಣಸ್ಥಲ

ಅನುಭಾವಭಕ್ತಿಯು ಈಗ ಆನಂದಭಕ್ತಿಯಾಗಿ ಪರಿಣಮಿಸಿ, ಪ್ರಾಣಲಿಂಗಿಯು ಶರಣಸ್ಥಲವನ್ನು ಪಡೆಯುವನು. ಪರಾಶಕ್ತಿಯುಕ್ತವಾಗಿ ಶ್ರೋತ್ರೇಂದ್ರಿಯದಲ್ಲಿ ನೆಲೆಗೊಂಡಿದ್ದ ಪ್ರಸಾದಲಿಂಗದ ಆರಾಧನೆಯನ್ನು ಆನಂದಭಕ್ತಿಯಿಂದ ಮಾಡುವನು. ಶ್ರೋತ್ರೇಂದ್ರಿಯ ಲಿಂಗವಾಗುತ್ತದೆ. ಪರಾಶಕ್ತಿ ಮತ್ತು ಆನಂದಭಕ್ತಿಗಳು ಒಂದುಗೂಡಿ ಲಿಂಗವಾಗುತ್ತದೆ. ಶ್ರೋತ್ರೇಂದ್ರಿಯ ವಿಷಯ ಶಬ್ದ, ಪ್ರಸಾದವಾಗುತ್ತದೆ. ಜ್ಞಾನ ಸುಜ್ಞಾನವಾಗುತ್ತದೆ. ಸುಜ್ಞಾನಹಸ್ತದಿಂದ ಶಬ್ದಪದಾರ್ಥವನ್ನು ಗ್ರಹಿಸಿ. ಶ್ರೋತ್ರೇಂದ್ರಿಯಮುಖದಲ್ಲಿ ಪ್ರಸಾದಲಿಂಗಕ್ಕರ್ಪಿಸುವನು. ಶಬ್ದಪದಾರ್ಥ ಪ್ರಸಾದವಾಗುವುದು. ಆಕಾಶಾಂಗವೇ ಶರಣನ ಕಾಯವಾಗುವುದು. ಈ ಸ್ಥಲದ ಮುಖ್ಯಾಂಶಗಳಿಷ್ಟು:

೧. ಶರಣನು ಆನಂದಭಕ್ತಿಯನ್ನಳವಡಿಸಿಕೊಂಡಿರುವನು.
೨. ತಾನು ಸತಿಯಾಗಿ, ಲಿಂಗ ಪತಿಯಾಗಿ ಪರಾಶಕ್ತಿಯುಕ್ತವಾಗಿ ಶ್ರೋತ್ರೇಂದ್ರಿಯದಲ್ಲಿ ನೆಲೆಸಿದ ಪ್ರಸಾದಲಿಂಗವನ್ನು ಆನಂದಭಕ್ತಿಯಿಂದ ಆರಾಧಿಸುವನು.
೩. ಪರಾಶಕ್ತಿ ಮತ್ತುಆನಂದಭಕ್ತಿಗಳಲ್ಲಿ ಸಾಮರಸ್ಯವಾಗಿ ಲಿಂಗರೂಪವಾಗುತ್ತದೆ.
೪. ಶ್ರೋತ್ರೇಂದ್ರಿಯವು ಲಿಂಗರೂಪವಾಗುತ್ತದೆ.
೫. ಶ್ರೋತ್ರವಿಷಯ ಶಬ್ದ, ಪ್ರಸಾದವಾಗುತ್ತದೆ.
೬. ಜ್ಞಾನ ಸುಜ್ಞಾನವಾಗುತ್ತದೆ.

## ಐಕ್ಯಸ್ಥಲ

ಆನಂದಭಕ್ತಿಯು ಸಮರಸಭಕ್ತಿಯಾಗುತ್ತದೆ. ಆತ್ಮಾಂಗದಲ್ಲಿದ್ದ ಚಿಚ್ಛಕ್ತಿಯುಕ್ತವಾದ ಮಹಾಲಿಂಗವನ್ನು ಸಮರಸಭಕ್ತಿಯಿಂದ ಆರಾಧಿಸುವನು. ಆತನ ಭಾವ ಸದ್ಭಾವವಾಗುವುದು. ಸದ್ಭಾವಹಸ್ತದಿಂದ ತೃಪ್ತಿಪದಾರ್ಥವನ್ನು ಪರಿಗ್ರಹಿಸಿ ಮನೋಮುಖದಲ್ಲಿ ಮಹಾಲಿಂಗಕ್ಕರ್ಪಿಸುವನು. ತೃಪ್ತಿ ಪ್ರಸಾದವಾಗುವುದು. ಇಲ್ಲಿ,
೧. ಚಿಚ್ಛಕ್ತಿ ಮತ್ತು ಸಮರಸಭಕ್ತಿ ಒಂದಾಗಿ ಲಿಂಗಸ್ವರೂಪವನ್ನು ಪಡೆಯುತ್ತದೆ.
೨. ಭಾವ ಸದ್ಭಾವವಾಗುತ್ತದೆ.
೩. ತೃಪ್ತಿ ಪ್ರಸಾದವಾಗುತ್ತದೆ.
೪. ಆಕಾಶಾಂಗ ಲಿಂಗವಾಗುತ್ತದೆ.

ಈ ಷಟ್‌ಸ್ಥಲಗಳ ಸುಂದರವೂ ಸಂಕ್ಷಿಪ್ತವೂ ಆದ ವರ್ಣನೆಯನ್ನು ಕೆಳಗಿನ ವಚನಗಳಲ್ಲಿ ಕಾಣಬಹುದು.

"ಕಿಂಕುರ್ವಾಣತೆಯಿಂದ ಉಳ್ಳುದನಱಿತು ಮಾಡುವಲ್ಲಿ ಭಕ್ತ.
ನಿಷ್ಠೆ ನಿಬ್ಬರಿಸಿ ಗಟ್ಟಿಗೊಂಡು, ಅಭಿಲಾಷೆ ಸಮನಿಸದೆ,
ಪರಿಚ್ಛೇದಬುದ್ಧಿಯುಳ್ಳಲ್ಲಿ, ಮಹೇಶ್ವರ.
ಅನರ್ಪಿತವ ಸಮನಿಸದೆ, ಬಂದುದ ಕಾಯದ ಕರಣದ ಕೈಯಲ್ಲಿ ಕೊಟ್ಟು,
ಲಿಂಗಸಹಿತ ಭೋಗಿಸುವಲ್ಲಿ ಪ್ರಸಾದಿ.
ಪ್ರಾಣಕ್ಕೆ ಪ್ರಾಣವಾಗಿ, ಕಾಲಸ್ಥಿತಿಯನ್ನಱಿದು
ಎಚ್ಚರಿಕೆ ಗುಂದದಿಪ್ಪಲ್ಲಿ ಪ್ರಾಣಲಿಂಗಿ.
ತನಗೆ ಲಿಂಗವಾಗಿ, ಲಿಂಗಕ್ಕೆ ತಾನಾಗಿ,
ಹೆಚ್ಚು ಬೇಱಿಲ್ಲದಿರ್ದೊಡೆ ಶರಣ.
ಸದಾಚಾರ ಸಂಪತ್ತಿನಲ್ಲಿ ಬಂದ ಅನುಭಾವವನು ಮೀಱಿ,
ಹೆಸರಡಗಿದ ಸುಖವದು ಲಿಂಗೈಕ್ಯ.
"ಇದು ಕಾರಣ, ಕೂಡಲಚನ್ನಸಂಗಯ್ಯಲ್ಲಿ ಬಸವಣ್ಣಂಗಲ್ಲದೆ
ಷಟ್‌ಸ್ಥಲವಪೂರ್ವ[೧]"

೧. ಚಬವ. ೧೩೪೧.

"ಭಕ್ತನಾದಡೆ, ತನುಮನದಾಸೆಯನಳಿದಿರಬೇಕು.
ಮಹೇಶ್ವರನಾದಡೆ, ಪರಧನ ಪರಚಿಂತೆ ಪರಾಂಗನೆಯರ
ಎಡೆಯಳಿದಿರಬೇಕು.
ಪ್ರಸಾದಿಯಾದಡೆ, ಸುಖರುಚಿಯನಗ್ರಹವಂ ಮಱೆದು,
ಪ್ರಸಾದಘುಟವಳಿಯದೆ ಉಳಿದಿರಬೇಕು.
ಪ್ರಾಣಲಿಂಗಿಯಾದಡೆ, ಘುಟದಾಸೆಯ ತೊರೆದು,
ಪ್ರಾಣಲಿಂಗದೊಳಗೆ ಬೆರಸಿ ಬೇಱಿಲ್ಲದಿರಬೇಕು.
ಲಿಂಗೈಕ್ಯನಾದಡೆ, ಆಪ್ಯಾಯನದೆಡೆಯಡಗಿ,
ಸುಖದುಃಖಮಂ ತಾಳದೆ ನಿಭ್ರಾಂತನಾಗಿರಬೇಕು.
ಶರಣನಾದಡೆ, . . . . . . . . . . . . . . . . .

ಇಂತೀ ಷಟ್‌ಸ್ಥಲವಾರಿಗೆಯೂ ಅಳವಡದು"
"ಸೊಡ್ಡಳದೇವನು ಷಟ್‌ಸ್ಥಲದ ಭಕ್ತಿಯನು
ಬಸವಣ್ಣಂಗೆ ಮೂರ್ತಿಯ ಮಾಡಿದನು.
ಭಕ್ತಂಗೆ ಕ್ರಿಯೆ, ಮಹೇಶ್ವರಂಗೆ ನಿಶ್ಚಯ, ಪ್ರಸಾದಿಗೆ ಅರ್ಪಣ,
ಪ್ರಾಣಲಿಂಗಿಗೆ ಅವಧಾನ, ಶರಣಂಗೆ ನಿಬ್ಬೆರಗು, ಐಕ್ಯಂಗೆ ನಿರ್ಲೇಪ.
ಇಂತೀ ಷಟ್‌ಸ್ಥಲವ ಗ್ರಹಿಸಿ ನಿಂದ ವಿರಕ್ತನ ಏಕಸ್ಥಲದಾಟ, ನಿಜತತ್ವದಕೂಟ
ಶಂಭುವಿಂದತ್ತ, ಸ್ವಯಂಭುವಿಂದತ್ತ, ಅತಿಬಳ ನೋಡಾ,
ಮಾತುಳಂಗ ಮಧುಕೇಶ್ವರನು ॥"

"ವಿಶ್ವಾಸದಿಂದ ಭಕ್ತನಾಗಿ,
ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ,
ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ,
ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ,
ಆ ಸ್ವಾನುಭಾವದೊಳಗಣ ಅಱಿವಿನಿಂ ಶರಣನಾಗಿ,
ಆ ಅಱಿವು ನಿಜದಲ್ಲಿ ಸಮರಸಭಾವವನೈದಿದಡೆ
ಅದೇ ಐಕ್ಯಸ್ಥಲ ಗುಹೇಶ್ವರಾ ॥"

"ಭಕ್ತನಾದರೆ ಕಿಂಕರರ ಕಿಂಕರನಾಗಿರಬೇಕು.
ಮಹೇಶ್ವನಾದರೆ ಆದಿ ಅನಾದಿಯನಱಿಯದಿರಬೇಕು.
ಪ್ರಸಾದಿಯಾದರೆ ಒಡಲಗುಣವಿರಹಿತನಾಗಿರಬೇಕು.
ಪ್ರಾಣಲಿಂಗಿಯಾದರೆ ಬಾಹ್ಯವಿಚಾರವಿಲ್ಲದಿರಬೇಕು.
ಶರಣನಾದರೆ ನಿಸ್ಸಂಗಿಯಾಗಿರಬೇಕು.
ಐಕ್ಯನಾದರೆ ಬಯಲು ಬಯಲಾಗಿರಬೇಕು.

**ಇಂತಪ್ಪ ಸ್ಥಲವನ್ನಱಿಯದೆ ಕೂಡಲ ಚನ್ನಸಂಗಯ್ಯನಲ್ಲಿ**
**ಸುಸಂಗತಿಯೆನಿಸಬಾರದು ॥**

ಈ ಷಟ್‌ಸ್ಥಲಗಳಲ್ಲಿ ಗಮನಾರ್ಹವಾದ ಕೆಲವಂಶಗಳಿವೆ:

೧. ಸೇವ್ಯಸೇವಕ, ಪೂಜ್ಯಪೂಜಕ ಎನಿಸಿದ ಲಿಂಗಾಂಗಗಳು ಒಂದೇ ಲಿಂಗ ಸ್ವರೂಪವಾಗಿದ್ದು, ಭಕ್ತಾದಿ ಸ್ಥಲಗಳಲ್ಲಿ ತೋರಿಕೆಯಲ್ಲಿ ಕಾಣುತ್ತಿದ್ದ ದ್ವೈತಭಾವ ಕ್ರಮೇಣ ಕಡಿಮೆಯಾಗುತ್ತ ಸ್ವಸ್ವರೂಪಜ್ಞಾನವಾಗುತ್ತದೆ. ಸ್ವಸ್ವರೂಪಜ್ಞಾನವೆಂದರೆ ಇಲ್ಲಿ ತೋರಿಕೆಯ ದ್ವೈತಜ್ಞಾನ ಮಾಯವಾಗುವುದು.

೨. ಸ್ವಸ್ವರೂಪಜ್ಞಾನವೆಂದರೆ, ಕ್ರಿಯಾಜ್ಞಾನ ಸಾಮರಸ್ಯ; ಅರ್ಥಾತ್ ಲಿಂಗಾಂಗ ಸಾಮರಸ್ಯ.

೩. ಮೊದಲಿನ ಮೂರು ಸ್ಥಲಗಳಲ್ಲಿ ಕ್ರಿಯೆ ಪ್ರಧಾನವಾಗಿದ್ದರೂ ಅದು ಜ್ಞಾನ ಯುಕ್ತವಾಗಿರುತ್ತದೆ.

೪. ಮುಂದಿನ ಮೂರು ಸ್ಥಲಗಳಲ್ಲಿ ಜ್ಞಾನಪ್ರಧಾನವಾಗಿದ್ದರೂ ಅದು ಕ್ರಿಯಾಯುಕ್ತ ವಾಗಿರುತ್ತದೆ.

೫. ಷಟ್‌ಸ್ಥಲಮಾರ್ಗದಲ್ಲಿ ಕ್ರಿಯಾ ಜ್ಞಾನಗಳ ಸಾಮರಸ್ಯ ಮೊದಲಿನಿಂದ ಕೊನೆಯ ವರೆಗೂ ಇರುತ್ತದೆ.

೬. ಲಿಂಗಾಂಗಸಾಮರಸ್ಯ ಈ ಸ್ಥಲಗಳಲ್ಲಿ
   (ಅ) ಶಕ್ತಿ ಭಕ್ತಿಗಳ ಸಾಮರಸ್ಯರೂಪದಲ್ಲಿ ಮೊದಲಿನಿಂದ ಕೊನೆಯುವರೆಗೂ ನಡೆಯುತ್ತದೆ.
   (ಆ) ನಾಸಿಕಾದಿ ಜ್ಞಾನೇಂದ್ರಿಯಗಳು ಲಿಂಗಸ್ವರೂಪವಾಗುತ್ತವೆ.
   (ಇ) ರೂಪ, ರಸ, ಗಂಧ ಮೊದಲಾದುವುಗಳು ಪ್ರಸಾದವಾಗುತ್ತವೆ.
   (ಈ) ಅಹಂಕಾರ ಬುದ್ಧಿ ಚಿತ್ತ ಮನಸ್ಸು ಮುಂತಾದ ಅಂತಃಕರಣಪಟ್ಕ ಸತ್ ಸ್ವರೂಪವನ್ನು ಪಡೆದು ಹಸ್ತವಾಗುತ್ತವೆ.
   (ಉ) ಪಂಚೀಕರಣವನ್ನು ಹೊಂದಿ, ಭಕ್ತನ ಅಂಗವೆನಿಸಿದ ಪೃಥ್ವ್ಯಾದಿ ಪಂಚಭೂತಗಳು ಲಿಂಗಸ್ವರೂಪವನ್ನು ಪಡೆಯುತ್ತವೆ.

ಶರಣರು ಷಟ್‌ಸ್ಥಲದ ಈ ಮಾರ್ಗವನ್ನು ಸುವ್ಯವಸ್ಥಿತಗೊಳಿಸಿದುದಲ್ಲದೆ ಅದ ಕ್ಕೊಂದು ಹೊಸಸ್ವರೂಪವನ್ನೇ ಕೊಟ್ಟರು. ಷಟ್‌ಸ್ಥಲವು ಪರಮಾತ್ಮನ ಅನುಸಂಧಾನ ವನ್ನು ಮಾನಸಿಕವಾಗಿ ಮಾಡುತ್ತಿರುವುದರಿಂದ ಮನಶ್ಶಾಸ್ತ್ರದೃಷ್ಟಿಯಿಂದ ಬಹು ಮಹ ತ್ವದ ಮಾರ್ಪಾಡುಗಳನ್ನು ಚನ್ನಬಸವಣ್ಣನವರು ಅದರಲ್ಲಿ ಮಾಡಿರುವರು. ಭಾವ, ಜ್ಞಾನ, ಮನಸ್ಸು, ಅಹಂಕಾರ, ಬುದ್ಧಿ, ಚಿತ್ತ ಇವು ವಸ್ತುಗ್ರಹಣ ಸಾಧನವಾಗಿವೆ. ಅವುಗಳ ಸಹಾಯವಿಲ್ಲದೆ ಯಾವ ವಸ್ತುವಿನ ಕಲ್ಪನೆಯೂ ಆಗುವಂತಿಲ್ಲ. ಮೊದಲು ವಸ್ತುಸತ್ತೆಯ ಸ್ವಭಾವದ ಸೂಕ್ಷ್ಮಪ್ರಜ್ಞೆ ಭಾವದಲ್ಲಿ ಉಂಟಾಗುವುದು. ಭಾವದಲ್ಲಿ ಸೂಕ್ಷ್ಮವಾಗಿ ನೆಲೆಗೊಂಡ ವಸ್ತುಸತ್ತೆಯ ಬಗೆಗೆ ತಿಳಿವಳಿಕೆಯುಂಟಾಗುತ್ತದೆ. ಇದೇ

ಜ್ಞಾನ. ಜ್ಞಾನದಲ್ಲಿ ಹೊಳೆದ ವಸ್ತುವಿನ ಬಗೆಗೆ ಮನನಕ್ರಿಯೆ ನಡೆಯುತ್ತದೆ. ಈ ಕ್ರಿಯೆ ನಡೆಯುವುದು ಮನಸ್ಸಿನಲ್ಲಿ. ಹೀಗೆ ಮನಸ್ಸಿನಲ್ಲಿ ಮೂಡಿದ ವಸ್ತುವಿನ ಬಗೆಗೆ ತಾನು, ತನ್ನದು ಎಂಬ ಮಮಕಾರಭಾವನೆ ಉಂಟಾಗುತ್ತದೆ. ವಸ್ತುಮಮಕಾರಭಾವನೆಯುಂಟಾಗುವುದು ಅಹಂಕಾರತತ್ವದಲ್ಲಿ. ಹೀಗೆ ಅಹಂಕಾರಗೊಂಡ ವಸ್ತುವಿನ ಬಗೆಗೆ ಸಾರಾಸಾರ ವಿಚಾರಕ್ರಿಯೆ ಬುದ್ಧಿಯಲ್ಲಿ ನಡೆಯುತ್ತದೆ. ಅನಂತರ ಅದು ಚಿತ್ತದಲ್ಲಿ ಬೆಳಗಿ. ವಸ್ತು ಭಾವನೆ ಗಟ್ಟಿಯಾಗುತ್ತದೆ. ಇದೇ ಮಾನಸಿಕ ದೃಷ್ಟಿಯಿಂದ ವೀರಶೈವರು ಒಪ್ಪಿಕೊಂಡ ವಸ್ತುಗ್ರಹಣವಿಧಾನ. ಬದ್ಧಜೀವನದಲ್ಲಿ ಈ ರೀತಿಯಾಗಿ ಉಂಟಾದ ವಸ್ತುಜ್ಞಾನ, ಇಂದ್ರಿಯಗಳಿಗೆ ವಿಷಯರೂಪವಾಗಿ ಸಲ್ಲುತ್ತದೆ. ಹಾಗೆ ಸಂದು ಜೀವನಿಗೆ ಜನನ ಮರಣಗಳನ್ನೂ ಸುಖದುಃಖಗಳನ್ನೂ ಉಂಟುಮಾಡುತ್ತದೆ. ಆದರೆ, ಷಟ್‌ಸ್ಥಲ ಬ್ರಹ್ಮ ಜ್ಞಾನದಲ್ಲಿ ಇವು ಸದ್ಭಾವ, ಸುಜ್ಞಾನ, ಸುಮನಸ್ಸು, ನಿರಹಂಕಾರ, ಸುಬುದ್ಧಿ, ಸುಚಿತ್ತ ವಾಗುವುದರಿಂದ ಇವುಗಳಲ್ಲಿ ಉಂಟಾಗುವುದು ಪದಾರ್ಥಭಾವನೆಯಲ್ಲ; ಪ್ರಸಾದ ಭಾವನೆ. ಇವೇ ಮಹಾಲಿಂಗಾದಿಯಾಗಿ ಆಚಾರಲಿಂಗಾಂತ್ಯವಾದ ಷಡ್ಲಿಂಗಗಳಿಗೆ ಕ್ರಮ ವಾಗಿ ಹಸ್ತವಾಗುತ್ತವೆ. ಬದ್ಧಸ್ಥಿತಿಯಲ್ಲಿ ವಿಷಯೋಪಭೋಗಸಾಧನಗಳಾದ ಆತ್ಮ, ಶ್ರೋತೃ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ ಇವುಗಳಲ್ಲಿ ಅನುಕ್ರಮವಾಗಿ ಮಹಾಲಿಂಗ ಪ್ರಸಾದಲಿಂಗ ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗಗಳು ಪ್ರತಿಷ್ಠಾಪಿತ ವಾಗಿವೆ. ಅಂದರೆ. ಈ ಇಂದ್ರಿಯಗಳು ಆಯಾ ಲಿಂಗಗಳಿಗೆ ಮುಖಗಳಾಗಿವೆ. ಇಂದ್ರಿಯ ಗಳೇ ವಿಷಯಸೇವನೆ ಮಾಡುವುದಿಲ್ಲ. ಆದರೆ, ಅವು ಸದ್ಭಾವಾದಿ ಸುಚಿತ್ತಾಂತ್ಯವಾದ ಹಸ್ತಗಳಿಂದ ಬಂದ ಪ್ರಸಾದವನ್ನು ಲಿಂಗಕ್ಕರ್ಪಿಸುತ್ತವೆ. ಒಂದು ಸ್ಥಲದಲ್ಲಿ ಎಲ್ಲ ಸ್ಥಲ ಗಳೂ ಅಳವಟ್ಟರೆ ಮಾತ್ರ ಸರ್ವೇಂದ್ರಿಯಗಳಿಂದ ಬರುವ ವಸ್ತು ಪ್ರಸಾದವಾಗುತ್ತದೆ. ಅಲ್ಲಿ ಸಮಷ್ಟಿಭಾವನೆ ತಲೆದೋರುತ್ತದೆ. ಆದರೆ, ಕ್ರಮಸಮುಚ್ಚಯದಿಂದ ಸಾಗಿದರೆ, ಒಂದಿಂದ್ರಿಯ ಶುದ್ಧವಾಗಿ ಅದರ ವಿಷಯ ಪ್ರಸಾದವಾಗಿರಲು ಮಿಕ್ಕ ಇಂದ್ರಿಯಗಳು ಅಶುದ್ಧವಾಗಿ ಉಳಿದು, ಅವುಗಳ ಮೂಲಕ ಪದಾರ್ಥವನ್ನೇ ಸೇವಿಸಬೇಕಾಗುತ್ತದೆ.

ಹೀಗೆ ಪದಾರ್ಥಪ್ರಸಾದಗಳ ಬೆರಕೆಯಾಗದೆ ಎಲ್ಲವೂ ಪ್ರಸಾದಮಯವಾಗಿಯೇ ಲಿಂಗಕ್ಕರ್ಪಿತವಾಗಬೇಕು. ಒಂದೊಂದಿಂದ್ರಿಯವನ್ನೇ ಶುದ್ಧೀಕರಣಮಾಡುತ್ತ ಸ್ಥಲ ದಿಂದ ಸ್ಥಲಕ್ಕೆ ಏರುತ್ತ ಹೊರಟರೆ, ಒಂದು ಜನ್ಮದ ಅವಧಿಯಲ್ಲಿ ಸರ್ವೇಂದ್ರಿಯಗಳನ್ನು ಲಿಂಗಮವಾಗಿ ಮಾಡುವ ಕಾರ್ಯ ಮುಗಿಯಲಾರದು. 'ನಾವೇನು ಸ್ಥಿರಂಜೀವಿಗಳಲ್ಲ, ಅಮೃತ ಸೇವನೆ ಮಾಡಿಲ್ಲ: ಮರುಜೀವಣಿಯ ಕೊಂಡಿಲ್ಲ. ಇದೇ ಜನ್ಮ ಕಡೆಯಾಗಬೇಕು ಮೋಕ್ಷಸಂಪಾದನೆಗೆ. ಆದುದರಿಂದ ಆವ ಸ್ಥಲದಲ್ಲಿ ನಿಂದರೂ ಆ ಸ್ಥಲದಲ್ಲಿ ಷಡುಸ್ಥಲ ವಡಗಬೇಕು' ಎಂದು ಚನ್ನಬಸವಣ್ಣನವರು ಬಸವಣ್ಣನವರಿಗೆ ಸಮುಸಮುಚ್ಚಯಾತ್ಮಕ ವಾದ ಷಟ್‌ಸ್ಥಲದ ರಹಸ್ಯವನ್ನು ತಿಳಿಸಿದರು. ಇದು ಚನ್ನಬಸವಣ್ಣನವರ ನೂತನ ದರ್ಶನವೆಂದು ತೋರುತ್ತದೆ. ಷಟ್‌ಸ್ಥಲಸಾಧನೆಯಲ್ಲಿ ಪ್ರತಿಯೊಬ್ಬ ಸಾಧಕನೂ ಭಕ್ತ ಸ್ಥಲದಿಂದಲೇ ಪ್ರಾರಂಭಿಸಬೇಕೆಂದು ಇವರ ಅಭಿಪ್ರಾಯವಿಲ್ಲ. ಸಾಧಕರ ಪ್ರಕೃತಿ ಭಿನ್ನವಾಗಿರಬಹುದು. ಸ್ವಭಾವತಃ ನಿಷ್ಠೆಯನ್ನು ಪಡೆದ ಸಾಧಕನು ತನ್ನ ಸಹಜವ

ನೈಷ್ಠೆಯು ಸ್ಥಿತಿಯನ್ನು ಬಿಟ್ಟು, ಅದರ ಹಿಂದಿನ ಶ್ರದ್ಧೆಯತ್ತ ಸಾಗುವುದೇಕೆ? ನೈಷ್ಠೆಯಿಂದಲೇ ಆರಂಭಿಸಿ, ಅದರಲ್ಲಿಯೇ ಭಕ್ತಾದಿ ಷಟ್‌ಸ್ಥಲಗಳನ್ನು ಸಾಧಿಸಲು ಬರುವುದೆಂಬುದನ್ನು ಇವರು ಅರಿದು ಆಚರಿಸಿ ತೋರಿಸಿದರು.

ಷಟ್‌ಸ್ಥಲದ ನಿವೃತ್ತಿಮಾರ್ಗದಲ್ಲಿ ಶಿವಶರಣರು ಮಾಡಿಕೊಂಡ ಮಾರ್ಪನ್ನು ಅತ್ಯಂತ ಸ್ಥೂಲವಾಗಿ ವಿವರಿಸಲಾಯಿತು. ಇದನ್ನು ಇನ್ನೂ ಸೂಕ್ಷ್ಮವಾಗಿ ಮತ್ತು ಸುವ್ಯವಸ್ಥಿತವಾಗಿ ವಿವರಿಸಿರುವರು. ಪಿಂಡಸ್ಥಲದಿಂದಲೇ ಸಾಧನೆಯು ಮಾರ್ಗ ಆರಂಭವಾಗುತ್ತದೆ. ತನ್ನ ನಿಜವನ್ನು ಮರೆತು, ಅಜ್ಞಾನದಲ್ಲಿ ಸಿಲುಕಿ ತೊಳಲುತ್ತಿರುವ ಜೀವನಿಗೆ ಪೂರ್ವಜನ್ಮಸುಕೃತದಿಂದ ಪಾಪಕ್ಷಯವಾಗಿ ನಿಜದತ್ತ ದೃಷ್ಟಿ ಹರಿಯುತ್ತದೆ. ಆ ಸುಕೃತನಿಮಿಷವೇ ಪಿಂಡೋದಯದ ಮಂಗಲಮುಹೂರ್ತ. ಬದ್ಧಜೀವಿ ಶುದ್ಧಾಂತಃಕರಣದೇಹಿಯಾಗುವುದೇ ಪಿಂಡಸ್ಥಲ. ಹಾಗೆಯೇ ಮುಂದುವರಿದು ಶುದ್ಧಾಂತಃಕರಣನಾದ ದೇಹಿಯು ಸ್ವಸ್ವರೂಪವನ್ನು ಸಾವಧಾನವಾಗಿ ಅರಿತುಕೊಳ್ಳುವನು. ಆಗ ಪಿಂಡಜ್ಞಾನಸ್ಥಲವೊದಗುವುದು. ಸ್ವಸ್ವರೂಪದ ಜ್ಞಾನವುಂಟಾದೊಡನೆ ಸಂಸಾರದ ಬಗೆಗೆ ಹೇಯಭಾವನೆಯುಂಟಾಗುವುದು. ಆಗ ಶ್ರೀಗುರುಕಾರುಣ್ಯ ಪ್ರಾಪ್ತವಾಗುತ್ತದೆ. ಪಾವನಾತ್ಮಕನಾದ ಶ್ರೀಗುರು ಶಿಷ್ಯನಿಗೆ ಹಸ್ತಮಸ್ತಕ ಸಂಯೋಗದಿಂದ ವೇಧಾ, ಮಂತ್ರ, ಕ್ರಿಯಾದೀಕ್ಷೆಗಳನ್ನಿತ್ತು ಲಿಂಗಧಾರಣೆಮಾಡುವನು; ಭಕ್ತಸ್ಥಲ ಆರಂಭವಾಗುವುದು.

ಅಂಗನ ತ್ಯಾಗಾಂಗದಲ್ಲಿ ಭಕ್ತ ಮಹೇಶ್ವರಸ್ಥಲಗಳೂ ಭೋಗಾಂಗದಲ್ಲಿ ಪ್ರಸಾದಿ ಪ್ರಾಣಲಿಂಗಿಸ್ಥಳಗಳೂ ಯೋಗಾಂಗದಲ್ಲಿ ಶರಣ ಐಕ್ಯಸ್ಥಲಗಳೂ ಅಳವಡುವುವು. ತ್ಯಾಗಾಂಗದಲ್ಲಿ ವಿಷಯಸುಖವನ್ನು ತ್ಯಾಗಮಾಡುತ್ತಾನೆ. ಭೋಗಾಂಗದಲ್ಲಿ ಲಿಂಗಭೋಗೋಪಭೋಗಮಾಡುತ್ತಾನೆ. ಯೋಗಾಂಗದಲ್ಲಿ ಸಾಮರಸ್ಯವನ್ನು ಪಡೆಯುತ್ತಾನೆ.

ತ್ಯಾಗಾಂಗದಲ್ಲಿ ಇಷ್ಟಲಿಂಗಪೂಜೆ, ಭೋಗಾಂಗದಲ್ಲಿ ಪ್ರಾಣಲಿಂಗಪೂಜೆ, ಯೋಗಾಂಗದಲ್ಲಿ ಭಾವಲಿಂಗಪೂಜೆ ಪ್ರಧಾನವಾಗಿದ್ದರೂ ಎಲ್ಲ ಅಂಗಗಳಲ್ಲಿಯೂ ಎಲ್ಲ ಸ್ಥಲಗಳಲ್ಲಿಯೂ ತ್ರಿವಿಧಲಿಂಗಪೂಜೆ ನಡೆಯಬೇಕು. ಸ್ಥೂಲತನುವಿಗೆ ಸಂಬಂಧಪಟ್ಟ ಪದಾರ್ಥಗಳನ್ನು ಇಷ್ಟಲಿಂಗಪೂಜಾನಂತರ ಆ ಲಿಂಗಕ್ಕರ್ಪಿಸಿ ಪ್ರಸಾದವಾಗಿ ಸೇವಿಸಿದರೆ ಕಾಯಾರ್ಪಣವಾಗುತ್ತದೆ. ರೂಪ ರಸ ಮುಂತಾದುವುಗಳನ್ನು ಆಯಾ ಇಂದ್ರಿಯಗಳಲ್ಲಿರುವ ಲಿಂಗಗಳಿಗೆ ಅರ್ಪಿಸುವುದು ಕರಣಾರ್ಪಣ. ಕರಣಾರ್ಪಣದಲ್ಲಿ ಪ್ರಧಾನವಾದುದು ಭಾವಲಿಂಗ. ಭಾವ, ಜ್ಞಾನ ಮುಂತಾದವುಗಳಿಂದ ಗ್ರಹಿಸಿದ ವಸ್ತುಭಾವವನ್ನು ಭಾವಲಿಂಗಕ್ಕರ್ಪಿಸಬೇಕಾಗುತ್ತದೆ.

ಈ ಷಟ್‌ಸ್ಥಲದಲ್ಲಿ ಅಂಗ, ಲಿಂಗ ಇವುಗಳ ತ್ರಿವಿಧ, ಷಡ್ವಿಧ ಪ್ರಭೇದಗಳನ್ನೂ ಅಂಗತ್ರಿವಿಧ, ಲಿಂಗತ್ರಿವಿಧ; ಅಂಗಷಟ್ಕ, ಲಿಂಗಷಟ್ಕ ಇವುಗಳ ಸಾಮರಸ್ಯ ಸಂಬಂಧಗಳನ್ನೂ ಬಹಳ ಶಾಸ್ತ್ರೀಯವಾಗಿ ವಿವೇಚಿಸಲಾಗಿದೆ. ಭಕ್ತಿ, ಕ್ರಿಯಾ–ಜ್ಞಾನಗಳೆರಡರ ರೂಪದಲ್ಲಿ ಅರಳುತ್ತ, ಶಕ್ತಿಯಲ್ಲಿ ಸಮರಸವಾಗುತ್ತ ಹೋಗಿ ಕೊನೆಗೆ, ಎರಡಿಲ್ಲದ ಕೂಟವಾಗುತ್ತದೆ. ಎರಡಿಲ್ಲದ ಆ ಕೂಟವೇ ಮುಕ್ತಿಯೆನಿಸುತ್ತದೆ; ಅದೇ ಸಾಮರಸ್ಯ. ಭಕ್ತಿಜ್ಞಾನ ಅನುಭಾವಗಳನ್ನು ಸ್ವಾನುಭಾವದ ಕುಲುಮೆಯಲ್ಲಿಟ್ಟು ಬಸವಾದಿ ಪ್ರಮಥರು

ಅವುಗಳಿಗೆ ಹೊಸ ಸ್ವರೂಪವನ್ನು ಕೊಟ್ಟರು. ಬಸವಣ್ಣನವರ ಭಕ್ತಿ ವಿಶಿಷ್ಟವೆಂಬುದು ಸುಪ್ರಸಿದ್ಧ. ಪಂಚಮಪುರುಷಾರ್ಥವೆನಿಸಿದ ಭಕ್ತಿಯು ಸಾಕಾರಸ್ವರೂಪರೆನಿಸಿದ ಬಸವಣ್ಣನವರು ವೀರಶೈವದ ವಿಶಿಷ್ಟಭಕ್ತಿಯನ್ನು ಎತ್ತಿತೋರಿಸಿದರು. ಅದು ಉಳಿದೆಡೆ ಕಂಡು ಬರುವ ಸಾಧನಭಕ್ತಿಯಲ್ಲ; ಸಾಧ್ಯಭಕ್ತಿ. ಪರವಸ್ತು ಲೀಲೆಗೆಂದು ಪೂಜ್ಯ-ಪೂಜಕನಾಗಿ ತನ್ನನ್ನು ತಾನೇ ಪ್ರೀತಿಸಿ, ಆರಾಧಿಸಿ ಕೊನೆಗೆ ತಾನು ತಾನೇ ಆಗಿ ಸ್ವಲೀಲೆಯಿಂದಿರುವನು. ಅದೇ ಜ್ಞಾನಶೂನ್ಯಸ್ಥಲ; ಸ್ವಲೀಲಾನಂದವಿಲಾಸಸ್ಥಲ. ಆದುದರಿಂದ ವೀರಶೈವದಲ್ಲಿ, ಭಕ್ತಿಯೇ ಮುಕ್ತಿ. ಈ ವಿನೂತನವಾದ ದರ್ಶನವನ್ನು ಬಸವಾದಿ ಪ್ರಮಥರು ಕಂಡುದರಿಂದ ಅದು ಭಕ್ತಿಪಂಥವೆನಿಸಿತು; ಹಿಂದಿನ ವೀರಶೈವದಿಂದ ವಿಭಿನ್ನವೆನಿಸಿತು; ವಿಶಿಷ್ಟವೆನಿಸಿತು.

ಷಟ್‌ಸ್ಥಲದ ನಿವೃತ್ತಿಮಾರ್ಗಕ್ಕೆ ಹೀಗೆ ಹೊಸಸ್ವರೂಪವನ್ನು ಕೊಟ್ಟಂತೆ ಪ್ರವೃತ್ತಿಯಲ್ಲಿಯೂ ಹೊಸ ವಿಷಯಗಳನ್ನು ಕಂಡುಕೊಂಡಿರುವರು. ಶಿವಶಕ್ತಿಯರು ಅವಿನಾಭಾವದಿಂದಿರುವರೆಂಬುದೂ ಶಕ್ತಿಸಂಕ್ಷೋಭೆಯಿಂದ ಸೃಷ್ಟಿಯು ಪ್ರವೃತ್ತಿಗೆ ಆರಂಭವಾಗುವುದೆಂಬುದೂ ಆಗಮೋಕ್ತವಿಚಾರವೇ. ಆದರೆ, ಆ ಪರಬ್ರಹ್ಮದ ವಿಷಯವಾಗಿ ಸ್ವಾನುಭಾವದಿಂದ ಅನೇಕ ಹೊಸ ವಿಷಯಗಳನ್ನು ವ್ಯಕ್ತಪಡಿಸಿರುವರು. ನಿಷ್ಕಲ, ಸಕಲನಿಷ್ಕಲ. ಸಕಲ ಈ ಮೂರು ಅವಸ್ಥೆಗಳ ವರ್ಣನೆ ಆಗಮದಲ್ಲಿ ಕಂಡುಬಂದರೆ, ಅದರ ಅತ್ಯಂತ ಸೂಕ್ಷ್ಮ ಸ್ವರೂಪಗಳಾದ ಶೂನ್ಯ, ನಿಶ್ಶೂನ್ಯ, ಸರ್ವಶೂನ್ಯ ಮುಂತಾದ ಕಲ್ಪನೆಗಳೆಲ್ಲ ಷಟ್‌ಸ್ಥಲದಲ್ಲಿ ವಿನೂತನವಾಗಿ ಬಂದು ಸೇರಿದುದು ಶಿವಶರಣರ ಸ್ವಾನುಭವದಿಂದ. ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಪರಬ್ರಹ್ಮವನ್ನು ಶೂನ್ಯವೆಂಬುದು, ಅಲ್ಲಿ ಶಕ್ತಿಯ ಸಂಕ್ಷೋಭೆ ಎಳ್ಳಷ್ಟೂ ಆಗದೆ. ಪರಬ್ರಹ್ಮ ತನ್ನ ತಾನರಿಯದೆ, ನೆನಹು ನಿರ್ಧರಿಸದೆ ಇದ್ದ ಸ್ಥಿತಿಯನ್ನು ಸ್ಫುಟವಾಗಿ ಬಣ್ಣಿಸುತ್ತದೆ. ನಿಸ್ತರಂಗವಾದ ಸಮುದ್ರಕ್ಕೆ ಮಯೂರಾಂಡ ರಸಕ್ಕೆ ಅದನ್ನು ಹೋಲಿಸಿದರು. ತರಂಗಗಳು ಸಮುದ್ರದಲ್ಲಿ ಸುಪ್ತವಾಗಿವೆ. ಗಾಳಿಗೆ ಅಲೆಗಳೇಳುತ್ತವೆ: ಗಾಳಿಯಿಲ್ಲದಾಗ ಎಲ್ಲ ತರಂಗಗಳನ್ನೂ ತನ್ನಲ್ಲಿ ಅಳವಡಿಸಿಕೊಂಡ ನಿಸ್ತರಂಗಸಮುದ್ರ ಚರಾಚರಸೃಷ್ಟಿಗೆ ಕಾರಣವಾದ ಶಕ್ತಿಯನ್ನು ತನ್ನಲ್ಲಿ ಗರ್ಭೀಕರಿಸಿಕೊಂಡ ಪರಬ್ರಹ್ಮಕ್ಕೆ ಸರಿಸಮಾನವಂತೆ. ಸಹಜ, ಬಯಲು, ಶೂನ್ಯ, ನಿಶ್ಶೂನ್ಯ ಮುಂತಾದ ಹೊಸ ಪರಿಭಾಷೆಗಳಲ್ಲಿ ಆ ಪರಶಿವನ ಅತ್ಯಂತ ಸೂಕ್ಷ್ಮಾವಸ್ಥೆಯ ವರ್ಣನೆ ಇದೆ. ಸಾಕಾರವನ್ನೋ ಲೀಲೆಗಳನ್ನೋ ಬಣ್ಣಿಸುವ ಆಗಮಗಳಿಗೂ ನಿರಾಕಾರದ ಚರಮಾವಸ್ಥೆಯನ್ನು ಬಣ್ಣಿಸುವ ವಚನವಾಙ್ಮಯಕ್ಕೂ ಮಹದಂತರವಿದೆ. ತಾತ್ವಿಕ ವಿಚಾರದಲ್ಲಿ ಶರಣರು ಎಷ್ಟು ದೂರ ಹೋಗಿದ್ದರೆಂಬುದಕ್ಕೆ ಈ ಕಲ್ಪನೆಯೊಂದೇ ಸಾಕು.

ಅಲ್ಲಿಂದ ಮುಂದಿನ ವಿವರಣೆ ಅಂದರೆ, ಶಕ್ತಿಯ ಸಂಕ್ಷೋಭೆ, ಚಿಚ್ಛಕ್ತಿಯ ಆವಿರ್ಭಾವ, ನಾದ, ಬಿಂದು, ಕಲೆಗಳು; ಚಿನ್ನಾದ, ಚಿದ್ಬಿಂದು, ಚಿತ್ಕಲೆ, ಮೂಲಚಿತ್ತುಗಳಿಂದೊಡಗೂಡಿದ ಮಹಾಲಿಂಗದ ಉದಯ, ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ ಶಿವಸಾದಾಖ್ಯ,

ಈ ಪಂಚಸಾದಾಖ್ಯಗಳು, ಮಹಾಲಿಂಗದಿಂದ ಕಿಡಿಗಳೋಪಾದಿಯಲ್ಲಿ ಹೊರಟ ಅನಂತ ಆತ್ಮರುಗಳು, ಆತ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ......ಹೀಗೆ ಪಂಚಭೂತಗಳ ಉತ್ಪತ್ತಿ, ೩೬ ತತ್ವವಿವರಣೆ, ಅವುಗಳ ಪ್ರತಿಷ್ಠಾಪನೆಗೆ ಬೇಕಾದ ಪ್ರಮಾಣ ಈ ಎಲ್ಲ ದೃಷ್ಟಿಯಲ್ಲಿಯೂ ಆಗಮಗಳಿಗೂ ವಚನವಾಙ್ಮಯಕ್ಕೂ ಸಾಮ್ಯವಿದ್ದರೂ ಶರಣರು ಸ್ವತಂತ್ರವಿಚಾರದ ಒರೆಗಲ್ಲಿಗೆ ಹಚ್ಚಿ, ಅನುಭವದ ಆಗರದಲ್ಲಿಟ್ಟು, ಅದಕ್ಕೆ ಸಮ್ಮತವಾಗಿದ್ದರೆ ಒಪ್ಪಿಕೊಂಡಿರುವರು. ಎಷ್ಟೋ ವಿಚಾರಗಳಲ್ಲಿ ಅಂತರವೂ ಕಂಡುಬರುತ್ತದೆ. ತತ್ವನಿರೂಪಣೆಯಲ್ಲಿ ಕೆಲವರು ೨೫ಕ್ಕೆ ನಿಂತಿರುವುದನ್ನು ಕಾಣಬಹುದು.[೧] ಚನ್ನಬಸವಣ್ಣನವರು ಸೃಷ್ಟಿಯ ವಿಕಾಸ, ಸ್ವಸ್ವರೂಪವನ್ನು ಮರೆದ ಆತ್ಮರುಗಳ ಬಂಧನ ಮುಂತಾದ ವಿಷಯವಾಗಿ ವಿಶೇಷವಾಗಿ ವಿಚಾರಿಸಿರುವರು. ಅವರ ವಚನಗಳೂ ಕರಣ ಹಸಿಗೆ ಮುಂತಾದ ಗ್ರಂಥಗಳೂ ಈ ಮಾತಿಗೆ ಸಾಕ್ಷಿಯಾಗಿವೆ. ಆಗಮಗಳನ್ನು ಅನು ಸರಿಸಿ, ಆಧರಿಸಿ ವಿಚಾರಿಸಿದರೂ ಅಲ್ಲಿ ಅನೇಕ ಹೊಸ ವಿಷಯಗಳಿರುವುದನ್ನು ಕಾಣ ಬಹುದು.

ಕೊನೆಯಲ್ಲಿ ವೀರಶೈವದ ವೈಶಿಷ್ಟ್ಯವಡಗಿರುವುದು ಶಿವಯೋಗಸಾಧನೆಯಲ್ಲಿ, ಮತ್ತು ಆಚರಣೆಯಲ್ಲಿ. ಇವೆರಡರ ನಿರ್ಣಯವನ್ನೂ ಚನ್ನಬಸವಣ್ಣನವರು ಮಾಡಿರು ವುದರಿಂದ ಅವನ್ನು ವಿಚಾರಿಸಲಾಗುವುದು.

---

೧. ಮಹಾದೇವಿಯಕ್ಕನವರ ಸೃಷ್ಟಿಯ ವಚನ.

# ಆಚಾರನಿರ್ಣಯ

ಷಟ್‌ಸ್ಥಲ ಸಿದ್ಧಾಂತದ ಗುರಿ, ಕ್ರಿಯಾಜ್ಞಾನ ಸಾಮರಸ್ಯಸಾಧನೆ. ಆದುದರಿಂದ ಈ ತತ್ವಾನುಸಂಧಾನದಲ್ಲಿ ಆಚರಣೆಗೆ ಕೊನೆಯುವರೆಗೂ ಮಹತ್ವವಿದೆ. ಅಂಗಕ್ರೀಗಳು ಲಿಂಗಕ್ರೀಗಳಾದ ಮೇಲೆ ಸಹ ಆಚಾರ ನಡೆಯಲೇಬೇಕು. ಆಚಾರವೇ ಶರಣನ ಉಸಿರು; ಸುಜ್ಞಾನದ ಪರಿಮಳ. ಚನ್ನಬಸವಣ್ಣನವರು 'ನಿಜಾಚರಣೆಯ ನಿಲುಕಡೆ'ಯಲ್ಲಿ ನಿಂದವರು. ಸದ್ಗುರು ಬಸವಣ್ಣನವರನ್ನು ಅವರು ಕೂಡಲಚನ್ನಸಂಗನ ಮಹಾಮನೆ ಯಲ್ಲಿ 'ಸರ್ವಾಚಾರ ಸಂಪನ್ನ'ರೆಂದು ಕಾಣುವರು.[೧]

'ನಿಜಸುಖದ ರಾಜಾಧಿರಾಜ ಶಿವಯೋಗದ ನಿಲುಕಡೆಯೇ ಸರ್ವಾಚಾರ ಸಂಪತ್ತು'. ಈ ಶಿವಯೋಗ ಸಾಧನೆಯಲ್ಲಿ ಜ್ಞಾನಕ್ರಿಯೆಗಳೆರಡೂ ಒಂದುಗೂಡಿ ಸಾಗ ಬೇಕು. ಆದುದರಿಂದ ಶಿವಯೋಗದ ಹೊಲಬನರಿಯದ ಜಡಜೀವಿಗಳಿಗೆ ನಿಜಾಚರಣೆ ತಿಳಿವುದು ಕರಕಷ್ಟ. **'ಕುಱಿಬಲ್ಲುದೆ ರಸದಾಳಿ ಕಬ್ಬಿನ ರುಚಿಯ'** ಎಂದು ಚನ್ನ ಬಸವಣ್ಣನವರು ಕೇಳಿರುವರು. ಸುಜ್ಞಾನ ಸತ್ಕ್ರಿಯೆಗಳ ಈ ಸರಸ ಸಂಗವಂವನ್ನು, ಅರಿತು ಆಚರಿಸಿ ಅನುಭವಿಸಬಹುದಲ್ಲದೆ, ಇಂದ್ರಿಯಗಳಿಂದ ಗ್ರಹಿಸಲು ಸಾಧ್ಯವಿಲ್ಲ.

> **"ಆಚಾರವೆಂಬುದು ಅಗೋಚರ ನೋಡಯ್ಯ, ಮಾಡಿದಲ್ಲದೆ ಇಲ್ಲ;**
> **ಒಡಲುವಿಡಿದಾಡಿದಡೆ ಹಿಡಿಯಲಿಲ್ಲಯ್ಯಾ!**
> **ಇನಿಸುವನು ಅಲ್ಲವೆಂದು ಕಳೆದಿಪ್ಪ ಕೂಡಲ ಚನ್ನಸಂಗನ ಶರಣ॥**
> **ಬಸವಣ್ಣನೇ ಬಲ್ಲ ನೋಡಯ್ಯಾ ಪ್ರಭುವೇ॥"**[೨]

ಆಚಾರದ ಅರ್ಥವನ್ನು ಶರಣರು ಯಾವ ಎತ್ತರಕ್ಕೆ ಎತ್ತಿದರೆಂಬುದು ಇಲ್ಲಿ ವೇದ್ಯವಾಗುತ್ತದೆ. ಕರ್ಮದ ಲೇಪವನ್ನು ಕಳೆದು ಕ್ರಿಯೆಯ ಬೆಳಗನ್ನುಂಟುಮಾಡು ವುದೇ ಆಚಾರ.

ಕರ್ಮ, ಕ್ರಿಯೆ ಇವುಗಳ ಅಂತರವೇನು? ಬಂಧಕಾರಿಯಾದುದು ಕರ್ಮ; ವಿಮುಕ್ತಶೀಲವಾದುದು ಕ್ರಿಯೆ. ಅರಿತು ಮಾಡುವುದು ಕ್ರಿಯೆ; ಅರಿಯದೆ ಮಾಡು ವುದು ಕರ್ಮ.

'ಮರ್ಮವನಱಿಯದೆ ಮಾಡುವ ಮಾಟ, ಸಯದಾನದ ಕೇಡು; ಕರ್ಮದ ಬೆಳಸು.'[೩]

ಅರಿವಿನಲ್ಲಿ ಹೊರಹೊಮ್ಮುವ ಕ್ರಿಯೆಯಿಂದ ಆತ್ಮಸಾಕ್ಷಾತ್ಕಾರವಾಗುತ್ತದೆ. ಅಜ್ಞಾನದಲ್ಲಿ ಮಾಡಿದ ಕರ್ಮದಿಂದ ಆತ್ಮನಿಗೆ ಬಂಧವಾಗುತ್ತದೆ. ಕರ್ಮದಿಂದ ಅಜ್ಞಾನ ಚಿಗುರುತ್ತದೆ; ಕ್ರಿಯೆಯಿಂದ ಸುಜ್ಞಾನ ಸ್ಫುರಿಸುತ್ತದೆ. 'ಮರ್ಮವಱಿದು ಮಾಡು ವಂಗೆ ಕರ್ಮವಿಲ್ಲ.'[೪] ಬಂಧವಿಲ್ಲ.

---

೧. ಚಬವ. ೧೮. ೨. ಚಬವ. ೮೩. ೩. ಚಬವ. ೭೦೯. ೪. ಚಬವ. ೮೨.

ಆಚರಣೆಯಲ್ಲಿ ಕ್ರಿಯಾಜ್ಞಾನಗಳ ಸಾಮರಸ್ಯವಿರುತ್ತದೆ, 'ಕ್ರಿಯೆಯೆ ಜ್ಞಾನ; ಆ ಜ್ಞಾನವೇ ಕ್ರಿಯೆ.

**"ಜ್ಞಾನವೆಂದಡೆ ತಿಳಿವುದು;**
**ಕ್ರಿಯೆಯೆಂದಡೆ ತಿಳಿದಂತೆ ಮಾಡುವುದು.**
**ಪರಸ್ತ್ರೀಯ ಭೋಗಿಸಬಾರದೆಂಬುದೇ ಜ್ಞಾನ;**
**ಅದರಂತೆ ಆಚರಿಸುವುದೆ ಕ್ರಿಯೆ.**
**ಅಂತು ಆಚರಿಸದಿದ್ದಡೆ,**
**ಅದು ಅಜ್ಞಾನ [ಕರ್ಮ] ನೋಡಾ, ಕೂಡಲಚನ್ನಸಂಗಮದೇವ"**೧

ಇಲ್ಲಿ ವೀರಶೈವದ ಜ್ಞಾನ, ನಿಷ್ಕ್ರಿಯಾತ್ಮಕವಾದುದಲ್ಲವೆಂಬುದು ಗಮನಾರ್ಹ. ತನ್ನ ತಾನರಿಯದ ಸ್ಥಿತಿಯಲ್ಲಿದ್ದ ಶೂನ್ಯ ನಿಶ್ಶೂನ್ಯದಲ್ಲಿ ಅರಿವಿನ ಕಿರಣ ಸ್ಫುರಣವಾದೊಡನೆ ಅಲ್ಲಿ ಕ್ರಿಯೆ ಮತ್ತು ಆನಂದಗಳು ಆವಿರ್ಭವಿಸುತ್ತವೆ. ಆದುದರಿಂದ ಅರಿವು ಕ್ರಿಯಾತ್ಮಕವಾಗಿಯೇ ಇರುತ್ತದೆ. ನಿಜದರಿವು ಸರ್ವಶೂನ್ಯವಾಗಿರುವುದೇನೋ ನಿಜ. ಆದರೆ, ಅದರೀಚೆಯ ಅರಿವೆಲ್ಲ ಕ್ರಿಯೆಯೊಡಗೂಡಿಯೇ ನಡೆಯಬೇಕು. ಶಿವಶಕ್ತಿ, ಯರಂತೆ ಅವೆರಡಕ್ಕೂ ಅವಿನಾಭಾವ ಸಂಬಂಧವಿದೆ. ಬಹಿರಂಗದಲ್ಲಿ ಕ್ರಿಯೆಯ ರಚನೆ; ಅಂತರಂಗದಲ್ಲಿ ಅರಿವಿನ ಸ್ವಾನುಭಾವ ನಿರಂತರ ನಡೆದ ಶರಣನು.

**'ವೇದಾಂತಿಗಳಂತೆ ಜ್ಞಾನಬದ್ಧನಲ್ಲ;**
**ಮುನಿಗಳಂತೆ ಕ್ರಿಯಾಬದ್ಧನಲ್ಲ."**

ವೇದಾಂತಿಗಳ ಜ್ಞಾನ, ಮುನಿಗಳ ಕರ್ಮ ಒಂದು ದೃಷ್ಟಿಯಿಂದ ಜಡ, ಅವಿನಾಭಾವದಿಂದೊಡಗೂಡಿದ ಶರಣನ ಜ್ಞಾನ ಕ್ರಿಯೆಗಳು ಜಡವಲ್ಲ; ಅವಕ್ಕೆ ಲೇಪನವಿಲ್ಲ. 'ಜ್ಞಾನ ಅಜಡ; ಕ್ರಿಯೆ ಜಡ' ಎಂದು ಹೇಳುವವರನ್ನು ಚನ್ನಬಸವಣ್ಣನವರು ಹೀಗೆ ಖಂಡಿಸಿರುವರು:

**"ಕ್ರಿಯೆ ಜಡವೆಂಬರು ಜ್ಞಾನ ಅಜಡವೆಂಬರು ಅದೆಂತಯ್ಯಾ!**
**ನೀತಿಯ ಹೇಳಿದುದು ಜಡವೆ?**
**ಕಷ್ಟವಿಲ್ಲದೆ ಬೊಗಳಿ ಭೋಗಿಸಿ,**
**ಭವಕ್ಕೆ ಹೋಗುವುದು ಅಜಡವೆ?**
**ಕ್ರಿಯಾಜ್ಞಾನವೆಂಬ ಉಭಯಶಬ್ದದರ್ಥವನರಿಯದೆ**
**ಕಂಡಕಂಡ ಹಾಗೆ ಬೊಗಳುವ ಹೊಲೆಮಾದಿಗರನು ಏನೆಂಬೆ**
**ಕೂಡಲಚನ್ನಸಂಗಮದೇವಾ."**೨

ಅರಿವಿನಿಂದ ಆವಿರ್ಭವಿಸಿ ಸರ್ವಾರ್ಪಣ-ಭಾವನೆಯಿಂದ ಪೂರೈಸಿದ ಕ್ರಿಯೆ ಕಾಯಕವಹುದಲ್ಲದೆ ಕರ್ಮವಾಗಲಾರದು. ಇಂತಹ ಕಾಯಕವು ಕೈಲಾಸವಲ್ಲದೆ ಮತ್ತೆ

---

೧. ಚಬವ. ೧೧೧೭. ೨. ಚಬವ ೪೫೬.

ಏನು? "ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು."[1]

ಸದಾಚಾರವೇ ಕಾಯಕ. ಕಾಯಕಕ್ಕೆ ಸದಾಚಾರ ಬೇಕಲ್ಲದೆ, ಡಾಂಭಿಕವೃತ್ತಿಯಲ್ಲ. ಭಕ್ತಿ ಜ್ಞಾನ ವಿರಹಿತರಾಗಿ ತೋರಿಕೆಗೆ ಮಾಡುವುದೆಲ್ಲ ಕರ್ಮಠ ವೃತ್ತಿ, ಸತ್ ಶೀಲವಲ್ಲ; ಸದಾಚಾರವಲ್ಲ. ಈ ಕರ್ಮಠತನವನ್ನು ಚನ್ನಬಸವಣ್ಣನವರು ಕಟುವಾಗಿ ಖಂಡಿಸಿರುವರು:

"ಸುಖವನರಿಯದ ಕಾರಣ ಹೆಂಗಸು ಸೂಳೆಯಾದಳು;
ಶಿವಲಿಂಗವನರಿಯದ ಕಾರಣ ಭಕ್ತ ಶೀಲವಂತನಾದ"[2]
"ಅಕ್ಕಸಾಲೆಯ ಭಕ್ತಿ ಅಗ್ಗಿಷ್ಟಿಯಲ್ಲಿ ಹೋಯಿತ್ತು;
ಶೀಲವಂತನ ಭಕ್ತಿ ಶಂಕೆಯಲ್ಲಿ ಹೋಯಿತ್ತು;"[3]
"ವ್ರತಸ್ಥನರಿವು ಪ್ರಪಂಚಿನಲ್ಲಿ ಹೋಯಿತ್ತು;
ಭಾಷೆವಂತನರಿವು ಸಂಚಲದಲ್ಲಿ ಹೋಯಿತ್ತು;
ನೇಮಸ್ಥನರಿವು ಸಂದೇಹದಲ್ಲಿ ಹೋಯಿತ್ತು;
ಶೀಲವಂತನರಿವು ಸೂತಕದಲ್ಲಿ ಹೋಯಿತ್ತು;
ಜಂಗಮದರಿವು ಬೇಡಿದಲ್ಲಿ ಹೋಯಿತ್ತು;
ಭಕ್ತನರಿವು ಮಾಡಿಹೆನೆಂಬಲ್ಲಿ ಹೋಯಿತ್ತು;
ಪ್ರಸಾದಿಯರಿವು ರುಚಿಯಲ್ಲಿ ಹೋಯಿತ್ತು;
ಇಂತಿವು ಷಡುಸ್ಥಲ ನಿರ್ಣಯಕ್ಕೆ ಸಲ್ಲದೆ ಹೋದವು,
ಕೂಡಲಚನ್ನಸಂಗಯ್ಯನಲ್ಲಿ ಶರಣನೆಂತಪ್ಪನು."[4]

ದೇವ ದೇವನಪ್ಪ ಮಹಾದೇವನನ್ನು ಲಿಂಗರೂಪದಿಂದ ಅಂಗದಲ್ಲಿ ಧರಿಸಿ ಪರಿಶುದ್ಧರಾದೆವೆಂದು ತಿಳಿಯದೆ, ವೀರಶೈವ ಕ್ರಮಾಚರಣೆ ಅಳವಡದೆ, ಇಂಥ ಶೀಲವಂತರು ವ್ರತಗೇಡಿಗಳಾಗಿ ಸತ್ಯಶೀಲದ ಹೊಲಬನರಿಯದೆ ಕೆಟ್ಟುಹೋಗುವರು. ಇವರು 'ಜಲವನೆ ಹೊಕ್ಕು ಕನ್ನವನ್ನಿಕ್ಕಿ: ಅಗ್ಗವಣಿಯ ತಂದು ಮಜ್ಜನಕ್ಕೆ ನೀಡುವ ಹಗಲುಗಳ್ಳರು.'[5] ಇಂಥ ಶೀಲವಂತರಿಗೆ ಶಿವನು ಮೆಚ್ಚ: ಅವರು ಲಿಂಗ, ವಿಭೂತಿ, ರುದ್ರಾಕ್ಷಿ ಧರಿಸಿದರೂ ಫಲವಿಲ್ಲ. 'ಲಿಂಗ ವಿಭೂತಿ, ರುದ್ರಾಕ್ಷಿ ಇವ ಮಾರಾಟಕ್ಕೆ ಹೇರಿಕೊಂಡು ತಿರುಗುವ ಎತ್ತು ಕತ್ತೆಗೆ ಮುಕ್ತಿಯುಂಟೆ?'[6]

ಶೀಲವೆಂದಡೆ ಸದಾಚಾರ. 'ಶೀಲವಿನ್ನಾವುದೆಂದಡೆ: ಅಶನ ಅಜಿತು, ವ್ಯಸನ ನಿಂದು, ವ್ಯಾಪ್ತಿಯಳಿದು, ಅಷ್ಟಮದವೆಲ್ಲ ನಷ್ಟವಾದಲ್ಲದೆ ಕೂಡಲಸಂಗಮದೇವರಲ್ಲಿ ಶೀಲವಿಲ್ಲ'[7] ಆದ್ದರಿಂದ 'ಪಂಚೇಂದ್ರಿಯ, ಸಪ್ತಧಾತು, ಅರಿಷಡ್ವರ್ಗ, ಅಷ್ಟಮದಂಗಳ ಕೊಂದಾತನೆ ಶೀಲವಂತ'[8] ಒಟ್ಟಿಗೆ ಹೇಳುವುದಾದರೆ, ಕಾಮಕ್ರೋಧಾದಿಗಳನ್ನು ಜಯಿಸದೆ, ಅಷ್ಟವಿಧಾರ್ಚನೆ ಷೋಡಶೋಪಚಾರ ಮಾಡುವುದು ಸತ್ಯಶೀಲವಾಗಲಾರದು.

೧. S. ೧೨-೧. ೨. ಚಬವ. ೨೧೦. ೩. ಚಬವ. ೭೩. ೪. ಚಬವ. ೧೦೯೯.
೫. ಚಬವ. ೫೯೨. ೬. ಚಬವ. ೨೧೯. ೭. ಚಬವ. ೫೧೯. ೮. ಚಬವ. ೧೧೧೩

ಚನ್ನಬಸವಣ್ಣನವರು ಈ ರೀತಿಯಾಗಿ ಸತ್ಯಶೀಲವನ್ನು ಪ್ರತಿಪಾದಿಸುತ್ತ; 'ಸ್ನಾನ ಸಂಧ್ಯಾವಂದನೆ ಜಪತಪ ಹೋಮಕ್ರಿಯೆಗಳು ನಿಮ್ಮ ಶರಣಂಗೆ ನೀವಿಲ್ಲದನ್ಯವಿಲ್ಲಾಗಿ, ಇಲ್ಲಯ್ಯಾ. ಇಂತಪ್ಪ ಭಕ್ತಿಯನಱಿಯದೆ ಹರಿ ಬ್ರಹ್ಮಾದಿಗಳು ಬಂಧನಕ್ಕೊಳಗಾದರು ಈ ಪಥವನಱಿಯದ ಕಾರಣ'[1] ಎಂದು ಹೇಳಿ, ಶರಣ ಧರ್ಮಕ್ಕೆ ಸಲ್ಲದೆ ಇರುವ ಪೂರ್ವ ಮೀಮಾಂಸಕಾದಿಗಳು ಹಾಕಿಕೊಟ್ಟ ಕರ್ಮಠತನವನ್ನು ಅಲ್ಲಗಳೆದಿದ್ದಾರೆ. ಯಾಕೆಂದರೆ:

**"ತಪವೆಂಬುದು ಬಂಧನ, ನೇಮವೆಂಬುದು ತಗಹು;**
**ಶೀಲವೆಂಬುದು ಸೂತಕ, ಭಾಷೆಯೆಂಬುದು ಪ್ರಾಣಘಾತಕ;**
**ಇಂತೀ ಚತುರ್ವಿಧದೊಳಗಿಲ್ಲ ಕೂಡಲಚನ್ನಸಂಗಾ ಲಿಂಗೈಕ್ಯವು."**[2]

ಈ ರೀತಿಯ ಲಿಂಗೈಕ್ಯವಿರುವುದು ಸರ್ವಾಚಾರ ಸಂಪತ್ತಿನಲ್ಲಿ.

ಅಷ್ಟವಿಧಾರ್ಚನೆ ಷೋಡಶೋಪಚಾರಗಳನ್ನು ವೀರಶೈವವು ತ್ಯಜಿಸಿದೆಯೆಂದರ್ಥ ವಲ್ಲ. ಅದು ಬೇಕು. 'ನಾನು ನೀನೆಂಬ ಭ್ರಾಂತುಳ್ಳನ್ನಕ್ಕ ಅಷ್ಟವಿಧಾರ್ಚನೆ ಷೋಡ ಶೋಪಚಾರವ ಮಾಡಬೇಕು. ಕೂಡಲ ಚನ್ನ ಸಂಗಯ್ಯ ಇವ ಮಾಡದಿದ್ದರೆ ನಾಯಕ ನರಕ' ಎಂದು ಚನ್ನಬಸವಣ್ಣನವರು ಅಭಿಪ್ರಾಯಪಟ್ಟಿರುವರು. ಆದರೆ, ಈ ಅರ್ಚನೆ ಉಪಚಾರಗಳು ಸುಜ್ಞಾನ, ಸದ್ಭಕ್ತಿ, ಯುಕ್ತವಾಗಿರುತ್ತವೆ. ಆದುದರಿಂದ ಅದು ಸದಾಚಾರ.

ವೀರಶೈವದ ಪ್ರಕಾರ ಕ್ರಿಯೆಯಲ್ಲಿಯ ದ್ವೈತಭಾವನೆ, ನಿರವಯಸ್ಥಲವನ್ನೈದುವ ವರೆಗೆ ಇದ್ದೇ ಇರುತ್ತದೆ. ಚನ್ನಬಸವಣ್ಣನವರು ಈ ಮಾತನ್ನು ಒತ್ತಿ ಹೇಳುತ್ತಾರೆ:

**'ಅಯ್ಯಾ, ತನುಶುದ್ಧನಾಗಿ ಇಷ್ಟಲಿಂಗವ ಪೂಜಿಸಬೇಕು.**
**ಮನಶುದ್ಧನಾಗಿ ಪ್ರಾಣಲಿಂಗವ ಧ್ಯಾನಿಸಬೇಕು.**
**ಭಾವಶುದ್ಧನಾಗಿ ಭಾವಲಿಂಗವ ಭಾವಿಸಬೇಕು.**
**ಇಂತೀ ತ್ರಿವಿಧವನಱಿಯದೆ,**
**'ಲಿಂಗದೇಹೀ ಸದಾ ಶುಚಿಃ' ಎಂಬೊಂದು ವಾಕ್ಯವನೆ ಮುಂದುಮಾಡಿ,**
**'ಕ್ರಿಯಾದ್ವೈತಂ ನ ಕರ್ತವ್ಯಂ' ಎಂಬ ವಾಕ್ಯ ಮಱೆಮಾಡಿ,**
**ಸ್ನಾನ ಪೂಜಾದಿ ಸತ್ಕ್ರಿಯಾಸಂಪನ್ನನಾಗದೆ,**
**ಶಮ ದಮಾದಿ ಸದ್ಗುಣಸಂಪತ್ತಿಯ ಪಡೆಯದೆ,**
**ನಿತ್ಯ ನಿರ್ಮಲತ್ವ ನೆಲೆಯಾಗದೆ,**
**ಅನುಶುದ್ಧನಾದೆನೆಂಬ ಕ್ರಿಯಾದ್ವೈತಿಯಾದ ಪಾತಕನ**
**ನಾಯಕ ನರಕದಲ್ಲಿಕ್ಕುವ, ನಮ್ಮ ಕೂಡಲಚನ್ನಸಂಗಮದೇವ'**[3]

ಇಲ್ಲಿ ಚನ್ನಬಸವಣ್ಣನವರು ಲಿಂಗವೇ ದೇಹವಾದ ಕಾರಣ, ತಾನೇ ಲಿಂಗ, ಆದುದರಿಂದ ಶುಚಿಯೆಂಬ ಅದ್ವೈತ ತತ್ವಕ್ಕೇನೆ ಅಂಟಿಕೊಂಡು ಕ್ರಿಯೆಯಲ್ಲಿ ಅದ್ವೈತವನ್ನು ಬಳಸದೆ, ದ್ವೈತಭಾವವನ್ನು ಮರೆಯಕೂಡದು ಎಂದು ಹೇಳುತ್ತಾರೆ. ಹೀಗೆ

---

೧. **ಚಬವ.** ೫೫೪. ೨. ಚಬವ. ೧೧೭೦. ೩. ಚಬವ. ೧೪೪.

"ಕ್ರಿಯಾದ್ವೈತಂ ನ ಕರ್ತವ್ಯಂ। ಭಾವಾದ್ವೈತಂ ಸಮಾಚರೇತ್"

ಎಂಬ ವೀರಶೈವಾಗಮದ ನುಡಿಯಂತೆ. ವೀರಶೈವನು ಕ್ರಿಯೆಯಲ್ಲಿ ದ್ವೈತವನ್ನೂ ಭಾವದಲ್ಲಿ ಅದ್ವೈತವನ್ನೂ ಅಳವಡಿಸಿಕೊಳ್ಳಬೇಕು. ಅದನ್ನೇ. ನಿಜಗುಣ ಶಿವಯೋಗಿಗಳು 'ಬಳಸದಿರದ್ವೈತವನು ಬಾಹ್ಯದೊಳು......' ಎಂದು ಹೇಳುತ್ತಾರೆ. ಈ ರೀತಿಯಾಗಿ ವೀರಶೈವದಲ್ಲಿ ಅಂತರಂಗದಲ್ಲಿ ಅದ್ವೈತ. ಬಹಿರಂಗದಲ್ಲಿ ದ್ವೈತ ತತ್ವಗಳು ಏಕಕಾಲದಲ್ಲಿ ಆಚರಣೆಯಲ್ಲಿರುತ್ತವೆ. ವೀರಶೈವ ಈ ದ್ವೈತಾದ್ವೈತ ವಿಶಿಷ್ಟವಾದುದು. ಒಂದು ಲಿಂಗ. ಲೀಲೆಗಾಗಿ ಅಂಗವೆಂದು. ಲಿಂಗವೆಂದು ಎರಡಾಗಿದೆ. ಅಲ್ಲಿರುವ ಪೂಜ್ಯ ಪೂಜಕ ವೃತ್ತಿ ವಿಶಿಷ್ಟವಾದುದು. ಪೂಜೆ ಮಾಡುವಾತನೂ ಮಾಡಿಸಿಕೊಂಬಾತನೂ ತಾನೇ ಆದುದರಿಂದ ಆ ಪೂಜೆ ಅದ್ವೈತದಲ್ಲಿ ದ್ವೈತ. ದ್ವೈತದಲ್ಲಿ ಅದ್ವೈತ: ಆದುದರಿಂದ ಸದ್ಭಕ್ತನು ಕ್ರಿಯಾಚರಣೆಯಲ್ಲಿ ನಿರತನಾಗಿ, ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಲಿಂಗವನ್ನು ಅರ್ಚಿಸಿ. ಪೂಜಾದಿ ಸತ್ಕ್ರಿಯಾಸಂಪನ್ನನಾಗಬೇಕು. ಈ ರೀತಿಯ ಅಷ್ಟವಿಧಾರ್ಚನೆ ಷೋಡಶೋಪಚಾರವು ಲಿಂಗೈಕ್ಯಕ್ಕೆ ಒಳ್ಳೆಯ ಉತ್ಕೃಷ್ಟ ಸಾಧನೆ. ಅಂತೆಯೇ ಅದನ್ನು ಕುರಿತು ಚನ್ನಬಸವಣ್ಣನವರು ಹೀಗೆ ಹೇಳುತ್ತಾರೆ:

**'ಅಷ್ಟವಿಧಾರ್ಚನೆ ಷೋಡಶೋಪಚಾರ ಮಾಡುವೆನಯ್ಯಾ,**
**ಸಕಲಕ್ಷೇಮದಿಂದ ನಡೆದು ನಿಮ್ಮಲ್ಲಿಗೆ ಸಾರುವೆನು ಕೂಡಲಚನ್ನಸಂಗಮದೇವ'**[೧]

ಈ ಅಷ್ಟವಿಧಾರ್ಚನೆ ಷೋಡಶೋಪಚಾರ ವೀರಶೈವ ಕ್ರಮಾಚರಣೆಯಲ್ಲಿ ನಡೆಯಬೇಕು. ಚನ್ನಬಸವಣ್ಣನವರು ವೀರಶೈವಾಚಾರವನ್ನು ತಮ್ಮ ವಚನದಲ್ಲಿ ಹೀಗೆ ನಿರ್ದಿಷ್ಟಪಡಿಸುತ್ತಾರೆ:

**"......ಜಂಗಮದ ಪಾದತೀರ್ಥವ**
**ಲಿಂಗಕ್ಕೆ ಮಜ್ಜನಕ್ಕೆರೆದು, ಪ್ರಸಾದವ ಲಿಂಗಕ್ಕೆ ನೈವೇ**
**ದ್ಯವ ಸಮರ್ಪಿಸಿ, ಭೋಗಿಸುವಾತನೇ ಸದ್ಭಕ್ತ;**
**ಆತನೆ ಮಾಹೇಶ್ವರ; ಆತನೆ ಪ್ರಸಾದಿ;**
**ಆತನೆ ಪ್ರಾಣಲಿಂಗಿ; ಆತನೆ ಶರಣ; ಆತನೆ ಐಕ್ಯ.**
**ಇಂತಪ್ಪ ಷಟ್‌ಸ್ಥಲ ಬ್ರಹ್ಮಿಗೆ ನಮೋ ನಮೋ ಎಂಬೆ".**

**ಇಂತಲ್ಲದೆ, ಜಂಗಮದ ಪಾದತೀರ್ಥಪ್ರಸಾದ ರಹಿತನಾಗಿ ಆವನಾನೊಬ್ಬನು ತನ್ನ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರೀಯಿಂದ ಪೂಜೆ ಮಾಡುವಲ್ಲಿ, ಅವನು ಶುದ್ಧ ಶೈವನು. ಅವನಿಗೆ ಮುಕ್ತಿಯಿಲ್ಲ ಕಾಣಾ, ಕೂಡಲ ಚನ್ನಸಂಗಮ ದೇವಾ."**[೨]

ಹೀಗೆ ಚನ್ನಬಸವಣ್ಣನವರು ಶೈವ ಪದ್ಧತಿ ಮತ್ತು ವೀರಶೈವ ಪದ್ಧತಿಯಲ್ಲಿಯ ತಾರತಮ್ಯವನ್ನು ಸೂಕ್ಷ್ಮವಾಗಿ ತಿಳಿಸುತ್ತಾರೆ. ಈ ಅಷ್ಟವಿಧಾರ್ಚನೆ, ಷೋಡಶೋಪಚಾರ

---

೧. ಚಬವ. ೨೨೪. ೨. ಚಬವ. ೬೨೬.

ಗಳನ್ನು, ಪಂಚಕ್ಲೇಶ, ಅರಿಷಡ್ವರ್ಗಾದಿಗಳನ್ನು ಅಳಿದು ಆಚರಿಸಬೇಕು. ಅದೇ ನಿಜಾಚರಣೆ.

**"ಆಶೆ ಅಳಿಯದೆ, ರೋಷ ಬಿಡದೆ,**
**'ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿದವರೆಲ್ಲ ಲಿಂಗಾರ್ಚಕರಪ್ಪರೆ? ಅಲ್ಲ.**
**ಇಂತು ಲಾಂಛನ ಹೊತ್ತು ಕಾಂಚನಕ್ಕೆ ಕೈನೀಡುವ**
**ಲಾಂಛನಭಂಡರ ಮೆಚ್ಚುವನೆ ನಮ್ಮ ಕೂಡಲ ಚನ್ನಸಂಗಮದೇವ."[೧]**

ಅಂಥವರನ್ನು ಶರಣರೂ ಮೆಚ್ಚುವದಿಲ್ಲ. ಹೀಗೆ ವೀರಶೈವಾಚರಣೆ ನಿಜಾಚರಣೆ, ಅಲ್ಲಿ ತಿಲಮಾತ್ರವೂ ಡಾಂಭಿಕತನಕ್ಕೆ ಅವಕಾಶವಿಲ್ಲ.

ಇದು ಆಚರಣೆಯ ತತ್ವ ವಿವೇಚನೆ. ಈ ತತ್ವ, ಕೃತಿಯಲ್ಲಿ ಅಳವಡುವ ರೀತಿ ಹೀಗಿದೆ:

ಮೊತ್ತಮೊದಲು ಪೂರ್ವಾಶ್ರಯವಳಿಯಬೇಕು. ಆಗ ಭವಿ ಭಕ್ತನಾಗುತ್ತಾನೆ. 'ಅಂಗಭವಿಗೆ ಆಚಾರನಾಸ್ತಿ'[೨] ಎಂದು ಹೇಳಿದುದರಿಂದ ಅಂಗದ ಭವಿತನವನ್ನು ಮೊದಲು ಕಳೆಯಬೇಕು. ತಾತ್ವಿಕದೃಷ್ಟಿಯಿಂದ ಅಂಗದ ಪೂರ್ವಾಶ್ರಯ ಕಳೆಯುವುದು ಒಂದು ಮಹತ್ವದ ವಿಷಯ. ಪೂರ್ವಜನ್ಮಸಿದ್ಧಾಂತದನ್ವಯ (Doctrine of Trans-migration) ಹಿಂದಿನ ಜನ್ಮದ ಕರ್ಮಫಲ ಲಿಂಗದೇಹದೊಡನೆ ಇಂದಿನ ಜನ್ಮಕ್ಕೆ ಬಂದಿರುವುದರಿಂದ, ಜೀವಾತ್ಮನು ಆ ಪೂರ್ವಜನ್ಮದ ಎಲ್ಲ ರೀತಿಯ ಬಂಧನರೂಪವಾದ ಸಂಸ್ಕಾರಗಳನ್ನು (ಆಶ್ರಯಗಳನ್ನು) ಹೊಂದಿರುತ್ತಾನೆ. ಆ ಹಿಂದಿನ ಜನ್ಮದ ಪೂರ್ವಾಶ್ರಯಗಳು ಜೀವಾತ್ಮನನ್ನು ಈ ಜನ್ಮದಲ್ಲಿ ಬಂಧನದಲ್ಲಿಡುತ್ತವೆ. ಆಗ ಆ ಜೀವಾತ್ಮನಿಗೆ ಸ್ವಾತಂತ್ರ್ಯವಿಲ್ಲ. ಇಂದಿನ ಜನ್ಮದ ಸುಸಂಸ್ಕಾರದಿಂದ ಅವನಲ್ಲಿ ಸುವಿಚಾರ ಹುಟ್ಟಿ ಸುಜ್ಞಾನವನ್ನು ಪಡೆಯಬೇಕೆಂದು ಇಚ್ಛಿಸಿದರೆ, ಆ ಪೂರ್ವಾಶ್ರಯಗಳು ಅವನನ್ನು ಬಂಧನದಿಂದ ಹೊರಗೆ ಬಿಡವು. ಆದುದರಿಂದ ಬಂಧರೂಪವಾದ ಮಲವನ್ನು ಹರಿವುದು ಅವಶ್ಯವೆಂದು ವೀರಶೈವ ಸಿದ್ಧಾಂತ ಸ್ಪಷ್ಟಪಡಿಸುತ್ತದೆ. ಕಾಯದ ಪೂರ್ವಾಶ್ರಯ ಕಳೆಯುವ ಪರಿಯನ್ನು ಚನ್ನಬಸವಣ್ಣನವರು ಹೀಗೆ ಹೇಳುತ್ತಾರೆ:

**"ಕಾಯದ ಪೂರ್ವಾಶ್ರಯ ಶ್ರೀಗುರುವಿನಿಂದ ಹೋಹುದು;**
**ಲಿಂಗದಿಂದ ಹೋಹುದು.**
**ಇಂದ್ರಿಯಗಳ ಪೂರ್ವಾಶ್ರಯ ಶ್ರೀಗುರುವಿನಿಂದ ಹೋಹುದು;**
**ಲಿಂಗದಿಂದ ಹೋಹುದು.**
**ತನುವಿನಿಂದಲಾಹದು; ತನುವಿನಿಂದ ಹೋಹದು.**
**ಕಾಲಚಕ್ರ, ಕರ್ಮಚಕ್ರ, ನಾದಚಕ್ರ, ಬಿಂದುಚಕ್ರವುಳ್ಳನ್ನಕ್ಕರ,**
**ಕೂಡಲಚನ್ನಸಂಗಯ್ಯನಲ್ಲಿ ಶರಣನೆನಿಸಬಾರದು."[೩]**

ಹೀಗೆ ಶ್ರೀಗುರುವಿನಿಂದ ಲಿಂಗಧಾರಣ ಮಾಡಿಸಿ; ಕಾಯದ ಪೂರ್ವಾಶ್ರಯವನ್ನು ಕಳೆಯುವುದು ವೀರಶೈವಾಚರಣೆಯ ಮೊತ್ತಮೊದಲ ಸಂಸ್ಕಾರ. ಅದು ಇಷ್ಟಲಿಂಗಧಾರಣ

೧. ಚಬವ ೬೨೭. ೨. ಚಬವ. ೧೦೦. ೩. ಚಬವ. ೮೬೦.

ರೂಪವಾಗಿದೆ. ತಾತ್ವಿಕದೃಷ್ಟಿಯಿಂದ ಈ ಇಷ್ಟಲಿಂಗ ಜೀವನಲ್ಲಿ ಹುದುಗಿರುವ ಚಿತ್ಕಳೆಯ ಸ್ವರೂಪು. ಒಳಗೆ ಇರುವ ಈ ಲಿಂಗಕಳೆಯನ್ನು ಹಸ್ತಮಸ್ತಕಸಂಯೋಗದಿಂದ ಬಹಿಷ್ಕರಿಸಿ, ಗುರುಗಳು ಶಿಷ್ಯನ ಕರಸ್ಥಲಕ್ಕೆ ಕೊಡುವ ಕುರುಹೇ ಈ ಇಷ್ಟಲಿಂಗ. ಈ ಇಷ್ಟಲಿಂಗದ ಮುಖಾಂತರ ಗುರುಗಳು ಶಿಷ್ಯನಿಗೆ ಆತನ ಸ್ವರೂಪಜ್ಞಾನಮಾಡಿ ಕೊಡುವುದರಿಂದ ಶಿಷ್ಯನ ಸರ್ವೇಂದ್ರಿಯಗಳು ಸಹ ಲಿಂಗಸ್ವರೂಪವನ್ನು ಹೊಂದುತ್ತವೆ. ಆಗ ಅವನ ಘ್ರಾಣೇಂದ್ರಿಯದಲ್ಲಿ ಆಚಾರಲಿಂಗ. ರಸನೇಂದ್ರಿಯದಲ್ಲಿ ಗುರುಲಿಂಗ. ನೇತ್ರೇಂದ್ರಿಯದಲ್ಲಿ ಶಿವಲಿಂಗ. ತ್ವಗಿಂದ್ರಿಯದಲ್ಲಿ ಜಂಗಮಲಿಂಗ. ಶ್ರೋತ್ರೇಂದ್ರಿಯದಲ್ಲಿ ಪ್ರಸಾದಲಿಂಗ. ಹೃದಯದಲ್ಲಿ ಮಹಾಲಿಂಗವಳವಡುತ್ತವೆ. ಸದ್ಗುರುವು ಈ ರೀತಿಯಾಗಿ ಸ್ಥೂಲ ಶರೀರಕ್ಕೆ ಇಷ್ಟಲಿಂಗಸಂಬಂಧವನ್ನುಂಟುಮಾಡಿ ಈ ಇಷ್ಟಲಿಂಗಕ್ಕೂ ಸೂಕ್ಷ್ಮಶರೀರದಲ್ಲಿರುವ ಪ್ರಾಣಲಿಂಗಕ್ಕೂ, ಕಾರಣ ಶರೀರದಲ್ಲಿರುವ ಭಾವಲಿಂಗಕ್ಕೂ ಇರುವ ಸಂಬಂಧವನ್ನು ಶಿಷ್ಯನಿಗೆ ತಿಳಿಯಪಡಿಸುತ್ತಾನೆ. ಆದುದರಿಂದ ಸ್ಥೂಲಶರೀರದಲ್ಲಿ ನಡೆಯುವ ಜಾಗ್ರಾವಸ್ಥೆಯ ಕ್ರೀಗಳು; ಸೂಕ್ಷ್ಮಶರೀರದಲ್ಲಿ ನಡೆಯುವ ಸ್ವಪ್ನಾವಸ್ಥೆಯ ಕ್ರೀಗಳು ಮತ್ತು ಕಾರಣಶರೀರದಲ್ಲಿ ನಡೆಯುವ ಸುಷುಪ್ತಾವಸ್ಥೆಯ ಕ್ರೀಗಳು. ಸಾಕ್ಷಾತ್ ಲಿಂಗಕ್ರೀಗಳಾಗಿ ಪರಿಣಮಿಸುತ್ತವೆ. ಹೀಗೆ ಅಂಗಕ್ರೀಗಳೆಲ್ಲ ಲಿಂಗಕ್ರೀಗಳಾಗಿ ಅಂಗಾಶ್ರಯವಳಿದು ಲಿಂಗಾಶ್ರಯ ಹೊಂದುವುದರಿಂದ ಪೂರ್ವಾಶ್ರಯವಳಿದು ಸಾಧಕ ಪರಿಶುದ್ಧನಾಗುತ್ತಾನೆ. ಲಿಂಗವಾಗಿ ಲಿಂಗವನ್ನು ಪೂಜಿಸುವ ಈ ಇಂಗಿತ ವೀರಶೈವಾನುಭವಮಂಟಪದ ತಳಹದಿ; ಅಡಿಗಲ್ಲು.

ಲಿಂಗಾಶ್ರಯದಿಂದ ಅಂಗಾಶ್ರಯವನ್ನು ಅಳಿಯುವ ಈ ತತ್ವದ ಮೇರೆಗೆ ವೀರಶೈವರಲ್ಲಿ ಗರ್ಭಕ್ಕೆ ಲಿಂಗಧಾರಣ ಮಾಡುವ ವಾಡಿಕೆ ಬೆಳೆದುಕೊಂಡು ಬಂದಿದೆ. ಗರ್ಭದಲ್ಲಿ ಮೂಡಿದ ಜೀವಾತ್ಮನಿಗೆ ವೀರಶೈವ ಧರ್ಮಸಂಸ್ಕಾರ ಕೊಡುವುದೇ ಈ ವಾಡಿಕೆಯ ಉದ್ದೇಶ. ಈ ರೀತಿಯ ಗರ್ಭಲಿಂಗಧಾರಣಕ್ರಮದಿಂದ ಗುರುವಿನ ಜ್ಞಾನಾನುಗ್ರಹವಾಗುವುದೊ? ಪೂರ್ವಾಶ್ರಯ ಅಳಿಯುವುದೊ? ಎಂಬ ಶಂಕೆಯುಂಟಾದರೆ ಚನ್ನಬಸವಣ್ಣನವರು ಈ ಕೆಳಗಿನಂತೆ ಪರಿಹಾರ ನೀಡುತ್ತಾರೆ:

> "ಅಂಜದಿರಂಜದಿರು, ಹಿಂದೊಮ್ಮೆ ಭವದಬಟ್ಟೆಯ ಹೋದೆನೆಂದು!
> ಅಂಜನೆ ಜಲಗರ ಬೆಳೆಯಿತ್ತೆಂದು ಅಂಜಿ ಹೇಮರಸವ ಕುಡಿದಡೆ,
> ಉದರದೊಳಗಿರ್ದ ಕಪಿ ಶೃಂಗಾರವಾಗನೆ?
> ಕೆಡುವುದೆ ಶಿವಪಿಂಡ? ಮುಱಿವುದೆ ಶಿವಜ್ಞಾನ?
> ಹಿಂದೆ ಏಳುನೂಱು ವರುಷ ಮಂಡೋದರಿಯ
> ಉದರದಲ್ಲಿರ್ದು ಜನಿಸನೆ ಇಂದ್ರಜಿತು?
> ನೀ ಹೊಟ್ಟೆಗೆ ವಿಭೂತಿಯ ಪಟ್ಟವ ಕಟ್ಟಿದಂದು
> ಆಯಿತ್ತೆನಗನುಗ್ರಹ!
> ಅಂಜದಿರು, ಅಂಜದಿರು, ಕೂಡಚನ್ನಸಂಗಯ್ಯಾ,
> ನಿಮ್ಮ ತೊತ್ತಿನ ತೊತ್ತು ನಾನು."[೧]

೧. ಚಬವ. ೬೦.

ಹೀಗೆ ಇನ್ನೂ ಪಿಂಡಾವಸ್ಥೆಯಲ್ಲಿರುವಾಗಲೇ ಜೀವಾತ್ಮನಿಗೆ ಗುರುವಿನ ಅನುಗ್ರಹ ದಿಂದ ಶಿವಜ್ಞಾನವಾಗುವುದು. ಆದರೆ. ಆ ಜೀವಾತ್ಮ ಪ್ರತ್ಯಕ್ಷವಾಗಿ ಆಚರಣೆಯನ್ನು ಆರಂಭಮಾಡುವುದು ಧರಣಿಯ ಮೇಲೆ ಬಿದ್ದಾಗ ಮಾತ್ರ. ಶಿವಭಕ್ತರ ಶಿಶು ಧರಣಿಯ ಮೇಲೆ ಬಿದ್ದಾಗಲೆ. ವಿಭೂತಿಯ ಪಟ್ಟವ ಕಟ್ಟಿ. ಕೊರಳಲ್ಲಿ ಲಿಂಗಸಾಹಿತ್ಯವ ಮಾಡಿ, ಪಾದೋದಕದಲ್ಲಿ ಜಳಕವ ಮಾಡಿಸಿ, ಪ್ರಸಾದದೆಣ್ಣೆ. ಬೆಣ್ಣೆ ಹಾಲನೆರೆದು ಸಲುಹುವುದು ಆಚಾರ......"[೧] ಎಂದು ಹೇಳಿ ಚನ್ನಬಸವಣ್ಣನವರು ಪ್ರತ್ಯಕ್ಷ ಆಚಾರದ ಪ್ರಾರಂಭ ವನ್ನು ತಿಳಿಯಪಡಿಸುತ್ತಾರೆ. ಆಗ ಆ ಜೀವಾತ್ಮ,

**'ಪೂರ್ವಬೀಜನಲ್ಲ, ಪೂರ್ವ ಪ್ರಾಣಿಯಲ್ಲ, ಪೂರ್ವವ್ಯವಹಾರಿಯಲ್ಲ;
ಪೂರ್ವಾದಿಗಳೆಲ್ಲವನು ಉತ್ತರಿಸಿ ಕಳೆದು ಲಿಂಗ ಗರ್ಭಿತನಾದ, ಶರಣ."[೨]**

ಈ ರೀತಿಯಾಗಿ ಅಂಗಾಶ್ರಯವಳಿದು ಲಿಂಗಾಶ್ರಯವಾದ ಬಳಿಕ. ಜೀವನು ಮಲಾವರಣ ಬಿಟ್ಟು ಅಷ್ಟಾವರಣ ತೊಟ್ಟು ಸಾಧಕನಾಗುತ್ತಾನೆ: ಮತ್ತು ಸದಾಚಾರಿಯಾಗುತ್ತಾನೆ.

**"ಶಿವಕುಲ ಪ್ರಸೂತಂಗೆ ಶಿವಜ್ಞಾನವಾಗಲು, ತನು ಮತ್ತು ವೃತ್ತಿ ಇವೆರಡು ಸೇವ್ಯವಾಗಿರ್ಪುವು. ಇಂತಿದು ಸಾಧಕರ ಸ್ಥಿತಿಯಯ್ಯಾ ಕೂಡಲಚನ್ನಸಂಗಮದೇವ"[೩]**

ಇಂತಹ ಸ್ಥಿತಿಯಲ್ಲಿ ಯಾವ ರೀತಿಯಾಗಿ ಆ ಸಾಧಕರು ಪಂಚಾಚಾರ ಸಪ್ತಾಚಾರಗಳಿಂದ ತಮ್ಮ ಬಹಿರಂಗ ಅಂತರಂಗ ಶುದ್ಧಿಹೊಂದಿ. ಅಷ್ಟಾವರಣ ಸ್ವಾಯತಮಾಡಿಕೊಳ್ಳುವ ರೆಂಬುದನ್ನು ಇನ್ನು ಮುಂದೆ ಪರಿಶೀಲಿಸಬಹುದು.

ಅಂಗನಿಗೆ ಗುರು. ಲಿಂಗ, ಜಂಗಮದಲ್ಲಿ ಶ್ರದ್ಧೆಯಿಡುವುದೇ ಪ್ರಥಮ ಕರ್ತವ್ಯ.

**"ಗುರುದೇವೋ ಮಹಾದೇವೋ ಎಂಬುದಾಗಿ ಗುರುದೇವನೇ
ಮಹಾದೇವನು,
'ಯೋ ಗುರುಃ ಸ ಶಿವಃ ಪ್ರೋಕ್ತೋಯಃ ಶಿವಃ ಸ ಗುರುಃ ಸ್ಮೃತಃ'
ಎಂಬುದಾಗಿ ಗುರುವೆ ಶಿವನು, ಶಿವನೇ ಶ್ರೀಗುರು ನೋಡಾ.
'ಗುರುದೈವಾತ್ ಪರಂನಾಸ್ತಿ' ಎಂಬುದಾಗಿ ಗುರುವಿನಿಂದಧಿಕವಿಲ್ಲ.
'ಶಿಷ್ಯದೀಕ್ಷಾದಿಕಾರಣಾತ್ ಎಂಬುದಾಗಿ, ಎನ್ನ ನಿಮಿತ್ತ
ಗುರುಲಿಂಗಮೂರ್ತಿಯಾದೆ ಕೂಡಲಚನ್ನಸಂಗಮದೇವಾ"[೪]**

ಹೀಗೆ ತನ್ನನ್ನು ಉದ್ಧಾರಮಾಡಲು ಬಂದ ಶಿವಸ್ವರೂಪ ಗುರುಗಳಿಗೆ ಶಿಷ್ಯನು ಸಂಪೂರ್ಣ ವಾಗಿ ಶರಣಾಗತನಾಗಿ. 'ಆಚರಣೆಯ ವಿಚಾರವ ಕರುಣಿಸಬೇಕಯ್ಯ ಸ್ವಾಮಿ' ಎಂದು ಕೇಳಲು ಆಗ ಸದ್ಗುರುವು

**"ಕೇಳಯ್ಯ ವರಕುಮಾರ ದೇಶಿಕೋತ್ತಮನೆ,
ಆ ಲಿಂಗಜಂಗಮ ಜಂಗಮಲಿಂಗದಾಚರಣೆಯ ಸಂಬಂಧವ:**

---

೧. **ಚಬವ.** ೩೯೯. ೨. **ಚಬವ** ೮೮೦. ೩. **ಚಬವ.** ೧೦೧. ೪, **ಚಬವ.** ೬೮೫.

**"ಸದ್ಗುರು ಮಾರ್ಗ ಹಿಡಿದ ಜಂಗಮ. ಭಕ್ತನಾದ ಪ್ರಸಾದಿ**
**ಇವರಿಬ್ಬರಾಚರಣೆಯು ನಿನ್ನೊಬ್ಬನಲ್ಲಿ**
**ಹುರಿಗೊಳಿಸಿಕೊಟ್ಟೆವು ನೋಡಯ್ಯಾ,**
**ಅದೆಂತೆಂದಡೆ: ಕ್ರಿಯಾಜಂಗಮ ಮೂರ್ತಿಗಳು**
**ನಿನ್ನರ್ಚನಾಸಮಯಕ್ಕೆ ದಿವಾರಾತ್ರಿಗಳೆನ್ನದೆ ಒದಗಿಬಂದಲ್ಲಿ**
**ಅಚ್ಚ ಪ್ರಸಾದಿಯೋಪಾದಿಯಲ್ಲಿ**
**ಕ್ರಿಯಾಚರಣೆಯನ್ನಾಚರಿಸುವುದಯ್ಯಾ"** [೧]

ಎಂದು ಲಿಂಗ ಜಂಗಮ, ಜಂಗಮಲಿಂಗದ ಗೂಢಸಂಬಂಧವನ್ನು ಶಿಷ್ಯನಿಗೆ ತಿಳಿಸುತ್ತಾರೆ. ಈ ವಿಷಯವು ವೀರಶೈವದಲ್ಲಿ ಅತಿ ಮಹತ್ವವಾದುದು. ವೀರಶೈವದ ಆಚರಣೆ ನಿತ್ಯ ಜೀವನದಲ್ಲಿ ಹೇಗೆ ಹೊರಸೂಸುತ್ತದೆ ಎಂಬುದನ್ನು ತಿಳಿಯಬೇಕಾದರೆ, ಈ ಗುರು ಲಿಂಗ ಜಂಗಮ ಮತ್ತು ಭಕ್ತರ ಸಂಬಂಧವನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು. ಜಂಗಮ, ಅಂಗ ಲಿಂಗ ಸಾಮರಸ್ಯವ ತಿಳಿಸುವ ಸುಜ್ಞಾನ ಮೂರ್ತಿ. ತಾತ್ವಿಕದೃಷ್ಟಿಯಿಂದ ಶಿವನೇ ಗುರು ಲಿಂಗ ಜಂಗಮ ಎಂಬ ಮೂರು ರೂಪು ಧರಿಸುತ್ತಾನೆ. 'ಏಕಮೂರ್ತಿಸ್ತ್ರಯೋ ಭಾಗಾಃ ಗುರುರ್ಲಿಂಗಂತು ಜಂಗಮಃ' ಎಂದು ಆಗಮೋಕ್ತಿಯು ಈ ಮಾತನ್ನು ಧೃಢಪಡಿಸುತ್ತದೆ. ಜ್ಞಾನಮೂರ್ತಿಯಾದ ಗುರು ಲಿಂಗವಾದರೆ, ಜ್ಞಾನ ಪ್ರಸಾರಮೂರ್ತಿ ಜಂಗಮ. ವ್ಯವಹಾರದಲ್ಲಿ ಗುರು ತತ್ವ ತಿಳಿಸಿದರೆ, ಜಂಗಮ ಆ ತತ್ವಗಳನ್ನು ಪ್ರತ್ಯಕ್ಷೀಕರಿಸುತ್ತಾನೆ. ಗುರುವಿನಂತೆ ಜಂಗಮನೂ ಸಹ ಲಿಂಗಸ್ವರೂಪಿ ಎಂದು ಸಾಧಕನಾದ ಭಕ್ತ ಆಚರಿಸಬೇಕು.

**"ಜಂಗಮ ಬರಬೇಕೆಂದು ಲಿಂಗಾರ್ಚನೆ ಮಾಡುವುದು. ಆ ಜಂಗಮ ಮನೆಗೆ ಬಂದಡೆ, ತನ್ನ ಲಿಂಗಾರ್ಚನೆಯ ಮಾಣ್ದು ಜಂಗಮಾರ್ಚನೆಯ ಮಾಡುವುದು . . . . ಜಂಗಮವೆ ಲಿಂಗವೆಂದು ನಂಬಿದವನಾಗಿ ಬಸವಣ್ಣ ಸ್ವಯಂ ಲಿಂಗವಾದ"** [೨]

ಈ ರೀತಿಯಾಗಿ ಲಿಂಗಸ್ವರೂಪಿಯಾದ ಜಂಗಮ ಮನೆಗೆ ಬರಲು ದಾಸೋಹಂ ಭಾವನೆಯಿಂದ ಭಕ್ತ ಶರಣುಹೋಗಬೇಕು 'ಲಿಂಗಾರ್ಪಿತಂ ನ ಕರ್ತವ್ಯಂ. ಕರ್ತವ್ಯಂ ಜಂಗಮಾರ್ಪಿತಂ'[೩] ಎಂಬ ತತ್ವಕ್ಕನುಗುಣವಾಗಿ ಭಕ್ತ. ಜಂಗಮನಿಗೆ ಅಗ್ಗವಣಿ ಮತ್ತು ಪದಾರ್ಥಗಳನ್ನು ಅರ್ಪಿಸಿ, ಸಂತೃಪ್ತನಾದ ಜಂಗಮನಿಂದ ಪಾದೋದಕ ಪ್ರಸಾದಗಳನ್ನು ಪಡೆದು ತಾನು ಸಂತೃಪ್ತನಾಗಬೇಕು. ಈ ರೀತಿಯಾಗಿ ಪಡೆದ '......ಜಂಗಮದ ಪಾದತೀರ್ಥವ ಲಿಂಗಕ್ಕೆ ಮಜ್ಜನಕ್ಕೆರೆದು, ಪ್ರಸಾದವ ಲಿಂಗಕ್ಕೆ ನೈವೇದ್ಯವ ಸಮರ್ಪಿಸಿ. ಭೋಗಿಸುವಾತನೇ ಸದ್ಭಕ್ತ, ಆತನೆ ಮಾಹೇಶ್ವರ, ಆತನೆ ಪ್ರಸಾದಿ, ಅತನೆ ಪ್ರಾಣಲಿಂಗಿ, ಆತನೆ ಶರಣ, ಆತನೆ ಐಕ್ಯನು'[೪] ಈ 'ಅರ್ಪಿತಾವಧಾನದ ಮರ್ಮವನರಿಯಬಲ್ಲಡೆ ಕೂಡಲ ಚೆನ್ನಸಂಗಯ್ಯನಲ್ಲಿ ಆತನೇ ಅಚ್ಚಪ್ರಸಾದಿ'[೫]. ಚನ್ನಬಸವಣ್ಣನವರೇ ಈ ಮಾತಿಗೆ

---

೧. **ಚಬವ.** ೭೩೮. ೨. **ಚಬವ.** ೧೬೧೩. ೩. **ಚಬವ.** ೧೮೮. ೪. **ಚಬವ.** ೭೨೬.
೫. **ಚಬವ.** ೫೮೨.

ನಿದರ್ಶನ. ಅವರೇ ಹೀಗೆ ಹೇಳುತ್ತಾರೆ: 'ಲಿಂಗಸಾಹಿತ್ಯ ಮಡಿವಾಳ, ಜಂಗಮ ಸಾಹಿತ್ಯ ಬಸವಣ್ಣ; ಇವರಿಬ್ಬರ ಪ್ರಸಾದ ಸಾಹಿತ್ಯ ನಾನೇ ಕೂಡಲಚನ್ನಸಂಗಮದೇವ'[೧].

ಈ ರೀತಿಯ ಗುರು ಲಿಂಗ ಜಂಗಮ ಭಕ್ತರ ಗೂಢಸಂಬಂಧದ ಮರ್ಮವನ್ನು ತಿಳಿಸುತ್ತ "ಸದ್ಗುರು ಮಾರ್ಗವಿಡಿದ ಜಂಗಮ, ಭಕ್ತನಾದ ನಿಜಪ್ರಸಾದಿ, ಇವರಿಬ್ಬರಾ ಚರಣೆಯ ನಿನ್ನೊಬ್ಬನಲ್ಲಿ ಹುರಿಗೊಳಿಸಿಕೊಟ್ಟೆವು" ಎಂದು ಗುರುಗಳು ಅರಿವುಮಾಡಿ ಕೂಡಲು ಪರಕಮಾರದೇಶಿಕೋತ್ತಮನಾದ ಶಿಷ್ಯ ಮತ್ತೆ ಹೆಚ್ಚಿನ ಸಾಧನೆಗೆ ಮುಂದು ವರಿಯುತ್ತಾನೆ ಷಟ್‌ಸ್ಥಲ ಮಾರ್ಗವಾಗಿ.

ಗುರು ನಿರೂಪಿಸಿದ ತತ್ವ, ತತ್ವವಾಗಿ ಉಳಿಯದೆ, ಸಾಧನಜೀವನದ ಸತ್ವವಾಗಬೇಕು. ಆದುದರಿಂದ ಅಷ್ಟಾವರಣಗಳಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ಇವುಗಳನ್ನು ಸ್ವಾಯತಮಾಡಿಕೊಳ್ಳಬೇಕು; ಆಚರಣೆಯ ತತ್ವಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಇಂಥ ಸಾಧನಮಾರ್ಗಕ್ಕೆ ಅನು ಕೂಲವಾಗುವಂತೆ ಚನ್ನಬಸವಣ್ಣನವರು ಆಚಾರಪ್ರಭೇದಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಸಾಧಕನ ಬಹಿರಂಗ ಶುದ್ಧಿಗಾಗಿ ಪಂಚಾಚಾರಗಳು, ಅಂತರಂಗಶುದ್ಧಿಗಾಗಿ ಸಪ್ತಾಚಾರ ಗಳು ಕಲ್ಪಿತವಾಗಿವೆ.

ಪಂಚಾಚಾರ ಮತ್ತು ಸಪ್ತಾಚಾರಗಳು ಸಾಧಕನ ಅಂತರ್ಬಾಹ್ಯ ಜೀವನ ಕ್ರಮ ಸೂತ್ರಗಳಾಗಿದ್ದರೂ ಅವು ಒಂದಕ್ಕೊಂದು ಪೂರಕವಾಗಿವೆ. ಅಂತೆಯೇ ಚನ್ನಬಸವಣ್ಣ ನವರು ಒಂದೇ ಬೃಹದ್ವಚನದ (ವ .೧೪೧೧೦ರ)ಲ್ಲಿ ಅವೆರಡರ ಸಂಬಂಧವನ್ನು ಸ್ಪಷ್ಟಪಡಿಸಿ ದ್ದಾರೆ.

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ—ಈ ಐದು ಆಚಾರಗಳೇ ಪಂಚಾಚಾರಗಳು. ಇವನ್ನು ಕುರಿತು ಚನ್ನಬಸವಣ್ಣನವರು ಹೀಗೆ ಹೇಳು ತ್ತಾರೆ:

"ಅಯ್ಯಾ ಶ್ರೀಗುರು ಕರುಣಿಸಿಕೊಟ್ಟ ಲಿಂಗಜಂಗಮವಲ್ಲದೆ,
ಅನ್ಯ ದೈವಂಗಳ ತ್ರೈಕರಣದಲ್ಲಿ ಅರ್ಚಿಸದಿರ್ಪುದೆ ಲಿಂಗಾಚಾರವೆಂಬೆನಯ್ಯಾ.
ಭಕ್ತನಾದೊಡೆ ಸತ್ಯಶುದ್ಧ ಕಾಯಕವ ಮಾಡಿ,
  ಮಹೇಶ್ವರನಾದಡೆ ಸತ್ಯ ಶುದ್ಧ ಭಿಕ್ಷವ ಬೇಡಿ,
ಸಮಸ್ತ ಪ್ರಾಣಿಗಳಲ್ಲಿ ಪಾತ್ರಾಪಾತ್ರವ ತಿಳಿದು,
  ಹಸಿವು ತೃಷೆ ಶೀತಕ್ಕೆ ಪರಹಿತಾರ್ಥಿಯಾಗಿರ್ಪುದೆ ಸದಾಚಾರವೆಂಬೆನಯ್ಯಾ.
ಗುರುಮಾರ್ಗಾಚಾರದಲ್ಲಿ ನಿಂದ ಶಿವಲಾಂಛನಧಾರಿಗಳೆಲ್ಲ
  ಪರಶಿವಲಿಂಗವೆಂದು ಭಾವಿಸಿ
ಅರ್ಥಪ್ರಾಣಾಭಿಮಾನವನರ್ಪಿಸುವುದೆ ಶಿವಾಚಾರವೆಂಬೆನಯ್ಯಾ.
ಅಷ್ಟಾವರಣಗಳ ಮೇಲೆ ಅನ್ಯರಿಂದ ಕುಂದುನಿಂದೆಗಳು ಬಂದುತಟ್ಟಿದಲ್ಲಿ

---

೧. ಚಬವ. ೨೭೨.

ಗಣಸಮೂಹವನೊಡಗೂಡಿ ಆ ಸ್ಥಲವ ತ್ಯಜಿಸುವುದೆ ಗಣಾಚಾರವೆಂಬೆನಯ್ಯಾ.
ಜಾತ್ಯಾಶ್ರಮಕುಲಗೋತ್ರನಾಮರೂಪುಕ್ರಿಯಾರಹಿತನಾಗಿ,
ಗುರೂಪಾವಸ್ಥೆಯಿಂದ ಗುರುವ ಪ್ರತ್ಯಕ್ಷವ ಮಾಡಿ,
ಆ ಗುರುವಿನಿಂದ ಚಿದ್ಘನ ಮಹಾಲಿಂಗವ ಪಡೆದು,
ಆ ಲಿಂಗಸಹಿತವಾಗಿ ಭಕ್ತಿ ಜ್ಞಾನ ವೈರಾಗ್ಯ ಪಾದೋದಕ ಪ್ರಸಾದ
ವಿಭೂತಿ ರುದ್ರಾಕ್ಷಿ ಮಂತ್ರ ಮೊದಲಾದ
ಷಟ್‌ಸ್ಥಲಮಾರ್ಗದಲ್ಲಿ ನಿಂದ ಭಕ್ತಗಣಂಗಳಲ್ಲಿ ಪಂಚಸೂತಕಂಗಳ ಕಲ್ಪಿಸದೆ,
ಅವರಿದ್ದ ಸ್ಥಳಕ್ಕೆ ಹೋಗಿ, ತನುಮನಧನಂಗಳ ಸಮರ್ಪಿಸಿ,
ಅವರೊಕ್ಕುಮಿಕ್ಕುದ ಹಾರೈಸಿ, ಹಸ್ತಾಂಜಲಿತರಾಗಿ ಪ್ರತ್ಯುತ್ತರ
ಕೊಡದಿರ್ಪುದೆ ಭೃತ್ಯಾಚಾರವೆಂಬೆನಯ್ಯಾ."[೧]

ಈ ರೀತಿಯ ಪಂಚಾಚಾರಗಳಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರಗಳ ಅರಿವು ಸಂಪೂರ್ಣವಾಗುತ್ತದೆ. ಸಾಧಕನು, ಉಂಟಾದ ಈ ಅರಿವಿನಿಂದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳ ಪೂರ್ವಾಶ್ರಯವನ್ನು ಸಂಪೂರ್ಣವಾಗಿ ಕಳೆಯುತ್ತಾನೆ. ಅಂತೆಯೇ ಅವನು.

"ಶಿಲೆಯೆಂಬ ಪೂರ್ವಾಶ್ರಯುವ ಕಳೆದು ಲಿಂಗವೆಂದ.
ನರನೆಂಬ ಪೂರ್ವಾಶ್ರಯುವ ಕಳೆದು ಗುರುವೆಂದ.
ಜಾತಿ ಸೂತಕದ ಪೂರ್ವಾಶ್ರಯುವ ಕಳೆದು ಜಂಗಮವೆಂದ.
ಎಂಜಲೆಂಬ ಪೂರ್ವಾಶ್ರಯುವ ಕಳೆದು [ಪಾದೋದಕ] ಪ್ರಸಾದವೆಂದ.[೨]"

ಹೀಗೆ 'ಗುರು, ಲಿಂಗ, ಜಂಗಮ. ಪಾದೋದಕ, ಪ್ರಸಾದ (ಅಷ್ಟಾವರಣದ ಮೊದಲ ಐದು ಘಟಕ)ಗಳ ಪೂರ್ವಾಶ್ರಯುವ ಕಳೆದು ಲಿಂಗವಾಗಿ ಕುಳಸ್ಥಳವನಜಿತು'[೩] 'ಕ್ರಿಯಾ ವಿಭೂತಿಯ ಧರಿಸಿದ ಭಕ್ತನು. ಚಿದ್ರುದ್ರಾಕ್ಷಿ ಧರಿಸಿ ಮಂತ್ರಧ್ಯಾನವ'[೪] ಮಾಡುತ್ತಾನೆ. ಪಂಚಾಚಾರಗಳಲ್ಲಿ ಹೀಗೆ ಅಷ್ಟಾವರಣಗಳ ಸಂಪೂರ್ಣ ಜ್ಞಾನವಾಗುತ್ತದೆ. ಆದರೆ, ಆ ಜ್ಞಾನ ಸಾಧಕನ ಆಚರಣೆಯಲ್ಲಿ ಇನ್ನೂ ಸಂಪೂರ್ಣವಾಗಿ ಲೀಯವಾಗಿರುವುದಿಲ್ಲ. ಸಕ್ಕರೆ ಹಾಲಿನಲ್ಲಿ ಕರಗುವಂತೆ ಜ್ಞಾನವು ಆಚರಣೆಯಲ್ಲಿ ಬೆರೆತು ಜ್ಞಾನಾಚರಣೆಯು ಸಮರಸವಾಗುವುದು ಸಪ್ತಾಚಾರಗಳಲ್ಲಿ ಮಾತ್ರ.

ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ, ಸತ್ಯಾಚಾರ, ನಿತ್ಯಾಚಾರ. ಧರ್ಮಾಚಾರ, ಸರ್ವಾಚಾರ—ಇವೇ ಸಪ್ತಾಚಾರಗಳು. ಇವನ್ನು ಚನ್ನಬಸವಣ್ಣನವರು ಹೀಗೆ ವಿವರಿಸುತ್ತಾರೆ:

'ಮಲಮಾಯಾಪಾತಕ ಸೂತಕರಹಿತನಾದ
ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರುವಿನಿಂದ
ವೇಧಾ, ಮಂತ್ರ, ಕ್ರಿಯಾದೀಕ್ಷೆಯ ಪಡೆದು,

೧. ಚಬವ. ೧೪೦೦. ೨. ಚಬವ. ೨೨೦. ೩. ಚಬವ. ೧೮. ೪. ಚಬವ. ೧೬೫.

ದ್ವಾದಶ ಮಲಪಾಶ ಕರ್ಮವ ತ್ಯಜಿಸಿ,
ಮನಮಾರುತ ಮೊದಲಾದ ದ್ವಾದಶ ಇಂದ್ರಿಯಂಗಳ
ಗುರುಪಾದ ಜಲದಿಂದ ಪ್ರಕ್ಷಾಲಿಸಿ,
ದಂತಪಂಕ್ತಿ ಕ್ರಿಯೆಗಳ ಮಾಡಿ,
ಕಟಿಸ್ನಾನ, ಕಂಠಸ್ನಾನ, ಮುಂಡಸ್ನಾನ, ಸರ್ವಾಂಗಸ್ನಾನವ ಮಾಡಿ,
ಕ್ರಿಯಾಭಸಿತದಿಂದ ಸ್ನಾನ, ಧೂಳನ, ಧಾರಣದ ಮರ್ಮವ ತಿಳಿದಾಚರಿಸಿ,
ಸಾಕಾರ ನಿರಾಕಾರ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ
ಗುರುಲಿಂಗ ಜಂಗಮವನರ್ಚಿಸಿ,
ನಿರ್ವಂಚಕತ್ವದಿಂದ ಘನಪಾದತೀರ್ಥಪ್ರಸಾದ ಮಂತ್ರದಲ್ಲಿ ನಿಂದ
ನಿಜಾವಸ್ಥೆಯ ಕ್ರಿಯಾಚಾರವೆಂಬೆನಯ್ಯಾ.
ಅಂತರಂಗದಲ್ಲಿ ಕರಣವಿಷಯ ಕರ್ಕಶದಿಂದ ಅಹಂಕರಿಸಿ
ಗುರುಹಿರಿಯರಲ್ಲಿ ಸಂಕಲ್ಪ ವಿಕಲ್ಪಂಗಳಿಂದ
ಕುಂದು ನಿಂದೆ ಹಾಸ್ಯ ರೋಷಗಳೆಂಬ ಅಜ್ಞಾನವ ಬಳಸದೆ,
ಪರಮ ಪಾತಕರ ದರ್ಶನ ಸ್ಪರ್ಶನ ಸಂತರ್ಪಣೆ ಪಙ್ತಿಪಾಕವ ಕೊಳ್ಳದೆ,
ಸತ್ಯ ನಡೆನುಡಿಯುಳ್ಳ ಶಿವಶರಣರುಗಳಲ್ಲಿ ಷಡ್ವಿದಭಕ್ತಿ ಮುಂದುಗೊಂಡು,
ಎರಡೆಂಬತ್ತೆಂಟು ಕೋಟಿ ವಚನಾನುಭವದಲ್ಲಿ
ನಿಂದ ನಿಲುಕಡೆಯ ಜ್ಞಾನಾಚಾರವೆಂಬೆನಯ್ಯಾ.
ತನುವಿಕಾರದಿಂದ ಕಾಮ ಕ್ರೋಧ ಲೋಭ ಮೋಹ
ಮದ ಮತ್ಸರಂಗಳ ಬಳಕೆ ಮಾಡದೆ,
ಲೋಕದಂತೆ ನಡೆನುಡಿಗಳ ಬಳಸದೆ,
ತನ್ನ ಗುಣಾವಗುಣಂಗಳ ಸ್ವಾತ್ಮಾನುಭವದಿಂದಱಿದು
ದುರ್ಗುಣವತ್ಯಜಿಸಿ, ಸದ್ಗುಣವ ಹಿಡಿದು ಬಿಡದಿಪ್ಪುದೆ
ಭಾವಾಚಾರವೆಂಬೆನಯ್ಯಾ.
ಕೊಡುವಲ್ಲಿ ಕೊಂಬಲ್ಲಿ ಅತಿಯಾಸೆಯಿಂದ ಹುಸಿಯನುಡಿಯದೆ,
ಕೊಟ್ಟಭಾಷೆಗಳ ಪ್ರಾಣಾಂತ್ಯಬಂದಡೆಯೂ ನುಡಿಯಂತೆ ನಡೆವುದೆ
ಸತ್ಯಾಚಾರವೆಂಬೆನಯ್ಯಾ.
ಕಾಲ ಕರ್ಮ ಬಾಧೆಗೊಳಗಾದ, ಹಠಯೋಗ ಫಲ ಪದಂಗಳ
ತಟ್ಟು ಮುಟ್ಟು ಸೋಂಕುಗಳಿಲ್ಲದೆ ಲಿಂಗಾಣತಿಯಿಂದ ಬಂದೊದಗಿದ,
ಪರಿಣಾಮ ಪ್ರಸಾದದಲ್ಲಿ ಲೋಲುಪ್ತನಾಗಿರ್ಪುದೆ ನಿತ್ಯಾಚಾರವೆಂಬೆನಯ್ಯಾ.
ಸರ್ವಾವಸ್ಥೆಯಲ್ಲಿ ದಶವಿಧಪಾದೋದಕ, ಏಕಾದಶಪ್ರಸಾದ,
ಛತ್ತೀಸ ಪ್ರಣವ ಮೊದಲಾದ ಮಹಾಮಂತ್ರಂಗಳಲ್ಲಿ ಎರಕವನುಳ್ಳುದೆ
ಧರ್ಮಾಚಾರವೆಂಬೆನಯ್ಯಾ.

**ಇಂತೀ ಏಕಾದಶವರ್ಮವ ಗುರುಕೃಪಾಮುಖದಿಂದಱಿದು,**
**ಆಚಾರವೆ ಅಂಗ ಮನ ಪ್ರಾಣಭಾವಂಗಳಾಗಿ, ಇಹಪರವ ಮೀಱಿ,**
**ಪಿಂಡಾದಿ ಜ್ಞಾನಶೂನ್ಯಾಂತವಾದ ಏಕೋತ್ತರ ಮಾರ್ಗದಲ್ಲಿ ನಿಂದು,**
**ಬಯಲೊಳಗೆ ಬಚ್ಚಬಱಿಯ ನಿರ್ವಯಲ ಸಾಧಿಸುವುದೆ,**
**ಸರ್ವಾಚಾರಸಂಪತ್ತಿನಾಚಾರದ ನಿಲುಕಡೆ ನೋಡಾ"**[೧]

ಪಂಚಾಚಾರದಿಂದ ಉಂಟಾದ ಅಷ್ಟಾವರಣದ ಜ್ಞಾನಸಾಹಿತ್ಯ ಸಪ್ತಾಚಾರದಲ್ಲಿ ಸ್ವಾಯತವಾಗಿ ಸದ್ಭಕ್ತನು ಸತ್ಕ್ರಿಯಾಚರಣೆಯಿಂದ ಸಿದ್ಧನಾಗುತ್ತಾನೆ. ಆತನು ಕ್ರಮೇಣ ಸಿದ್ಧಾವಸ್ಥೆಗೆ ಮುಟ್ಟುವ ಬಗೆಯನ್ನು ಚನ್ನಬಸವಣ್ಣನವರು ಈ ಸಪ್ತಾಚಾರ ದಲ್ಲಿ ಸ್ಪಷ್ಟವಾಗಿ ತೋರಿಸುತ್ತಾರೆ. ಮೊದಲು ಅಷ್ಟವಿಧಾರ್ಚನೆ, ಷೋಡಶೋಪಚಾರ ಗಳಿಂದ ಗುರುಲಿಂಗಜಂಗಮುವನರ್ಚಿಸಿ, ಘನವಾದ ತೀರ್ಥದಲ್ಲಿ ಮಿಂದು ಕ್ರಿಯಾಚಾರಿ ಯಾಗುತ್ತಾನೆ. ಆಗ ಅವನು ಆಚಾರಲಿಂಗಸಂಬಂಧಿಯಾಗಿ ಭಕ್ತಸ್ಥಲದಲ್ಲಿರುತ್ತಾನೆ. ಸತ್ಯ ನಡೆನುಡಿಯುಳ್ಳ ಶಿವಶರಣರ ಅನುಭವದ ಆಳವನ್ನರಿತು ಜ್ಞಾನಾಚಾರಿಯಾಗು ತ್ತಾನೆ. ಆಗ ಅವನು ಗುರುಲಿಂಗಸಂಬಂಧಿಯಾಗಿ ಮಹೇಶ್ವರಸ್ಥಲದಲ್ಲಿರುತ್ತಾನೆ. ಶರಣಾನುಭವದ ಬೆಳಕಿನಲ್ಲಿ ತನ್ನ ಗುಣಾವಗುಣಗಳನ್ನು ಸ್ವಾನುಭಾವದಿಂದರಿದು ಸದ್ಗುಣಿ ಯಾಗಿ ಭಾವಾಚಾರಿಯಾಗುತ್ತಾನೆ. ಆಗ ಅವನು ಶಿವಲಿಂಗಸಂಬಂಧಿಯಾಗಿ ಪ್ರಸಾದಿ ಸ್ಥಲದಲ್ಲಿರುತ್ತಾನೆ. ಪ್ರಾಣಾಂತ್ಯ ಬಂದರೂ ತನ್ನ ಸದ್ಗುಣ ಬಿಡದೆ ನುಡಿದಂತೆ ನಡೆದು ಸತ್ಯಾಚಾರಿಯಾಗುತ್ತಾನೆ. ಆಗ ಅವನು ಜಂಗಮಲಿಂಗಸಂಬಂಧಿಯಾಗಿ ಪ್ರಾಣಲಿಂಗ ಸ್ಥಲದಲ್ಲಿರುತ್ತಾನೆ. 'ತಾನೆ ಸತಿ ಲಿಂಗಪತಿ' ಎಂಬ ಸಂಬಂಧದಿಂದುಂಟಾದ ಪರಿಣಾಮ ಪ್ರಸಾದದಲ್ಲಿ ಸದಾ ಲೋಲುಪ್ತನಾಗಿ ನಿತ್ಯಾಚಾರಿಯಾಗುತ್ತಾನೆ. ಆಗ ಅವನು ಪ್ರಸಾದ ಲಿಂಗಸಂಬಂಧಿಯಾಗಿ ಶರಣಸ್ಥಲದಲ್ಲಿರುತ್ತಾನೆ. ಪಾದೋದಕ ಪ್ರಸಾದ ಮತ್ತು 'ಓಂ ನಮಃ ಶಿವಾಯ' ಎಂಬ ಮಂತ್ರದಲ್ಲಿ ತಾದಾತ್ಮ್ಯಹೊಂದಿ ಧರ್ಮಾನುಚಾರಿಯಾಗು ತ್ತಾನೆ. ಆಗ ಅವನು ಮಹಾಲಿಂಗಸಂಬಂಧಿಯಾಗಿ ಐಕ್ಯಸ್ಥಲದಲ್ಲಿ ಇರುತ್ತಾನೆ. ಈ ಐಕ್ಯಸ್ಥಲದ ಧರ್ಮಾಚಾರಿಯಲ್ಲಿ ಭಕ್ತಮಹೇಶಾದಿ ಅಂಗಸ್ಥಲಗಳು ಮತ್ತು ಆಚಾರಲಿಂಗ ಗುರುಲಿಂಗಾದಿ ಲಿಂಗಸ್ಥಲಗಳು ಕೂಡಿ ಒಂದಾಗುತ್ತವೆ. ಅವನ ಅಂಗವೇ ಲಿಂಗ, ಲಿಂಗವೇ ಅಂಗವಾಗುವುದರಿಂದ, ಆವನ ಅಂಗವೆಲ್ಲ ಮಂತ್ರಮಯವಾಗುತ್ತದೆ.

**"ಓಂ ಎಂಬಕ್ಷರವೇ ರಸ, ನ ಎಂಬಕ್ಷರವೆ ರುಧಿರ, ಮ ಎಂಬಕ್ಷರವೆ ಮಾಂಸ, ಶಿ ಎಂಬಕ್ಷರವೆ ಮೇಧಸ್ಸು, ವಾ ಎಂಬಕ್ಷರವೇ ಅಸ್ಥಿ, ಯ ಎಂಬಕ್ಷರವೆ ಮಜ್ಜೆ, ಷಡಕ್ಷರದಿಂದ ಶುಕ್ಲಶೋಣಿತ."**[೨]

ಹೀಗೆ ಸದ್ಗುರುಕೃಪಾವಿಶೇಷದಿಂದ ಪಂಚಾಚಾರಗಳನ್ನು ಮತ್ತು ಈ ಆರು ಕ್ರಿಯಾ ಚಾರಗಳನ್ನು ಅರಿದು ಅನುಭವಿಸಿ, ಅಂಗಸ್ಥಲ ಲಿಂಗಸ್ಥಲಗಳಾದ ಏಕೋತ್ತರಶತಸ್ಥಲವ ಮೀರಿ, ಬಯಲೊಳಗೆ ಬಯಲಾಗಿ, ನಿರ್ವಯಲ ಸಾಧಿಸುವುದೇ ಸರ್ವಾಚಾರಸಂಪತ್ತಿ

೧. **ಚಬವ.** ೧೫೦. ೨. **ಚಬವ.** ೧೭೬.

ನಾಚಾರದ ನಿಲುಕಡೆ. ಈ ಸರ್ವಾಚಾರಸಂಪತ್ತಿನಾಚರಣೆಯಲ್ಲಿ ಸಾಧಕ ಸಿದ್ಧನಾಗುತ್ತಾನೆ. ಈ ಸಿದ್ಧನಲ್ಲಿ 'ಅಷ್ಟಾವರಣವೇ ಲಿಂಗ ಪಂಚಾಚಾರವೇ ಪ್ರಾಣ'ವಾಗುವುದರಿಂದ ಪಂಚಾಚಾರಗಳು ಸಪ್ತಾಚಾರದಲ್ಲಿ ಲೀಯವಾಗಿ ತಮ್ಮ ಬಾಹ್ಯಾಸ್ತಿತ್ವವನ್ನು ಕಳೆದುಕೊಳ್ಳುತ್ತವೆ. ಈ ಮಾತನ್ನೇ ಚನ್ನಬಸವಣ್ಣನವರು 'ಪಂಚಾಚಾರವ ಬಹಿಷ್ಕರಿಸಿ, ಸಪ್ತಾಚಾರವ ಗೋಪ್ಯವ ಮಾಡಿ......ನಿಂದ ಪರಮಸುಖಿ ನಿಮ್ಮ ಶರಣ' ಎಂದು ಹೇಳುತ್ತಾರೆ.

ಹೀಗೆ ಸತ್ಕ್ರಿಯಾ ಸಾಧಕನು ಬಾಹ್ಯಾಚರಣೆ ಪ್ರಧಾನವಾದ ಪಂಚಾಚಾರಗಳನ್ನು ಅರಿದು ಆಚರಿಸುತ್ತ ಬಹಿರಂಗ ಶುದ್ಧಿಯಿಂದ ಸರ್ವವಿಧವಾದ ಪೂರ್ವಾಶ್ರಯವಳಿದು, ಅಂತರಂಗಾಚರಣೆಯಾದ ಸಪ್ತಾಚಾರವನ್ನು ತನ್ನಲ್ಲಿ ಅಳವಡಿಸಿಕೊಂಡು, ನಿರವಯ ನಿಲುಕಡೆಯನ್ನು ಹೊಂದುತ್ತಾನೆ. ಅದು ಹೇಗೆ ಎಂಬುದನ್ನು ಚನ್ನಬಸವಣ್ಣನವರು ತಮ್ಮ ಈ ಕೆಳಗಿನ ವಚನದಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ:

> **"ಹೊಱಗನೆ ಹಾರೈಸಿ ಹೊಱಗಣ ಸದಾಚಾರಕ್ರಿಯೆಗಳ**
> **ಮನಮುಟ್ಟಿ ಮಾಡುತ್ತಿರಲು,**
> **ಇದೆಲ್ಲಿಯು ಹೊಱಗಣ ಸುಖವೆಂದು**
> **ಸುವಿಚಾರ ಕಣ್ದೆಱೆದು ನೋಡಲು,**
> **ಕನ್ನಡಿಯೊಳಗಣ ರೂಪು ತಾನೆಂದಱೆವಂತೆ**
> **ಮೆಲ್ಲ ಮೆಲ್ಲನೆ ಒಳಗೆ ಅಡಗಿತ್ತಯ್ಯಾ.**
> **ಲಿಂಗ ಸುಖದ ಸುಗ್ಗಿಯಲ್ಲಿ ಎನ್ನ ಪ್ರಾಣಮನಕರಣಂಗಳು**
> **ಮೇಱೆದಪ್ಪಿದ ಸುಖ ಸಮುದ್ರದೊಳಗೋಲಾಡಿದಂತಾದೆನಯ್ಯಾ.**
> **ಮುಳುಗಿದೆನಯ್ಯಾ ಸ್ವಾನುಭಾವವೆಂಬ ಗುರುವಿನ ಕರುಣದಲ್ಲಿ.**
> **ಇಂತಾದ ಬಳಿಕ, ಕೂಡಲ ಚನ್ನಸಂಗಯ್ಯನೆ**
> **ಪ್ರಾಣವಾಗಿದ್ದೆನಯ್ಯಾ."[೧]**

ಹೀಗೆ ಸ್ವಾನುಭಾವವೆಂಬ ಗುರುವಿನ ಕರುಣದಲ್ಲಿ ಮುಳುಗಿ, ಲಿಂಗಸುಖದ ಸುಗ್ಗಿಯನ್ನು ಅನುಭವಿಸುವುದೇ ಲಿಂಗಾಂಗ ಸಾಮರಸ್ಯ.

ವೀರಶೈವದಲ್ಲಿ ಈ ಸಾಧನಾಕ್ರಮ ವಿಕಾಸವಾದ (Doctrine of Evolution) ವನ್ನು ಅನುಸರಿಸುತ್ತದೆ. ಸಾಧಕನಾದ ಭಕ್ತನ

**"ಅಂಗ, ಆಚಾರದಲ್ಲಿ ಸಂಗವಾಯಿತ್ತು; ಆಚಾರ, ಪ್ರಾಣದಲ್ಲಿ ಸಂಗವಾಯಿತ್ತು; ಪ್ರಾಣ, ಲಿಂಗದಲ್ಲಿ ಸಂಗವಾಯಿತ್ತು. ಪ್ರಾಣಕ್ಕೆ ಪ್ರಾಣವಾಗಿ ಉಭಯಪ್ರಾಣ ಕೂಡಲ ಚನ್ನ ಸಂಗಮದೇವಾ."[೨]**

ಅವನ ಈ ಸಾಧನಾವಸ್ಥೆಯ ವಿಕಾಸಕ್ರಮ ಸ್ಥೂಲವಾಗಿ ಷಡುಸ್ಥಲ ಕ್ರಮವನ್ನು ಅನುಸರಿಸುತ್ತದೆ. ಆದುದರಿಂದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ—ಇವು ಆ ಸಾಧಕನ ಸಿದ್ಧಾವಸ್ಥೆಗೆ ಏರುವ ಆರು ಹಂತಗಳು (Stages). ಗುರು

---

೧. ಚಬವ. ೧೦೫೯.　　೨. ಚಬವ. ೮೮೩.

ಲಿಂಗ ಜಂಗಮರಿಗೆ ತಾನು ಭೃತ್ಯನೆಂದಾಚರಿಸುವಾಗ ಭಕ್ತಸ್ಥಲದಲ್ಲಿಯೂ, ಗುರು ಲಿಂಗ ಜಂಗಮದಲ್ಲಿ ನಿಷ್ಕಾಮಪರನಾಗಿ ಓಲೈಸುವಾಗ ಮಹೇಶ್ವರಸ್ಥಲದಲ್ಲಿಯೂ ಗುರುಲಿಂಗ ಜಂಗಮರಲ್ಲಿ ಸರ್ವಾರ್ಪಿತ ಬುದ್ಧಿ ತೋರಿದಾಗ ಪ್ರಸಾದಿಸ್ಥಲದಲ್ಲಿಯೂ 'ಲಿಂಗಮಯಂ ಇದಂ ಜಗತ್' ಎಂದು ಅರಿವುಂಟಾದಾಗ ಪ್ರಾಣಲಿಂಗಿಸ್ಥಲದಲ್ಲಿಯೂ, ತಾನು ಸ್ವತಃ ಲಿಂಗವೇ ಎಂಬ ಜ್ಞಾನವುಂಟಾದಾಗ ಶರಣಸ್ಥಲದಲ್ಲಿಯೂ, ತಾನೇ ಲಿಂಗವಾದಾಗ ಐಕ್ಯಸ್ಥಲದಲ್ಲಿಯೂ, ಆ ಸಾಧಕ ಸಂಚರಿಸುತ್ತಾನೆ. ಈ ರೀತಿಯಾಗಿ ಈ ಸ್ಥಲಗಳು ಬೇರೆಯೆಂದು ತಿಳಿದು ಬಾಹ್ಯದಲ್ಲಿ ಆಚರಿಸಿದರೂ, ಅಂತರಂಗದಲ್ಲಿ ಏಕರೂಪತೆ ಬೆಳೆದುಕೊಂಡು ಬರುತ್ತದೆ. ಈ ರೀತಿಯ ಸಾಧನಾಕ್ರಮದಿಂದ ಸಿದ್ಧನಾದ ಗುರುವರ್ಯ ಬಸವಣ್ಣನನ್ನು ಕುರಿತು ಚನ್ನಬಸವಣ್ಣನವರು ಹೀಗೆ ಹೇಳುತ್ತಾರೆ:

> **"ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನೆಂದು**
> **ಬೇಱೆ ಮಾಡಿ ನಡೆದು, ಬೇಱೆ ಮಾಡಿ ನುಡಿದು,**
> **ಭಿನ್ನವಿಲ್ಲದ ಅಂತರಂಗದಲ್ಲಿ ಅಱಿವು ಪರಿಪೂರ್ಣ,**
> **ಬಾಹ್ಯರಂಗದಲ್ಲಿ ದಾಸೋಹಸಂಪನ್ನ,**
> **ಮನೋವಾಕ್‍ಕರ್ಮಂಗಳಲ್ಲಿ ಸದ್ಭಕ್ತಿಸಂಪನ್ನ**
> **ಎಡೆದೆಱಹಿಲ್ಲದ ಲಿಂಗಸಂಪನ್ನ,**
> **ಸರ್ವಾಂಗದಲ್ಲಿ ಸರ್ವಾಚಾರಸಂಪನ್ನ**
> **ಕೂಡಲ ಚನ್ನಸಂಗನಲ್ಲಿ ಬಸವಣ್ಣನ ಶ್ರೀಪಾದಕ್ಕೆ**
> **ನಮೋ ನಮೋ ಎನುತಿರ್ದೆನು"**[೧]

ಹೀಗೆ ವೀರಶೈವಾಚಾರ ಸಾಧನಮಾರ್ಗವಿಡಿದು ಸರ್ವಾಚಾರಸಂಪನ್ನರಾದ ಬಸವಾದಿ ಪ್ರಮಥರು ಲಿಂಗಸ್ವರೂಪರು. ಅವರು 'ಕರ್ತೃಭೃತ್ಯಭಾವವಳಿದು, ಅಱಿವಱಿತು ಮಱಹು ನಷ್ಟವಾಗಿ ಸ್ವತಂತ್ರಶಿವಾಚಾರಿ'ಗಳು[೨] 'ಅಂಗಸ್ಥಲ ಲಿಂಗಸ್ಥಲ ಉಭಯಸ್ಥಲ ಮೂವತ್ತಾಱಱೊಳಗಾದ ಸರ್ವಾಚಾರಸಂಪತ್ತನ್ನು ಬಲ್ಲವರು'[೩] ಈ ಅವಸ್ಥೆಯಲ್ಲಿ ಜ್ಞಾತೃ–ಜ್ಞಾನ–ಜ್ಞೇಯಗಳ ಭೇದ ಶೂನ್ಯವಾಗುತ್ತದೆ. ಅಂಥ ಶರಣ ಉಭಯಾಚಾರ ತಾನೆಂದರಿಯ, ನಿತ್ಯಮುಕ್ತ, ನಿರವಯ, ಉಭಯಾತ್ಮಕ, ತಾನು ಕೂಡಲಚನ್ನಸಂಗ'. ಇದೇ ಅವನ ಜೀವನ್ಮುಕ್ತಿ. ವೀರಶೈವ ಶರಣರು ಸರ್ವಾಚಾರಸಂಪನ್ನರಾದ್ದರಿಂದ, ಅವರ ಆಚರಣೆ, ಅವರ ಜೀವನದ ಜೀವಾಳ. ಆದುದರಿಂದ ತಮ್ಮ ಕ್ರಿಯೆಯನ್ನು ಅವರು ಯಾವ ಕಾಲಕ್ಕೂ ಬಿಡುವುದಿಲ್ಲ. ಆಚರಣೆಯೆಂಬ ಕುಲುಮೆಯಲ್ಲಿ ಅನುಭವವೆಂಬ ಸುವರ್ಣವನ್ನು ಪರಿಶುದ್ಧಗೊಳಿಸಿ, ವೀರಶೈವ ಸಿದ್ಧಾಂತವೆಂಬ ಸುಂದರದರ್ಶನಮೂರ್ತಿಯನ್ನು ಮಾಡಿ ಜಗತ್ತಿಗಿತ್ತಿದ್ದಾರೆ.

ವೀರಶೈವತತ್ತ್ವದಲ್ಲಿ ವ್ಯಾಪಕತೆಯಿದೆ. ಶರಣರು ವ್ಯಾವಹಾರಿಕ ಜೀವನದಲ್ಲಿ ಪಾರಮಾರ್ಥವನ್ನು ಕಂಡುಕೊಂಡಿದ್ದಾರೆ. ಅಂತೆಯೆ ವೀರಶೈವ ಧರ್ಮ, ಸಾಮಾಜಿಕವೂ

---

೧. **ಚಬವ.** ೧೨೪. ೨. **ಚಬವ.** ೩೦೪. ೩. **ಚಬವ.** ೧೧೧.

ಅಹುದು; ಆಧ್ಯಾತ್ಮಿಕವೂ ಅಹುದು. ನಾವು ಬೆಳೆದು ಬಾಳುವ ಜಗತ್ತು ಶಿವಲಿಂಗವಾದುದರಿಂದ, ಅದೂ ಸತ್ಯ, ಅದರಲ್ಲಿಯ ನಮ್ಮ ಬಾಳು ಸತ್ಯ, ಬಾಳಿನ ಆಚರಣೆ ಸತ್ಯ. ಆದುದರಿಂದ ಜೀವನ್ಮುಕ್ತನಾದ ಶರಣ ತನ್ನ ಆದರ್ಶಮಯ ಸದಾಚಾರದಿಂದ ಭವದ ಭವಿತನವನ್ನು ಹೋಗಲಾಡಿಸುತ್ತಾನೆ. ಅಂಥ ಒಬ್ಬ ಶರಣನನ್ನು ಕುರಿತು ಚನ್ನಬಸವಣ್ಣನವರು 'ಷಟ್‌ಸ್ಥಲಜ್ಞಾನದಲ್ಲಿ ಸಿದ್ಧನಾದ ಸದ್ಗುರು ತಾನು ನಿತ್ಯನಿರ್ಮಲನಾದಡೆಯೂ, ವೀರಶೈವ ಕ್ರಮಾಚರಣೆಯನ್ನಾಚರಿಸುತ್ತ, ತನ್ನ ಶಿವಭಕ್ತಿಯ ಶಕ್ತಿಯನ್ನು ಬಿತ್ತರಿಸಲು ಅಕಸ್ಮಾತ್ ತನ್ನ ದಿವ್ಯ ದೃಷ್ಟಿಯಿಂ ಪರೀಕ್ಷಿಸಿ, ಭವಿಯ ಭವಿತ್ವವ ಕಳೆದು ಭಕ್ತನ ಮಾಡುತ್ತಿಹನು ನೋಡಾ' ಎಂದು ಹೇಳಿದ್ದಾರೆ.

ಚನ್ನಬಸವಣ್ಣನವರು ತಮ್ಮ ಈ ದರ್ಶನದಲ್ಲಿ ಸಾಮಾಜಿಕ ಜೀವನದ ಸಂಘಟನೆಯ ಮಹತ್ವವನ್ನು ಕಂಡುಕೊಂಡಿದ್ದಾರೆ. ಅವರ ಐವತ್ತು ಆಚರಣೆಗಳು (ವ. ೧೧೨) ಮತ್ತು ಅರುವತ್ತುನಾಲ್ಕು ಶೀಲಗಳು (ವ. ೪೬೦) ಪಂಚಾಚಾರ ಸಪ್ತಾಚಾರಗಳ ತಳಹದಿಯ ಮೇಲೆ ನಿಂತಿದ್ದರೂ ಬಹು ವ್ಯಾಪಕವುಳ್ಳವುಗಳಾಗಿದ್ದು ಸಾಮಾಜಿಕ ಸದಾಚಾರವನ್ನು ಉನ್ನತಾವಸ್ಥೆಗೆ ಒಯ್ಯುತ್ತವೆ. ಉದಾಹರಣೆಗೆಂದು ಕೆಲವೊಂದು ಆಚಾರಗಳನ್ನು ನಾವು ಇಲ್ಲಿ ನೋಡಬಹುದು:

"ಪರರ ಹೆಣ್ಣಿಗೆ ಕಣ್ಣಿಡದಿಹುದೆ ಒಂದನೆಯ ಆಚಾರ;
ಪರರ ದ್ರವ್ಯವ ಅಪಹಾರ ಮಾಡದಿಹುದೆ ಎರಡನೆಯ ಆಚಾರ;
ಸುಳ್ಳಾಡದಿಹುದೆ ಮೂಱನೆಯ ಆಚಾರ;
ವಿಶ್ವಾಸಘಾತವ ಮಾಡದಿಹುದೆ ನಾಲ್ಕನೆಯ ಆಚಾರ;
ಪ್ರಾಣಹಿಂಸೆಯ ಮಾಡದಿಹುದೆ ಐದನೆಯ ಆಚಾರ;
ಸಕಲ ಶಿವಶರಣರ್ಗೆ ಸಂತೋಷವಂ ಪುಟ್ಟಿಸುವುದೇ ಆಱನೆಯ ಆಚಾರ;
ಸ್ವೀಕರಿಸಿದ ನೇಮವ ಪ್ರಾಣಾಂತವಾಗಿ ಬಿಡೆನೆಂಬುದೇ ಏಳನೆಯ ಆಚಾರ;
* * * *
ಸಕಲ ಜೀವಿಗಳಿಗೆ ಹಿತವ ಬಯಸುವುದೆ ಹದಿನಾಲ್ಕನೆಯ ಆಚಾರ;
* * * *
ಶಿವಾನುಭವ ಶಾಸ್ತ್ರವ ವಿಚಾರಿಸುವುದೆ ಇಪ್ಪತ್ತೆಂಟನೆಯ ಆಚಾರ;
ಮನವ ನೋಯಿಸಿ ಮಾತನಾಡದಿಹುದೆ ಇಪ್ಪತ್ತೊಂಬತ್ತನೆಯ ಆಚಾರ;
* * * *
ಗುರುಮುಖದಿಂದ 'ತಾನಾರು, ತನ್ನ ನಿಜವೇನೆಂದು ಬೆಸಗೊಳ್ಳುವುದೆ
ಮೂವತ್ತೊಂದನೆಯ ಆಚಾರ;
* * * *
ತನ್ನ ನಿಜವಿಚಾರವ ತಾ ಮಱೆಯದೆ ಷಟ್‌ಸ್ಥಲದವರಿಗೆ ಅಱುಹಿ
ತನ್ನಂತೆ ಮಾಡುವುದೆ ನಾಲ್ವತ್ತೊಂಬತ್ತನೆಯ ಆಚಾರ;
ಇಂತಿಷ್ಟು ಆಚಾರಂಗಳ ಕಡೆ ಮುಟ್ಟಿಸುವುದೇ ಕೂಡಲ ಚನ್ನ ಸಂಗಮ
ದೇವರಲ್ಲಿ ಐವತ್ತನೆಯ ಆಚಾರ"[೧]

---

೧. ಚಬವ. ೧೧೨.

ಈ ಐವತ್ತು ಆಚಾರಗಳ ವಿಹಂಗಮ ನೋಟದಿಂದ ವೀರಶೈವಾಚರಣೆಯಲ್ಲಿರುವ ಸಾಮಾಜಿಕ ತತ್ವ (Social Philosophy) ತಿಳಿಯದಿರದು. ಇಲ್ಲಿಯ ಒಂದೊಂದು ಸೂತ್ರವು ಸಾಮಾಜಿಕ ಕಟ್ಟಳೆಯ (Social Code)ನ್ನು ಹಾಕುತ್ತದೆ. ಕ್ರಿಶ್ಚನ್ ಧರ್ಮದ 'ಹತ್ತು ಆಜ್ಞೆಗಳು' (Ten Commandments) ನಮ್ಮ ಈ ಐವತ್ತು ಆಚಾರಗಳ ಕೆಲ ಅಂಶಗಳು ಮಾತ್ರ.

ಇದು ವೀರಶೈವದ ಸರ್ವಾಚಾರಸಂಪತ್ತು; ವಿಶ್ವಧರ್ಮದ ಸಾರಸಾರಾಯ.

# ಶಿವಯೋಗನಿರ್ಣಯ

ಭಾರತೀಯ ತತ್ವಶಾಸ್ತ್ರದ ಐತಿಹ್ಯದಲ್ಲಿ, ಯೋಗದರ್ಶನಕ್ಕೆ ಒಂದು ಮಹತ್ವದ ಸ್ಥಾನವಿದೆ. ಈ ದರ್ಶನದಲ್ಲಿಯ ಸಿದ್ಧಾಂತಸಾಧನೆ ಸಿದ್ಧಿಗಳ ಕ್ರಮಬದ್ಧವಾದ ವಿವೇಚನೆಯ ಮೂಲಕ ಅದಕ್ಕೆ ಇನ್ನೂ ಹೆಚ್ಚಿನ ವೈಶಿಷ್ಟ್ಯ ಲಭಿಸಿರುತ್ತದೆ. ಪತಂಜಲಿ ಮಹರ್ಷಿಯ ಯೋಗಸೂತ್ರಗಳಿಂದ ಈ ದರ್ಶನಕ್ಕೆ ಆತನೇ ಮೂಲಪುರುಷನೆಂದು ತಿಳಿದುಬರುವುದಾದರೂ ಹಿರಣ್ಯಗರ್ಭನು ಯೋಗಶಾಸ್ತ್ರದ ಆದ್ಯಪ್ರವರ್ತಕನಾಗಿದ್ದನೆಂಬ ಒಂದು ಪ್ರತೀತಿಯೂ ಉಂಟು. ಪ್ರಾಚೀನ ಯುಗದಲ್ಲಿ ಈ ಶಾಸ್ತ್ರವು ಶೈವಧರ್ಮದ ಪರಿಸರದಲ್ಲಿ ರೂಪುಗೊಂಡು ವೃದ್ಧಿಂಗತವಾಗುತ್ತ ಬಂದಂತೆ ಕಾಣುತ್ತದೆ. ಪ್ರಾಗೈತಿಹಾಸಿಕ ಕಾಲದಲ್ಲಿ ಭಾರತೀಯ ಸಂಸ್ಕೃತಿಯ ತವರಾಗಿದ್ದ ಮೊಹೆಂಜೊದಾರೊ ಮತ್ತು ಹರಪ್ಪಗಳ ಅಗಿತಗಳಲ್ಲಿ ದೊರಕಿರುವ ಅವಶೇಷಗಳಿಂದ ಶೈವವನ್ನು ಬಳಸಿಕೊಂಡಿರುವ ಈ ಯೋಗಶಾಸ್ತ್ರದ ವಿಚಾರಗಳು, ಉಪನಿಷತ್ತು ಆಗಮ ಇತಿಹಾಸ ಪುರಾಣ ಕಾವ್ಯ ಶಾಸ್ತ್ರ ಮುಂತಾದ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಶೈವಾಗಮಪುರಾಣೋಪನಿಷತ್ತುಗಳಲ್ಲಿ ಮತ್ತು ಶಾಕ್ತ ಪಂಚರಾತ್ರಾಗಮಗಳಲ್ಲಿ ಯೋಗದ ಅಮೌಲ್ಯವಾದ ತತ್ವಗಳ ಉಲ್ಲೇಖವಿರುತ್ತದೆ. ಭಗವದ್ಗೀತೆಯು 'ಯೋಗ' ಪದಕ್ಕೆ ವ್ಯಾಪಕವಾದ ಅರ್ಥವನ್ನು ನೀಡಿ, ಮುಖ್ಯವಾಗಿ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಎಂಬ ತ್ರಿವಿಧ ಯೋಗದ ಪ್ರತಿಪಾದನೆ ಮಾಡುತ್ತದೆ. ಅಲ್ಲದೆ, ಅದರ ಹದಿನೆಂಟು ಅಧ್ಯಾಯಗಳೂ ಒಂದೊಂದು ವಿಧವಾದ ಯೋಗವನ್ನು ವಿವರಿಸುತ್ತವೆಯೆಂದು ಆ ಅಧ್ಯಾಯಗಳಿಗಿರುವ ಹೆಸರಿನಿಂದ ವಿದಿತವಾಗುತ್ತದೆ. ಯೋಗನಿರೂಪಣೆಯೇ ಪ್ರಮುಖ ವಿಷಯವಾಗಿರುವ ಯೋಗೋಪನಿಷತ್ತುಗಳಲ್ಲಿ ಯೋಗಶಾಸ್ತ್ರದ ಕೂಲಂಕಷವಾದ ವಿವೇಚನೆಯಿರುತ್ತದೆ. ಯೋಗದ ಬಗೆಗಿರುವ ಜ್ಞಾನ–ವಿಜ್ಞಾನದಲ್ಲಿ ವಿಕಾಸವುಂಟಾಗುತ್ತ ನಡೆದಂತೆ ಇದರಲ್ಲಿ ಮಂತ್ರಯೋಗ, ಹಠಯೋಗ, ಲಯಯೋಗ, ರಾಜಯೋಗ ಎಂಬ ವರ್ಗೀಕರಣವು ತಲೆದೋರಿತು. ಶೈವಪರವಾದ ಗ್ರಂಥಗಳಲ್ಲಿ ನಿರೂಪಿತವಾಗಿರುವ ಯೋಗದ ವಿವರಣೆಯಿಂದ ಶಿವಯೋಗ ಎಂಬ ಇನ್ನೊಂದು ವಿಧವಾದ ಯೋಗವೂ ಸೇರಿಕೊಂಡು 'ಯೋಗವು ಐದು ತೆರನಾಗಿರುತ್ತದೆ' ಎಂಬ ಪ್ರತೀತಿಯು ರೂಢವಾಯಿತು.

ಶಿವಾಗಮಗಳ ನಾಲ್ಕು ಪಾದಗಳಲ್ಲಿ ಯೋಗಪಾದವು ಒಂದಾಗಿರುತ್ತದೆ. ಅವುಗಳಲ್ಲಿ ಬರುವ ಶೈವಪ್ರಭೇದಗಳಲ್ಲಿ ಯೋಗಶೈವ, ಜ್ಞಾನಶೈವ ಎಂಬಿವು ಸಮಾವೇಶಗೊಂಡಿದ್ದು[೧] ಇವು ಒಂದಕ್ಕೊಂದು ಪೂರಕವಾಗಿದ್ದುವೆಂಬುದು ಮುಂದಿನ ವಿವರಣೆಯಿಂದ ತಿಳಿದುಬರುತ್ತದೆ.

> "सर्बपाप हरो योगो विरक्तस्यैव कत्यते ।
> वैराग्यात् जायते ज्ञानं ज्ञानात् योगः प्रवर्तते"[೨]

---

೧. ಪಾತಂ ೭-೨೧,೨೪. ೨. ಪಾತಂ ೧೨-೫೨.

ಪಾರಮೇಶ್ವರ ತಂತ್ರವು 'ಸಾಕಾರ' ಮತ್ತು 'ನಿರಾಕೃತಿ' ಎಂಬ ಯೋಗದ ಎರಡು ಪ್ರಕಾರಗಳನ್ನು ತಿಳಿಸುತ್ತದೆ. ಇವು ಸಗುಣ ನಿರ್ಗುಣ ಯೋಗಗಳಿಗೆ ಇಲ್ಲವೆ ಸವಿಕಲ್ಪ-ನಿರ್ವಿಕಲ್ಪ ಯೋಗಗಳಿಗೆ ಸಮಾನವಾಗಿರುತ್ತವೆಂದು ಹೇಳಬಹುದು. ಅಲ್ಲಿ ಯೋಗ, ಶೈವನ ಲಕ್ಷಣಗಳನ್ನು ನಿರೂಪಿಸುತ್ತ ಭಕ್ತಿ, ವೈರಾಗ್ಯ, ಅಭ್ಯಾಸ, ಧ್ಯಾನ, ಏಕಾಂತವಾಸ, ಭಿಕ್ಷಾಟನ, ಲಿಂಗಪೂಜೆ, ಸ್ಮರಣ—ಎಂಬೀ ಅಷ್ಟಾಂಗಗಳನ್ನು ಅವನು ಅನುಸರಿಸಬೇಕೆಂದು ವಿಧಿಸಲಾಗಿದೆ.[೧] ಶಿವಾಗಮ, ಶಿವಸಂಹಿತೆ ಮುಂತಾದ ಶೈವಪರ ಗ್ರಂಥಗಳಲ್ಲಿ 'ಶಿವಯೋಗ' ಪದವು ಧಾರಾಳವಾಗಿ ಬಳಕೆಯಾಗಿದೆ. ಇಲ್ಲಿ 'ಯೋಗ' ಎಂದರೆ 'ಕೂಡಿಕೆ' ಹೊಂದಿಕೊಂಡಿರುವುದು ಎಂಬ ಅರ್ಥವಿದೆ. ಶಿವನೊಡನೆ ಕೂಡಿಕೊಂಡಿರುವ ನಿಲವನ್ನು ಶಿವಯೋಗವು ತಿಳಿಸುತ್ತದೆ. ಇಂಥ ಸ್ಥಿತಿಯನ್ನು ಹೊಂದಿದವರಿಗೆ 'ಶಿವ ಯೋಗಿಗಳು' ಎಂದು ಹೆಸರು. ಶಿವನ ಲಾಂಛನಗಳನ್ನು ಧರಿಸಿಕೊಂಡು ಲಿಂಗಾರ್ಚನೆ ಲಿಂಗಪೂಜೆಗಳನ್ನು ನೆರವೇರಿಸುತ್ತಿದ್ದವರಿಗೆಲ್ಲ 'ಶಿವಯೋಗಿಗಳು' ಎಂದು ಸಂಬೋಧಿಸುವ ರೂಢಿಯಿತ್ತು. ವೈವಾಹಿಕ ಜೀವನವನ್ನು ಸಾಗಿಸುತ್ತಿದ್ದ ಶಿವಯೋಗಿಯ ಅರ್ಧಾಂಗಿನಿಗೆ 'ಶಿವಯೋಗಿನಿ' ಎಂದು ಕರೆಯಲಾಗುತ್ತಿತ್ತು.[೨] ಶಿವಯೋಗಿಗಳಲ್ಲಿ ಜಾತಿ ಭೇದಕ್ಕಾಗಲಿ ದೃಷ್ಟಿಸ್ಪೃಷ್ಟ ದೋಷಕ್ಕಾಗಲಿ ಅವಕಾಶವಿರುತ್ತಿರಲಿಲ್ಲ. ಆದರೆ, ಶಿವ ಯೋಗಿಯು ಶಿವಯೋಗಿಗಳ ಸೇವೆಗೈಯುವ ಮತ್ತು ಶಿವಯೋಗಿಯು ಶಿವಯೋಗಿನಿ ಯರ ಸಪರ್ಯ ನಡೆಸುವ ಪರಿಪಾಠವಿರುತ್ತಿತ್ತು.[೩]

ಶಿವಾಗಮಗಳು ಅನಾದಿಶೈವ, ಆದಿಶೈವ, ಅನುಶೈವ, ಮಹಾಶೈವ, ಜ್ಞಾನಶೈವ ಮತ್ತು ವೀರಶೈವ ಎಂಬ ಸಪ್ತ ಪ್ರಭೇದಗಳನ್ನು ತಿಳಿಸುತ್ತಿದ್ದು[೪] ಇವುಗಳ ಉಲ್ಲೇಖವು ವಚನಶಾಸ್ತ್ರದಲ್ಲಿಯೂ ಬರುತ್ತದೆ. ಇದಲ್ಲದೆ. ಅವಾಂತರಶೈವ, ಪ್ರವರಶೈವ, ಶುದ್ಧ ಶೈವ, ಮಿಶ್ರಶೈವ, ಮಾರ್ಗಶೈವ ಎಂಬ ಬೇರೆ ಕೆಲವು ಪ್ರಭೇದಗಳೂ ಶೈವರಲ್ಲಿದ್ದುವು. ಇವರಿಗೆಲ್ಲ ಶಿವನೇ ಆರಾಧ್ಯದೇವತೆ. ಸಪ್ತವಿಧಶೈವ ಪ್ರಭೇದಗಳಲ್ಲಿ ಕೊನೆಯದಾದ ವೀರಶೈವಮಾರ್ಗಾವಲಂಬಿಗಳಿಗೆ ಪೂರ್ವದ ಆರು ಪ್ರಕಾರದ ಶೈವರ ಆಚರಣೆಗಳನ್ನು ಪಾಲಿಸುತ್ತ ಬಂದು ವೀರಶೈವತ್ವವನ್ನು ಹೊಂದಬೇಕಾಗುತ್ತಿತ್ತು. ವೀರಶೈವರಿಗೆ ಜ್ಞಾನ, ಯೋಗ ಎರಡೂ ಗಮ್ಯವಿಷಯಗಳಾಗಿದ್ದುವು. ಜ್ಞಾನವಿಲ್ಲದ ಯೋಗವೂ, ಯೋಗ ವಿಲ್ಲದ ಜ್ಞಾನವೂ ಜ್ಞಾನಯೋಗಗಳೆರಡೂ ಇಲ್ಲದ ಜೀವನವೂ ನಿರರ್ಥಕವೆಂದು ಅವರು ತಿಳಿಯುತ್ತಿದ್ದರು.[೫] ಇವೆರಡನ್ನೂ ನಡೆಸಿಕೊಂಡು ಹೋಗುವುದಕ್ಕೆ ಸ್ವಶರೀರ ರಕ್ಷಣೆ ಮಾಡುವುದು ಜ್ಞಾನಯೋಗಸಾಧಕರಿಗೆ ಆದ್ಯಕರ್ತವ್ಯವೆಂಬುದನ್ನು ಶಿವಯೋಗ ಪ್ರದೀಪಿಕೆಯು ಹೇಳುತ್ತದೆ.

**"योगात् संजायते ज्ञानं ज्ञानात् योगः प्रवर्तते ।**
**द्वयोः संसिद्धये भूमौ शरीरं रक्षयेत् बुधः"**[೬]

೧. ಪಾತಂ, ೭-೫೫,೫೬. ೨. ಪಾತಂ. ೪-೭. ೩. ಪಾತಂ, ೧೨-೫೦, ೫೩, ೪. ಪಾತಂ. ೭-೭, ೩೮.
೫. ಪಾತಂ ೭-೩೭, ೩೮. ೬. ಶಿಪ್ರ ೨-೨.

ಸರ್ವಭೋಗಪ್ರದವಾದ ಪಾವನಾತ್ಮಕವಾದ ಶಿವಸಾಯುಜ್ಯವನ್ನು ಪಡೆಯುವುದು ಆಗಮಕಾಲದ ಶಿವಯೋಗಿಗಳ ಜೀವನದ ಆತ್ಯಂತಿಕ ಉದ್ಧೇಶವಾಗಿರುತ್ತಿತ್ತು. ಜ್ಞಾನ ಯೋಗದ ಸಿದ್ಧಿಗಾಗಿ ಅಂತಶ್ಶುದ್ಧಿ ಬಹಿಶ್ಶುದ್ಧಿಗಳನ್ನು ಸಂಪಾದಿಸಿ, ಕರ್ಮಬಂಧವನ್ನು ಕಳಚಿಕೊಳ್ಳುವುದೂ ಅದಕ್ಕಾಗಿ ತಪ, ಕರ್ಮ, ಜಪ, ಧ್ಯಾನ, ಜ್ಞಾನ, ಎಂಬ ಐವಗೆಯಾದ ಸಾಧನಗಳಲ್ಲಿ ನಿರತನಾಗಿರುವುದೂ[1] ತನ್ಮೂಲಕ ಆತ್ಯಂತಿಕ ಉದ್ದೇಶವನ್ನು ಈಡೇರಿಸಿ ಕೊಳ್ಳುವುದೂ ಅವರಿಗೆ ಇಷ್ಟವಾಗಿರುತ್ತಿತ್ತು. ಇದಕ್ಕೋಸುಗ ಅವರು ಆರಾಧಿಸುತ್ತಿದ್ದ ಲಿಂಗವು ಅವರಿಗೆ ಇಷ್ಟಲಿಂಗವೆನಿಸುತ್ತಿತ್ತು. ಈ ಆರಾಧನೆ ಅವರಿಗೆ ಪ್ರಾಣದಷ್ಟು ಪ್ರಿಯವಾಗಿರುತ್ತಿದ್ದುದರಿಂದ ಅದುವೆ ಅವರಿಗೆ ಪ್ರಾಣಲಿಂಗವಾಗಿಯೂ ತೋರುತ್ತಿತ್ತು. ಈ ಶಿವಯೋಗಿಗಳ ಅಂತಃಪ್ರವೃತ್ತಿ, ಕ್ರಿಯೆ, ಜ್ಞಾನಸಾಧನೆ, ಸಾಧನೆಯ ವೈವಿಧ್ಯ, ಆಧ್ಯಾತ್ಮದ ನಿಲವು ಇವುಗಳಿಗನುಂಗುಣವಾಗಿ ಅವಧೂತ, ಸಂನ್ಯಾಸಿ, ಯೋಗಿ, ಪಾಶು ಪತ, ಶಿವ, ಲಿಂಗಿ, ವೀರ, ವೀರಶೈವ, ಮಹಾಮಾಹೇಶ್ವರ, ಯತಿ—ಈ ಮುಂತಾದ ಪದ ಗಳಿಂದ ಅವರನ್ನು ಸಂಬೋಧಿಸುತ್ತಿದ್ದರು.[2]

ಶಿವಾಗಮಗಳ ಯೋಗಪಾದದಲ್ಲಿ ಪರಂಪರಾಗತವಾದ ಯೋಗದ ಅಷ್ಟಾಂಗಗಳ ನಿರೂಪಣೆಯಿರುತ್ತಿದ್ದರೂ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಗಳಿಗೆ ಆ ಕಾಲದಲ್ಲಿ ಪೂರ್ವಯೋಗವೆಂದೂ ಧ್ಯಾನಧಾರಣ, ಸಮಾಧಿಗಳಿಗೆ ಉತ್ತರಯೋಗ ವೆಂದೂ ಸಂಜ್ಞೆಯಿತ್ತು. ಶಿವಶರಣರ ಕಾಲದಲ್ಲಿ ಪೂರ್ವಯೋಗ ಉತ್ತರಯೋಗಗಳನ್ನು ಅಂಗೀಕರಿಸಿ, ಉತ್ತರಯೋಗಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟು, ಇವನ್ನು ಷಟ್‌ಸ್ಥಲದ ಯೋಜನೆಯಲ್ಲಿ ಬಳಸಿಕೊಂಡ ಪ್ರಯತ್ನವನ್ನು ಕಾಣಬಹುದು. ಆಗಮಕಾರರು ಜ್ಞಾನ, ಕ್ರಿಯೆ, ಚರ್ಯೆ, ಯೋಗ ಎಂಬ ಹೆಸರಿನಲ್ಲಿ ಆಗಮಧರ್ಮವನ್ನು ಪರಿಪಾಲಿಸುತ್ತ ಆಧ್ಯಾತ್ಮ ಸಾಧನೆಮಾಡುತ್ತಿದ್ದುದನ್ನು ಗಮನಿಸಬಹುದು. ಅಂದು ಪಶು, ಪಾಶ, ಪತಿ ಇವುಗಳ ಜ್ಞಾನಲಬ್ಧಿಯೇ ಅವರಿಗೆ ಜ್ಞಾನವಾಗಿತ್ತು; ಷಡಧ್ವಶುದ್ಧಿಯ ವಿಧಾನದಿಂದ ಕ್ರಿಯಾ ತತ್ಪರನಾಗಿರುವುದೇ ಅವರಿಗೆ ಕ್ರಿಯೆಯಾಗಿತ್ತು. ಲಿಂಗಾರ್ಚನೆ ಮೊದಲಾದ ಸ್ವಧರ್ಮ ಸದ್ಧರ್ಮ ಪಾಲನೆಯಿಂದ ಶುದ್ಧ ಮನಸ್ಸನ್ನು ಹೊಂದಿ ಅದನ್ನು ಕಾಯ್ದುಕೊಂಡು ಹೋಗುವುದೇ ಅವರಿಗೆ ಚರ್ಯೆಯಾಗಿತ್ತು. ಮತ್ತು ತಮ್ಮ ತಮ್ಮ ಚಿತ್ತವೃತ್ಯಂತರ ಗಳನ್ನು ನಿರೋಧಗೊಳಿಸಿಕೊಂಡು ಚಿತ್ತಶುದ್ಧಿಯನ್ನು ಹೊಂದುವುದೇ ಅವರಿಗೆ ಯೋಗ ವಾಗಿತ್ತು.[3] ಆದರೆ, ಸಾಮಾನ್ಯವಾಗಿ ವೀರಶೈವಪ್ರಮುಖವಾದ ಶೈವರಿಗೆಲ್ಲ ಶಿವನ ಪೂಜೆಯೇ ಶಿವಯೋಗವೆನಿಸಿತ್ತು. ಪೂಜೆಯೂ ಒಂದು ಕ್ರಿಯೆಯಾಗಿದ್ದುದರಿಂದ ಜ್ಞಾನ ಮತ್ತು ಯೋಗಗಳನ್ನು ಶಿವ, ಸೃಷ್ಟಿ, ಜೀವರುಗಳ ಬಗೆಗಿನ ತತ್ವಜ್ಞಾನ ಹಾಗೂ ಶಿವಲಿಂಗಾರ್ಚನೆ, ಪೂಜಾವೈಭವರೂಪವಾದ ಕ್ರಿಯೆ ಎಂಬ ಅರ್ಥದಲ್ಲಿ ಬಳಸುತ್ತಿದ್ದರು.

ಆಗಮಗಳಲ್ಲಿ ನಿರೂಪಿತವಾದ ಅನೇಕ ಸಿದ್ಧಾಂತಗಳನ್ನು, ಅಲ್ಲಿ ಬಳಕೆಹೊಂದಿದ ಅನೇಕ ಪದಗಳನ್ನು ಶಿವಶರಣರು ಸ್ವೀಕರಿಸಿದ್ದರೂ ಅವಕ್ಕೆ ಅವರು ನೀಡಿದ ಅನುಭವಾ- ತ್ಮಕವಾದ ಅರ್ಥವೈಭವವು ಒಂದು ವಿಶಿಷ್ಟವಾದ ಆಧ್ಯಾತ್ಮ ಸಂಪತ್ತಿಯನ್ನು ಸೂಚಿಸು

೧. ಪಾತಂ. ೧೨,೧೩,೧೪. ೨. ಪಾತಂ. ೮–೬೭, ೬೮. ೩. ಪಾತಂ ೧೨–೪೬,೫೦.

ತ್ತದೆ. 'ಶಿವಯೋಗ' ಎಂಬ ಪದವು ಸಹ ಇಂಥ ಒಂದು ಅನನ್ಯವಾದ ಅನುಭಾವದ ನಿಲವನ್ನು ಸೂಚಿಸುತ್ತದೆ. ಶಿವಶರಣರಿಗೆ ಷಟ್‌ಸ್ಥಲವು ಒಂದು ಸಾಧನ ಪಥವಾದರೆ, ಶಿವಯೋಗವು ಅಥವಾ ಸಾಮರಸ್ಯವು ಅದರ ಪರಮ ಸಿದ್ಧಿಯಾಗಿರುತ್ತದೆ. ಅವರ ಪ್ರಾಣಲಿಂಗಿಸ್ಥಲವು ಶಿವಯೋಗದ ಆಚರಣೆಯ ಮಹೋನ್ನತವಾದ ನಿಲವಾಗಿರುತ್ತದೆ. ಏಕೋತ್ತರ ಶತಸ್ಥಲದ ಅವರ ತತ್ವ ಸಾಧನೆಯ ಯೋಜನೆಯಲ್ಲಿ ಶಿವಯೋಗ ಸಮಾಧಿಯೂ ಒಂದು ಸ್ಥಲವಾಗಿರುತ್ತದೆ. ಅವರ ವಚನಗಳ ಉದ್ದಕ್ಕೂ ಬರುವ ಶಿವಯೋಗಿ, ಜಂಗಮ, ಶರಣ, ಶಿವಶರಣ ಎಂಬ ಪದಗಳು ಶಿವಶರಣಪಥದಲ್ಲಿ ಸಮಾನಾರ್ಥಕವಾಗಿರುತ್ತವೆ. ಈ ಶಿವಯೋಗಿಗಳ ಆಚರಣೆಯು ಪರಂಪರಾಗತವಾಗಿ ಇಂದಿನವರೆಗೂ ಸಾಗಿ ಬಂದಿದ್ದು, ಆದರ್ಶ ಶಿವಯೋಗಿಗಳು ಕಾಲಕಾಲಕ್ಕೆ ಅವತರಿಸಿ, ಲೋಕಹಿತವನ್ನು ಸಂಕಲ್ಪಿಸುತ್ತ ಅದನ್ನು ರೂಪಿಸುತ್ತ ಬಂದಿರುತ್ತಾರೆ. ಕನ್ನಡ ನಾಡಿನಲ್ಲಿ ಶಿವಯೋಗಿಗಳ ಬಹು ದೊಡ್ಡ ಪರಂಪರೆಯು ನಡೆದುಬಂದಿರುತ್ತದೆಂಬುದು ಅದರ ಆಧ್ಯಾತ್ಮಿಕ ಇತಿಹಾಸದಿಂದ ವಿದಿತವಾಗುತ್ತದೆ.

'ಯುಜ್–ಸಮಾಧೌ' ಎಂಬ ಧಾತುವಿನಿಂದ ನಿಷ್ಪನ್ನವಾದ 'ಯೋಗ' ಶಬ್ದವು ಎರಡಾದರೂ ವಸ್ತುಗಳು ಕೂಡಬೇಕೆಂಬುದನ್ನು ಸೂಚಿಸುತ್ತದೆ. ಪ್ರತಿಯೊಂದು ಪ್ರಕಾರದ ಯೋಗದಲ್ಲಿಯೂ ಎರಡರ ಮೇಳವನ್ನು ಸಾಧಿಸಲಾಗುತ್ತದೆ. ಮಂತ್ರಯೋಗದಲ್ಲಿ ವೈಖರೀವಾಣಿ, ಪರಾವಾಣಿಗಳನ್ನು ಒಂದುಗೂಡಿಸಿ ಮಂತ್ರಯೋಗಿಗಳು ಪರಾವಾಣಿಯ ನಾಲಿಸುತ್ತ ತನ್ಮಯರಾಗುವರು. ಹಠಯೋಗದಲ್ಲಿ—ಪ್ರಾಣ ಅಪಾನವಾಯುಗಳನ್ನು ಮೇಳೈಸಿ, ಹಠಯೋಗಿಗಳು ಪ್ರಾಣಶಕ್ತಿಯ ಸಾಮರ್ಥ್ಯವನ್ನು ಕಾಣುವರು. ಲಯ ಯೋಗದಲ್ಲಿ—ನಾದ ಬಿಂದುಗಳನ್ನು ಬೆರಸಿ, ಲಯಯೋಗಿಗಳು ಮನಮಾರುತಗಳ ಉಲುಹನ್ನು ಅಡಗಿಸಿ, ನಾದಾತೀತದ ನಿಲವನ್ನು ಸಾಧಿಸುವರು. ರಾಜಯೋಗದಲ್ಲಿ—ಚಂದ್ರ ಸೂರ್ಯರನ್ನು ಅಥವಾ ಇಡಾ ಪಿಂಗಳಾ ನಾಡಿಗಳನ್ನು ಒಂದುಗೂಡಿಸಿ, ರಾಜ ಯೋಗಿಗಳು ದೃಷ್ಟಿಯೋಗ ಸಿದ್ಧಿಯನ್ನು ಪಡೆಯುವರು. ಅದರಂತೆ ಶಿವಯೋಗದಲ್ಲಿ—ಶಿವ ಮತ್ತು ಶಕ್ತಿಗಳನ್ನು ಒಟ್ಟುಗೂಡಿಸಿ, ಶಿವಯೋಗಿಗಳು ಶಿವಶಕ್ತಿಗಳ ಅವಿನಾಭಾವ ಸಂಬಂಧವನ್ನು ಕಾಣುವರು; ಸಾಮರಸ್ಯ ಸುಖವನ್ನನುಭವಿಸುವರು.

ಶಿವಶಕ್ತಿಗಳ ಅವಿನಾಭಾವ ಸಂಬಂಧವನ್ನು ಶಿವಯೋಗಿಗಳು ಐದು ಪ್ರಕಾರದ ವಿಧಾನದಿಂದ ಕಾಣುತ್ತಾರೆಂದು ಶಿವಯೋಗ ಪ್ರದೀಪಿಕೆಯು ತಿಳಿಸುತ್ತದೆ.

**"ज्ञानं शिवमयं भक्तिः शौबीध्यानं शिवात्मकम्**
**शौबं मंत्रं शिवार्चेति शिवयोगो हि पंचधा"**[೧]

ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವಮಂತ್ರ ಎಂಬೀ ನಾಲ್ಕು ತೆರನಾದ ಸಾಧನೆಯನ್ನು ಗರ್ಭೀಕರಿಸಿಕೊಂಡಿರುವ ಶಿವಪೂಜೆಯೆ ಶಿವಯೋಗದಲ್ಲಿ ಮುಖ್ಯ ಸಾಧನವಾಗಿರುತ್ತದೆ. ಪೂಜಾಪ್ರಧಾನವಾದ ಈ ಶಿವಯೋಗದಲ್ಲಿ ಭಕ್ತಿ, ಜ್ಞಾನ, ಧ್ಯಾನ, ಜಪಾದಿಗಳು ಅಂತ-ರ್ಭೂತವಾಗಿರುವುದರಿಂದ ಪ್ರತ್ಯೇಕವಾಗಿಯಾಗಲಿ, ಇಲ್ಲವೆ ಏಕಕಾಲದಲ್ಲಿಯಾಗಲಿ ಈ

೧. ಶಿಪ್ರ ೧–೧೫.

ಐದೂ ಅಂಗಗಳು ಶಿವಯೋಗಸಾಧನೆಗೆ ಅನಿವಾರ್ಯವಾಗುವುವು. 'ಕರಸ್ಥಲದಲ್ಲಿ ಲಿಂಗವ ಧರಿಸಿದಾತ ಉದಯಾಸ್ತಮಾನವೆನ್ನದೆ ಶಿವಪೂಜೆ, ಶಿವಮಂತ್ರ, ಶಿವಾರ್ಪಣ, ಶಿವಶಾಸ್ತ್ರ, ಶಿವಯೋಗವಲ್ಲಿರುವನು'[೧] ಎಂದು ಚನ್ನಬಸವಣ್ಣನವರು ಶಿವಯೋಗ ಲಕ್ಷಣವನ್ನು ನಿರೂಪಿಸಿರುವರು.

ಆಗಮಕಾರರು ಶಿವಾಲಯಗಳಲ್ಲಿ ಅರ್ಚಿಸುತ್ತಿದ್ದ ಲಿಂಗವಾಗಲಿ ಇಲ್ಲವೆ ಶಿವ ಶರಣರು ತಮ್ಮ ಕರಸ್ಥಲದಲ್ಲಿರಿಸಿಕೊಂಡು ಪೂಜಿಸುತ್ತಿರುವ ಲಿಂಗವಾಗಲಿ ನಿರಾಕಾರ ಪರಶಿವನ ಸಾಕಾರ ರೂಪವಾಗಿರುತ್ತದೆ. ನಿರ್ದ್ವಂದ್ವ, ನಿರುಪಾಧಿಕ, ನಿತ್ಯ, ನಿರವಯ, ನಿರಂಜನ, ಪರಂಜ್ಯೋತಿಸ್ವರೂಪನಾಗಿರುವ ಅವನು 'ನೇತಿ' ಪದವಾಚ್ಯನಾಗಿದ್ದಾನೆ. 'ಪರಮಲೀಲಾ ವಿನೋದದಿಂದ ಪರಶಕ್ತಿ ಸಂಯುತ'ನಾಗಿರುವ ಅವನು ಆ ಶಕ್ತಿಯ ಮುಖಾಂತರ 'ಪರಾಪರ ವಿನೋದದಿಂದ ಅಖಿಲ ಬ್ರಹ್ಮಾಂಡವನ್ನೂ ಅನಂತ ಆತ್ಮ ರನ್ನೂ ನಿರ್ಮಿಸಿ ತನ್ನ ಲೀಲಾ ವಿನೋದವನ್ನು ನಿರಂತರವಾಗಿ ನಟಿಸುತ್ತಿರುವನು'[೨] ಎಂದು ಶಿವಶರಣರು ನಂಬುತ್ತಾರೆ. ಸ್ವಪ್ರಕಾಶದ ವಿಮರ್ಶೆಯುಳ್ಳ ಪರಶಿವನಿಂದ ಅವನ ಒಂದು ಅಂಶಮಾತ್ರವಾಗಿ ಉದಿಸಿದ ಆತ್ಮನು ನಿಜವಾಗಿ ಅರಿವಿನ ಪ್ರಕಾಶವುಳ್ಳವನೆ. ಆದರೆ, ಜಡವಾದ ಪ್ರಕೃತಿಯ ದೆಸೆಯಿಂದ ಮತ್ತು ಅವನು ಧರಿಸಿರುವ ಪ್ರಕೃತಿರೂಪ ವಾದ ದೇಹದ ದೆಸೆಯಿಂದ ತಮಸ್ಸು ಆವರಿಸಿ, ಅವನು ಸ್ವಸ್ವರೂಪಜ್ಞಾನವನ್ನು ಮರೆ ತಿರುವನು. ಸ್ವಸ್ವರೂಪಜ್ಞಾನವನ್ನು ಹೊಂದಿ ಪರಶಿವನಲ್ಲಿ ಅವನು ಸಮರಸವಾಗಬೇಕು; ಮಾತ್ರವಲ್ಲ ಸ್ವಸ್ವರೂಪಜ್ಞಾನ ಪಡೆಯಲು ದೇಹವ ಧರಿಸಿ ಬಂದಿರುವ ಇನ್ನುಳಿದ ಆತ್ಮರಿಗೆ ನೆರವಾಗಬೇಕು, ಇದರಿಂದ ಪರಶಿವಲೀಲೆಯಲ್ಲಿ ತಕ್ಕ ಉಪಕರಣವಾಗಿ, ಸಲುವ ಪಾತ್ರ ಧಾರಿಯಾಗಿ ಅವನು ರೂಪುಗೊಳ್ಳಬೇಕು. ಇದು ಶಿವ-ಶಕ್ತಿ ಸಂಚದ ಲೀಲೆಯು ತೆರೆ ದಿರಿಸಿದ ಪರಮ ರಹಸ್ಯವಾಗಿರುತ್ತದೆ.

ಪರಶಿವನ ಲೀಲೆಯಲ್ಲಿ ಆತ್ಮನಿಗೆ ತನುವಿನ ಸಂಗವಾದೊಡನೆ ಪ್ರಾಣಸಂಚಾರವೂ ಅದರಲ್ಲಿ ಮೂಡಿಕೊಳ್ಳುವುದು. ಆತ್ಮನು ಪ್ರಾಣದೊಡನೆ ತಾದಾತ್ಮ್ಯಗೊಳ್ಳುವುದ ರಿಂದ ಮನವೂ ನಿರ್ಮಾಣವಾಗುವುದು. ಆತ್ಮಪರಮಾತ್ಮರ ಸಾಮರಸ್ಯದ ಸಾಧನೆಗೆ ಆ ಪರವಸ್ತುವಿನಿಂದ ರಚಿತವಾದ ಸೃಷ್ಟಿಯು ಅವಶ್ಯವಾಗುವಂತೆ ಆತ್ಮನು ತೊಡುವ ತನುವು ಸಹ ಅನಿವಾರ್ಯವಾಗುವುದು. 'ಸಾಮರಸ್ಯಕ್ಕೆ ಅಡೆತಡೆಯನ್ನು ಒಡ್ಡುವುದು ತನುವಲ್ಲ; ತನುವಿನ ಪ್ರಾಕೃತಿಕಸ್ವರೂಪ, ಅದರಲ್ಲಿ ತೋರುವ ಪ್ರಾಣ, ಅದರೊಡನೆ ಹುಟ್ಟಿಕೊಳ್ಳುವ ಮನ' ಎಂದು ಯೋಗಸಾಧಕನ ಅನುಭವ. ತನು, ಪ್ರಾಣ, ಮನ ಗಳಲ್ಲಿ ಪ್ರಾಣದ ಸಂಚಾರದಿಂದ ಅವುಗಳಿಗೆ ಅಸ್ತಿತ್ವವುಂಟಾಗುವುದರಿಂದ ಪ್ರಾಣಕ್ಕೆ ಆಧಿಕ್ಯವಿದೆ. ಆತ್ಮಪರಮಾತ್ಮರ ಮಧ್ಯದಲ್ಲಿ ಪ್ರಾಣವು ಒಂದು ತೆರೆಯಾಗಿ ಬಂದು ಆ ಸಾಮರಸ್ಯವನ್ನು ದೂರವಾಗಿರಿಸಿದೆ. ಬಂಧನ ಬಿಡುಗಡೆಗಳಿಗೆ ಮನವೆ ಮೂಲಕಾರಣ ವೆಂದು ತಿಳಿಯುವುದಾದರೂ ತನುವು ಆತ್ಮನನ್ನು ಬಂಧಿಸಿರುವ ಒಂದು ಬಲೆಯಾಗಿದೆ ಯೆಂದು ಭಾವಿಸುವುದಾದರೂ ಮನಕ್ಕೆ ಸ್ವತಂತ್ರವಾದ ಅಸ್ತಿತ್ವವಿಲ್ಲ; ಪ್ರಾಣವಿಲ್ಲದಿದ್ದರೆ

---

೧. **ಚಬವ.** ೨೧೮. ೨. **ಚಬವ.** ೪೮೦.

ತನುವಿಗೆ ಆಧಾರವಿಲ್ಲ. ಆದ್ದರಿಂದ ಸಾಮರಸ್ಯದ ಸಾಧನೆಯಲ್ಲಿ ಪ್ರಾಣವು ಅತಿ ಪ್ರಮುಖ ವಾದ ಪಾತ್ರವನ್ನಾಡುವುದು ಎಂದೆನ್ನಬಹುದು.

ಮಾನವದೇಹಗಳ ಪ್ರಾಣವು ಅನೇಕ ಕಾರಣಗಳ ಮೂಲಕ ತಾಳ ಲಯ ಬದ್ಧ ವಾಗಿರುವುದಿಲ್ಲ. ಆದ್ದರಿಂದ ಮನವೂ ಸಹ ಸದೋಷವಾಗಿ ಪ್ರಾಣದಂತೆ ಸದಾ ಸಂಚಲನ ಸ್ವಭಾವವುಳ್ಳದ್ದಾಗುವುದು. ಇದರಿಂದ ಆ ದೇಹದಲ್ಲಿ ವ್ಯಕ್ತವಾಗಿ ಇಲ್ಲವೆ ಅವ್ಯಕ್ತವಾಗಿ ಬಗೆಬಗೆಯ ವಾಸನೆಗಳು, ಕಾಮನೆಗಳು ಸಂಗ್ರಹವಾಗಿ ಅರಿಷಡ್ವರ್ಗ, ಸಪ್ತವ್ಯಸನ, ಅಷ್ಟ ಮದ ಮುಂತಾದ ಅಮಂಗಲ ಗುಣಗಳಿಗೆ ಅದು ತವರಾಗಿ ತೋರುತ್ತದೆ. ಅಶುದ್ಧ ಪ್ರಾಣ, ಮನಗಳಿಂದ ಆತ್ಮನಿಗೆ ಸ್ವರೂಪವಿಸ್ಮೃತಿಯೊದಗಿ ಅವನು 'ಜೀವ'ನೆಂಬ ಸಂಜ್ಞೆ ಗೊಳ್ಳುವನು. ಅದಕ್ಕೋಸುಗ ತನುವಿಗೆ ಸಂಸ್ಕಾರವಾಗಬೇಕು. ಇಷ್ಟೇ ಅಲ್ಲ, ಜೀವ ನಿಗೂ ಸಂಸ್ಕಾರವಾಗಬೇಕು. ಅಂದರೆ ಶುದ್ಧಾತ್ಮನೆನಿಸಿ ಅವನು ಪರಶಿವನೊಡನೆ ಒಂದಾಗಿ ಬಾಳಲು ಅನುವಾಗುವುದು.

**'ಘಟ ಸಂಸ್ಕಾರದಲ್ಲಿ ಪಟಲ ಹರಿವುದೆ ಜೀವಸಂಸ್ಕಾರವಿಲ್ಲದನ್ನಕ್ಕ? ವೇಷಧಾರಿ ತನದಲ್ಲಿ ಗ್ರಾಸವಹುದಲ್ಲದೆ ಜ್ಞಾನಸಂಸ್ಕಾರವಿಲ್ಲದನ್ನಕ್ಕ ಭವವೆಂತು ಹರಿವುದಯ್ಯಾ'**[೧]

ಎಂದು ಚನ್ನಬಸವಣ್ಣನವರು ವಿಚಾರಿಸುತ್ತಾರೆ. ನಿಜ ಜ್ಞಾನೋದಯವಾಗದಿದ್ದರೆ, ಆವರಣವಾಗಿ ತೋರುವ ಪ್ರಾಣದೋಷವೂ ಕೆಡದು, ಆದ್ದರಿಂದ ಭವವೂ ತಪ್ಪದು. ಜೀವಸಂಸ್ಕಾರದೊಡನೆ ಪ್ರಾಣದ ಸಂಸ್ಥಿರತೆಯನ್ನು ಪಡೆದು, ಭವವನ್ನು ಪರಿಹರಿಸಿ ಕೊಳ್ಳಲು ಸಾಧನೆಯು ಅವಶ್ಯವಾಗುವುದು. ಯೋಗಸಾಧನೆಯು ಇಂಥ ಒಂದು ಆವಶ್ಯಕತೆಯನ್ನು ಪೂರೈಸಿಕೊಡುವುದು.

ಪರಶಿವನು ಮಾನವನ ಪಿಂಡದಲ್ಲಿ ಸಹಸ್ರಾರದ ಬ್ರಹ್ಮರಂಧ್ರದಲ್ಲಿರುವನೆಂದೂ ಜೀವನು ಆ ಪಿಂಡದ ಆಧಾರಸ್ಥಾನದಲ್ಲಿರುವನೆಂದೂ ಯೋಗಶಾಸ್ತ್ರವು ತಿಳಿಸುತ್ತದೆ. ಶಿವನಂತೆ ಶಿವಶಕ್ತಿಯೂ ಮಾನವಪಿಂಡಗತವಾಗಿದ್ದು ಅದು ಅಧೋಮುಖಿಯಾಗಿ ಮಾಯಾಶಕ್ತಿಯೆಂದು, ಅಧಃಕುಂಡಿಲಿನಿಯೆಂದು ಹೆಸರಾಂತು ಆಧಾರದಲ್ಲಿ ಅವಿತು ಕೊಂಡಿರುತ್ತದೆ. ಅವರೋಹಣಕ್ರಮದಲ್ಲಿ ಪರಶಿವನ ಚಿತ್‌ಶಕ್ತಿಯು ಕಲಾರೂಪದಿಂದ ತೋರುವಂತೆ ಆತ್ಮನಲ್ಲಿ ಈ ಶಕ್ತಿಯು ಭಕ್ತಿರೂಪದಿಂದ ಕಾಣಿಸಿಕೊಳ್ಳುತ್ತದೆ. ಭಕ್ತಿ ಯನ್ನು ವಿಕಾಸಗೊಳಿಸುತ್ತ ಸಾಗಿದಂತೆ ಮಾಯಾಶಕ್ತಿಯು ಊರ್ಧ್ವಕುಂಡಲಿನಿಯಾಗಿ ಮಾರ್ಪಡುವುದು. ಹೀಗೆ ಮಾರ್ಪಟ್ಟು ಅದು ಶಿವಶಕ್ತಿಯಾಗಿ ಸಹಸ್ರಾರದಲ್ಲಿಯ ಪರ ಶಿವನೊಡನೆ ಬೆರೆಯಬೇಕೆಂಬುದು ಯೋಗಸಾಧಕನ ಹಂಬಲ. ಸಾಧಕನಲ್ಲಿ ಮಾಯೆ ಅಥವಾ ಮರಹು ಕವಿದಿತ್ತೆಂದು ಬಗೆದು ಅದನ್ನು ಓರೆಗೊಳಿಸಲೋಸುಗ ಅವನು ಗುರುವನ್ನಾಶ್ರಯಿಸುವನು. ಗುರುವು ಪರಶಿವನ ಕುರುಹನ್ನು ತೋರಿಸಿ, ಅವನನ್ನು ಸಾಧನೆಗೆ ಅಣಿಗೊಳಿಸುವನು.[೨] ಆ ಗುರುವು ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿರಿಸಿ, ಆ ಸಹಸ್ರದಳ ಕಮಲದೊಳಗಿಪ್ಪ ವಸ್ತುವನು 'ಶಿರದರಮನೆ'ಯೊಳಗಿಪ್ಪ ಆ ಚಿತ್ಕಳೆ

---

೧. **ಚಬವ.** ೧೧೧೧. ೨. **ಚಬವ.** ೬೨೩.

ಯನ್ನು ಭಾವಕ್ಕೆ, ಭಾವದಿಂದ ಮನಕ್ಕೆ, ಮನದಿಂದ ದೃಷ್ಟಿಗೆ ತಂದು 'ಕುಮಾರಮೂರ್ತಿ ಯೊಳು ಹುದುಗಿಸಿ' ಆ ಶಿಷ್ಯನ 'ಕರದರಮನೆ'ಯಲ್ಲಿರಿಸಿ 'ಇದು ನಿನ್ನ ಸ್ವರೂಪದ ಅರುಹಿನ ಕುರುಹು. ಇದನ್ನು ನಿನ್ನ ಕರ ಮನ ಭಾವದಲ್ಲಿ ನಿರ್ಧರಿಸು' ಎಂದು ನಿರೂಪಿಸುವನು'.[೧] ಗುರುಕೃಪೆಯಿಂದ ಪರಶಿವನು ಲಿಂಗಮೂರ್ತಿಯಾಗಿ, ಶಿಷ್ಯನ ಕರಸ್ಥಲದಲ್ಲಿ ಇಷ್ಟಲಿಂಗವೆನಿಸಿ, ಅವನ ಮನಸ್ಥಲ ಅಥವಾ ಪ್ರಾಣದಲ್ಲಿ ಪ್ರಾಣಲಿಂಗವೆನಿಸಿ, ಮತ್ತು ಅವನ ಭಾವಸ್ಥಲದಲ್ಲಿ ಭಾವಲಿಂಗವೆನಿಸಿ ಅನುಸಂಧಾನಯೋಗ್ಯನಾಗುವನು. ಶಿವಯೋಗಸಾಧನೆಯಲ್ಲಿ ಈ ಲಿಂಗಾನುಸಂಧಾನವು ಅವಶ್ಯವಾಗಿ ಕೈಕೊಳ್ಳಬೇಕಾದ ಕ್ರಮವಾಗಿದೆ. ಇದರಿಂದ ಭಾವಸಂಸ್ಕಾರವೊದಗಿ, ತನು ಮನ ಪ್ರಾಣ ಭಾವಗಳ ತಾಮಸವಡಗಿ, ಪರಶಿವನ ತೇಜಸ್ಸನ್ನು ಕಂಡು ಅದರೊಡನೆ ಒಂದಾಗುವ ಅವಕಾಶವನ್ನು ಲಿಂಗಾನುಸಂಧಾನಿಯು ಪಡೆಯುತ್ತಾನೆ.

ಶಿವಯೋಗಸಾಧಕನು ತನ್ನ ಸಾಧನೆಯನ್ನು ದೃಷ್ಟಿಸಾಧನೆಯಿಂದ ಪ್ರಾರಂಭಿಸುವನು. ರಾಜಯೋಗವು ಅವನ ಸಾಧನೆಗೆ ತಳಹದಿಯಾಗಿದೆಯೆಂದು ಹೇಳಬಹುದು. ದೃಷ್ಟಿಸಾಧನೆಗೆ ಯೋಗ್ಯವಾಗಿರುವ ಇಷ್ಟಲಿಂಗವೆಂಬುದು ದರ್ಪಣ. ದರ್ಪಣದಲ್ಲಿ ನೋಡುವುದರಿಂದ ತನ್ನ ಸ್ವರೂಪವು ವಿದಿತವಾಗುವಂತೆ ಇಷ್ಟಲಿಂಗವೆಂಬ ದರ್ಪಣವನ್ನು ನಿರೀಕ್ಷಿಸುವುದರಿಂದ ಸ್ವರೂಪಸಾಕ್ಷಾತ್ಕಾರವು ಸುಲಭಗೊಳ್ಳುವುದು. ದರ್ಪಣಕ್ಕೆ ಮಾಲಿನ್ಯವುಂಟಾದರೆ ಪ್ರತಿಬಿಂಬವು ಕಾಣದಿರುವಂತೆ, ಇಷ್ಟಲಿಂಗದ ಅನುಸಂಧಾನವು ಮಸುಳಿಸಿದರೆ, ಸಮರಸವು ಸಾಧ್ಯವಾಗದು. ಅರ್ಥಾತ್ ಸ್ವರೂಪಸಾಕ್ಷಾತ್ಕಾರವು ಸಮನಿಸದು[೨] 'ಕಂಗಳನೋಟ ಲಿಂಗಕ್ಕೆ ಪೂಜೆ'.[೩] 'ತನುವಿನ ಪ್ರಾಕೃತ ಗುಣಂಗಳ ಕಳೆವರೆ ಅರ್ಥಾತ್ ಅದರ ಅನಿಷ್ಟ ನಿವಾರಣೆಯೆ ಇಷ್ಟಲಿಂಗಪೂಜೆ'[೪] ಎಂದು ಹೇಳಿರುವುದರಿಂದ ಇಷ್ಟಲಿಂಗದ ಪೂಜೆ, ಅನುಸಂಧಾನಗಳಿಗೆ ಕಣ್ಣಿನ ನಿರ್ನಿಮೇಷ ನೋಟವು ಅನಿವಾರ್ಯವಾಗುವುದು. ನಿರ್ನಿಮೇಷ ನೋಟದಿಂದ ದೃಷ್ಟಿಯ ಚಲನವಲನವು ನಿಂತು ಅದು ಸ್ಥಿರವಾಗುತ್ತ ಸಾಗುವುದು. ದೃಷ್ಟಿಸ್ಥಿರತೆಯಿಂದ ಉಸಿರಿನ ಎಡೆಯಾಟವು ಎಂದರೆ ಪ್ರಾಣವಾಯುವಿನ ಸಂಚಾರವು ಸಾವಧಾನವಾಗಿ ಕ್ರಮುಗೊಂಡು ಸುಸ್ಥಿರವಾಗುವುದು; ಅದರೊಡನೆ ಚಂಚಲವಾಗಿರುವ ಮನವೂ ಸಹ ನಿಶ್ಚಲವಾಗುವುದು. ಮನವು ನಿಸ್ತರಂಗವಾದೊಡನೆ ಆತ್ಮಶಕ್ತಿಯು ಜಾಗ್ರತವಾಗುವುದು. ಅದರಿಂದ ಕರ್ಮನಾಶವಾಗಿ ಜನನ ಮರಣಗಳ ಬಾಧೆಯು ತೊಲಗುವುದು. ಅರಿವು ಮರವೆಗಳ ಅವಸ್ಥೆಯು ದೂರಸರಿದು ಶಿವಯೋಗಸಾಧಕನು ನಿರ್ಮಾಯನಾಗುವನು. ಸಾಧನೆ, ಸಿದ್ಧಿಗಳ ಬಗೆಗೆ ಚಾಮರಸನ ನುಡಿಗಳಿವು:

> "ಅಲಿ ನಿಂದೊಡೆ ಸುಳಿದು ಸೂಸುವ
> ಗಾಳಿ ನಿಲುವುದು ಗಾಳಿ ನಿಲೆ ಮನ
> ಮೇಲೆ ನಿಲುವುದು ಮನವು ನಿಂದೊಡೆ ಬಂದು ನಿಂದಿಹುದು"॥

೧. ಚಬವ. ೬೫, ೧೧೭೬, ೧೪೬೬, ೨. ಚಬವ. ೨೯೯. ೩. ಚಬವ. ೬೧೧.
೪. ಚಬವ. ೮೭೭, ೯೪೧, ೯೫೨.

**ಲೀಲೆಯಿಂದಾ ಬಿಂದು ನಿಂದೊಡೆ**
**ಕಾಲಕರ್ಮವ ಗೆದ್ದು ಮಾಯೆಯು**
**ಹೇಳ ಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ"**[೧]

ಚಾಮರಸನು ತಿಳಿಸಿರುವ ಶಿವಯೋಗಕ್ಕೆ 'ಅಲಿಯೆ ಸಾಧನ'ವೆಂಬ ಸಂಗತಿಯನ್ನು ಚನ್ನಬಸವಣ್ಣನವರು ಸಹ ಬಹು ಮಾರ್ಮಿಕವಾಗಿ ನಿರೂಪಿಸುತ್ತಾರೆ:

**"ಚರಣವಿಡಿದಂಗೆ ಕರುಣೆ ಕಂದೆಱವೆಯ ಮಾಡಬೇಕೆಂದು**
**ಮುಱಹಿಂದ ಬಂದ ಕಾಯದ ಕರ್ಮವ ಕಳೆದು, ಕರುಣಿಸಿ,**
**ಕಣ್ದೆಱವೆಯ ಮಾಡಿದ ಪ್ರಾಣ-ಲಿಂಗ ಸಂಬಂಧವೆಂತಿದ್ದುದೆಂದಡೆ:**
**ಆಲಿನುಂಗಿದ ನೋಟದಂತೆ, ಬಯಲು ನುಂಗಿದ ಬ್ರಹ್ಮಾಂಡದಂತೆ,**
**ಮುತ್ತು ನುಂಗಿದ ಉದಕದಂತೆ, ಪುಷ್ಪ ನುಂಗಿದ ಪರಿಮಳದಂತೆ, ಇಪ್ಪ**
**ಮಹಾನುಭಾವಿಗಳಿಗೆನ್ನ ಒಡಲಗುರಿಮಾಡಿದೆನಾಗಿ**
**ಎನ್ನ ಒಡಲ ಪರಿಯಾಯ ಕೆಟ್ಟಿತ್ತಯ್ಯಾ,**
**ಕೂಡಲ ಚನ್ನಸಂಗಮ ದೇವಾ!"**[೨]

ಲಿಂಗನಿರೀಕ್ಷಣೆಯಿಂದ ಶಿವಯೋಗಸಾಧಕನು ಅಣುತ್ವಭಾವನೆಯನ್ನು ಕ್ರಮವಾಗಿ ಕಳೆದುಕೊಳ್ಳುತ್ತ ಮಹತ್ವಸಂಪನ್ನನಾಗಿ ಮಹಾನುಭಾವಿಯಾಗುವನು. ಇಂಥ ಮಹಾನುಭಾವಿಯ 'ದೃಷ್ಟಿ ಲಿಂಗದಲ್ಲಿ ನಟ್ಟು, ಮತ್ತೆ ನಟ್ಟು, ತೆಗೆಯಲಾರದೆ ಅಲ್ಲಿಯೆ ಅಚ್ಚೊತ್ತಿದಂತಿರುವುದು'[೩]

ಶಿವಯೋಗಸಾಧನೆಯಿಂದ ಶಿವಶಕ್ತಿಗಳನ್ನು ಒಂದುಗೂಡಿಸುವ ರಹಸ್ಯವನ್ನು ಮೈಗೂಡಿಸಿಕೊಳ್ಳಬಯಸುವ ಶರಣನು ತನ್ನ ಕಾಯ, ಪ್ರಾಣ, ಮನ, ಭಾವಗಳ ಪರಿಶುದ್ಧಿಗಾಗಿ ಅನವರತವಾಗಿ ತನ್ನಂತರಂಗ ನಿರೀಕ್ಷಣೆ ಮಾಡುತ್ತಿರುವನು. ಅಶುದ್ಧ ಪ್ರಾಣದ ದೆಸೆಯಿಂದ ತನ್ನಲ್ಲಿ ಕುದುರುವ ಕಾಮಾದಿಗಳನ್ನು ಭವಿಯ ಸ್ವರೂಪದಲ್ಲಿ ಕಂಡು, ಅವು ಬೇಡ, ಬೇಕು ಎಂಬುದರ ತಾರತಮ್ಯವನ್ನು ಗಮನಿಸಿ, ಅವುಗಳ ಉದಾತ್ತೀಕರಣವನ್ನಾತನು ಸಾಧಿಸುವನು.[೪] ಕೋಟಲೆಗೆ ಗುರಿಮಾಡುವ ವ್ಯಸನಗಳನ್ನು ಪರಶಿವ ಚಿಂತನೆಯಲ್ಲಿ ಆತನು ಪರಿವರ್ತಿಸುವನು.[೫] ಕೊರಗನ್ನುಂಟುಮಾಡುವ ಅಂತರ್ಬಾಹ್ಯಮದನಗಳನ್ನಾತನು ಅಳಿದುಕೊಂಡು ಪರಶಿವನ ಮೇಲಣ ಮೋಹವುಳ್ಳವನಾಗಿ, ನಿಜದ ನಿಲವನ್ನು ಕಂಡು ನಲಿದಾಡುವನು.[೬] 'ಶೀಲವಂತ'ನಾಗಿ ಸುಖಿಸುವನು.[೭] ಒಟ್ಟಾರೆ, ತನ್ನ 'ಕಣ್ಣ ಕಪ್ಪರ, ಶ್ರೋತ್ರ ಕಪ್ಪರ, ನಾಸಿಕ ಕಪ್ಪರ, ಜಿಹ್ವಾ ಕಪ್ಪರ, ತ್ವಕ್ ಕಪ್ಪರ, ಇವುಗಳಲ್ಲಿ ಅವಗುಣಗಳನ್ನು ಪರಿಹರಿಸಿಕೊಂಡು[೮] ಭಾವೋನ್ನತಿಯನ್ನು ಸಾಧಿಸಿ, ಅಂತಃಶೌಚ ಬಹಿಃಶೌಚಗಳನ್ನು ಬೆಳಿಸಿಕೊಳ್ಳುತ್ತ ನಿರ್ಮಲತನುವನ್ನು ಹೊಂದಲು ಪ್ರಯತ್ನಿಸುವನು. ತನಗೆ ಆಶ್ರಯವಾಗಿ ತೋರುವ ಪ್ರಕೃತಿ, ದೇಹ, ಕರಣಾದಿಗಳೆಲ್ಲವೂ ನಿರಾಶ್ರಯ, ನಿರಾಧಾರ, ನಿರಾಕಾರ ಪರಶಿವನಿಗೆ ಪ್ರಸಾದವಾಗಿ ಪರಿಣಮಿಸುವಂತೆ ನಿಚ್ಚ, ನಿಚ್ಚ ಎಚ್ಚರ

---

೧. ಪುಲೀ. ೧೮–೨೨. ೨. **ಚಬವ.** ೧೧೮೭. ೩. **ಚಬವ.** ೧೧೫೫. ೪. **ಚಬವ.** ೮೭. ೫. **ಚಬವ** ೮೭೨. ೬. **ಚಬವ.** ೮೭೧. ೭. **ಚಬವ.** ೧೧೧೪. ೮. **ಚಬವ.** ೭೪೩,೮೭೭.

ಗೊಂಡಿರುವನು.[೧] ಇಂಥ ಎಚ್ಚರದಲ್ಲಿ 'ತನು ಪ್ರಸಾದವಾಯಿತ್ತು' ಎಂಬುದನ್ನವನು ಕಾಣುವನು. ಶಿವಯೋಗಸಾಧಕನ ಶುದ್ಧವಾದ ಆಚರಣೆಯಿಂದ ಭಕ್ತಿರೂಪ ತಾಳಿದ ಶಿವಶಕ್ತಿಯು, ಆಧಾರದಿಂದ ಮೇಲಕ್ಕೆ ಏರಿದಂತೆ ಕಲಾರೂಪ ಧರಿಸುವ ಆ ಪರಶಿವನ ಚಿತ್‌ಶಕ್ತಿಯೂ ಸಹ ಸಹಸ್ರಾರದಿಂದ ಕೆಳಕ್ಕಿಳಿದು, ಹೃದಯಸ್ಥಾನದಲ್ಲಿ ಒಂದುಗೂಡಿ, ಭಕ್ತಿಶಕ್ತಿಗಳ ಬೆಸುಗೆಯು ಸಾಧಿಸಲ್ಪಡುವುದು. 'ಭಕ್ತಿ ಶಕ್ತಿಗಳ ಬೆಸುಗೆಯೆ ಮುಕ್ತಿ; ಅದುವೆ ಸಾಮರಸ್ಯ.' ಎಂಬುದನ್ನು ಶಿವಯೋಗಿಯು ತನ್ನಲ್ಲಿ ಅನುಭವಿಸುವನು.

**"ಗುದ, ಲಿಂಗ, ನಾಭಿ ಮಂಡಲದಿಂದ ಮೇಲೆ ಷಡಂಗುಲವ ಹತ್ತಿ,**
**ಅಧೋಮುಖಕಮಲವನು ಊರ್ಧ್ವಮುಖಕ್ಕೆ ತಂದು,**
**'ನಾಭ್ಯಾ ಆಸೀದಂತರಿಕ್ಷಂ' ಎಂಬ**
**ಅಂತರಿಕ್ಷದೊಳಗಿಪ್ಪ ಚಿದಾತ್ಮನಂತಹ ಆದಿತ್ಯಕಿರಣಂಗಳು ಹೋಗಿ ತಾಗಲ್ಕೆ**
**ಆ ಪದ್ಮ ವಿಕಸಿತವಾಗಿ ಪರಮಾನಂದಪಯೋನಿಧಿಯಲ್ಲಿ ನಲಿದಾಡುವನು.**
**ಅನೇಕ ರತ್ನ ಸಂಕೀರ್ಣವಹಂತಹ ಹೃದಯ ದೀಪ್ತಿಯ ಪ್ರಕಾಶವ ಕಂಡು"[೨]**

ಶಿವಶರಣರ ಈ ಶಿವಯೋಗವು ಸಾಮಾನ್ಯವಾಗಿ ಪರಿಗ್ರಹಿಸಲಾದ ಯೋಗಗಳಿಗಿಂತ ಭಿನ್ನವಾಗಿಯೇ ಇರುತ್ತದೆನ್ನಬಹುದು. 'ಈ ಯೋಗವು ಭಕ್ತಿಯ ಆಧಾರದಲ್ಲಿ ಸಂಲಭ ವಾಗಿ ಸಮರಸಕ್ಕೆ ಸಹಜವಾದ ಅವಕಾಶವನ್ನುಂಟುಮಾಡುತ್ತದೆ' ಎಂಬ ಸಂಗತಿಯನ್ನು ಚನ್ನಬಸವಣ್ಣನವರು ಹೀಗೆ ತಿಳಿಸುತ್ತಾರೆ:

**"ಶಿವಯೋಗವಾದಲ್ಲಿ ಸಂಸಾರಯೋಗ ಮಾಣ್ಬುದಯ್ಯಾ,**
**ಸಂಸಾರಯೋಗ ಮಾಣ್ದಲ್ಲಿ ಭಕ್ತ್ಯನುಗ್ರಹಯೋಗವಯ್ಯಾ,**
**ಭಕ್ತ್ಯನುಗ್ರಹಯೋಗವಾದಲ್ಲಿ ಲಿಂಗಾನುಗ್ರಹಯೋಗವಯ್ಯಾ,**
**ಲಿಂಗಾನುಗ್ರಹಯೋಗವಾದಲ್ಲಿ ಜಂಗಮಾನುಗ್ರಹಯೋಗವಯ್ಯಾ,**
**ಜಂಗಮಾನುಗ್ರಹಯೋಗವಾದಲ್ಲಿ ಪ್ರಸಾದಾನುಗ್ರಹಯೋಗವಯ್ಯಾ,**
**ಪ್ರಸಾದಾನುಗ್ರಹ ಯೋಗವಾದಲ್ಲಿ ತ್ರಿವಿಧಸನ್ಮತಯೋಗವಯ್ಯಾ,**
**ತ್ರಿವಿಧ ಸನ್ಮತಯೋಗವಾದಲ್ಲಿ ಮನೋಮಗ್ನಯೋಗವಯ್ಯಾ,**
**ಮನೋಮಗ್ನಯೋಗವಾದಲ್ಲಿ ಕೂಡಲಚನ್ನಸಂಗಯ್ಯನಲ್ಲಿ ಸಂಯೋಗವಯ್ಯಾ!"[೩]**

ಶಿವಯೋಗವನ್ನವಲಂಬಿಸಿದರೆ, ಮಂತ್ರ, ಹಠ ಮೊದಲಾದ ಯಾವ ಯೋಗಗಳ ಅವಶ್ಯಕತೆಯೂ ಇಲ್ಲ. ಭಕ್ತಿಯೊಂದನ್ನು ಆಶ್ರಯಿಸಿ ಸಾಧನೆಗೆ ನಿಂತುದಾದರೆ, ಅದರಿಂದ ವಿವಿಧ ಯೋಗಸಿದ್ಧಿಯೊದಗಿ ಸಾಮರಸ್ಯಕ್ಕೆ ಅನುವು ಉಂಟಾಗುವುದೆಂಬುದನ್ನು ಕಾಣ ಬಹುದು. ಶರಣರ ವಚನಗಳಲ್ಲಿ—ವಿಶೇಷವಾಗಿ ಅವರ ಷಟ್‌ಸ್ಥಲದ ಪ್ರಾಣಲಿಂಗಿಸ್ಥಲ ಮತ್ತು ಏಕೋತ್ತರಸ್ಥಲ ಇವುಗಳಲ್ಲಿ ಸೇರ್ಪಡೆಯಾಗಿರುವ ವಚನಗಳಲ್ಲಿ—ಬರುವ ಅನು ಭವದ ವಿವರಣೆಯನ್ನು ಗಮನಿಸಿದರೆ. ಮಂತ್ರಯೋಗ ಮೊದಲಾದ ಯೋಗಗಳ ಸಿದ್ಧಾಂತಗಳನ್ನು ವೀರಶೈವಕ್ಕೆ ಅಳವಡಿಸಿಕೊಂಡು ಅವಕ್ಕೆ ಕೆಲವೊಂದು ಸ್ಥಾನವನ್ನು

---

೧. **ಚಬವ.** ೭೦೩. ೨. **ಚಬವ.** ೧೦೬೮. ೩. **ಚಬವ.** ೧೧೮,

ಕೊಟ್ಟಿರುವುದು ಕಂಡುಬರುತ್ತದೆ. ಶಿವಯೋಗ ಪ್ರದೀಪಿಕೆಯಲ್ಲಿ ಶಿವಯೋಗಕ್ಕೆ ಪೂರ್ವ ಭಾವಿಯಾಗಿ ಮಂತ್ರ, ಹಠ, ಲಯ, ರಾಜಯೋಗಗಳ ಹಲಕೆಲವು ತತ್ವಗಳ ಉಲ್ಲೇಖ ಮಾಡಿ, ಅವು ಶಿವಯೋಗಸಾಧನೆಗೆ ಕೆಲವಂಶದಿಂದ ಅನುಕೂಲವಾಗುವುವೆಂಬುದರ ಸೂಚನೆಯೂ ಇರುತ್ತದೆ. ಚನ್ನಬಸವಣ್ಣನವರ ವಚನಗಳಲ್ಲಿ ಈ ಯೋಗಗಳಿಗೆ ಸಂಬಂಧಿಸಿದ ಅನೇಕ ಸಂಗತಿಗಳು ನಿರೂಪಿತವಾಗಿರುತ್ತವೆ, ಪರಶಿವನೊಡನೆ ಸಮರಸ ಹೊಂದಿದ ಯೋಗಿಯ ನಿಲವನ್ನು ನಿರ್ದೇಶಿಸುವ ಸಂದರ್ಭದಲ್ಲಿ ಈ ವಚನವಿರುತ್ತದೆ:

**"ಮಂತ್ರಯೋಗ ಹಠಯೋಗ ಲಯಯೋಗ ಜ್ಞಾನಯೋಗ**
**ಇಂತೀ ಎಲ್ಲಾಯೋಗವನಱಿದು ಮಱೆದು,**
**ಭಕ್ತಿಯೋಗದ ಮೇಲೆ ನಿಂದು, ರಾಜಯೋಗದ ಮೇಲೆ ನಡೆವ;**
**ನುಡಿವ. ಕಾಣಿರೊ!**

ಸಾಕ್ಷಿ: **"ವಾಗತೀತಂ ಮನೋತೀತಂ ಭಾವಾತೀತಂ ನಿರಂಜನಮ್ ।**
**ಸರ್ವಶೂನ್ಯಂ ನಿರಾಕಾರಂ ನಿತ್ಯತ್ವಂ ಪರಮಂ ಪದಂ, ।**
**ಎಂದುದಾಗಿ ಮಹಾಲಿಂಗೈಕ್ಯರ ನಿಲವ ಅನುಮಾನಿಗಳೆತ್ತ ಬಲ್ಲರು**
**ಕೂಡಲಚನ್ನಸಂಗಮದೇವಾ"**[೧]

ಇಲ್ಲಿ ಜ್ಞಾನಯೋಗವೆಂದರೆ ರಾಜಯೋಗ; ರಾಜಯೋಗವೆಂದರೆ ಯೋಗಗಳಲ್ಲಿ ಶ್ರೇಷ್ಠವಾದ ಶಿವಯೋಗ ಎಂದು ಹೇಳಬಹುದಾಗಿದೆ. ಶಿವಯೋಗಸಾಧಕನಿಗೆ ಭಕ್ತಿಯು ಸಾಧನೆಯ ಮೊದಲ ಹಂತವಾಗುತ್ತದೆ. ಭಕ್ತಿಯ ಆಧಾರದಲ್ಲಿ ವಿಕಾಸಗೊಳ್ಳುವ ಕ್ರಮ ಬದ್ಧವಾದ ಶಿವಯೋಗದ ಆಚರಣೆಗೆ ಹಿನ್ನೆಲೆಯಾಗಿ, ಮಂತ್ರ ಮೊದಲಾದ ಯೋಗಗಳನ್ನು ಅಥವಾ ಅವುಗಳಲ್ಲಿ ಕೆಲವನ್ನು ಅಭ್ಯಾಸಮಾಡಿ, ಆಚರಣೆಗೆ ಇಳಿಸಿಕೊಂಡಿದ್ದರೂ ಶಿವ ಯೋಗದ ಸಾಧನೆಗೆ ಅವೇನು ಅಷ್ಟು ಅವಶ್ಯವಿಲ್ಲ. ಅವನ್ನು ಅರಿತು ಅಳವಡಿಸಿಕೊಂಡಿದ್ದರೂ ಶಿವಯೋಗಸಾಧಕನು ಅವನ್ನು ಬದಿಗಿರಿಸಿ, ಕೇವಲ ಭಕ್ತಿಯೋಗವನ್ನು ಮಾತ್ರ ಆಶ್ರಯಿಸಬೇಕು. ಶಿವಯೋಗವನ್ನು ಕಾಣಬೇಕು ಎಂಬ ಧ್ವನಿಯು ಇಲ್ಲಿರುತ್ತದೆ. ಆದರೆ, ದೃಷ್ಟಿಸಾಧನೆಯಿಂದ ಮೊದಲಾಗುವ ಶಿವಯೋಗಿಯ ಈ ಸಾಧನೆಯಲ್ಲಿ ಅನಾಯಾಸ ವಾಗಿ ರಾಜಯೋಗಿಯ ಲಕ್ಷ್ಯವಾದ ಸೂರ್ಯ ಚಂದ್ರರ ಸಂಯೋಗವಾಗುವುದು. ಲಯ ಯೋಗಿಯ ಲಕ್ಷ್ಯವಾದ ಮನ ಮಾರುತಗಳ ಐಕ್ಯವು ಸಮನಿಸಿ, ಸಂಕಲ್ಪ ವಿಕಲ್ಪ ಗಳು ಅಡಗಿಹೋಗುವವು. ಹಠಯೋಗಿಯ ಲಕ್ಷ್ಯವಾದ ಪ್ರಾಣ ಅಪಾನಗಳ ಬೆಸುಗೆಯೂ ಸಾಧಿಸಲ್ಪಡುವುದು. ಮತ್ತು ಮಂತ್ರವೇ ಲಿಂಗ, ಲಿಂಗವೇ ಮಂತ್ರ; 'ಮಂತ್ರ ಭಿನ್ನವಿಲ್ಲ ವಾಗಿ ಪೂಜೆ ಭಿನ್ನವಿಲ್ಲ.' ಎಂಬ ಮಂತ್ರ ಯೋಗಿಯ ವಿಶ್ವಾಸದೊಡನೆ ಮಹಾ ಬಯ ಲೊಳಗಣ ಪ್ರಾಣದ ಸಂಚ (ಸಂಬಂಧ)ದ ಅರಿವುಂಟಾಗುವುದು.[೨] ಅಲ್ಲದೆ, ಶಿವಯೋಗ ಪ್ರದೀಪಿಕೆಯ ಅಭಿಮತದಂತೆ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ, ಶಿವಾರ್ಚನೆ ಎಂಬ ಶಿವಯೋಗದ ಐದೂ ಅಂಗಗಳು ಇಷ್ಟಲಿಂಗದ ನಿರ್ನಿಮೇಷದಿಂದೊಡಗೂಡಿದ

---

೧. **ಚಬವ.** ೧೪೫೭. ೨. **ಚಬವ.** ೬೭೪.

ಅನುಸಂಧಾನದಲ್ಲಿ ಸಹಜವಾಗಿ ಸಿದ್ಧಿಯಾಗುವವೆಂಬುದೂ ಅನುಭವಗೋಚರವಾಗುತ್ತದೆ.

'ಕಂಗಳ ಕಾಮಿಯಯ್ಯಾ ಪ್ರಭುದೇವರು'[1] 'ತನ್ನ ಇಷ್ಟಲಿಂಗದಲ್ಲಿ ದೃಷ್ಟಿಯನ್ನು ಸಾಧಿಸಿದಾತನು ಪ್ರಭುವು' ಎಂಬುದನ್ನು ಗುರುತಿಸಿದ ಚನ್ನಬಸವಣ್ಣನವರು 'ಕೈ ಸಿಂಹಾಸನವಾದ ಬಳಿಕ ಸಂದಾಗಿರಬಾರದು......ಈ ಅನುವನಲ್ಲಮ ಬಲ್ಲ'[2] ಎಂದು ಸ್ಮರಿಸುತ್ತ ಅವಿಚ್ಛಿನ್ನ ತೈಲಧಾರೆಯಂತೆ ನಿರರ್ಗಳವಾಗಿ ಲಿಂಗನಿರೀಕ್ಷಣೆ ಮಾಡಿ ಅನುಭವಸಂಪನ್ನರಾದರು; ಜ್ಞಾನನಿಧಿಯೂ ಆದರು.

> **"ಕಂಗಳನೋಟ ಹೃದಯುದಜ್ಞಾನ**
> **ಮನದೊಳಗೆ ಮಾತನಾಡುತಿರ್ದೆನಯ್ಯಾ!**
> **ಜೇನಮಳೆಗಳು ಕಱೆದವು; ಅಮೃತಮಳೆಗಳು ಸುರಿದವು.**
> **ಕೂಡಲಚನ್ನಸಂಗನೆಂಬ**
> **ರಸಸಾಗರದೊಳಗೋಲಾಡುತಿರ್ದೆನಯ್ಯಾ!"[3]**

ನಿಶ್ಚಲವಾದ ಕಣ್ಗಳು ಲಿಂಗನಿರೀಕ್ಷಣೆಯಲ್ಲಿ, ಭಕ್ತಿಭರಿತವಾದ ಹೃದಯವು ಪರಶಿವನ ಸಮರಸಜ್ಞಾನದಲ್ಲಿ, ಉನ್ಮನದ ಸ್ಥಿತಿಯನ್ನು ಹೊಂದಿದ ಮನಸ್ಸು ಮಂತ್ರಾನುಸಂಧಾನದಲ್ಲಿ ಅವಿರಳವಾಗಿ ಮಗ್ನಗೊಂಡು ಚನ್ನಬಸವಣ್ಣನವರು ಅಪಾರವಾದ ಆನಂದವನ್ನು ಅನುಭವಿಸಿದರು. 'ಬಾಹ್ಯವನ್ನು ಸಂಪೂರ್ಣವಾಗಿ ಮರೆಯಬೇಕು, ತನ್ನ ಹೃದಯವನ್ನರಳಿಸಿಕೊಂಡು ಅಖಂಡವಾದ ಜ್ಞಾನದ ತೇಜೋರಾಶಿಯಾಗಿರುವ ತನ್ನ ಇಷ್ಟಲಿಂಗದ ಅನುಸಂಧಾನದಲ್ಲಿ ಅನನ್ಯವಾಗಿ ಬೆರೆಯಬೇಕು; ಇದು ಶಿವಯೋಗಸಾಧನೆಯ ರಹಸ್ಯವಾಗಿದೆ'. ಎಂದು ನಿರೂಪಿಸಿರುವ ಸರ್ಪಭೂಷಣ ಶಿವಯೋಗಿಯ ಅಮೃತವಾಣಿಯು ಅಮರವಾಗಿದೆ.

> **"ಬೆರೆಯು ಬಾರದೆ ತಿಳಿದು ಬೆರೆಯುಬಾರದೆ!**
> **ಮರೆದು ಬಾಹ್ಯವನ್ನು ತನ್ನ ಕರದಖಂಡ ತೇಜದೊಡನೆ**
> **ತಿಳಿವೆನಿಸುವ ಸುರಭಿಗೂಡಿ ನಳನಳಿಸುವ ವಿಕಚಹೃದಯು**
> **ನಳಿನದಮಲ ಕರ್ಣಿಕೆಯೊಳು ಬೆಳಗುವಿಷ್ಟಲಿಂಗದೊಡನೆ**
> **ಬೆರೆಯುಬಾರದೆ!"**

ಯೋಗಸಾಧನೆಯಲ್ಲಿ ಪ್ರಾಣಶುದ್ಧಿಗೆ ಅಗ್ರಸ್ಥಾನವಿದೆಯೆಂದು ತಿಳಿಸಿದೆಯಷ್ಟೆ! ಶಿವಯೋಗಸಾಧನೆಯಲ್ಲಿಯೂ ಸಹ ಪ್ರಾಣಶುದ್ಧಿಗೆ ಒಂದು ವಿಶಿಷ್ಟವಾದ ಸ್ಥಾನವನ್ನು ನೀಡಲಾಗಿದೆ. 'ಅಂಗದ ಮೇಲಣ ಲಿಂಗ ಎಲ್ಲಿಯಾದಡೂ ಉಂಟು; ಪ್ರಾಣದ ಮೇಲಣ ಲಿಂಗವಪೂರ್ವವಯ್ಯಾ'[4] ಎಂದು ಚನ್ನಬಸವಣ್ಣನವರು ಹೇಳಿದ್ದಾರೆ. ಪಂಚಭೂತ ಕಾಯುವ ಕಳೆದು ಪ್ರಸಾದಕಾಯುವ ಮಾಡಿಕೊಳ್ಳುವುದು ಇಷ್ಟಲಿಂಗಾನುಸಂಧಾನದ ಉದ್ದೇಶವಾದರೆ, ವಾಯು ಪ್ರಾಣಿಯಾಗದೆ ಲಿಂಗ ಪ್ರಾಣಿಯಾಗುವುದೂ ಪ್ರಕಾಶಕಾಯು

---

೧. ಚಬವ. ೧೦೦೦. ೨. ಚಬವ. ೮೮೧. ೩. ಚಬವ. ೧೩೬೬. ೪. ಚಬವ. ೮೫೫.

ವನ್ನು ಪಡೆಯುವುದೂ ಪ್ರಾಣಲಿಂಗಾನುಸಂಧಾನದ ಲಕ್ಷ್ಯವಾಗಿದೆ.[೧] ಶಿವಯೋಗ ಸಾಧನೆಯಲ್ಲಿ ಪ್ರಾಣದ ಶುದ್ಧಿಯನ್ನುಂಟುಮಾಡಿಕೊಳ್ಳುವ ಕ್ರಮ ಮತ್ತು ಅದರಿಂದ ಉಂಟಾಗುವ ಪರಿಣಾಮ ಇವು ಅಸದೃಶವಾಗಿರುತ್ತವೆ. ಪ್ರಾಣಶುದ್ಧಿಯಿಂದ ಲಿಂಗ ಸಿದ್ಧಿಯನ್ನು ಮಾಡಿಕೊಳ್ಳಬೇಕು, ಎಂದರೆ, ಪರಶಿವನ ನಿಲವನ್ನು ಕಂಡು ಅದರೊಡನೆ ಬೆರೆತು ಒಂದಾಗಬೇಕು. ಇದು ಶಿವಯೋಗ ಸಾಧನೆಯಲ್ಲಿ ಎರಡನೆಯ ಹಂತವಾಗಿರುತ್ತದೆ. ಇದನ್ನನುಲಕ್ಷಿಸಿ ಚನ್ನಬಸವಣ್ಣನವರು 'ವಾಯು ಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಬಲ್ಲಡೆ......ಅದು ಯೋಗ; ಅದು ಶಿವಯೋಗ' ಎಂದು ಹೇಳಿದ್ದಾರೆ.[೨] ಪ್ರಾಣವು ಒಂದೇ ಆಗಿದ್ದರೂ ದೇಹದ ವಿವಿಧ ಸ್ಥಾನಗಳಲ್ಲಿ ವಿವಿಧ ಪ್ರಕಾರದ ಕಾರ್ಯಗೈಯುತ್ತಿರುವುದರಿಂದ ದಶವಿಧವಾದ ಹೆಸರನ್ನದು ಹೊಂದಿರುತ್ತದೆ. ಪ್ರಾಣವಾಯು ಹರಿದಲ್ಲಿ ಲಿಂಗ ಪ್ರಾಣವ ಮಱೆದು ತನುಮನಧನವೇ ಪ್ರಾಣವಾಗಿಹುದು. ಇನ್ನುಳಿದ ವಾಯುಗಳು ದೇಹದಲ್ಲಿ ಮನಬಂದಂತೆ ಪ್ರವಹಿಸುವುದರಿಂದ, ವಿವಿಧ ವಾಸನೆಗಳು ಸಂಚಿತವಾಗುತ್ತವೆ.[೩] ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕರ ದೇವದತ್ತ, ಧನಂಜಯವೆಂಬ ದಶವಾಯುಗಳು ಭವಿಗಳಾಗಿ, ತನ್ನ ತಾನರಿದ ಪುರುಷಂಗೆ ಇವು ಅನ್ಯದೈವವಾಗಿ ಕಾಣುವವು. ಈ ವಾಯು ಭೂತಂಗಳ, ಅನ್ಯದೈವವೆಂಬೆಣಿಸದೆ ಶಿವಸಂಸ್ಕಾರಕರಣಂಗಳೆನಿಸಿ ನಿತ್ಯಲಿಂಗಾರ್ಚನೆಯ ಮಾಡಬೇಕು;[೪] ಮತ್ತು ಪ್ರಾಣ ಮೊದಲಾದ ದಶವಾಯುಗಳ ಕ್ರಿಯೆಗಳನ್ನು ಪಲ್ಲಟಿಸಿ, ಪ್ರಾಣಲಿಂಗ ಮುಂತಾದ ದಶಸ್ಥಾನಗಳಲ್ಲಿ ನಿಲ್ಲಿಸಿ, ಅವುಗಳ ಭವಿತನವನ್ನು ನಿವಾರಿಸಿಕೊಳ್ಳಬೇಕು.[೫] ಇದು ದಶವಾಯುಗಳನ್ನು ಜಯಿಸಿ, ತನ್ನ ಆಧೀನದಲ್ಲಿರಿಸಿಕೊಳ್ಳಬೇಕಾದ ಚನ್ನಬಸವಣ್ಣನವರ ಸಾಧನೆಯ ಕ್ರಮ !

ವಾಯುವಿನ ಮೇಲೆ ಪ್ರಭುತ್ವವನ್ನು ಸಂಪಾದಿಸುವುದರಿಂದ 'ಪ್ರಾಣವೇ ಲಿಂಗ, ಲಿಂಗವೇ ಪ್ರಾಣ' ಎಂಬ ಅನುಭವದಿಂದ ಕೂಡಿದ ಪ್ರಾಣಲಿಂಗಿಯ ನಿಲವು ಸಾಧಿಸುವುದು, ಎಂಬುದನ್ನು ಚನ್ನಬಸವಣ್ಣನವರು ಹಲವಾರು ವಚನಗಳಲ್ಲಿ ಕೂಲಂಕಷವಾಗಿ ವಿವೇಚಿಸಿರುತ್ತಾರೆ:

೧ **"ವಸ್ತುವ ಗುರುಮುಖದಿಂದ ಕರಸ್ಥಲಕ್ಕೆ ಪಡೆದು ಸತ್‌ಕ್ರಿಯೆಯಿಂದ ಪ್ರಾಣಕ್ಕೆ ವೇಧಿಸಿದಲ್ಲದೆ ಪ್ರಾಣಲಿಂಗವಾಗದು . . . ಇಷ್ಟವ ಸತ್‌ಕ್ರಿಯೆಯಿಂದ ಪ್ರಾಣಕ್ಕೆ ವೇಧಿಸಿ, ತಾನೆಂಬ ಅನಿಷ್ಟವ ತೊಲಗಿಸಿದಲ್ಲದೆ, ಪ್ರಾಣಲಿಂಗ ಸಂಬಂಧವಾಗಬಾರದು."**[೬]

೨ **"ಪ್ರಾಣವ ತಂದು ತನ್ನ ಇಷ್ಟಲಿಂಗದಲ್ಲಿ ಇರಿಸಿ, ನೆರೆಯಬಲ್ಲಾತ ಪ್ರಾಣಲಿಂಗ ಸಂಬಂಧಿ"**[೭]

೩ **ಎನ್ನ ಪ್ರಾಣಕ್ಕೆ ಸೀಮೆಯ ಮಾಡುವೆ, ಎನ್ನ ಪ್ರಾಣವ ಲಿಂಗದಲ್ಲಿ ಹಿಂಗದಂತೆ ನಿಲಿಸುವೆನು.**[೮]

---

೧. ಚಬವ. ೯೫೯. ೨, ಚಬವ. ೮೬೯. ೩. ಚಬವ. ೮೭೦. ೪. ಚಬವ. ೮೮೫.
೫. ಚಬವ. ೧೧೮೬. ೬. ಚಬವ. ೮೯೭. ೭. ಚಬವ. ೪೩೪. ೮. ಚಬವ. ೮೯೩.

೪ "ಪಶ್ಚಿಮದ ಜ್ಯೋತಿಯ ಬೆಳಗಿನಿಂದ ಪ್ರಾಣಲಿಂಗವ ಕಂಡು ಸುಖಿಯಾದೆನು..... ಪ್ರಾಣಾಯಾಮದಿಂದ ಪ್ರಾಣಲಿಂಗ ಸಂಬಂಧವಮಾಡುವುದು"[೧]

೫ "ಅಷ್ಟದಳ ಕಮಲದ ಮೇಲಣ ನಿಶ್ಶೂನ್ಯದ ಮರ್ಮವನಱಿಯದ ಅಂಧಕರೆಲ್ಲ ಪ್ರಾಣಲಿಂಗ ಪ್ರಾಣಲಿಂಗವೆಂಬ ವ್ಯವಹಾರ ಸಂತೆಯ ಪಸರ."[೨]

೬ "ಕೂಡಲ ಚನ್ನಸಂಗನಲ್ಲಿ ಕಳಾಸ ಪ್ರಾಣಲಿಂಗದ ಬೆಳಗಿನೊಳಗೆ ಬೆಳಗಿತ್ತು.[೩]"

೭ "ಆಧಾರ, ಲಿಂಗ, ನಾಭಿ, ಮಧ್ಯ, ನಾಳ, ಕಂದ (ಭ್ರೂಮಧ್ಯ) ದ ಬಯಲೊಳಗಿರ್ದ ಸೂಕ್ಷ್ಮಾಗ್ನಿಯನು ವ್ಯಾವೃತ್ತಿಯಿಂದೂರ್ಧ್ವಕ್ಕೆ ತಂದು ಧ್ರುವಮಂಡಲದ ಮೇಲಿರಿಸಿ, ಪ್ರಭಾಮಂಡಲದೊಳಗೆ ಹೊಳೆವ ಪ್ರಾಣಲಿಂಗಕ್ಕೆ ನವಚಕ್ರಮಧ್ಯ ದಲ್ಲಿರ್ಪ ಅಮೃತವನು ಅರ್ಪಿತವಮಾಡಿ, ಪ್ರಸಾದವ ಕೊಳಬಲ್ಲ . . . . ನಿಮ್ಮ ಶರಣ."[೪]

೮ "ಇಂಗಡಲಣುಗನ ಕೂಡಿದ ಪತಂಗನು ತಾಮಸ ದಿವಸವ ಮಱೆವಂತೆ . . . . ಸದಾಶಿವನ ಗುಣ ಅಕ್ಷರಾತ್ಮಕ ಪರಶಿವಯೋಗಿಯೊಳಡಗಿ."[೫]

೯ "ಶ್ರೀಗುರು ಕೃಪೆಮಾಡಿದ ಪ್ರಾಣಲಿಂಗದರುಶನ ಎಂತೆಂದಡೆ:—ಮತ್ಸ್ಯನುಂಗಿದ ಮಾಣಿಕ್ಯದಂತೆ, ಹೊಸ್ತಲಲೆತ್ತಿದ ಜ್ಯೋತಿಯಂತೆ, ಸ್ಪಟಿಕದ ಘಟದಂತೆ, ಮುತ್ತುನುಂಗಿದ ನೀರಿನಂತೆ, ಕಣ್ಣಾಲಿನುಂಗಿದ ನೋಟದಂತೆ. ಬಯಲನೊಳ ಕೊಂಡ ಬ್ರಹ್ಮಾಂಡದೊಳಗಿರ್ಪ ಸ್ವಾನುಭಾವಿಗಳ ಅನುಭಾವವ ತೋಱಿ ಬದುಕಿಸು."[೬]

೧೦ "ಪ್ರಸಾದ ಕಾಯವಾದ ಬಳಿಕ ಸರ್ವಾಂಗ ಉತ್ತಮಾಂಗ; ಪ್ರಾಣ ಲಿಂಗವಾದ ಬಳಿಕ ಸದಾ ಸನ್ನಿಹಿತಲಿಂಗ."[೭]

೧೧ "ಪ್ರಾಣಲಿಂಗ ಸಂಬಂಧಿಯಾದಡೆ, ಅವನು ಎರಡು ಮಾಡಿಕೊಂಡು ಭೃತ್ಯಾಚಾರ ದಲ್ಲಿ ಒಂದೆಯೆಂದು ನುಡಿವ ಸೋಹದವನಲ್ಲ."[೮]

೧೨ "ಪ್ರಾಣಲಿಂಗಿಯಾದಡೆ, ಸುಖದುಃಖಾದಿಗಳನೆಲ್ಲ ಮಱೆದು ಪ್ರಾಣಲಿಂಗದಲ್ಲಿ ಸುಸ್ಥಿರವಾಗಬೇಕು."[೯]

೧೩ "ಪ್ರಾಣ ಲಿಂಗದಲ್ಲಿ ಸ್ವಸ್ಥಿರವಾಗದನ್ನಬರ ಪ್ರಾಣಲಿಂಗಿಯಲ್ಲ."[೧೦]

೧೪ "ಅಂಜಿಕೆಯುಳ್ಳನ್ನಕ್ಕ ಪ್ರಾಣಲಿಂಗಿಯಲ್ಲ."[೧೧]

೧೫ "ಖತಿಯುಳ್ಳನ್ನಕ್ಕ ಪ್ರಾಣಲಿಂಗಿಯಲ್ಲ."[೧೨]

೧೬ "ಪ್ರಾಣಲಿಂಗಿಗಳಾದೆವೆಂಬರು; ನಡೆನುಡಿ ಭಾವ ಎರಡಾಗಿದೆ, ಪ್ರಾಣಲಿಂಗಿ ಗಳೆಂತಾದರಯ್ಯಾ?"[೧೩]

೧೭ "ಪ್ರಾಣಲಿಂಗಿಯಾದಡೆ, ಬಾಹ್ಯ ಆಚಾರವಿಲ್ಲದಿರಬೇಕು."[೧೪]

---

೧. ಚಬವ. ೯೧೨. ೨. ಚಬವ. ೯೨೩. ೩. ಚಬವ. ೯೪೦. ೪. ಚಬವ. ೧೦೨೯. ೫. ಚಬವ. ೧೦೭೫. ೬. ಚಬವ. ೧೦೮೮. ೭. ಚಬವ. ೧೨೬೫. ೮. ಚಬವ. ೧೨೭೬. ೯. ಚಬವ. ೧೨೮೧. ೧೦. ಚಬವ. ೧೨೮೨. ೧೧. ಚಬವ. ೧೩೯೦. ೧೨. ಚಬವ. ೧೩೯೧. ೧೩. ಚಬವ. ೧೩೯೮. ೧೪. ಚಬವ. ೧೩೯೯.

**೧೮ "ಪ್ರಾಣಲಿಂಗಿಯಾದಡೆ, ಅಂತಃಸ್ಥಿತಿಯನಱಿತು, ಅಱಿಯದಂತಿರಬೇಕು.[೧]"**
**೧೯ "ಪ್ರಾಣಲಿಂಗಿಗೆ ವಾಯುವೇ ಅಂಗ, ಸುಮನವೇ ಹಸ್ತ."[೨]**
**೨೦ "ಆ (ಸಾವಯುವ) ಲಿಂಗವೆನ್ನ ಸರ್ವೇಂದ್ರಿಯಂಗಳನಾವರಿಸಿ ಕರಣಂಗಳೆಲ್ಲ ಕಿರಣಂಗಳಾಗಿ ಬೆಳಗಿ ತೋಱುವ ಚಿದಾಕಾಶವೇ ಪ್ರಾಣಲಿಂಗ."[೩]**
**೨೧ "ಪ್ರಾಣಲಿಂಗಸಂಬಂಧವಾದ ಬಳಿಕ ಕರಣಗುಣ ಕೆಟ್ಟು ಲಿಂಗಕರಣಂಗಳಾದುವು."[೪]**

ಈ ಮೇಲಣ ಉಕ್ತಿಗಳಿಂದ ಜ್ಞಾನಸ್ವರೂಪನಾದ ಪರಶಿವನ ನಿಲವನ್ನು ಕಾಣ ಬಯಸುವಾತನು ಮೊತ್ತಮೊದಲಿಗೆ ಸತ್‌ಕ್ರಿಯಾಚರಣೆಯುಳ್ಳವನಾಗಬೇಕು. ಅದುವೆ ಆತನಿಗೆ ಇಷ್ಟ; ಇಷ್ಟಲಿಂಗ. ಇಷ್ಟಲಿಂಗದ ಅನುಸಂಧಾನದಿಂದ ಪ್ರಾಣಲಿಂಗದ ನಿಲವನ್ನು ಕಾಣಲು ಅರ್ಹತೆಯುಂಟಾಗುವುದು. ಪ್ರಾಣಲಿಂಗದ ಆಚರಣೆಯಲ್ಲಿ ಕಾಲಿರಿಸಿದವನು ನಿರ್ಭಯನೂ ನಿರ್ದ್ವಂದ್ವನೂ ಆಗಿರಬೇಕು; ಮಾತ್ರವಲ್ಲ, ದ್ವಂದ್ವವನ್ನು ಮೀರಿರುವೆನೆಂಬ ಭಾವವು ಅವನಲ್ಲಿ ತಲೆದೋರದಂತಿರಬೇಕು. ಅವನು ತನ್ನ ಪ್ರಾಣವನ್ನು ಅಂಕಿತದಲ್ಲಿರಿಸಿ ಕೊಂಡು, ಲಿಂಗದಲ್ಲಿ ಅದನ್ನು ಸಮವೇಧಿಸಿಕೊಂಡಿರಬೇಕು. ಪ್ರಸನ್ನಭಾವ, ಹೃದಯ ಗಳಿಂದ ಪ್ರಸಾದಕಾಯವನ್ನು ಹೊಂದಿ, ಪ್ರಕಾಶಕಾಯವನ್ನು ಪಡೆಯಲು ಯೋಗ್ಯತೆ ಯುಳ್ಳವನಾಗಬೇಕು. 'ಪ್ರಕಾಶಕಾಯ ಪ್ರಾಪ್ತಿಯೇ ಪ್ರಾಣಲಿಂಗಿಯ ಆತ್ಯಂತಿಕ ಧ್ಯೇಯ' ಎಂಬುದು ವ್ಯಕ್ತವಾಗುತ್ತದೆ. ದೇಹದಲ್ಲಿರುವ ಅಸಂಖ್ಯ ನಾಡಿಗಳ ಮುಖಾಂತರ ಪ್ರಾಣ ವಾಯುವು ಸಂಚರಿಸಿ ಅದಕ್ಕೆ ಚೇತನವನ್ನು ನೀಡುತ್ತದೆ. ಈ ನಾಡಿಗಳಲ್ಲಿ ಹತ್ತು ಪ್ರಮುಖವಾಗಿರುವವೆಂದೂ, ಅವುಗಳಲ್ಲಿ ಇಡಾ, ಪಿಂಗಳಾ ಮತ್ತು ಸುಷುಮ್ನಾ ನಾಡಿಗಳು ಅತ್ಯಂತ ಮಹತ್ವದ ನಾಡಿಗಳೆಂದೂ ಯೋಗಶಾಸ್ತ್ರವು ತಿಳಿಸುತ್ತದೆ. ನಾಡಿಗಳಲ್ಲಿ ಸಂಚರಿಸುವ ವಾಯುವಿಗೆ ಸೂಕ್ಷ್ಮಪ್ರಾಣವು ಪ್ರೇರಕವಾಗಿ ಅವನ್ನು ನಿಯಂತ್ರಿಸುವುದು. ರೇಚಕ, ಪೂರಕ, ಕುಂಭಕ ರೂಪಿಂದ ಚೇಷ್ಟಿಸುವ ಈ ಪ್ರಾಣವಾಯುವಿಗೆ ಹೃದಯ ವಾಸಸ್ಥಾನವೆಂದೂ[೫] ಅದು ನೇತ್ರನಾಳವಾಗಿದೆಯೆಂದೂ[೬] ಚನ್ನಬಸವಣ್ಣನವರು ಹೇಳು ತ್ತಾರೆ. ಅದಕ್ಕೆ ಗರುಡವಾಯುವೆಂದು ಇನ್ನೊಂದು ಹೆಸರು. ಅಧೋಮುಖಿಯಾದ ಕುಂಡಲಿನಿಸರ್ಪನಿಗೆ ಆಹಾರವಾಗಿರುವ, ವಿವಿಧ ವಾಯುಗಳಿಗೆ ಮತ್ತು ವಾಸನೆಗಳಿಗೆ ಪ್ರತಿಯೋಗಿಯಾಗಿರುವ ಹಾಗೂ ಪರಿಶುದ್ಧವಾಗಿರುವ ಸೂಕ್ಷ್ಮಪ್ರಾಣವಾಯುವದು.

ಪ್ರಾಣಾಯಾಮದಿಂದ ಸೂಕ್ಷ್ಮಪ್ರಾಣವನ್ನು ಸ್ಥಿರಗೊಳಿಸಿ, ಪ್ರಾಣಲಿಂಗದ ನಿಲ ವನ್ನು ಕಾಣುವ ಒಂದು ವಿಧಾನವೂ ಉಂಟು. ಮನವೆಂಬ ಹಕ್ಕಿಗೆ ಕಣ್ಣುಗಳು ಕಾಲು ಗಳು; ಇಡಾ, ಪಿಂಗಳಾ ನಾಡಿಗಳ ಮುಖಾಂತರ ಎಂದರೆ, ಎಡಬಲದ ನಾಸಿಕದ್ವಾರಗಳಿಂದ ಸೂಸುವ ಶ್ವಾಸ ಉಚ್ಛ್ವಾಸಗಳು ರೆಕ್ಕೆಗಳು.[೭] ತಾಲ ಲಯ ಬೆರೆತ ಶ್ವಾಸೋಚ್ಛ್ವಾಸ ಗತಿಯಿಂದ ಯೋಗಿಯು, ಶಕ್ತಿಯ ಕೇಂದ್ರಗಳೆನಿಸಿರುವ ಆಧಾರ, ಸ್ವಾಧಿಷ್ಠಾನ, ಮಣಿ ಪೂರಕ, ಅನಾಹತ ವಿಶುದ್ಧಿ, ಆಜ್ಞೆ ಎಂಬ ಸೂಕ್ಷ್ಮಪ್ರಾಣದ ಸಂಗ್ರಹಾಲಯಗಳಲ್ಲಿ

---

೧. **ಚಬವ.** ೧೪೦೧. ೨. **ಚಬವ.** ೯೭೧. ೧೪೮೯. ೩. **ಚಬವ.** ೧೪೬೬.
೪. **ಚಬವ.** ೧೪೬೭; ೫. **ಚಬವ.** ೮೬೯; ೬. **ಚಬವ.** ೮೭೦. ೭. ಪ್ರಲೀ. ೧೮–೨೧.

ಸೂಕ್ಷ್ಮಾಗ್ನಿಯನ್ನು ಕ್ರಮವಾಗಿ ಪುಟಗೊಳಿಸುತ್ತ ಅದನ್ನು ಊರ್ಧ್ವಮುಖಕ್ಕೆ ತಂದು ನಿಲ್ಲಿಸುವನು.[೧] ಆಗ ನಿಟಿಲ ತಟ ಭ್ರೂಮಧ್ಯದ ಮೇಲಣ ಉಭಯದಲ-ಕಮಲ (ಆಜ್ಞಾ ಚಕ್ರ)ದ ಮೇಲೆ ಇಪ್ಪ ಜೀವಪರಮನ ಭೇದದ ಅರಿವು ಉಂಟಾಗುವುದು. ಅದು 'ನಿಟಿಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿ'ಯಾಗಿದೆಯೆಂದು ಪ್ರಭುದೇವರು ಹೇಳಿರುವರು. ಈ ಜ್ಯೋತಿಯೆ ಪ್ರಾಣಲಿಂಗ. ಇದಕ್ಕೆ ಪರಂಜ್ಯೋತಿ ಎಂದೂ ಹೆಸರುಂಟು.

ಇಡಾ ಪಿಂಗಳಾ ನಾಡಿಗಳು ಕೂಡುವ ಭ್ರೂಮಧ್ಯದಲ್ಲಿ ಈ ಪರಂಜ್ಯೋತಿಯಾದ ಪ್ರಾಣಲಿಂಗವಿದೆ, ಅದರೊಡನೆ ಶಿವಯೋಗಿಯು ಬೆರೆತು ಮಗ್ನನಾಗುವನೆಂದು ಸರ್ಪ ಭೂಷಣ ಶಿವಯೋಗಿಗಳ ಹೇಳಿಕೆ.

> **"ಪರಿವಗಂಗೆ ಯಮುನೆಯೆರಡು ಬೆರೆದ ಸಂಗಮ ಸ್ಥಳದೊಳ ।**
> **ಗಿರುವ ಗಗನಗಿರಿಯ ತುದಿಯೊಳುಲಿವ ಪ್ರಾಣಲಿಂಗದೊಡನೆ ॥**
> **ಬೆರೆಯಬಾರದೆ."[೨]**

> **"ಪೂರ್ವದ್ವಾರವ ಬಿಟ್ಟು ಪಶ್ಚಿಮ ದ್ವಾರದಲ್ಲಿ ಪ್ರಾಣನಿರವ ಮಾಡಿ,**
> **ನಾಭಿ ಮುಖದಗ್ನಿಯನೂರ್ಧ್ವಮುಖಕ್ಕೊಯ್ದು,**
> **ಶಂಕಿನಿಯ ನೋಟದಲ್ಲಿ ನಿಲಯವಾದಾತ ಶರಣ."[೩]**

> **"ಉತ್ತರ ದಕ್ಷಿಣ ಪೂರ್ವ ಪಶ್ಚಿಮದ ಬಂದ ಬಟ್ಟೆಯನಾಲಿಸಿ,**
> **ವಾಯು ಬಂಧವ ಮಾಡಿ, ಪಶ್ಚಿಮ ದ್ವಾರದಲ್ಲಿ ಪ್ರಾಣವಾಹಿನಿಯಾಗಿರ್ಪ**
> **ಶರಣ."[೪]**

ಹೀಗೆ ಯೋಗಾಗ್ನಿಯನ್ನು ಬೆಳೆಸಿಕೊಂಡಿರುವ ಶಿವಯೋಗಿಯ ಪ್ರಾಣಲಿಂಗ ಸಾಧನೆಯನ್ನು ಚನ್ನಬಸವಣ್ಣನವರು ಈ ಮಾತುಗಳಲ್ಲಿ ಇನ್ನೂ ತಿಳಿಯಾಗಿ ಸೂಚಿಸಿರುವರು. ಉತ್ತರ ದಕ್ಷಿಣ ಬಟ್ಟೆಗಳೆಂದರೆ ಊರ್ಧ್ವನಾಳ ಅಧೋನಾಳಗಳು ಅಥವಾ ಸಹಸ್ರಾರ ಆಧಾರ ಚಕ್ರಗಳು. ಶಿವಯೋಗಿಯು ತನ್ನ ಸಾಧನೆಯಲ್ಲಿ ಶಕ್ತಿಯ ಈ ಕೇಂದ್ರಸ್ಥಾನಗಳಿಗಿರುವ ಮಹತಿಯನ್ನು ಅರಿತಿರುವನು. ಪೂರ್ವದ್ವಾರವೆಂದರೆ, ಶ್ವಾಸೋ-ಚ್ಛ್ವಾಸದ ನಾಸಿಕದ್ವಾರ. ಕ್ರಮಬದ್ಧವಾದ ರೇಚಕ ಪೂರಕಗಳಿಂದ ಪ್ರಾಣವಾಯುವಿನ ಮೇಲೆ ಪ್ರಭುತ್ವ ಪಡೆದು ಅದನ್ನು ಕುಂಭಕಗೊಳಿಸಿದರೆ, ಎಂದರೆ ತಡೆದು ನಿಲ್ಲಿಸುವುದನ್ನು ಸಾಧಿಸಿದರೆ, ಅದು ಪಶ್ಚಿಮ ದ್ವಾರದ ಕಡೆಗೆ ಅಥವಾ ಸುಷುಮ್ನಾ ನಾಳದತ್ತ ಸಾಗಿ, ಅಲ್ಲಿ ಸ್ಥಿರವಾಗುವುದು. ಸಾಧನೆಯು ಉಗ್ರವಾದಂತೆ ಸೂಕ್ಷ್ಮಪ್ರಾಣವು ಪಶ್ಚಿಮದ್ವಾರವಾದ ಈ ನಾಳದಲ್ಲಿ ಸ್ಥಾಯಿಯಾಗಿ ಹರಿದಾಡುವುದು. ಅವನ ನೋಟವು ಊರ್ಧ್ವಮುಖವಾಗಿ ಜ್ಞಾನಾಗ್ನಿಯು ಅಲ್ಲಿ ಸ್ಫುರಿಸತೊಡಗುವುದು. ಚಂದ್ರ ಸೂರ್ಯರು ಕೂಡಿ ಕತ್ತಲೆಯ ಮುಸಕನ್ನು ಪರಿಹರಿಸುವಂತೆ ಚಂದ್ರಸೂರ್ಯನಾಡಿಗಳೆರಡು ಕೂಡಿದೊಡನೆ ಅಜ್ಞಾನತ-ಮಸ್ಸು ಅಡಗಿ, ಪರಂಜ್ಯೋತಿಯಾದ, ಓಂಕಾರಸ್ವರೂಪವಾದ ಪರಶಿವನ ಪ್ರಕಾಶವು ಸುತ್ತೆಲ್ಲ

---

೧. **ಚಬವ.** ೧೦೨೧. ೨. ಕೈಕವ. ೪–೨೬. ೩. **ಚಬವ.** ೧೦೬೭. ೪. **ಚಬವ.** ೧೦೨೨.

ತೋರತೊಡಗುವುದು.[೧] ಅದರಲ್ಲಿ ಶಿವಯೋಗಿಯು ತನ್ಮಯನಾಗುವನು. ಇಲ್ಲಿ 'ಪ್ರಾಣ ಲಿಂಗದ ಬೆಳಗಿನೊಳಗೆ ಬೆಳಗಿತ್ತು.'[೨] ಎಂಬ ಈ ತನ್ಮಯತೆಯ ಸ್ಥಿರತೆಗೆ 'ಪ್ರಕಾಶಕಾಯ' ವೆಂದು ಹೆಸರು. ಇದು ಶಿವಯೋಗಿಯ ಪ್ರಾಣಲಿಂಗಾನುಸಂಧಾನದ ಆತ್ಯಂತಿಕ ಗುರಿ ಯಾಗಿದೆ.

ಭಾವಲಿಂಗದ ಸ್ವರೂಪವನ್ನರಿತು ಅದರ ಅನುಸಂಧಾನದಲ್ಲಿ ಮಗ್ನವಾಗುವುದು ಶಿವ ಯೋಗ ಸಾಧನೆಯ ಮೂರನೆಯ ಹಂತವಾಗಿರುತ್ತದೆ. ಇಲ್ಲಿ ವ್ಯೋಮಕಾಯ ಸಿದ್ಧಿಯು ಶಿವಯೋಗಿಯ ಚರಮ ಧ್ಯೇಯವಾಗಿರುತ್ತದೆ. ಶಿವಯೋಗಿಯು ತನ್ನ 'ಹೃದಯ ಕಮಲಕರ್ಣಿಕಾಕುಹರಮಧ್ಯದಲ್ಲಿ ಪೃಥಗ್ಭಾವದಲಿ' ನೋಡದೆ ಇಷ್ಟಲಿಂಗಾನು ಸಂಧಾನ ದಿಂದ ಪ್ರಸಾದ ಕಾಯವನ್ನು ಪಡೆದು ಶಿವಯೋಗನಿದ್ರೆಯಲ್ಲಿ ಸುಖಿಸಿದರೆ, ತನ್ನ ಭ್ರೂಮಧ್ಯದಲ್ಲಿ ಪ್ರಾಣಲಿಂಗದ ಸ್ವರೂಪವನ್ನು ಕಂಡು, ಅದನ್ನನುಸಂಧಾನಿಸಿ ಪ್ರಕಾಶ ಕಾಯವನ್ನು ತೊಡುವನು; ಶಿವಯೋಗಾನಂದತುರೀಯದಲ್ಲಿ ತೂಗುಯ್ಯಾಲೆಯನಾಡು ವನು. ಈ ಮೂರನೆಯ ಹಂತದಲ್ಲಿ ಶಿವಯೋಗಿಯು ಅಂಗವಿಸಿಕೊಳ್ಳುವ ಭಾವ ಲಿಂಗಾನುಸಂಧಾನದ ಅನುಭವ, ಕೇವಲ ಅಂತರ್ಮುಖವಾಗುವುದು. ಅಲ್ಲಿ ಕ್ಷಣರುಚಿ ಯಾಗಿ ತೋರುವ ಇಲ್ಲವೆ, ತೋರಿ ತೋರಿ ಅಡಗುವ ಆನಂದಕ್ಕೆ ಅನುವಿಲ್ಲ; ಅಪಾರ ವಾದ, ಅಖಂಡವಾದ, ಸ್ಥಾಯಿಯಾದ ಆನಂದಾನುಭೂತಿಯು ಈ ಅನುಸಂಧಾನದಲ್ಲಿರು ತ್ತದೆ. ಸರ್ಪಭೂಷಣ ಶಿವಯೋಗಿಯ ಮಾತಿನಲ್ಲಿ ಈ ಅನುಭವದ ಸ್ವರೂಪವಿದು:

> "ಮಹಿತ ಶ್ರೀಗುರು ಸಿದ್ಧನೊಲಿದು ವಿಹರಿಸುವಸುಷುಮ್ನನಾಡಿ
> ಕುಹರದಗ್ರದಚಲ ಸರಸಿರುಹದ ಭಾವಲಿಂಗದೊಡನೆ, ಬೆರೆಯಬಾರದೆ?"

ಶಿವಯೋಗಿಯು ಭಾವಲಿಂಗದ ಲೀಲೆಯನ್ನು ಕಾಣುವುದು ಸಹಸ್ರಾರ ಚಕ್ರದಲ್ಲಿ-ಬ್ರಹ್ಮ ರಂಧ್ರದಲ್ಲಿ. ಸುಷುಮ್ನೆಯ ಬಾಗಿಲವು ಅಥವಾ ಪಶ್ಚಿಮದ್ವಾರವು ಯಾವ ತರಹದ ಅಡೆತಡೆಗಳಿಲ್ಲದೆ ಮುಕ್ತದ್ವಾರವಾಗಿರುವುದರಿಂದ ಶಿವಯೋಗಿಯ ಪ್ರಾಣಸಂಚಾರವು ಸುಷುಮ್ನೆಯಲ್ಲಿಯೆ. ಚನ್ನಬಸವಣ್ಣನವರು ಭಾವಲಿಂಗಸಮರಸಿಯಾದ ಶಿವಯೋಗಿಯ ನಿಲವನ್ನು ಬಹು ಹೃದ್ಯವಾಗಿ ನಿರೂಪಿಸಿರುವರು.

೧ "ನವನಾಳದ ಭೇದದ ಲಹರಿಯನಱಿದಡೆ ಲಿಂಗೈಕ್ಯನೋಡಾ"[೪]

೨ "ಮೇರುಗಿರಿಯಾಕಳನೆ ಕಱೆದು ಕ್ಷೀರದಲ್ಲಿ ಅಡಿಗೆಯಮಾಡಿ . . . ಲಿಂಗಕ್ಕೆ ಆರೋಗಣೆಯ ಸಮಯ"[೫]

೩ "ವ್ಯೋಮಕುಸುಮದ ಕೊನೆಯಲ್ಲಿ ಶಶಿಕಲಾಮೃತವ ಧರಿಸಿದ ಘಟಕ್ಕೆ ಕೇಡಿಲ್ಲ ವಾಗಿ, ಲಿಂಗಕ್ಕೆ ಪ್ರಾಣಕ್ಕೆ ಒಂದೆಂಬ ಕಾರಣ ಅಚಳವೆನಿಸಿತ್ತು"[೬]

೪ "ತನುವನಂಡಲೆದು ಮನವ ಶುದ್ಧೈಸಿ, ಇಡಾ ಪಿಂಗಳಾ ನಾಳವ ಕಟ್ಟಿ,

---

೧. ಚಬವ. ೧೦೭೫. ೨. ಚಬವ. ೯೪೮. ೩. ಚಬವ. ೧೩೬೯.
೪. ಚಬವ. ೯೪೪; ೫. ಚಬವ. ೯೪೬,; ೬. ಚಬವ. ೧೦೨;

ಸುಷುಮ್ನಾ ನಾಳದಲ್ಲಿ ಪವನನೆಂಬ ಪರಿಚಾರಕನಿಂದ
ಅಗ್ನಿಯೆಂಬ ಸುವ್ವಾರನನೆಬ್ಬಿಸಲು,
ಅದು ಮಸ್ತಕದಲ್ಲಿರ್ದ ಉತ್ತಮ ಪ್ರಸಾದವ ತಾಗಲೊಡನೆ
ಆ ಪ್ರಸಾದ ಉದರಕ್ಕಿಳಿದು ಬಪ್ಪಲ್ಲಿ . . . . ."[೧]

೫ "ಬ್ರಹ್ಮನಾಳದ ಮೇಲೆ ಪ್ರಯೋಗಿಸಿ ಕವಾಟದ್ವಾರವ ತೆಗೆದು
ತೆಱಹಿಲ್ಲದ ಬಯಲು ಕೂಡಲಚನ್ನಸಂಗಾ ನಿಮ್ಮಶರಣ"[೨]

೬ "ಮಂದಾರಸ್ಥಾನ ಮೊದಲಾದ ಆಱಱ ಕಡೆಯ
ಸ್ವಾದೋದಕ ಸಮುದ್ರದಲ್ಲಿ ವಿಶ್ರಮಿಸಿದ;
ಇಕ್ಷು ಸಮುದ್ರದಲ್ಲಿ ತೃಪ್ತನಾಗಿ,
ಮೇರು ಮಂದಿರದಲ್ಲಿ ಮುಗ್ಧನಾದ . . . ನಿಮ್ಮ ಶರಣ."[೩]

೭ "ಹತ್ತನೆಯ ಬಾಗಿಲಲ್ಲಿ ಸುಜ್ಞಾನವಿಪ್ಪುದು; ಒಂಬತ್ತು ಬಾಗಿಲಕಳೆದು, ದಶಮ
ಬಾಗಿಲ ತೆಗೆದು ಹೊಕ್ಕು ಮಹಾಸುಖಿಯಾಗಿರ್ದ . . . ನಿಮ್ಮ ಶರಣ!"[೪]

೮ "ಅಣು ಕುಂಡಲಿ ನಾಗಬಂಧವೆಂಬ ಸುಷುಮ್ನಾನಾಳದಿಂದ ಒದಗಿದ
ನಿರೂಪಬಿಂದುವ, ಒಸರಲೀಯದೆ ತಡೆದೆಹೆನೆಂದಡೆ, ಆ ಶಶಿಧರಂಗೆ ಅಳವಲ್ಲ;
ಅದು ಒಡಲುವಿಡಿದಡೆ ಒಸರುವುದು ಮಾಬದು?
ಒಡಲಿಲ್ಲದಿರ್ದಡೆ ಒಸರುವುದು ಮಾಬುದು"[೫]

೯ "ಕರಣಂಗಳೆಲ್ಲ ಕಿರಣಂಗಳಾಗಿ, ಬೆಳಗಿ ತೋಱುವ
ಚಿದಾಕಾಶವೆ ಪ್ರಾಣಲಿಂಗವೆಂದಱಿದು, ವಿಚಾರಿಸಿ ತಿಳಿದ ತಿಳಿವು
ಪರಮಾನಂದವನೆಯ್ದಿದ ಮೂಲಚೈತನ್ಯವೆ ಭಾವಲಿಂಗ"[೬]

೧೦ "ಆವಲ್ಲಿ ಸರ್ವಪ್ರಪಂಚು ನಿವೃತ್ತಿಯಾಗಿಹುದು, ಅದೀಗ ಬ್ರಹ್ಮಜ್ಞಾನ.
ಆವಲ್ಲಿ ಕೇವಲ ನಿಶ್ಚಿಂತವಾಗಿಹುದು, ಅದೀಗ ಬ್ರಹ್ಮಜ್ಞಾನ.
ಆವಲ್ಲಿ ತಾನೆಂಬ ತೋಱಿಕೆ ಹುಟ್ಟದಿಹುದು, ಅದೀಗ ಬ್ರಹ್ಮಜ್ಞಾನ.
ಆವಲ್ಲಿ ಕೂಡಲಚನ್ನಸಂಗಯ್ಯನಲ್ಲದೆ,
ಪೆಱತೊಂದನಱಿಯದಿಹುದು, ಅದೀಗ ಬ್ರಹ್ಮಜ್ಞಾನ."[೭]

೧೧ "ಬಯಲು ಬಯಲು , . . . . ಮನಬಯಲು . . . ಭಾವ ಬಯಲು . . .
"ಬಯಲು ಬಯಲ ಬೆರಸಿ ಬಯಲೆ ಆಯಿತ್ತು"[೮]

ದಶವಿಧ ನಾಳಗಳಲ್ಲಿ ಪ್ರಾಣವಾಯುವು ವಿವಿಧ ಹೆಸರಿನಿಂದ ವಿವಿಧ ಕಾರ್ಯಗಳನ್ನೆಸಗುತ್ತಿದೆಯಷ್ಟೆ! ದಶಮನಾಳ ಅಥವಾ ಹತ್ತನೆಯ ಬಾಗಿಲು ಸುಷುಮ್ನಾನಾಳವಾಗಿದೆ. ಅದು ಸುಜ್ಞಾನದ ನಿಲವು. ಒಂಬತ್ತು ಪ್ರಕಾರದ ನಾಳಗಳೊಳಗೆ ಪ್ರವಹಿಸುತ್ತಿರುವ ವಾಯುವನ್ನು ನಿರೋಧಿಸಿ ದಶಮನಾಳದೊಳಗೆ ಹರಿಯುವಂತೆ ಮಾಡಿಕೊಳ್ಳುವುದು ಒಂದು ಕಲೆಯಾಗಿದೆ. ಸಾಧನೆಯಿಂದ ಇದನ್ನು ಕರಗತಮಾಡಿಕೊಳ್ಳ

---

೧. ಚಬವ. ೧೦೩೩; ೨. ಚಬವ. ೧೦೬೮. ೩. ಚಬವ. ೧೦೭೭; ೪. ಚಬವ. ೧೦೭೯.
೫. ಚಬವ. ೧೩೫೧; ೬. ಚಬವ. ೧೪೬೬; ೭. ಚಬವ. ೧೪೭೦. ೮. ಚಬವ. ೧೪೯೯.

ಬೇಕಾಗುತ್ತದೆ. ನಾಸಿಕದ ಎರಡೂ ದ್ವಾರಗಳಲ್ಲಿ ಹರಿಯುತ್ತಿರುವ ವಾಯುವು ಒಂದೇ ಪ್ರಮಾಣದಲ್ಲಿ ಹರಿಯುತ್ತಿರುವುದಿಲ್ಲ. ಈ ಪ್ರಮಾಣವನ್ನು ವ್ಯತ್ಯಸ್ತಗೊಳಿಸಿ ಶರೀರ ದಲ್ಲಿ ಧಾರಣಮಾಡುವುದರ ಮಹತಿಯನ್ನೂ ಅದರಿಂದುಂಟಾಗುವ ಪರಿಣಾಮವನ್ನೂ ಚನ್ನಬಸವಣ್ಣನವರು ಬಹಳ ಮಾರ್ಮಿಕವಾಗಿ ತಿಳಿಸಿದ್ದಾರೆ:

**"ಕುಳಿತಲ್ಲಿ ಎರಡು, ನಿಂದಲ್ಲಿ ನಾಲ್ಕು, ನಡೆನುಡಿಯಲ್ಲಿ ಎಂಟು,**
**ಅರನಿದ್ದೆಯಲ್ಲಿ ಹದಿನಾಱು, ರತಿ ಸಂಗದಲ್ಲಿ ಮೂವತ್ತೆರಡಂಗುಲ ರೇಚಕ;**
**ತದರ್ಧ ಪೂರಕ.**
**ಹೋಱಗು ಒಳಗಾದಡೆ, ಕೂಡಲಚನ್ನಸಂಗಯ್ಯನಲ್ಲಿ ಸಂಯೋಗ."**

ಪರಶಿವನೊಡನೆ ಸಾಮರಸ್ಯವನ್ನು ಹೊಂದಬಯಸುವ ಸಾಧಕನಿಗೆ ಸಾಧನೆಯ ದೃಷ್ಟಿ ಯಿಂದ ಇಲ್ಲಿ ತಿಳಿಸಿರುವ ಮಾತುಗಳು ಅತ್ಯುಪಯುಕ್ತವಾಗಿವೆ. ಬೇರೆ ಬೇರೆ ಕಾರ್ಯ ಗಳಲ್ಲಿ ಮಗ್ನವಾದ ಕಾಲಕ್ಕೆ ಶ್ವಾಸೋಚ್ಛ್ವಾಸದ ಗತಿಯು ಬೇರೆ ಬೇರೆಯಾಗಿರುತ್ತದೆ. ಆಗ ಬಹಿರ್ಗತವಾಗಿರುವ ವಾಯುವೇಗವು ಇಮ್ಮಡಿಯಾದರೆ, ಅಂತರ್ಗತವಾಗುವ ವಾಯುವೇಗವು ಅದರ ಅರ್ಧವಾಗಿರುತ್ತದೆ. ನಿಜವಾಗಿ ಶರೀರಪೋಷಣೆಗೆ ಮತ್ತು ಅದರ ಭದ್ರತೆಗೆ ಅವಶ್ಯವಾಗಿರುವುದು ಪ್ರಾಣವಾಯು. ಕೆಲಸದಲ್ಲಿ ತೊಡಗಿರುವ ಕಾಲಕ್ಕೆ ವಾಯುವಿನ ಒಳಸೇರುವ ಪ್ರಮಾಣಕ್ಕಿಂತ ಹೊರಗೆ ಹೋಗುವ ಪ್ರಮಾಣವು ದ್ವಿಗುಣಿತವಾದರೆ, ಅದರಿಂದ ಪೋಷಣೆಯ ಬದಲು ಶೋಷಣವೆ ಹೆಚ್ಚಾಗುತ್ತದೆ. ಆದ್ದರಿಂದ ಉಚ್ಛ್ವಾಸಕ್ಕಿಂತ ಶ್ವಾಸಗತಿಯು ಎರಡು ಮಡಿ ಬೆಳೆಯಬೇಕು. ಜೊತೆಗೆ ಕುಂಭವನ್ನೆಸಗಿ ಪ್ರಾಣವಿಜಯವನ್ನು ಸಂಪಾದಿಸಬೇಕು. ಆಗ ಪರಶಿವನ ನಿಲಯವಾದ ಸುಷುಮ್ನೆಯ ಬಾಗಿಲು ತೆರೆಯಲು ಅವಕಾಶವಾಗುವುದು. ಸಾಮಾನ್ಯವಾಗಿ ಈ ಬಾಗಿಲು ತೆರೆದಿದ್ದರೂ ಅದರ ರಂಧ್ರವು ಅತಿ ಸೂಕ್ಷ್ಮವಾಗಿದ್ದು ಅದರಲ್ಲಿ ತಕ್ಕಷ್ಟು ವಾಯು ಪ್ರವೇಶವಾಗುತ್ತಿರುವುದಿಲ್ಲ; ಇಚ್ಛಿತ ಪರಿಣಾಮವು ತೋರುತ್ತಿರುವುದಿಲ್ಲ. ಸಾಧನೆಯಿಂದ ಈ ರಂಧ್ರವು ಅಗಲವಾಗಿ ಪ್ರಾಣವಾಯುವಿನ ಸಂಚಾರವು ಈ ಪಶ್ಚಿಮ ದ್ವಾರದಲ್ಲಿ ನಿರರ್ಗಳವಾಗಿ ನಡೆಯುತ್ತಿರಬೇಕು. ಇದನ್ನು ಸಾಧಿಸಲೋಸುಗ ಚನ್ನ ಬಸವಣ್ಣನವರು ಸೂಚಿಸಿರುವ ಸಾಧನವಿದು:

**"ಪಶ್ಚಿಮ ಪದ್ಮಾಸನದಲ್ಲಿ ಕುಳ್ಳಿರ್ದು ನಿಟ್ಟೆಲುವ ನೆಟ್ಟನೆ ಮಾಡಿ,**
**ಅಧೋಮುಖ ಕಮಲವ ಬಲಿದು, ಊರ್ಧ್ವಮುಖವ ಮಾಡಿ,**
**ಇಂದ್ರಿಯಂಗಳನು ಒಂದೆ ಮುಖವ ಮಾಡಿ,**
**ಚಂದ್ರಸೂರ್ಯರನೊಂದೆ ಠಾವಿನಲ್ಲಿರಿಸಿ,**
**ಅತ್ತಿತ್ತ మిಸುಕದೆ ನಡುಗೀರ ಜ್ಯೋತಿಯ ದೃಢವಾಗಿ ಹಿಡಿದು, ಪರಮಾನಂದ ಮಠದೊಳಗೆ ಪ್ರಾಣಲಿಂಗಾರ್ಚನೆಯ ಮಾಡುವ ಮಹಾಮಹಿಮರ ತೋಱ ಬದುಕಿಸಾ, ಕೂಡಲಚನ್ನಸಂಗಯ್ಯಾ"**[೧]

---

೧. ಚಬವ. ೮೯.

ಇಲ್ಲಿ ನಿಟ್ಟೆಲುವು ಸುಷುಮ್ನೆಯ ಬಟ್ಟೆಯಾದ ಬೆನ್ನುಹುರಿಯಾಗಿದೆ. ನಡುಗೀರು ಆ ಸುಷುಮ್ನಾನಾಳವಾಗಿದೆ. ಅನುಸಂಧಾನಕ್ಕೆ ತಕ್ಕ ತ್ರಿರುನ್ನತ ಕ್ರಮದಲ್ಲಿ ಎಂದರೆ, ಆಧಾರ, ಎದೆ (ಉರ) ಮತ್ತು ಶಿರಗಳು ಒಂದೇ ರೇಖೆಯಲ್ಲಿ ಬರುವಂತೆ ನೆಟ್ಟಗೆ ಕುಳಿತು, ಹೃದಯಕಮಲದಲ್ಲಿ ಇಷ್ಟಲಿಂಗಾನುಸಂಧಾನವನ್ನೂ ಭ್ರೂಮಧ್ಯದಲ್ಲಿ ಪ್ರಾಣಲಿಂಗಾನುಸಂಧಾನವನ್ನೂ ಆಚರಿಸಿ, ಸುಷುಮ್ನೆ ಬಂದು ಸೇರಿರುವ ಸಹಸ್ರಾರದಲ್ಲಿ ಭಾವಲಿಂಗದ ಅನುಸಂಧಾನ ನಡೆಯಿಸಬೇಕು. ಸ್ತಬ್ಧವಾದ ಪ್ರಾಣಸಹಿತವಾಗಿ ಈ ಭಾವಲಿಂಗಾರ್ಚನೆ ನಡೆಯುವುದಾದುದರಿಂದ ಇಲ್ಲಿ ಪ್ರಾಣಲಿಂಗಾರ್ಚನೆ ಎಂಬ ಪದವನ್ನು ಬಳಸಲಾಗಿದೆ. ಈ ತೆರನಾದ ಅನುಸಂಧಾನದಿಂದ ಓತಪ್ರೋತವಾಗಿ ಸ್ಫುರಿಸುವ ಪರಶಿವನ ಪರಮ ಪ್ರಕಾಶವನ್ನು ಕಂಡು ಅದರಲ್ಲಿ ತನ್ಮಯವಾಗಲು ಅನುವಾಗುವುದು. ಈ ಪ್ರಕಾಶಕ್ಕೆ ಪಶ್ಚಿಮಜ್ಯೋತಿ ಎಂದು ಹೆಸರು. ಈ ಜ್ಯೋತಿಯ ಪ್ರಭೆ ಪಸರಿಸಿ ಕುಡಿ ಚಾಚುವುದರ ಮೂಲಕವಾಗಿಯೆ ಪ್ರಾಣಲಿಂಗದ ಸಮ್ಯಕ್ ದರ್ಶನವಾಗುವುದು.[೧] ಪರಶಿವನಿಗೆ ಬಯಲು ಎಂಬುದು ಶಿವಶರಣರು ಕೊಟ್ಟ ಹೆಸರು. 'ಸುಷುಮ್ನೆಯಲ್ಲಿ ಪ್ರವೇಶಿಸಿ ಪರಶಿವನ ಸಾಕ್ಷಾತ್ಕಾರವನ್ನು ಪಡೆಯುವ ಶಿವಯೋಗಿಗೆ ಬಚ್ಚ ಬರಿಯ ಬಯಲು ಕಾಣುವುದು, ಎಂದು ಇದನ್ನು ಇನ್ನೊಂದು ವಿಧವಾಗಿ ತಿಳಿಸಲಾಗಿದೆ.

ಸುಷುಮ್ನೆಯ ಬಟ್ಟೆಯಲ್ಲಿ ಗೋಚರವಾಗುವ ಪರಶಿವಜ್ಞಾನಾಗ್ನಿಯ ಉರಿ ತಗಲಿ ಬ್ರಹ್ಮರಂಧ್ರದ ಅಮೃತಕುಂಭವು ಒಡೆದು, ಅಲ್ಲಿಂದ (ಆ ಮೇರುಗಿರಿಯ ಆಕಳದಿಂದ) ಸಾಲಿಟ್ಟು ಸುರಿವ ಅಮೃತಬಿಂದುವಿನಿಂದ (ಗೋಕ್ಷೀರದಿಂದ) ಶಿವಯೋಗಿಯ ಅಂಗಾಂಗಗಳು ಆಪ್ಯಾಯನಗೊಳ್ಳುವವು. ಇದರಿಂದ 'ವ್ಯೋಮಕುಸುಮ (ಸಹಸ್ರದಳಕಮಲ) ದಲ್ಲಿಯ ಚಂದ್ರನಂತೆ ಶೀತಲವೂ ಸ್ಪರ್ಶಸುಖದಾಯಕವೂ ಆಹ್ಲಾದಕರವೂ ಆದ ಅಮೃತ ಸೇಚನದಿಂದ ಅಮರವಾಗುವ ಶಿವಯೋಗಿಯ ಶರೀರಕ್ಕೆ ಕೇಡು ಸಂಭವಿಸುವುದಿಲ್ಲ' ವೆಂಬುದು ಅನುಭವಗಮ್ಯವಾಗುತ್ತದೆ.[೨] ಇಲ್ಲಿ ಇನ್ನೂ ಒಂದು ವಿಶೇಷವೆಂದರೆ-ಸಹಸ್ರಾರದಲ್ಲಿ ನೆಲೆ ನಿಂತ ಕಾಲಕ್ಕೆ ಲಭ್ಯವಾಗುವ ಅಮೃತರಸಾಸ್ವಾದನೆಯಿಂದ ಸಾಮಾನ್ಯವಾಗಿ ಯೋಗಿಗಳ ಸಾಧನೆಯು ಕೊನೆಗೊಳ್ಳುತ್ತದೆ. ಆದರೆ, ಶಿವಯೋಗಿಯು ಸಹಸ್ರಾರದಲ್ಲಿ ಧ್ಯಾನಮಗ್ನವಾಗಿ ಉಳಿದು, ಅದರ ಆಚೆಗಿನ ಶಿಖಾ, ಅಲ್ಲಿಂದಾಚೆಗಿನ ಪಶ್ಚಿಮ ಎಂಬ ಸೂಕ್ಷ್ಮಾತ್ ಸೂಕ್ಷ್ಮವಾಗಿರುವ ಶಕ್ತಿಯ ಕೇಂದ್ರಗಳನ್ನು ಗುರುತಿಸಿ ಈ ಚಕ್ರಗಳಲ್ಲಿಯ ಶಕ್ತಿಯನ್ನು ಜಾಗ್ರತಗೊಳಿಸುವನು.

> **"ನವಚಕ್ರಗತ ತೇಜೋಮಯ ಗುರುಸಿದ್ಧನೆ**
> **ಶಿವಲಿಂಗವಾಗಿಹ ನಿದನೊಂದಿ**
> **ಅವಿರಳವಾಗಿರಲಪವರ್ಗವಹುದೆಂದು**
> **ಶಿವಯೋಗವನು."**[೩]

ಸರ್ಪಭೂಷಣರು ತಿಳಿಸುವ ಈ ಸಂಗತಿಯನ್ನು ಚನ್ನಬಸವಣ್ಣನವರು ತಮ್ಮ ಅನೇಕ ವಚನಗಳಲ್ಲಿ ತಿಳಿಸಿರುವರು.[೪] ಅವರ ಅಭಿಮತದಲ್ಲಿ ಮುಂದಾರಸ್ಥಾನವೆಂದರೆ ಸಹಸ್ರಾರ

---

೧. **ಚಬವ.** ೯೦೨; ೨. **ಚಬವ.** ೧೦೨೨; ೩. ಕೈಕವ ೪. ೪. **ಚಬವ.** ೯೫೩;

ಚಕ್ರ. ಸ್ವಾದೋದಕಸಮುದ್ರವೆಂದರೆ ಶಿಖಾಚಕ್ರ ಮತ್ತು ಮೇರುಮಂದಿರವೆಂದರೆ ಪಶ್ಚಿಮ ಚಕ್ರ. ಶಿವಯೋಗ ಸಾಧನೆಯ ಪರಮೋದ್ದೇಶವು ಇಷ್ಟಕ್ಕೇ ನಿಲ್ಲುವುದಿಲ್ಲ. ಇವೆಲ್ಲ ಶಕ್ತಿಯ ಕೇಂದ್ರಗಳಿಗೆ ಮೂಲವಾಗಿರುವ ಕೇಂದ್ರವೊಂದನ್ನು ಶಿವಯೋಗಿಯು ಗುರುತಿಸಿರುವನು. ಪಶ್ಚಿಮಚಕ್ರದ ಆಚೆಗೆ ಅಣುಚಕ್ರವೊಂದಿದ್ದು ಅದರಿಂದ ನವಚಕ್ರಗಳು ಬಳ್ಳಿಯಂತೆ ದೇಹದಲ್ಲೆಲ್ಲ ವ್ಯಾಪಿಸಿರುವವೆಂದೂ ಆ ಶಿವಯೋಗಿಯು ಅನುಭವಗಂಡಿದ್ದಾನೆ. ಚನ್ನಬಸವಣ್ಣನವರು ಅದಕ್ಕೆ 'ಅಣುಕುಂಡಲಿ'—'ಅಣುಕುಂಡಲಿ ನಾಗಬಂಧವೆಂಬ ಸುಷುಮ್ನನಾಳದಿಂದ'[1]—ಎಂದು ಕರೆಯುತ್ತಾರೆ. ಶಿವಯೋಗಿಯ ಸಾಧನೆಯ ಆತ್ಯಂತಿಕ ನಿಲವಿನಲ್ಲಿ ಆತನು ಪರಶಿವನಲ್ಲದೆ ಮಾನವನಲ್ಲ ಎಂಬ ಭಾವನೆಯುಂಟಾಗುವುದು ಸಹಜ. ಶಿವಯೋಗಿಯು ಪರಶಿವನಂತೆ ಕರ್ತುಂ ಅಕರ್ತುಂ ಅನ್ಯಥಾ ವಾ ಕರ್ತುಂ ಸಾಮರ್ಥ್ಯವುಳ್ಳವನು. ಅಘಟನಾಘಟನಪಟುವಾಗಿ ಅವನು ಏಕಾಂತವಾಸಿಯಾಗಿರದೆ ಲೋಕಾಂತಕ್ಕಿಳಿದು, ಆದರೂ ಲೋಕದ ಜಂಜಡವನ್ನು ಹೊದ್ದದೆ, ಆ ಲೋಕಹಿತವನ್ನು ಸಂಕಲ್ಪಿಸುವನು; ರೂಪಿಸುವನು. ಶಿವಯೋಗಸಾಧಕರ ಒಲವು ನಿಲವುಗಳ ತಾರತಮ್ಯಕ್ಕನುಗುಣವಾಗಿ ಪರಶಿವನ ಸಾಮರಸ್ಯವನ್ನವರು ತಮ್ಮ ತಮ್ಮ ಹೃದಯದಲ್ಲಿ ಕಾಣುವರು, ಭ್ರೂಮಧ್ಯದಲ್ಲಿ ಹೊಂದುವರು; ಇಲ್ಲವೆ ಸಹಸ್ರಾರದಲ್ಲಿ ಸಾಧಿಸುವರು. ಉಚ್ಚತಮವಾದ ಸಾಧನೆಯಿಂದ ಅವರು ತಮ್ಮ ಪಶ್ಚಿಮ ಚಕ್ರದಲ್ಲಿಯೂ ಪಡೆಯುವರು. ಪಶ್ಚಿಮಚಕ್ರದಲ್ಲಿಯ ಶಿವಯೋಗಿಯ ನಿಲವಿಗೆ 'ನಿರವಯಸ್ಥಿತಿ' ಎಂದು ಹೆಸರು. ಶಿವಯೋಗ ಸಾಧನೆಯಿಂದ ನಿಲುಕುವ ನಿರವಯಸ್ಥಿತಿಯನ್ನು ಚನ್ನಬಸವಣ್ಣನವರ ಮಾತಿನಲ್ಲಿ ಅರಿತುಕೊಳ್ಳುವುದುಚಿತವು:

> **"ತನು ಬಯಲು ನಿರವಯದೊಳಡಗಿತ್ತು,**
> **ಮನ ಬಯಲು ನಿರವಯದೊಳಡಗಿತ್ತು,**
> **ಭಾವ ಬಯಲು ನಿರವಯದೊಳಡಗಿತ್ತು,**
> **ಬಯಲು ಬಯಲ ಬೆರಸಿ ಬಯಲೆ ಆಯಿತ್ತು,**
> **ಕೂಡಲಚನ್ನಸಂಗಯ್ಯನೆಂಬ ನುಡಿಯಡಗಿತ್ತು!"**[2]

ಪರಶಿವನ ಲೀಲಾವಿನೋದ ವೈಭವದಲ್ಲಿ ಆತನಿಗೆ ತಕ್ಕ ಉಪಕರಣವಾಗಿ ಮಾರ್ಪಟ್ಟ ಶಿವಯೋಗಿಯ ಆರಂಭದ ಅನುಸಂಧಾನ, ಅನುಭವಗಳಿಗೆ ಅವಶ್ಯವಾಗುವ ಅಂಗ-ಲಿಂಗ, ಲಿಂಗ-ಜಂಗಮ, ಜಂಗಮ-ಭಕ್ತ ಇವುಗಳಲ್ಲಿ ಅಭ್ಯಂತರವಿಲ್ಲ. ನಿಜಕ್ಕೂ ಇವು ಒಂದು ನಾಣ್ಯದ ಎರಡು ಮಗ್ಗುಲುಗಳಿದ್ದಂತೆ. ಮೂಲತಃ ಇರುವುದು ಒಂದೇ ವಸ್ತು. ಅದು ಅವಿನಾಭಾವದಿಂದ ಪರಶಕ್ತಿಸಮೇತ ಪರಶಿವ ಸಾಧನೆಯ ಕ್ರಮಕ್ರಮವಾದ ಏರಪಾವಟಿಗೆಗಳಿಗೆ ಅನುಗುಣವಾಗಿ ಇತ್ತೆರನಾಗುತ್ತ ಬರುವುದು ಅಷ್ಟೆ! ಶಿವಯೋಗ ಸಾಧಕನ ದೃಷ್ಟಿಯಲ್ಲಿ 'ಶ್ರೀಗುರುಕರುಣವೆ ಲಿಂಗ, ಶ್ರೀಲಿಂಗದ ನಿಜವೆ ಜಂಗಮ,' 'ಅಂತರಂಗದ ಸುಜ್ಞಾನವೆ ಜಂಗಮ, ಆ ಜಂಗಮದ ನಡೆವ ಸತ್ಕ್ರಿಯೆಯೆ ಲಿಂಗ',[3] ಈ ನಿಲವುಗಳಲ್ಲಿ ಒಂದು ಆತನ ಬಹಿರಂಗದ ವರ್ತನೆಗೆ ಸಂಬಂಧಿಸಿದರೆ, ಇನ್ನೊಂದು ಅವನ ಅಂತ

---

೧. **ಚಬವ.** ೧೩೪೫; ೨. **ಚಬವ.** ೧೪೪೯. ೩. **ಚಬವ.** ೬೪೯.

ರಂಗದ ಸಾಧನೆಗೆ ಸಂಬಂಧಿಸಿರುತ್ತದೆ. ಒಂದು ಪರಶಿವನ ಸ್ಥಿರರೂಪವಾದರೆ, ಇನ್ನೊಂದು ಅವನ ಚರರೂಪವಾಗಿದೆ. ಒಂದು ಕ್ರಿಯಾ ದ್ಯೋತಕವಾದರೆ, ಇನ್ನೊಂದು ಜ್ಞಾನ ಸೂಚಕವಾಗಿದೆ. ಒಂದು ಸರ್ವಾರ್ಪಣಭಾವದಿಂದ ಹೃದಯವನ್ನು ತೆರೆದಿರಿಸುವ ರಹಸ್ಯ ವನ್ನು ಬೀರಿದರೆ, ಇನ್ನೊಂದು ಸರ್ವಾರ್ಪಿತಭಾವದಿಂದ ಹೃದಯದಲ್ಲಿ ಇಂಬಿಟ್ಟು ಕೊಳ್ಳುವ ಗೂಢವನ್ನು ಬಿತ್ತರಿಸುವುದು. ಇವೆರಡಕ್ಕೂ ಮಧ್ಯವರ್ತಿಯಾಗಿ, ಇವೆರ ಡನ್ನೂ ಜೋಡಿಸುವ ಸದ್ಭಕ್ತಿಯು ಕಳಿಗೆಯಾಗಿ ಶಿವಯೋಗಸಾಧನೆಯಲ್ಲಿ ಹಾಸು ಹೊಕ್ಕಾಗಿ ಹರಿದಾಡುತ್ತದೆ. ಶಿವಯೋಗಸಾಧನೆಯು ಸುಳಿದೆಗೆದು ಬೆಳೆ ಬೆಳೆದಂತೆ ಆತನ ಭಕ್ತಿಯಂ ಸದ್ಭಕ್ತಿಯಾಗಿ, ಕ್ರಿಯೆಯು ಸತ್ಕ್ರಿಯೆಯಾಗಿ, ಜ್ಞಾನವು ಸುಜ್ಞಾನವಾಗಿ ಮಾರ್ಪಡುವುದು. ಆ ನಿಲವಿನಲ್ಲಿ ಈ ಮೂರರಲ್ಲಿ ವಿಂಗಡಿಕೆ ಕಾಣಿಸಿಕೊಳ್ಳದೆ, ಹೊಂದಿಕೆ ತೋರುವುದು. ಶಿವಯೋಗಿಯ ಆತ್ಯಂತಿಕ ಅನುಭವದಲ್ಲಿ ರೂಪುಗೊಳ್ಳುವ ಅನಾದಿ ಭಕ್ತ ಮತ್ತು ಅನಾದಿ ಜಂಗಮ ಈ ಎರಡರಲ್ಲಿ ಆವುದು ಮುಂದು, ಆವುದು ಹಿಂದು ಎಂದು ಭಿನ್ನ ವಿಟ್ಟು ನುಡಿಯಲವಕಾಶವಿಲ್ಲ. ಬೀಜವೃಕ್ಷಗಳಂತೆ ಇವುಗಳಸಂಬಂಧ; ನಿಲವುಗಳು. ಇಲ್ಲಿ ತನ್ನ ಅನುಭಾವದ ಔನ್ನತ್ಯದಲ್ಲಿ ಚನ್ನಬಸವಣ್ಣನವರು ತಿಳಿಸಿರುವಮಾತುಗಳನ್ನು ನೆನೆಯಬೇಕು:

> **"ಅಯ್ಯಾ ಪಿಂಡಬ್ರಹ್ಮಾಂಡದ ಮಧ್ಯದಲ್ಲಿ**
> **ಭಕ್ತನೆಂಬ ವೃಕ್ಷವಾಗಿ ಚಿದಂಡವಿರ್ಪುದು.**
> **ಆ ಚಿದಂಡದ ಮಧ್ಯದಲ್ಲಿ**
> **ಜಂಗಮವೆಂಬ ಬೀಜವಾಗಿ ಚಿನ್ಮಯಾಂಡವಿರ್ಪುದು.**
> **ಆ ಎರಡರ ಮಧ್ಯದಲ್ಲಿ ಸತ್ಕ್ರಿಯೆ, ಸಮ್ಯಕ್‌ಜ್ಞಾನ, ಮಹಾಜ್ಞಾನವೆಂಬ**
> **ಚಿತ್‌ಸೂರ್ಯ ಚಿಚ್ಚಂದ್ರ ಚಿದಗ್ನಿ ಮಂಡಲವಿರ್ಪುದು."**[೧]

ಪರಶಿವನ ಉಗ್ರಶಾಂತಿ ಗಾಂಭೀರ್ಯನೇತ್ರವೆಂದರೂ,[೨] ಶಿವಯೋಗಿಯ ಕ್ರಿಯಾ ಭಕ್ತಿ ಜ್ಞಾನಗಳ ಮೇಳವೆಂದರೂ, ಸೂರ್ಯ ಚಂದ್ರ ಅಗ್ನಿ ಮಂಡಳಗಳ ಹೊಂದಾಣಿಕೆ ಯೆಂದರೂ, ಇಲ್ಲವೆ ಪಿಂಗಳಾ ಇಡಾ ಸುಷುಮ್ನಾ ನಾಡಿಗಳ ಸಂಗಮವೆಂದರೂ, ಹೃದಯ, ಭ್ರೂಮಧ್ಯ ಸಹಸ್ರಾರ ಚಕ್ರಗಳಲ್ಲಿಯ ಶಕ್ತಿ ಸಂಗಮವೆಂದರೂ, ಇಷ್ಟ ಪ್ರಾಣ ಭಾವ ಲಿಂಗಗಳ ಸಾಮರಸ್ಯವೆಂದರೂ ಒಂದೇ. ಮೈಯನ್ನೆಲ್ಲ ಕಣ್ಣಾಗಿ, ಉತ್ತಮಾಂಗವನ್ನೆಲ್ಲ ಕಣ್ಣಾಗಿ, ರೋಮರೋಮವನ್ನೆಲ್ಲ ಕಣ್ಣಾಗಿ ಮಾರ್ಪಡಿಸಿಕೊಳ್ಳುವ ರಹಸ್ಯವಡಗಿದೆ ಶಿವ ಯೋಗಿಯ ಸಾಧನೆಯಲ್ಲಿ. ಭಕ್ತಿ ಕ್ರಿಯಾ ಜ್ಞಾನ ಸಮನ್ವಿತವಾದ ಶಿವಯೋಗಿಯ ಆತ್ಯಂತಿಕ ಸಾಮರಸ್ಯದ ಅನುಭವದಲ್ಲಿ ತಾನೆ ಭಕ್ತ, ತಾನೆ ಜಂಗಮ, ತಾನೆ ಲಿಂಗ, ತಾನೆ ಅಂಗ. ಪೂಜ್ಯನೂ ತಾನೆ, ಪೂಜಕನೂ ತಾನೆ; ಸೇವ್ಯನೂ ತಾನೆ, ಸೇವಕನೂ ತಾನೆ; ಕ್ರಿಯಾಪ್ರಕಾಶದಿಂದ ಸ್ಫುರಿಸುವ ಅವನ ಅಂಗಕರಣಗಳೆಲ್ಲ ಪಾರದರ್ಶಕವಾಗಿ, ಪರಶಿವನ ಪ್ರಭೆಯಿಂದ ಕಳೆಯೇರಿ, ಲಿಂಗಕಿರಣಗಳಾಗಿ ಹೊರಹೊಮ್ಮುವವು. ಎರಡೆಂಬುದಳಿದು ಏಕವಾಗಿ ಅದುವೆ ಪರಶಿವನಾಗಿ ಕಂಗೊಳಿಸುವುದು. ಇದು ಶರಣರು ನಿರೂಪಿಸಿದ ಶಿವ ಯೋಗದ ರಹಸ್ಯ.

---

೧. ಚಬವ. ೭೨೭; ೨. ಚಬವ. ೬೨೭;

# ಸಮಾಜವಿಮರ್ಶೆ – ವ್ಯವಸ್ಥೆ

ಹಿಂದೆ ವಿವೇಚಿಸಿದಂತೆ ಶಿವಶರಣರ ಕ್ರಾಂತಿಯ ಉದ್ದೇಶ ನೂತನಸಮಾಜವನ್ನು ನಿರ್ಮಿಸುವುದಾಗಿದ್ದಿತು. ಆಗ ಅದರ ಅವಶ್ಯಕತೆಯೂ ಇದ್ದಿತು. ಹಾಗಿಲ್ಲದಿದ್ದರೆ ಇಂತಹ ಕ್ರಾಂತಿಗಳು ಉದ್ಭವಿಸಲಾರವು. ಸಮಾಜದ ಅಸ್ತವ್ಯಸ್ತಪರಿಸ್ಥಿತಿ ಕ್ರಾಂತಿಗೆ ಬೀಜ ಸ್ವರೂಪವಾಗುತ್ತದೆ. ಚನ್ನಬಸವಣ್ಣನವರ ಕಾಲದಲ್ಲಿ ಸಮಾಜ ಒಂದು ನಿಶ್ಚಿತ ಗುರಿಯಿಲ್ಲದೆ, ಬೆಲೆಯಿಲ್ಲದೆ ಸಾಗಿದ್ದಿತೆಂಬುದನ್ನು ಅವರ ವಚನಗಳಲ್ಲಿ ಕಾಣಬಹುದು:

ಭಕ್ತಿಯೆಂಬುದು ಅನುಭವದ ವಿಷಯ. ಅದನ್ನು ಅಂತರಂಗದಲ್ಲಿ ಅಳವಡಿಸಿಕೊಳ್ಳಬೇಕಾಗುತ್ತದೆ. ಹೀಗೆ ಅಂತರಂಗದಲ್ಲಿ ಅಧ್ಯಾತ್ಮವನ್ನು ಸಾಧಿಸುವವರು ಬಾಹ್ಯ ಆಡಂಬರಕ್ಕೆ ಮನಸೋಲುವುದಿಲ್ಲ. ಆದರೆ, ನೈಜಧರ್ಮ ಮಾಜಿರಲು ಬಾಹ್ಯಾಡಂಬರ ಬೆಳೆಯುತ್ತದೆ. ಚನ್ನಬಸವಣ್ಣನವರ ಕಣ್ಣಿಗೆ ಇದು ಬೀಳದೆಹೋಗಿಲ್ಲ.

**"ತನತನಗೆ ಕುಳ್ಳಿರ್ದು, ಮನಸಿಗೆ ಬಂದಂತೆ ಘನಲಿಂಗವಾರ್ತೆಯ**
**ಗಳಹುತಿಪ್ಪರು ನೋಡಾ!**
**ಗುರುಕಾರುಣ್ಯವ ಹಡೆಯದೆ, ಸ್ವರಬಿಂದುಗಳ ತಡೆಯದೆ,**
**ಹರನ ಶರಣರ ಮುಂದೆ ಹಿರಿದು ಮಾತನಾಡುತಿಪ್ಪರು ನೋಡಾ!**
**ಇಱಿಯದೆ ಮೆಱೆವರು; ಅಱಿಯದೆ ಉಲಿವರು**
**ಕೂಡಲಚನ್ನಸಂಗಯ್ಯನಲ್ಲಿ ಜನಜಂಗುಳಿ!"[೧]**

ಜನಜಂಗುಳಿ, ರಣರಂಗದಲ್ಲಿ ಇರಿಯದೆ ಮೆರೆಯುವ ಹೇಡಿಡಂಭಕನಂತೆ ಅರಿಯದೆ ಪರಮಾತ್ಮನ ವಿಷಯವನ್ನು ಗಳಹುತ್ತಿದ್ದಿತು. ಪರಬ್ರಹ್ಮದ ವಾರ್ತೆ, ನುಡಿದು ಹೇಳುವುದಲ್ಲ; ಅರಿದು ಆಚರಿಸುವುದು. ಬಾಯಬ್ರಹ್ಮವಾದಿಗಳು ಸಂತೆಯಂಗಡಿಯಲ್ಲಿ ಕುಳಿತು ಪರಬೊಮ್ಮದ ವಿಷಯವನ್ನು ಮಾತಾಡುತ್ತಿರುವರು. ಚನ್ನಬಸವಣ್ಣನವರು ಇಂತಹರನ್ನು ಕಟುವಾಗಿ ಟೀಕಿಸಿರುವರು.

**"ಹಾರುವನ ಭಕ್ತಿ ಪ್ರಾಣ ಹಾರುವನ್ನಕ್ಕ; ಪ್ರಾಣ ಹಾರಿದಡೆ ಭಕ್ತಿ**
**ಹುರುಳಿಲ್ಲ.**
**ನೋಡಲಿಲ್ಲ, ನುಡಿಸಲಿಲ್ಲ; ಬಚ್ಚಿದಡಕ್ತಿಯ ಹಣ್ಣು ಸಂಪಾದಿಸಲಿಲ್ಲ."[೨]**

ಕರ್ಮಪ್ರಾಧಾನ್ಯವಾಗಿದ್ದ ಸಮಾಜ, ಶರಣರ ಕಟುತರವಾದ ವಿಮರ್ಶೆಗೊಳಗಾಗಿದೆ.

**"ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆನೆಂದು,**
**ಹೊನ್ನ ಕಪಿಲೆಯ ಕೊಂದು ನರಕಕ್ಕಿಳಿಯ ಹೇಳಿತ್ತೆ ವೇದ?"**
**"'ಅಹಿಂಸಾ ಪರಮೋಧರ್ಮ'ವೆಂದೋದಿ,**
**ಆಸುರ ಭೋಜನಕ್ಕೆ ಅಂಗವಿಸಿ ಕರ್ಮವ ಮಾಡಿ,**
**ಹೋತನ ಕೊಂದುತಿಂಬುದು ಪಾತಕವಲ್ಲವೆ?"**

---

೧. **ಚಬವ.** ೪೩೧. ೨. **ಚಬವ.** ೪೪೨.

"ಹೊಲೆಯುನಂತೆ ಹುಲುವೆಣನ ಸುಟ್ಟು, ಹೊರಸಿನ ಮೇಲೆ ಹತವಾದ
ಕಳಗಹತ್ತಿದ ಪಶುವಿನ ಉತ್ಕ್ರಾಂತಿಯು ಕಾನನದಲ್ಲಿ
ಕೂಳಭೋಜನವನುಂಡು, ಲೋಕೋಪಚಾರಕ್ಕೆ ಒಳಗಾಗಿ
ಪಾಪಕರ್ಮವಮಾಡಿ, ಸಲ್ಲದೆ ಹೋದರು ಶಿವನಲ್ಲಿಗೆ! . . . "[೧]

ಇಲ್ಲಿ ಚನ್ನಬಸವಣ್ಣನವರು ಯಜ್ಞಯಾಗಾದಿಗಳ ಕರ್ಮಠತನವನ್ನು ಬಿಚ್ಚುಮಾತು ಗಳಿಂದ ಖಂಡಿಸಿರುವರು.[೨] ಇಂತಹ ಕರ್ಮಕಾಂಡ, ಹತ್ಯಾಕಾಂಡವಾಗಿ ನಾಡಿನ ತುಂಬ ಪ್ರಚಾರದಲ್ಲಿರಬೇಕು. ಯಜ್ಞಯಾಗಾದಿಗಳಿಗೆ ಬಲಿಯಾಗುವ ಪಶುಗಳನ್ನೂ ಮಾನವ ರನ್ನೂ ಕುರಿತು, ಬಸವಣ್ಣ ಚನ್ನಬಸವಣ್ಣ ಮೊದಲಾದ ಶರಣರು ಬಹುವಾಗಿ ನೊಂದು ಕೊಂಡಿರುವರು. ಮನದ ನೋವು ಒಮ್ಮೊಮ್ಮೆ ರೊಚ್ಚಾಗಿ ಹೊರಹೊಮ್ಮಿರುವುದನ್ನು ಕಾಣಬಹುದು. ಚನ್ನಬಸವಣ್ಣನವರಿಗೆ ಸಾಮಾಜಿಕಸಂವೇದನೆಯಿದೆ. ಅನ್ಯಾಯ ಅಧರ್ಮ ಗಳು ಒಮ್ಮೆಲೆ ಅವರನ್ನು ಬಡಿದೆಬ್ಬಿಸುತ್ತವೆ.

ವೈದಿಕಧರ್ಮ ಹೀಗೆ ಕರ್ಮಕಾಂಡಕ್ಕೆ ತುತ್ತಾಗಿದ್ದರೆ, ಅವೈದಿಕವೆನಿಸಿದ ಅನೇಕ ಪಂಥಗಳು ಮತ್ತೊಂದು ಬಗೆಯಿಂದ ಅಂಧಕಾರದಲ್ಲಿ ಮುಳುಗಿದ್ದವು. ಹೀಗೆ ಸಮಾಜ ದಲ್ಲಿ ಐಕ್ಯವೆಂಬುದೇ ಇರಲಿಲ್ಲ; ಸಮಾಜ ಸುಭದ್ರವಾಗಿರಲಿಕ್ಕೆ ಅವಶ್ಯವಾದ ಏಕಸೂತ್ರತೆ ಅದಕ್ಕಿರಲಿಲ್ಲ. ಮಡಿಕೆ ದೈವ, ಮಣ್ಣು ದೈವ ಎಂದು ಭಾವಿಸಿ, ಅವನ್ನು ಪೂಜಿಸಿ ಭಿನ್ನತೆ ಯಲ್ಲಿ ಸಮಾಜ ಛಿನ್ನವಿಚ್ಛಿನ್ನವಾಗಿದ್ದಿತು. ಇಂತಹ ಭಿನ್ನ ದೈವಾರಾಧನೆಯ ಉಲ್ಲೇಖ ಚನ್ನಬಸವಣ್ಣನವರ ವಚನಗಳಲ್ಲಿ ಅನೇಕಸಲ ಬರುತ್ತದೆ.

"ಭೈರವನನಾರಾಧಿಸಿ, ಬಾಹಿರರಾದರಯ್ಯಾ!
ಮೈಲಾರನನಾರಾಧಿಸಿ, ಕುಱುಳು ಬೆರಳ ಕಡಿಸಿಕೊಂಡು
ನಾಯಾಗಿ ಬಗಳುತ್ತಿಪ್ಪರಯ್ಯಾ!!
. . . . . . . . . . . . "[೩]

ಹೀಗೆ ಬೆನಕ, ಹೊಸ್ತಿಲು, ಕಲ್ಲು, ಮಣ್ಣು ಮುಂತಾದವುಗಳ ಪೂಜೆಯನ್ನು ಚನ್ನಬಸವಣ್ಣ ನವರು ದಿಟಪುಟವಾಗಿ ಖಂಡಿಸಿರುವರು.

"ಕಾಗೆ ತಮ್ಮ ದೇವರೆಂದು ಕರೆದು, ಮನೆಯ ಮೇಲೆ ಕೂಳಹಾಕಿ,
ಕೈಮುಗಿದು ಬೇಡಿಕೊಂಬರಯ್ಯಾ!
ಆ ಕಾಗೆ ಬಂದು ಮನೆಯ ಹೊಕ್ಕಡೆ,
ಒಕ್ಕಲೆತ್ತಿಹೋದ ಮರ್ಕಟನಂತಾಯಿತ್ತಯ್ಯಾ ನೇಮಸ್ಥನ ಭಕ್ತಿ!
ಹಾವು ತಮ್ಮ ದೇವರೆಂದು, ಹಾಲನೆಱೆದು ಕೈಮುಗಿದು ಬೇಡಿಕೊಂಬರಯ್ಯಾ!
ಆ ಹಾವ ಕಂಡಡೆ, ಹೆದಱಿ ಓಡುವ ಭಾವಭ್ರಮಿತರ ಭಕ್ತಿಯುಂತಾಯಿತ್ತಯ್ಯಾ
ಶೀಲವಂತನ ಭಕ್ತಿ!
ಹೊಸ್ತಿಲ ದೇವರೆಂದು ಪೂಜಿಸಿ, ಮರಳಿ ಇಕ್ಕ್ಯಾಲಿಕ್ಕಿ ದಾಂಟಿಹೋಹ
ಒಕ್ಕಲಗಿತ್ತಿಯ ಭಕ್ತಿಯುಂತಾಯಿತ್ತಯ್ಯಾ, ಭಾಷೆವಂತನ ಭಕ್ತಿ!"[೪]

---

೧. ಚಬವ. ೫೯೯. ೬೫೮. ೨. ಚಬವ. ೪೪೯. ೬೮೩, ೩. ಚಬವ. ೪೪೫, ೨೨೮, ೪. ಚಬವ. ೫೦೦.

ಇಲ್ಲಿ ಚನ್ನಬಸವಣ್ಣನವರ ಸಮಾಜನಿರೀಕ್ಷಣೆ ಎಷ್ಟು ಸೂಕ್ಷ್ಮವಾಗಿದೆಯೋ ಅಷ್ಟೇ ಪ್ರಮಾಣದಲ್ಲಿ ಅದರ ವಿಮರ್ಶೆ ತೀಕ್ಷ್ಣವಾಗಿದೆಯೆಂಬುದೂ ಸ್ಪಷ್ಟವಾಗುತ್ತದೆ. ವಿವಿಧ ದೈವಗಳನ್ನು ನಂಬಿ ವೀರಭದ್ರ, ಬಸವಣ್ಣ, ಮಲ್ಲಿಕಾರ್ಜುನ ಮುಂತಾದ ಕುಲದೈವಗಳನ್ನು ಕಲ್ಪಿಸಿಕೊಳ್ಳುವವರಿಗೆ ನಿಜಮುಕ್ತಿಯಿಲ್ಲವೆಂಬುದು ಚನ್ನಬಸವಣ್ಣನವರ ಅಭಿಮತ.

ಹಲವು ದೈವಗಳನ್ನು ಖಂಡಿಸಿದಂತೆ ಸಮಾಜದ ಅಂಧಶ್ರದ್ಧೆಗಳನ್ನೂ ಅಲ್ಲಗಳೆದಿರುವರು:

> **"ಜಾತಕರ್ಮ, ಶುಭಕರ್ಮ, ಪ್ರೇತಕರ್ಮ ಮಾಡುವರು ಲೋಕದ ಮನುಜರು.**
> **ಈಱಿಲು, ಮೂವಟ್ಟಲು, ಹಸೆಹಂದರ, ತೊಂಡಿಲು ಬಾಸಿಂಗ, ಹಣೆಯಕ್ಕಿ ಹೆಣನ ಸಿಂಗಾರ, ಶ್ರಾದ್ಧಕೂಳು . . . . . . . . . . . . . . . . "**[೧]

ಈ ಪರಿಯಾಗಿ ಜನತೆ ಅಂಧಶ್ರದ್ಧೆಯಿಂದ ಶುಭಾಶುಭ ಫಲಗಳ ಸಂಬಂಧದಲ್ಲಿ ಮೇಲೆ ನಿರ್ದೇಶಿಸಿದ ಕರ್ಮಗಳನ್ನು ಮಾಡುತ್ತಿದ್ದರು. ಇಂದಿಗೂ ಅವು ರೂಢಿಯಲ್ಲಿರುವುದನ್ನು ಕಾಣುತ್ತೇವೆ. ಇಂತಹ ಜನರಿಗೆ ವಾರ, ತಿಥಿ, ನಕ್ಷತ್ರಗಳಲ್ಲಿ ವಿಶೇಷವಾದ ನಂಬುಗೆ. ಅದನ್ನು ಚನ್ನಬಸವಣ್ಣನವರು ಸ್ಪಷ್ಟವಾಗಿ ಖಂಡಿಸಿರುವರು:

> **"ಸೋಮವಾರ, ಮಂಗಳವಾರ ಶಿವರಾತ್ರಿಯೆಂದು ನೋಡಿ ಮಾಡುವ ಭಕ್ತರ, ಲಿಂಗಭಕ್ತಂಗೆ ಎಂತು ಸರಿ ಎಂಬೆನಯ್ಯಾ!**
> **ದಿನ ಶ್ರೇಷ್ಠವೋ, ಲಿಂಗ ಶ್ರೇಷ್ಠವೋ?"**[೨]

ಎಂದು ಅಂತಹ ಜ್ಯೋತಿಷ್ಯವಾದಿಗಳಿಗೆ ಪ್ರಶ್ನೆಹಾಕುವರು. ಅಂತಹ ಜ್ಯೋತಿಷ್ಯವನ್ನೂ ಜ್ಯೋತಿಷಿಗಳನ್ನೂ ನಂಬುವವರಿಗೆ ಭಕ್ತಿಯಿಲ್ಲವೆಂದು ಚನ್ನಬಸವಣ್ಣನವರ ಅಭಿಮತ. 'ವಿಪ್ರರಿಗೆ ಕಾಣಿಕೆಯಿಟ್ಟು ಸೂರ್ಯಬಲ, ಚಂದ್ರಬಲ ಕೇಳುವವರಿಗೆ ಭಕ್ತಿಯೇ ಇಲ್ಲ' ಎಂಬುದು ಚನ್ನಬಸವಣ್ಣನವರ ಖಂಡಿತವಾದ ನಿರ್ಣಯ. ಆದುದರಿಂದ ಶರಣರಿಗೆ ವಾರ, ತಿಥಿ, ನಕ್ಷತ್ರ, ಜ್ಯೋತಿಷ್ಯ ಮುಂತಾದವುಗಳಲ್ಲಿ ನಂಬುಗೆಯಿಲ್ಲ. ಆಯಿತ್ತೇ ಉದಯಮಾನ; ಹೋಯಿತ್ತೆ ಅಸ್ತಮಾನ. ನಿಚ್ಚ ನಿಚ್ಚ ಶರಣರಿಗೆ ಶಿವರಾತ್ರಿ!!

> **"ಒಂದಿಂದ್ರಿಯ ಮೊದಲಾಗಿ ಐದಿಂದ್ರಿಯ ಕಡೆಯಾಗಿ**
> **ಜೀವಜಾಲವಲ್ಲವೆ ಸಚರಾಚರವೆಲ್ಲ?"**[೩]

ಎಂದು ಚರ ಅಚರ ಸೃಷ್ಟಿಯೆಲ್ಲಾ ಜೀವಜಾಲವೆಂದು ಶರಣರು ಭಾವಿಸಿರುವರು. ಇಷ್ಟೇ ಅಲ್ಲ; ಅದು ಪರಮಾತ್ಮನ ಸ್ವರೂಪವೆಂದೂ ಅವರ ನಂಬುಗೆ. ಅಂತೆಯೇ ಕಾಲವೂ ಕೂಡ ಪರಮಾತ್ಮನ ಸ್ವರೂಪವೆಂದೇ ಶರಣರು ಭಾವಿಸುವರು. ಹೀಗಿದ್ದ ಮೇಲೆ ಅವರು ಜ್ಯೋತಿಷ್ಯ ಮುಂತಾದ ಶಾಸ್ತ್ರಗಳನ್ನು ನಂಬಿ ಅವಕ್ಕನುಗುಣವಾದ ಕರ್ಮಗಳನ್ನು ಮಾಡುವುದು ಸಾಧ್ಯವೇ ಇಲ್ಲ. ಅಂತೆಯೇ ಅವನ್ನೆಲ್ಲಾ ಶರಣರು ಅಲ್ಲಗಳೆದಿರುವರು.

---

೧. **ಚಬವ.** ೨೩೮. ೨. **ಚಬವ.** ೪೩೫. ೩. **ಚಬವ.** ೬೦೩.

ಚನ್ನಬಸವಣ್ಣನವರ ಕಾಲದಲ್ಲಿ ಕರ್ನಾಟಕದಲ್ಲಿ ಅನೇಕ ಬಗೆಯ ಶೈವಪಂಥಗಳು ಅಸ್ತಿತ್ವದಲ್ಲಿದ್ದುದನ್ನು ಪೀಠಿಕೆಯಲ್ಲಿ ಕಂಡುದಾಗಿದೆ. ಶುದ್ಧಶೈವ, ಕಾಳಾಮುಖ, ಕಾಪಾ-ಲಿಕ ಮೊದಲಾದ ಅನೇಕ ಪಂಥಗಳು ಶಿವನನ್ನೇ ಆರಾಧಿಸುತ್ತಿದ್ದರೂ ಅಲ್ಲಿ ಅನೇಕ ಬಗೆಯ ವಾಮಾಚಾರಗಳು ಕಂಡುಬರುತ್ತಿದ್ದುವು. ಇಷ್ಟೇ ಅಲ್ಲ; ವೀರಶೈವವೆಂದು ಅಭಿಧಾನಹೊಂದಿದ ಪರಂಪರಾಗತ ಶೈವವೂ ಅನೇಕ ಬಗೆಯ ಅಂಧಾಚರಣೆಗೆ ಒಳಗಾಗಿದ್ದಂತೆ ತೋರುತ್ತದೆ. ಈ ಶೈವಪಂಥಗಳನ್ನೆಲ್ಲ ಒಂದು ಕಟ್ಟಿನಲ್ಲಿ ತಂದು, ವೀರಶೈವವನ್ನು ವಿಸ್ತರಿಸಿ, ಭಕ್ತಿಪಥವನ್ನು ಹಿಗ್ಗಿಸಿ, ಮಿಕ್ಕ ಪಂಥಗಳ ಜನತೆಯನ್ನೂ ಅಲ್ಲಿ ಬರಮಾಡಿಕೊಳ್ಳಬೇಕೆಂಬುದು ಚನ್ನಬಸವೇಶ್ವರಾದಿ ಪ್ರಮಥರ ಉದ್ದೇಶವಿದ್ದಂತೆ ತೋರುತ್ತದೆ. ಆದುದರಿಂದ ಇಂತಹ ವಿವಿಧ ಶೈವಪಂಥಗಳು, ಚನ್ನಬಸವಣ್ಣನವರ ತೀಕ್ಷ್ಣವಿಮರ್ಶೆಗೆ ಗುರಿಯಾಗಿವೆ. ಹಲವು ಶೈವಪಂಥಗಳಲ್ಲಿ ಲಿಂಗದೀಕ್ಷೆಯೂ ಆಗುತ್ತಿದ್ದಿತು. ಅಂತಹ ಶೈವಗುರುವಿನಿಂದ ದೀಕ್ಷೆಯನ್ನು ಪಡೆದು, ವೀರಶೈವರೆಂದು ಹೇಳಿಕೊಳ್ಳುವ ರೂಢಿಯೂ ಇದ್ದಿತು. ಅಂತಹರಿಗೆ ವೀರಶೈವಗುರು ಮತ್ತೆ ದೀಕ್ಷೆಯನ್ನಿತ್ತು ನಿಜಾಚರಣೆಯಲ್ಲಿ ನಿಲಿಸಬೇಕಾಗುತ್ತಿತ್ತು. ಏಕೆಂದರೆ—ಮೊದಲಿನ ಆ ಶೈವಮಾರ್ಗದಲ್ಲಿ ಅಂಧಕನಂ ಓಡಹಿಡಿದು ತನ್ನ ಸ್ವರೂಪವ ನೋಡಿದಂತಾಗುತ್ತಿತ್ತು. ಗುರುವಿಗೆ ದೂರಾರ್ಚನೆ, ಶಿಷ್ಯನಿಗೆ ಇಷ್ಟಲಿಂಗಾರ್ಚನೆ; ಗುರು ವಾಯುಪ್ರಾಣಿ, ಶಿಷ್ಯ ಲಿಂಗಪ್ರಾಣಿ; ಗುರು ಭೂತದೇಹಿ, ಶಿಷ್ಯ ಲಿಂಗದೇಹಿ; ಗುರು ಅನರ್ಪಿತಭುಂಜಕ, ಶಿಷ್ಯ ಲಿಂಗಾರ್ಪಿತಭುಂಜಕ; ಗುರು ಅಗ್ನಿದಹನ ಸಂಪತ್ತು, ಶಿಷ್ಯ ಸಿದ್ಧಸಮಾಧಿಸಂಪತ್ತು. ಇಂತಹ ಗುರು ಶಿಷ್ಯ ಸಂಬಂಧಕ್ಕೆ ನಾಯಕನರಕ. ವಿಷದಷ್ಟವಾದ ನರನನ್ನು ಗಾರುಡಮಂತ್ರ ಔಷಧದಿಂದ ಆರೋಗ್ಯಕಾಯನನ್ನಾಗಿ ಮಾಡುವಂತೆ, ಶೈವಗುರುವಿನ ಕೈಯಲ್ಲಿ ಮಂತ್ರೋಪದಿಷ್ಟನಾದ ಶಿಷ್ಯನಿಗೆ ವೀರಶೈವ ಮಂತ್ರೋಪದೇಶದಿಂದ ಕಾಯ ಶುದ್ಧವಾಗುವುದು.

ಹಲವು ಬಗೆಯ ಲಿಂಗಧಾರಣೆಯಲ್ಲಿ ಕಾಪಟ್ಯ ಸ್ಪಷ್ಟವಾಗಿ ಕಂಡುಬರುತ್ತದೆ.

(೧) ಗುರು ತನ್ನ ಲಿಂಗವನ್ನೇ ಶಿಷ್ಯನಿಗೆ ಕೊಟ್ಟುಬಿಡುವ ಸಂಪ್ರದಾಯವಿದ್ದಂತೆ ತೋರುತ್ತದೆ.

**"ತನ್ನ ಲಿಂಗವ ಶಿಷ್ಯಂಗೆ ಬಿಜಯಂಗೆಯ್ಸಿಕೊಟ್ಟು,**
**ಮುಂದೆ ತಾನೇನಾಗುವನೆಲವೋ?**
**ಅವನ ಧರ್ಮಕ್ಕೆ ಗುರುವಾದನಲ್ಲದೆ, ಅವನ ಮನಕ್ಕೆ ಗುರುವಾದುದಿಲ್ಲ;**
**ಹಿಂದಾದ ಮುಕ್ತಿಯ ಮಾಱಿಕೊಂಡುಂಬ ಭಂಗಗಾಱರ ತೋಱದಿರಾ,**
**ಕೂಡಲಚನ್ನಸಂಗಮದೇವಾ!"**[೧]

ಅನಿಮಿಷದೇವರಂತಹ ಸುಜ್ಞಾನಪ್ರಭಾಪುಂಜರ ಕರದಿಷ್ಟಲಿಂಗ, ಪ್ರಭುದೇವರಂತಹರ ಕರಸ್ಥಲಕ್ಕೆ ಬರುವ ಮಾತು ಬೇರೆ. ಲೋಕರೂಢಿಯಲ್ಲಿ ಸದ್ಗುರುವು ತಾನು ಇಷ್ಟಲಿಂಗ ಧಾರಿಯಾಗಿ ಶಿಷ್ಯನಿಗೆ ಇಷ್ಟಲಿಂಗವನ್ನು ಧರಿಸಬೇಕಾಗುತ್ತದೆ. ಇದನ್ನು ಬಿಟ್ಟು ಅಂತಹ

---

೧. **ಚಬವ.** ೩೭೦.

ಗುರುವು ತನ್ನ ಲಿಂಗವನ್ನೇ ಶಿಷ್ಯನಿಗೆ ಮಾರಾಟಮಾಡಿಕೊಳ್ಳುವ ಹೇಯವಾದ ರೂಢಿಗಳು ಶೈವಸಂಪ್ರದಾಯಗಳಲ್ಲಿ ನೆಲೆಗೊಂಡಿದ್ದುವು.

(೨) ತಂದೆಯ ಲಿಂಗವನ್ನೇ ಮಗನು ತೆಗೆದುಕೊಳ್ಳುವ ರೂಢಿ ಬಲವಾಗಿದ್ದಂತೆ ತೋರುತ್ತದೆ.

**"ತಂದೆಯ ಅಂಗದಮೇಲಣ ಲಿಂಗವ ಹಿಂಗಿಸಿ,**
**ಆತನ ಭೂತಪ್ರಾಣಿಯಮಾಡಿ ಕಳುಹುವಾತ ಪುತ್ರನೇ?**
**ಅಲ್ಲ; ಅವ ದುರಾತ್ಮಕನು!**
**ತಂದೆಯ ಬಱಿಯ ಕಾಯನ ಮಾಡಿ,**
**ಭಕ್ತನಾದಾತ ಪುತ್ರನೇ? ಅಲ್ಲ; ಅವ ಜ್ಞಾನಶೂನ್ಯನು!"[೧]**

ಇಂತಹ ತಂದೆ ಮಕ್ಕಳಿಬ್ಬರೂ ನರಕಕ್ಕೆ ಭಾಜನರು. ಹೀಗೆ ಕೆಲವು ಶೈವಪಂಥಗಳಲ್ಲಿ ಲಿಂಗಧಾರಣೆಯಾಗುತ್ತಿದ್ದರೂ ಅದರ ರೀತಿ, ಮೇಲೆ ನಿರ್ದೇಶಿಸಿದಂತೆ ವಿಕಟವಾಗಿದ್ದಿತು. ಲಿಂಗ, ವಿಭೂತಿ, ರುದ್ರಾಕ್ಷಿ ಮುಂತಾದವುಗಳ ಮಾರಾಟವೇ ಆಗುತ್ತಿತ್ತು.

**"ಲಿಂಗ, ವಿಭೂತಿ, ರುದ್ರಾಕ್ಷಿ ಇವ ಮಾಱಾಟಕ್ಕೆ ಹೇಱಿಕೊಂಡು ತಿರುಗುವ**
**ಎತ್ತುಕತ್ತೆಗೆ ಮುಕ್ತಿಯುಂಟೇ?"[೨]**

ಎಂದು ಚನ್ನಬಸವಣ್ಣನವರು ಕೇಳುವರು.

(೩) ಕಂಡವರಿಗೆ, ಭಕ್ತಿಯಿಲ್ಲದ ಬಂಟರಿಗೆ ಲಿಂಗದೀಕ್ಷೆ. ಕೊಡುವುದನ್ನಂತೂ ಚನ್ನಬಸವಣ್ಣನವರು ಸ್ಪಷ್ಟವಾಗಿ ಖಂಡಿಸಿರುವರು. ವೇಸಿ, ದಾಸಿ, ಸುಂಕೆಗ, ಮಣಿಹಗಾರ ಮುಂತಾದ ಡಾಂಭಿಕವೃತ್ತಿಯವರನ್ನು ಪರೀಕ್ಷಿಸದೆ, ಲಿಂಗಧಾರಣೆ ಮಾಡಕೂಡದೆಂಬ ವಿಧಿಯನ್ನು ಹಾಕಿರುವರು.

**"ವೇಸಿ, ದಾಸಿ, ಸುಂಕೆಗ, ಮಣಿಹಗಾಱ, ವಿದ್ಯಾವಂತ**
**ಇಂತೀ ಐವರಿಗೆ ಲಿಂಗವ ಕಟ್ಟಿದಡೆ**
**ಗುಡಿಯ ಮುಂದಣ ಸಿಂಗಾರಗಂಟೆ, ಎಮ್ಮೆಯ ಕೊರಳಗಂಟೆ;**
**ಕೊಟ್ಟಿಯ ಮೆಳೆಯೊಳಗೆ ಇಟ್ಟು ಸಿಕ್ಕಿದ ಕಲ್ಲು . . . . . . . . . ."[೩]**

ಚನ್ನಬಸವಣ್ಣನವರು ದಾಕ್ಷಿಣ್ಯಪರರಲ್ಲ; ನ್ಯಾಯನಿಷ್ಠುರರು. ಅಧರ್ಮವೆನಿಸಿದುದನ್ನು ಜನತೆಗೆ ತಿಳಿಯುವಂತೆ ಅವರ ಮಾತಿನಲ್ಲಿಯೇ ಆ ಸಮಾಜದ ವಿಮರ್ಶೆಮಾಡಿಬಿಡುವರು!

**"ಮದ್ಯಪಾನಿಗೆ ಲಿಂಗಸಾಹಿತ್ಯವ ಮಾಡಿದಾತಂಗೆ ನರಕ ತಪ್ಪದು.**
**ಮಾಂಸಾಹಾರಿಗೆ ಲಿಂಗಸಾಹಿತ್ಯವ ಮಾಡಿದಾತನ ವಂಶಕ್ಷಯವಹುದು.**
**ಜೂಜುಗಾಱನಿಗೆ ಲಿಂಗಸಾಹಿತ್ಯವ ಮಾಡಿದಾತ ರೌರವನರಕಕ್ಕೆ ಹೋಹನು.**
**ಸೂಳೆಗೆ ಲಿಂಗಸಾಹಿತ್ಯವ ಮಾಡಿದಾತ ಏಳೇಳು ಜನ್ಮದಲ್ಲಿ**
**ಶ್ವಾನನ ಬಸಿಱಲ್ಲಿ ಬಪ್ಪನು.**
**. . . . . . . . ಕೂಡಲಚನ್ನಸಂಗಯ್ಯನಲ್ಲಿ**
**ವಿಚಾರಿಸದೆ ಶಿಷ್ಯಂಗೆ ಲಿಂಗವ ಕೊಟ್ಟ ಗುರುವಿಂಗೆ, ನರಕ ತಪ್ಪದು!"[೪]**

---

೧. ಚಬವ. ೪೨೯. ೨. ಚಬವ. ೨೧೯. ೩. ಚಬವ. ೨೧೯. ೪. ಚಬವ. ೪೦೭.

ಸಮಾಜದಲ್ಲಿ ಮದ್ಯಪಾನಿಗಳೂ ಮಾಂಸಾಹಾರಿಗಳೂ ಇದ್ದರೆಂಬುದು, ಅಂತಹರನ್ನು ಪರೀಕ್ಷಿಸದೆ, ಅವರಲ್ಲಿ ಭಕ್ತಿಯ ಉತ್ಕಟತೆಯನ್ನು ಕಾಣದೆ, ಲಿಂಗದೀಕ್ಷೆ ಕೊಡಕೂಡದೆಂಬುದು ಚನ್ನಬಸವಣ್ಣನವರ ಶಾಸನ.

ಹೀಗೆ ಚನ್ನಬಸವಣ್ಣನವರ ವಚನಗಳನ್ನು ಒಮ್ಮೆ ಮುಗುಚಿಹಾಕಿದರೆ, ಅವರಿಗೆ ಸಾಮಾಜಿಕಸಂವೇದನೆ ಇದ್ದುದೂ ಸಮಾಜದೊಳಗಿನ ದೋಷಗಳನ್ನೆಲ್ಲ ಹೊಡೆದುಹಾಕಿ. ಸುಂದರವೂ ಬಂಧುರವೂ ಆದ ಸಮಾಜವನ್ನು ಕಟ್ಟಬೇಕೆಂಬ ಅಪೇಕ್ಷೆ ಇದ್ದುದೂ ಸ್ಪಷ್ಟವಾಗುತ್ತದೆ. ಹೀನಾಯಮಾನವಾದ ಆಚಾರಗಳು ಅಳಿದು, ಸದ್ಭಕ್ತಿ, ಸುಜ್ಞಾನ, ಸತ್ಕ್ರಿಯೆಗಳು ಸಮಾಜದಲ್ಲಿ ಅಳವಟ್ಟು, ಮರ್ತ್ಯವು ಮಹವಾಗಬೇಕೆಂಬುದು ಅವರ ಅಭಿಮತ. ಅಂತೆಯೇ ಅವರ ಪಂಚಾಚಾರಗಳೂ ಸಪ್ತಾಚಾರಗಳೂ ಸುಭದ್ರವಾಗಿವೆ. ವೈಯಕ್ತಿಕವಾಗಿ ಆತ್ಮೋನ್ನತಿಯನ್ನು ಸಾಧಿಸಿಕೊಳ್ಳುವ ಮಾತು ಬೇರೆ. ಆದರೆ, ಸಾಮೂಹಿಕವಾಗಿ ಸಾಮಾಜಿಕವಾಗಿ ನಾಡಿಗೆ ನಾಡೇ ಉದ್ಧಾರವಾಗಬೇಕೆಂಬುದು ಶರಣರ ಅಪೇಕ್ಷೆಯಾಗಿದ್ದಿತು. ಆದುದರಿಂದ ಇಂತಹ ಸರ್ವಾಚಾರಸಂಪತ್ತನ್ನು ಶರಣರು ಕಲ್ಪಿಸಿಕೊಂಡರು. ಕಾಗೆ ಒಂದಗುಳ ಕಂಡರೆ ತನ್ನ ಕುಲವನ್ನು ಕೂಗಿ ಕರೆವಂತೆ, ಭಕ್ತ ತನ್ನ ಬಳಗದೊಡನೆ ಕೂಡಿ, ಬಾಳಿ, ಬೆಳಗಬೇಕೆಂಬುದು ಶರಣರ ಸಂದೇಶ. ಅವರು ನೂತನ ಸಮಾಜದಲ್ಲಿ ಮೇಲುಕೀಳುಗಳನ್ನು ತೊಡೆದುಹಾಕಿದರು. ಹೆಣ್ಣು-ಗಂಡು, ಬಡವ-ಬಲ್ಲಿದ, ಆ ಜಾತಿ, ಈ ಜಾತಿ, ಮುಂತಾಗಿ ಎಲ್ಲ ಭೇದಗಳನ್ನೂ ನಿರ್ಮೂಲಮಾಡಿದರು. ಅಂಗದ ಮೇಲೆ ಲಿಂಗವಿದ್ದವರು ಸಮನೆಂದರು. ಕುಲ-ಗೋತ್ರಗಳ ನಾಮ-ಸೀಮೆಯನ್ನು ತೊಡೆದುಹಾಕಿದರು. ಸ್ತ್ರೀಗೆ ಪುರುಷಸಮಾನ ಹಕ್ಕನ್ನು ಕಲ್ಪಿಸಿ, ಆಕೆಯನ್ನು ಮೋಕ್ಷಕ್ಕೆ ಅಣಿಗೊಳಿಸಿದರು. ಬೆಳೆವ ಸಮಾಜ, ನಿರಂತರವೂ ಉತ್ಪಾದನೆಗೆ ತೊಡಗಬೇಕೆಂಬುದು ಶರಣರ ಮತ. ಅಲ್ಲದೆ, ಕಾಯಧರ್ಮ ಲಿಂಗಕ್ರಿಯೆಯಾಗಿ ಮುಂದುವರಿಯಬೇಕು. ವೃತ್ತಿಯಿಲ್ಲದೆ, ವ್ಯವಸಾಯವಿಲ್ಲದೆ, ಕಾಯಕ್ಲೇಶವಿಲ್ಲದೆ ಯಾವ ವ್ಯಕ್ತಿಯೂ ಸಮಾಜದಲ್ಲಿ ಇರಕೂಡದೆಂಬುದು ಶರಣರ ಅಭಿಮತ. ಕಾಯಕವೆಂಬ ನೂತನದರ್ಶನವನ್ನು ಶರಣರು ಕಂಡುಹಿಡಿದುದು ಈ ಸಂದರ್ಭದಲ್ಲಿ. 'ಶರೀರವಿರುವವರೆಗೆ ಎಂತಹ ಶಿವಯೋಗಿಯಾದರೂ ಅನುಗೊಂಬನಿತು ಕಾಯಕವನ್ನು ಮಾಡಲೇಬೇಕು' ಎಂಬುದು ಶರಣರ ಕಟ್ಟಳೆ. ಆ ಕಾಯಕವೇ ಕೈಲಾಸವೆಂದರವರು. ಅದರಲ್ಲಿ ಮೇಲು-ಕೀಳಿಲ್ಲ, ಹೆಚ್ಚು-ಕಡಿಮೆಯಿಲ್ಲ; ಅದು ಭಕ್ತಿಜ್ಞಾನಯುಕ್ತವಾದ ಕ್ರಿಯೆ. ಲಿಂಗಕ್ಕೆ ಅರ್ಪಿತವಾದುದು ಲಿಂಗದ ಪ್ರಸಾದವಾಗಿಯೇ ಅಂಗಕ್ಕೆ ಬರುವುದು. ಆದುದರಿಂದ ಆ ಕಾಯಕದಲ್ಲಿ ಹೆಚ್ಚು ಕುಂದನರಸುವುದು ಅಪರಾಧವೆಂದು ಸಾರಿದರು. ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ. ಎಲ್ಲ ವೃತ್ತಿ-ವ್ಯವಸಾಯಗಳೂ ಪರಮಾತ್ಮನ ಆರಾಧನೆ; ಅವನ್ನು ಆಚರಿಸುವವರೆಲ್ಲ ಒಂದೆ ಮಾನವ ಕುಲಕ್ಕೆ ಸಂಬಂಧಪಟ್ಟವರು. ಕರ್ಣದಲ್ಲಿ ಜನಿಸಿದವರು ಯಾರೂ ಇಲ್ಲ; ಎಲ್ಲರೂ ಹೊಲೆಗಂಡು, ಪಿಂಡದ ನೆಲೆಗೆ ಆಶ್ರಯವಾಗಿ ಅಮುದ್ಭವರಾದವರು. ಹೀಗೆ ಶರಣ ಸಮಾಜ, ಕಾಯಕದಿಂದ ಸಮೃದ್ಧವಾಯಿತು. ಸದರಲ್ಲಿ ಮೇಲು-ಕೀಳೆಂಬ ಭಾವನೆಯನ್ನು ತೊಡೆದುಹಾಕಿದುದರಿಂದ ಸಮತೆಗೆ ಬೀಡಾ

ಯಿತು. ಗುರು, ಲಿಂಗ, ಜಂಗಮಕ್ಕೆ ತನು, ಮನ, ಧನ ಅರ್ಪಿತವಾಗಬೇಕೆಂಬ ತತ್ವದಿಂದ ಒಂದೆಡೆ ಧನಸಂಚಯ ನಿಲ್ಲದಂತಾಯಿತು. ಇಂದಿನದು ನಾಳಿಂಗೆ ಎಂಜಲವೆಂದರು. ಅಂದಂದಿನ ಕಾಯಕದಿಂದ ಹೊರೆ ಹೊರೆಯಬೇಕೆಂದು ಶರಣರು ಕಲ್ಪಿಸಿಕೊಂಡರು. ಹೀಗೆ ಷಟ್‌ಸ್ಥಲ ತಳಹದಿಯಾಗಿ, ಅಷ್ಟಾವರಣ ಅಂಗವಾಗಿ, ಪಂಚಾಚಾರ ಪ್ರಾಣವಾಗಿ ಇರುವ ಚನ್ನಬಸವಣ್ಣನವರ ನೂತನ ಸಮಾಜ, ಸಮತೆಗೆ ತವರಾಗಿ, ಸತ್ಯಕ್ಕೆ ಬೀಡಾಗಿ, ಸುಜ್ಞಾನಕ್ಕೆ ಎಡೆಯಾಗಿದ್ದಿತು. ಅದು ಮರ್ತ್ಯದಲ್ಲಿ ಮಹವು ಬರಬೇಕೆಂಬ ಸಮಾಜ !

# ಸಾಹಿತ್ಯಸುಧೆ

**"ಪಾತಾಳದಗ್ಗವಣಿಯ ನೇಣಿಲ್ಲದೆ ತೆಗೆಯಬಹುದೆ,**
**ಸೋಪಾನ ಬಲದಿಂದಲ್ಲದೆ?**
**ಶಬ್ದಸೋಪಾನದ ಬಲದಿಂದ ನಿಶ್ಯಬ್ದ ಸೋಪಾನವ ಕಟ್ಟಿ,**
**ನಡೆಸಿದರು ನಮ್ಮ ಪುರಾತನರು;**
**ದೇವಲೋಕಕ್ಕೆ ಬಟ್ಟೆ ಕಾಣಿರೊ!**
**ಮರ್ತ್ಯರ ಮನದ ಮೈಲಿಗೆಯ ಕಳೆಯಲೆಂದು,**
**ಗೀತ ಮಾತೆಂಬ ಜ್ಯೋತಿಯ ಬೆಳಗಿಟ್ಟರು,**
**ಕೂಡಲಚನ್ನಸಂಗಯ್ಯಾ ನಮ್ಮ ಶರಣರು."**[೧]

ಕನ್ನಡ ವಾಙ್ಮಯಪ್ರಪಂಚದಲ್ಲಿ ಒಂದು ವಿಶಿಷ್ಟಸ್ಥಾನವನ್ನು ಅಲಂಕರಿಸಿದ ವಚನ ವಾಙ್ಮಯ, ಅನುಭಾವದ ಕೆನೆ; ಅಧ್ಯಾತ್ಮದ ಕೊನೆ. ಸುಜ್ಞಾನ ಸತ್ಕ್ರಿಯೆಗಳ ಸಾಮರಸ್ಯವೇ ಅನುಭಾವ; ಲಿಂಗಾಂಗ ಸಾಮರಸ್ಯದಲ್ಲಿ ಲೋಲಾಡುತ್ತಿರುವವನೇ ಅನುಭಾವಿ. ಆತನ ನಡೆ ಪಾವನ; ನುಡಿ ಮಂತ್ರ. ಸತ್ಯಜ್ಞಾನದ ಈ ನುಡಿ ಸದ್ಭಕ್ತನ ಪರಮಾನಂದಾಬ್ಧಿಯಲ್ಲಿ ಹೊರಹೊಮ್ಮಿದ ಅನರ್ಘ್ಯರತ್ನ. ಅದು ಸಕಲ ಶಾಸ್ತ್ರ ಸಾಹಿತ್ಯಗಳ ಗಂಗೋತ್ರಿ; ಸ್ವಾನುಭಾವದ ಆಗರ; ಶಾಶ್ವತತೆಯ ಪಾರಾವಾರ. ಅಂತೆಯೇ ನಶ್ವರವನ್ನು ಬಿಟ್ಟು ಶಾಶ್ವತವನ್ನು ಬಯಸುತ್ತಿದ್ದ ಶರಣರು, ಇದಿರಿಟ್ಟು ಅರಸುತ್ತಿದ್ದ ವೇದಶಾಸ್ತ್ರಗಳಿಗಿಂತಲೂ ವಚನ ಸಾಹಿತ್ಯ ಮೇಲೆಂದು ಬಗೆದು ಅದನ್ನು ಆರಾಧಿಸಿದರು; ಪೋಷಿಸಿದರು.

ವಚನ ವಾಙ್ಮಯ, ಆತ್ಮ ಆತ್ಮ ಮಥಿಸಿ, ಬೆಳಕು ಬೆಳಕು ಹಳಚಿ ಹುಟ್ಟಿದ ದಿವ್ಯ ಸಾಹಿತ್ಯ; ಅದು ಶಿವಸಾಕ್ಷಾತ್ಕಾರದಿಂದ ಸರ್ವಾಂಗಲಿಂಗಮಯವಾದ ಶಿವಯೋಗಿಯ ಪರಿಮಳದ ಉಸುರು; ಶಬ್ದ ಸೋಪಾನದ ಬಲದಿಂದ ನಿಶ್ಯಬ್ದವನ್ನು ಕಟ್ಟಿದ ಕುಸುರು; ದೇವಲೋಕದ ಬಟ್ಟೆ; ಮರ್ತ್ಯರ ಮನದ ಕತ್ತಲೆಯ ಕಳೆಯಲೆಂದು ಶರಣರು ಬೆಳಗಿಟ್ಟ ಜ್ಯೋತಿ.

ಅಖಂಡ ಜ್ಯೋತಿಸ್ವರೂಪದ ಆ ನುಡಿ ಆತ್ಮಸಾಹಿತ್ಯ. ಏಕೆಂದರೆ—ವಾಯುವಶದಿಂದ ತರುಗಳಲ್ಲಾಡುವಂತೆ, ಭರತವಶದಿಂದ ಮೃದಂಗ ನುಡಿವಂತೆ, ಲಿಂಗವಶದಿಂದ ಆ ನುಡಿ ಹೊರ ಹೊಮ್ಮುತ್ತದೆ. ಅಜಾತಲಿಂಗಸುಕ್ಷೇತ್ರದಲ್ಲಿಬೆಳೆದ ಪ್ರಸಾದದ ಆ ಬೆಳಸು ನಿಚ್ಚ ನಿಚ್ಚ ಹೊಸತು. 'ಅದು ಕಾಯ ಸಾಹಿತ್ಯವಲ್ಲ; ಆತ್ಮ ಸಾಹಿತ್ಯ' ಎಂಬುದನ್ನು ಚನ್ನಬಸವಣ್ಣನವರು ಹೀಗೆ ತಿಳಿಸಿರುವರು: **"ಕಾಯ ಸಾಹಿತ್ಯ ಎಲ್ಲಿಯಾದಡೆಯೂ ಉಂಟು; ಆತ್ಮ ಸಾಹಿತ್ಯ ಅಪೂರ್ವ"** ಆದುದರಿಂದ ವಚನ ಸಾಹಿತ್ಯ ಅಪೂರ್ವವಾದ ಆತ್ಮಸಾಹಿತ್ಯ.

ವಚನಸಾಹಿತ್ಯ ಅಪೂರ್ವವೆಂಬುದಕ್ಕೆ ಅದರ ನಿಷ್ಪತ್ತಿಯೇ ನಿದರ್ಶನ.

---

೧. **ಚಬವ.** ೬೨೭.

"ವಚನ: ಆತ್ಮ ತೃಪ್ತಿಯನಱಿಯ ಬಲ್ಲಡೆ;
ರಚನೆ: ಸ್ಥಾವರ ಜಂಗಮದಲ್ಲಿ ದಯವಾಗಿ ಇರಬಲ್ಲಡೆ."[೧]

ಎಂದು ಚನ್ನಬಸವಣ್ಣನವರು ವಚನ ರಚನೆಯ ನಿಷ್ಪತ್ತಿಯನ್ನು ವ್ಯಾಖ್ಯಾನಿಸಿರುವರು. ತಾನು ಚರಾಚರ ಸೃಷ್ಟಿಯಲ್ಲಿ ಸ್ವಯವಾಗಿ, ಆ ಸೃಷ್ಟಿಯೆಲ್ಲ ತನ್ನಾತ್ಮದಲ್ಲಿ ಲೀಯವಾಗಿ, ಅಖಂಡ, ಅದ್ವಯ ಸ್ವರೂಪದಲ್ಲಿರುವ ಆನಂದವೇ ವಚನ ವಾಙ್ಮಯದ ಮೂಲ; ಅದುವೇ ವಚನ ವಾಙ್ಮಯ.

ಪುರಾತನರ ವಚನಕ್ಕೆ ಅನುಸಾರಿಯಾಗಿ ಮಾಡಿದೆವೆಂಬವರನ್ನು ಕುರಿತು ಚನ್ನಬಸವಣ್ಣನವರು

"ಮತಿಗೆಟ್ಟ ಕುಂಬಱ ಮಣ್ಣ ಸೂಜಿಯ ಮಾಡಿ
ಕಂಬಾಱಗೇರಿಗೆ ಮಾಱಹೋದಡೆ, ಅವರುಕ್ಕಿನ ಸೂಜಿಯ ಮಾಱುವರಾಗಿ,
ವೇಷಧಾರಿ ಮಾತ ಕಲಿತು ಅಭಿಮಾನಕ್ಕೆ ಪರೀಕ್ಷೆಯ ಕೊಡುವಂತೆ
ಕೂಡಲಚನ್ನಸಂಗನ ನಿಲವನಱಿಯದೆ ಉಲಿಯದಿರಾ, ಲೀಲೆಯ ಪಶುವೆ"[೨]

ಎಂದು ನುಡಿದಿರುವರು. ಕಂಬಾರನ ಉಕ್ಕಿನ ಸೂಜಿಯ ಮುಂದೆ ಕುಂಬಾರನ ಮಣ್ಣ ಸೂಜಿ ತಡೆದೀತೇ? ವಚನಕ್ಕೆ ಬೆಲೆ ಬರಬೇಕಾದರೆ, ಅದಕ್ಕೆ ತಕ್ಕ ಅರಿವು ಆಚಾರವಿರಬೇಕು.

"ಆನೆಯನೇಱಿದ ಮಾವತಿಗ ಚಕ್ರೇಶ್ವರನಾಗಬಲ್ಲನೇ ಅಯ್ಯಾ?
ವೇದಾಗಮಶಾಸ್ತ್ರಪುರಾಣಂಗಳನೋದಿ ಕೇಳಿ,
    ನಡೆನುಡಿ ಪೂರಾಯವಾದ ಪುರಾತನರಾಗಬಲ್ಲರೇ ಅಯ್ಯಾ?
ತೊತ್ತು ಲಕ್ಷಣವಿರಲು, ನಾಣ್ಯವನುಡಿಸಿ,
    ನವರತ್ನಾಭರಣಂಗಳತೊಡಿಸಿ ದಂಡಿಗೆಯನೇಱಿಸಲು,
    'ಶಂಕರಸ್ಯಯಥಾ ಗೌರೀ' ಎನಿಸಿಕೊಳ್ಳಬಲ್ಲಳೇ ಅಯ್ಯಾ?
ಖ್ಯಾತಿಗಾಗಿ ನಿಜ ತತ್ವಂಗಳನೋದಿ ಕೇಳಿ ಹೇಳಿದಡೇನು,
    ಅದಕ್ಕೆ ತಕ್ಕ ಅಱಿವು, ಆಚಾರ, ನಡೆನುಡಿಯಲ್ಲಿ ನಿರ್ಣಯ
    ಇಲ್ಲದಿರ್ದಡೆ, ಕುಂಭೀಪಾಕ ನಾಯಕನರಕ ತಪ್ಪದು
ಕೂಡಲಚನ್ನಸಂಗಮದೇವಾ"[೩]
"ಮಾತಿನ ಮಾತಿನ ಗೀತಾಂಗದಲ್ಲಿ ಸುಜಾಣನಾಗಬಹುದು,
ಶ್ರೋತ್ರದ ಸೊಗಸಿನಲ್ಲಿ, ಪ್ರಾಜ್ಞ ಪ್ರವೀಣತೆಯಲ್ಲಿ ಜಾಣನಾಗಬಹುದು,
ಅಂತರಂಗ ಬಹಿರಂಗವನಱಿಯಬಹುದು,
ಆಗಮ ಪುರಾಣ ಶ್ರುತಿ ಸ್ಮೃತಿಗಳಿಗೆ ಅತರ್ಕ್ಯನಾಗಿರಬಹುದು,
ಭೂತವಿಕಾರದ ಪ್ರಕೃತಿಸ್ವಭಾವದ ಭ್ರಾಂತಿಯುಳಿದಿರಬಹುದು,

೧. ಚಬವ. ೧೧೦೩. ೨. ಚಬವ. ೫೯೯. ೩. ಚಬವ. ೩೬೭.

ಕಾಂತೆಯು ರತಿಗುಣವರ್ಜಿತನಾಗಿ ಕಾಶೀಕ್ಷೇತ್ರವಾಸಿಯಾಗಿರಬಹುದು,
ಎನ್ನೊಡೆಯ ಕೂಡಲಚನ್ನಸಂಗನ ನಚ್ಚಿನ ಮಚ್ಚಿನ
ಇಚ್ಛಾವಶವರ್ತಿಯಾಗಿರಬಾರದು ಲಿಂಗಾನುಭಾವಿಗಳಿಗಲ್ಲದೆ."[೧]

ಅಂತಪ್ಪ ವಚನ ವಾಙ್ಮಯವನ್ನು ಎಷ್ಟು ಬಣ್ಣಿಸಿದರೂ ಚನ್ನಬಸವಣ್ಣನವರಿಗೆ ತೃಪ್ತಿಯಿಲ್ಲ.

"ನಮ್ಮ ಆದ್ಯರ ವಚನ ಜ್ಞಾನದ ನೆಲೆಯ ತೆಗೆದಿರಿಸಿತ್ತು;
ನಮ್ಮ ಆದ್ಯರ ವಚನ ಮದಮಾತ್ಸರ್ಯಾದಿ ಅರಿಷಡ್ವರ್ಗ,
ಸಪ್ತವ್ಯಸನ, ಪಂಚೇಂದ್ರಿಯ, ದಶವಾಯುಗಳಿಚ್ಛೆಗೆ
ಹರಿವ ಮನವ ಸ್ವಸ್ಥವಾಗಿ ನಿಲಿಸಿತ್ತು;

ನಮ್ಮ ಆದ್ಯರ ವಚನ, ಅಂಗೇಂದ್ರಿಯಂಗಳ ಲಿಂಗೇಂದ್ರಿಯಂಗಳೆನಿಸಿತ್ತು;
ನಮ್ಮ ಆದ್ಯರ ವಚನ, ನೂಱೊಂದು ಸ್ಥಲವ ಮೀಱಿದ ಮಹದಲ್ಲಿ ನೆಲೆಸಿತ್ತು;
ನಮ್ಮ ಆದ್ಯರ ವಚನ, ಇನ್ನೂಱ ಹದಿನಾಱು ಲಿಂಗಕ್ಕೆ
ಸರ್ವೇಂದ್ರಿಯವ ಸನ್ಮತವಮಾಡಿ, ಸಾಕಾರವ ಸವೆದು,
ನಿರಾಕಾರವನಱಿದು ನಿರವಯಲ ನಿತ್ಯಸುಖದಲ್ಲಿ ನಿಲಿಸಿತ್ತು.

ಇಂತಪ್ಪ ಆದ್ಯರ ವಚನ ಭಂಡಾರವ, ನಮ್ಮ ಪ್ರಭುದೇವರು
ಮುಖ್ಯವಾದ ಏಳುನೂಱೆಪ್ಪತ್ತು ಅಮರಗಣಂಗಳು,
ಅಸಂಖ್ಯಾತ ಪುರಾತನರು, ಪ್ರಮಥಗಣಂಗಳು
ಕೇಳಿ ಹೇಳಿ ಕೊಂಡಾಡಿದ ಕಾರಣ,
ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಸರ್ವಸುಖವ ಸೂಱೆಗೊಂಡು
ಸ್ವಯಲಿಂಗವಾದರು."[೨]

ಇಷ್ಟಕ್ಕೆ ನಿಲ್ಲದೆ ಮತ್ತೆ ಮತ್ತೆ ಕೈಯೆತ್ತಿ ಸಾರುವರು:

"ಕೇಳಿರೆ, ಕೇಳಿರೆ ಪುರಾತನರ ವಚನೋಪದೇಶವ!
. . . . . . . . . . . . . . . . . . ಇದು ಕಾರಣ,
ನಮ್ಮ ಕೂಡಲಚನ್ನಸಂಗನ ಶರಣರ ವಚನೋಪದೇಶವ ಕೇಳಿ,
ದುರಿತ ಪಾಪಂಗಳ ಬಿಟ್ಟು ಮನನಿರತರಾಗಿಪ್ಪರಯ್ಯಾ ಲಿಂಗದಲ್ಲಿ!"[೩]

'ಅಂತರಂಗ ಆತ್ಮತೀರ್ಥ'ವಾಗಿರುವ ಈ ವಚನೋಪದೇಶವ ಬಿಟ್ಟು ಅನ್ಯಾಯವನಾಶ್ರಯಿಸುವವರನ್ನು ಕಂಡು

"ಇನಿಗಬ್ಬಿನೊಳಗಿನ ತನಿರಸವನಱಿಯದೆ,
ಸೋಗೆಯ ಹೊಱಗಿನ ರವದಿಯ ಸವಿದು ಸಂತಸಬಡುವ ಮೇಷದಂತೆ,
ಅಂತರಂಗದ ಆತ್ಮತೀರ್ಥವನುಳಿದು,

೧. ಚಬವ. ೮೪೪. ೨. ಚಬವ. ೪೯೦. ೩. ಚಬವ. ೧೩೧.

**ಹೊಱಗಿನ ಜಡಭೌತಿಕ ತೀರ್ಥವ ಬೆದಕಿ, ಬೆಂಡಾಗಿ**
**ಹಲವೆಡೆಗೆ ಹರಿವ ನರಗುಱಿಗಳು**
**ಕೈಸೇರಿದ ರತ್ನವನೊಗೆದು ಕಾಜಿನ ಗುಂಡನು ಕೊಂಡ**
**ಮರುಳನಂತಾಗಿಪ್ಪರು ನೋಡಾ!"**[೧]

ಎಂದು ಕನಿಕರದಿಂದ ನುಡಿದಿರುವರು.

ಮಿಗೆ ಮಿಗೆ ಮಿಸಲಾದ, ಅಂತರಂಗದ ಆತ್ಮತೀರ್ಥವಾದ, ಆತ್ಮಸಾಹಿತ್ಯವಾದ ಈ ವಚನಂಗಳ ಅಮೃತಪಾನ ಮಾಡುವವನು

**"ಹಾಲಸಾಗರದೊಳಗೋಲಾಡುತ್ತಿರ್ದು, ಬಱಿ(ವಾಳಿ)ಯಾವಿನ ಬೆನ್ನಹರಿವವನಲ್ಲ;**
**ಪರುಷದ ಗಿರಿ ಕೈಸಾರಿರಲು, ನಾಡವುಣ್ಣ ಕೂಡಲಿಕ್ಕಿ,**
**ತೊಳೆದು, ಹಾಗವ ಸಾಧಿಸಬೇಕೆಂಬ ದಾವತಿಯವನಲ್ಲ."**

**"ಕ್ಷೀರ ಸಾಗರದೊಳಗೆ ಓಲಾಡುತಿರ್ಪ ಸುಖಿ, ನೀರವಟ್ಟೆಯ ಕಟ್ಟಿ,**
**ನೆಳಲ ಕಡಿದು, ಏಳು ಬಾವಿಯಲ್ಲಿ ನೆಗೆದು, ಎರಡು, ಬಾವಿಯಲ್ಲಿ ಉಣ್ಣ"**

ಇಂತಹ ಆತ್ಮಸಾಹಿತ್ಯದಿಂದ ಜೀವಸಂಸ್ಕಾರ, ಆತ್ಮಸಂಸ್ಕಾರ ಹೊಂದಿದವರಿಗೂ ಬರಿ ಬಾಹ್ಯ ಘಟಸಂಸ್ಕಾರದಲ್ಲಿ ಮೆರೆಯುವವರಿಗೂ ಎಷ್ಟೊಂದು ಅಂತರ?

**"ಘಟ ಸಂಸ್ಕಾರದಲ್ಲಿ ಪಟಲ ಹರಿವುದೇ, ಜೀವ ಸಂಸ್ಕಾರವಿಲ್ಲದನ್ನಕ್ಕ?**
**ವೇಷಧಾರಿತನದಲ್ಲಿ ಗ್ರಾಸವಹುದಲ್ಲದೆ,**
**ಜ್ಞಾನ ಸಂಸ್ಕಾರವಿಲ್ಲದನ್ನಕ್ಕ ಭವನೆಂತು ಹರಿವುದಯ್ಯಾ?**
**ಅಂಗಭವಿಯನು. ಲಿಂಗಭವಿಯನು ಕಳೆದುಳಿದಲ್ಲದೆ,**
**ಕೂಡಲ ಚನ್ನಸಂಗಯ್ಯನ ಹೊದ್ದಬಾರದು"**[೨]

ಚನ್ನಬಸವಣ್ಣನವರ ವಚನರಚನೆಯನ್ನು ಈ ಹಿನ್ನೆಲೆಯಲ್ಲಿ ಅವಲೋಕಿಸಿದರೆ, ಅದರಲ್ಲಿ ಹುದುಗಿದ ವಿಶ್ವಸತ್ಯ ಹಾಗೂ ವಿಶ್ವಸಾಹಿತ್ಯಗಳ ಪರಿಜ್ಞಾನವಾಗದಿರದು.

**"ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಶಿಯ ನೋಡಾ,**
**ಸುಗಂಧ ಬಂಧುರದಂತೆ ಹುಟ್ಟುತ್ತವೆ ಪರಿಮಳ!**
**ಆದಿ ಅನಾದಿಯಿಲ್ಲದ ಮುನ್ನ ತನ್ನಿಂದವೆ ತಾನಾಗಿರ್ದಕಾರಣ,**
**ಮುಟ್ಟದೆ ತಟ್ಟದೆ ಗುರುಕಾರುಣ್ಯವ ಪಡೆದು,**
**ಲಿಂಗಸಯವಾಗಿ ಎನಗೆ ಗತಿಪಥವ ತೋಱಿಸಬೇಕೆಂದು ಆಗಾದನು;**
**ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣನು!"**[೩]

ಬಸವಣ್ಣನವರು ಈ ವಚನದಲ್ಲಿ ಹೇಳುವಂತೆ ಚನ್ನಬಸವಣ್ಣನವರು ಜನ್ಮತ: ಸುಜ್ಞಾನಸ್ವರೂಪರಾಗಿರುವರು. ಸುಗಂಧಬಂಧ ಪರಿಮಳವುಳ್ಳವರಾಗಿರುವರು. ಮಹಾ ಜ್ಯೋತಿ, ಚಿಜ್ಯೋತಿ ಪ್ರಕಾಶವಾದ ಅವರು, ಷಟ್‌ಸ್ಥಲ ಮಾರ್ಗದಲ್ಲಿ ನಡೆದು, ಭಕ್ತಸ್ಥಲ ದಲ್ಲಿ ಮತಿಜ್ಞಾನವಾಗಿ, ಮಹೇಶ್ವರಸ್ಥಲದಲ್ಲಿ ಶ್ರುತಿಜ್ಞಾನವಾಗಿ, ಪ್ರಸಾದಿಸ್ಥಲದಲ್ಲಿ

---

೧. ಚಬವ. ೯೬೧. ೨. ಚಬವ. ೧೧೧೧. ೩. ೬೪–೨೧.

ಅಖಂಡಜ್ಞಾನವಾಗಿ, ಪ್ರಾಣಲಿಂಗಿಸ್ಥಲದಲ್ಲಿ ಕೇವಲ ಜ್ಞಾನವಾಗಿ, ಶರಣಸ್ಥಲದಲ್ಲಿ ನಿಂತರೂ ಎಲ್ಲ ಸ್ಥಲಗಳ ಜ್ಞಾನಾನುಭವಗಳನ್ನು ಅಳವಡಿಸಿಕೊಂಡು ಷಟ್‌ಸ್ಥಲ ಚಕ್ರವರ್ತಿಗಳಾಗಿರುವರು. ಕಬ್ಬಿನ ಮೇಲೆ ಜೇನಿಟ್ಟಂತೆ ಸುಜ್ಞಾನಕ್ಕೆ ಈ ಷಟ್‌ಸ್ಥಲಜ್ಞಾನ ವಳವಟ್ಟಿರಬೇಕು. ಈ ಸಾಧನೆಯಲ್ಲಿ ಅಂತರಂಗನಿರೀಕ್ಷಣೆ ನಡೆಯದೆ ಹೋಗಿಲ್ಲ. ಆ ನಿರೀಕ್ಷಣೆಯಲ್ಲಿ ವ್ಯಷ್ಟಿಭಾವವಿದ್ದರೂ ಅದು ಸಮಷ್ಟಿಶಕ್ತಿಯಾಗಿ ಕೂಗುತ್ತಿದೆ; ಹೊರಬರುತ್ತಿದೆ.

**"ಆನು ಶುದ್ಧ ಧವಳಿತನು, ಎನಗೆ ಆನಾದಿ ಬಂದು ಹೊದ್ದಿದ ಕಾರಣವೇನಯ್ಯಾ?**
**ಜಗವ ಮೊಗೆಯಲು ಬಂದೆನೇಕಯ್ಯಾ?**
**ಗಿಡುವ ಹಱಿಯಲು ಬಂದೆನೇಕಯ್ಯಾ?**
**ಎಲ್ಲರ ನಡುವೆ ಕುಳ್ಳಿರ್ದು, ಗೀತವ ಪಾಡ ಬಂದೆನೇಕಯ್ಯಾ?**
**ಚನ್ನಬಸವಣ್ಣನೆಂಬೆರಡು ಶಬ್ದವೇಕಯ್ಯಾ?"[1]**

ಈ ಭವದ ಫಲಾಫಲಗಳನ್ನು ಸಂಚಯಿಸಲು ಬಂದ ಮಾನವನು, ಗಿಡುವ ಹರಿಯಲು ಬಂದಂತಲ್ಲವೆ? ಅವನ್ನು ಉಪಭೋಗಿಸುವ ಆತನು, ಈ ಲೋಕವನ್ನೇ ಮೊಗೆಯು ಬಂದಂತಲ್ಲವೆ? ಹೀಗೆ ಸಮಸ್ತ ಮಾನವ ಕುಲದ ಪ್ರತಿನಿಧಿಯಂತೆ ಚನ್ನಬಸವಣ್ಣನವರು ಆರ್ತಸ್ವರದಿಂದ ಕೂಗಿರುವರು.

**"ಹೆಗ್ಗಣವನಿಕ್ಕಿ ನೆಲಗಟ್ಟ ಕಟ್ಟಿದಂತೆ ಆಯಿತ್ತೆನ್ನ ಕಾಯುಗುಣ,**
**ಅಹಂಕಾರ ಪ್ರಬೋಧೆಗಳೇಕಯ್ಯಾ?**
**ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳನಿಕ್ಕಿ ಎನ್ನ ಮಾಡಿದಿರಿ,**
**ಎನ್ನ ಬಾಧಿಸಲೆಂದು ಲಿಂಗಯ್ಯ ತಂದೆ!**
**ಆದಿ ವ್ಯಾಧಿಗಳೆಲ್ಲವ ಕಳೆದು, ನಿರ್ವಾಣವಪ್ಪ ಪದವ ಕರುಣಿಸಯ್ಯಾ**
**ಕೂಡಲಚನ್ನಸಂಗಮದೇವಾ."[2]**

ಎಂದು ಪ್ರಾರ್ಥಿಸಿರುವರು.

ಹೀಗೆ ಸೋತ್ಕಂಠಿತರಾಗಿ ಪ್ರಾರ್ಥಿಸುವಲ್ಲಿ ಹೃದಯದ ಭಾವ, ಅನಂತಮುಖವಾಗಿ ಚಿಮ್ಮಿವೆ. ನೈಜ ಕಾವ್ಯ, ಅಲ್ಲಿ ಮಾಜದೆ ಮೈವೆತ್ತಿದೆ. ವಿಷಯ ಸುಖಕ್ಕಾಗಿ ಪಡುವ ಕಾತರ ಬೇರೆ. ಆದರೆ, ವಿಷಯಾತೀತನಾಗಬೇಕೆಂಬ ಬಗೆಗೆ ನಡೆದ ಮನಸ್ಸಿನ ವಿರಾಟ, ಕೂಗು ಬಹು ಮಹತ್ವವಾದುವು; ಶಾಶ್ವತವಾದುವು. ಮೊದಲನೆಯದು ಇಂದ್ರಿಯ ಪ್ರಚೋದಕವಾದರೆ, ಎರಡನೆಯದು ಅತೀಂದ್ರಿಯ ದ್ಯೋತಕವಾಗಿದೆ. ಗುರುಕಾರುಣ್ಯವಾದ ಮೇಲೆ ಆ ಹರ್ಷೋದ್ಗಾರಗಳನ್ನು ಅವರ ಬಾಯಿಂದಲೇ ಕೇಳಬೇಕು.

**"ಎಲ್ಲರ ದೀಕ್ಷೆಯು ಪರಿಯಂತಲ್ಲ, ಎಮ್ಮಯ್ಯನ ದೀಕ್ಷೆ:**
**ನಡೆ ನುಡಿ ಶುದ್ಧವಾದವರಿಗಲ್ಲದೆ ಅನುಗ್ರಹಿಸ ನೋಡಾ!**
**ಪರಮಾರ್ಥಕಲ್ಲದ ಜಡನರರನೊಲ್ಲನೊಲ್ಲ! ದೀಕ್ಷೆಯು ಕೊಡ!!**
**ಭವಭಾರಿಗಳ ಮುಖದತ್ತ ನೋಡನಯ್ಯಾ!"[3]**

---

೧. **ಚಬವ.** ೨೩. ೨. **ಚಬವ.** ೩೩. ೩. **ಚಬವ.** ೪೬.

"ಎನ್ನೊಳಗೆ ಬೆಳಗುವ ಜ್ಞಾನ, ನಿನ್ನ ಹೃದಯಕಮಲದೊಳಗಣ ಅವ್ಯಕ್ತಲಿಂಗ; ನಿನ್ನೊಳು ತೊಳಗಿ ಬೆಳಗುವ ಜ್ಯೋತಿರ್ಲಿಂಗ, ಎನ್ನಂತರಂಗದ ಸುಜ್ಞಾನಲಿಂಗ." ಎಂಬ ಅನುಭವ ವನ್ನು ಪಡೆದು "ಎನಗೆ ನೀವು ಮಾಡಿದ ಉಪದೇಶದಿಂದ ಕೂಡಲಚನ್ನಸಂಗಮದೇವರ ಸಾಕ್ಷಿಯಾಗಿ ಮರ್ತ್ಯಲೋಕದ ಮಹಾಗಣಂಗಳ ಕೈಯಲ್ಲಿ ಅಹುದಹುದೆನಿಸುವೆ ಕಾಣಾ," ಎಂದು ಮುನ್ನಡೆಯುತ್ತಾರೆ.

ಭಕ್ತಿಪಥವೇನು ಸುಲಭವಾದುದಲ್ಲ. ಹರ ತನ್ನ ಭಕ್ತರನು ಅರಿದು ನೋಡುವ, ಅರೆದು ನೋಡುವ, ನಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುವೋದೆನೆಂದರೆ, ತನುವ ನಲ್ಲಾಡಿಸಿ ನೋಡುವ; ಮನವನಲ್ಲಾಡಿಸಿ ನೋಡುವ; ಧನವನಲ್ಲಾಡಿಸಿ ನೋಡುವ. ಆದುದರಿಂದಲೇ ಭಕ್ತಿಯೆಂಬುದು ಕರಗಸದಂತೆ ಹೋಗುತ್ತ ಕೊಯ್ವುದು, ಬರುತ್ತ ಕೊಯ್ವುದು. ಇದು ಎಲ್ಲ ಭಕ್ತರ ಜೀವನದಲ್ಲಿಯೂ ಕಂಡುಬರುವ ವಿಷಯ. ಷಟ್‌ಸ್ಥಲ ಜ್ಞಾನ ಸಾಧನೆಯಲ್ಲಿ ಅನುಭವಿಸಿದ ಸುಖದುಃಖಗಳನ್ನು ಚನ್ನಬಸವಣ್ಣನವರು ಬಹಳ ತೀಕ್ಷ್ಣವಾಗಿ ವಿವರಿಸಿರುವರು.

ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರು ಸಾಹಿತ್ಯ ಸಾಮ್ರಾಜ್ಯದಲ್ಲಿಯೂ ಚಕ್ರ ವರ್ತಿಗಳಾಗಿರುವರೆಂಬ ಮಾತು ಅಚ್ಚರಿಯೆನಿಸಿದರೂ ಸತ್ಯಪೂರ್ಣವಾದುದು. ಸಾಹಿತ್ಯ ಶಕ್ತಿಯನ್ನು ಅಳೆಯುವಲ್ಲಿ ದರ್ಶನಪ್ರದರ್ಶನಗಳ ನೆಲೆ ಬೆಲೆಗಳನ್ನು ಅರಿತು ಆರಯ್ಯ ಬೇಕಾಗುತ್ತದೆ. ಚನ್ನಬಸವಣ್ಣನವರು ಸ್ವಾನುಭವದಲ್ಲಿ ಕಂಡದರ್ಶನ, ಬೆಳಗಿನೊಳಗಿನ ಮಹಾಬೆಳಗು; ಅನುಭವಿಸಿದ ಆನಂದ, ನಿತ್ಯಪರಿಪೂರ್ಣ ಸಚ್ಚಿದಾನಂದ. ಎಲ್ಲ ದರ್ಶನ ಗಳಿಗೂ ಸ್ಪರ್ಶನಗಳಿಗೂ ಗಮ್ಯವಾಗಿರುವ ಆ ದರ್ಶನದ ಘನತೆಯನ್ನು ಬಣ್ಣಿಸುವ ಶಕ್ತಿ ಶಬ್ದಕ್ಕಿಲ್ಲವೆಂದೇ ಹೇಳಬೇಕು. **"ಯತ್ರೋವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ"** ಎಂಬ ಉಪನಿಷದ್ವಾಕ್ಯದಂತೆ ಆ ದರ್ಶನ ಅನಿರ್ವಚನೀಯವಾದುದು. ಅಂತೆಯೇ **"ಬೊಮ್ಮವನು ಕಂಡಿಹರೆ ಸುಮ್ಮನೆಯೆ ಇರಬೇಕು"** ಎಂದು ಸರ್ವಜ್ಞ ನುಡಿದನು. ಇರಬೇಕು ಎನ್ನುವುದೇಕೆ? ಕಂಡ ಇರವನ್ನು ಶಬ್ದಗಳಲ್ಲಿ ಕಂಡರಿಸುವುದು ಸಾಧ್ಯವೇ ಇಲ್ಲ. ಅಪಾರವಾದ ಪರಮಾನಂದಸಾಗರವನ್ನು ಶಬ್ದವೆಂಬ ಬಳ್ಳದಲ್ಲಿ ಹಿಡಿದಿರಿಸುವುದು ಅಸಾಧ್ಯ. ಅದು, ಕೂಸು ಕಂಡ ಕನಸಿನಂತೆ ಶಬ್ದಮುಗ್ಧ ಸ್ಥಿತಿ. ಅದರ ಭರಭಾರವನ್ನು ಹೊರುವ ಶಕ್ತಿ ಶಬ್ದಕ್ಕೆ ಇಲ್ಲವೆಂಬುದೇ ಇದರ ಮಥಿತಾರ್ಥ.

ವಸ್ತುಸ್ಥಿತಿ ಹೀಗಿದ್ದರೂ ಹಲವು ದ್ರಷ್ಟಾರರು ಅನುಪಮವಾದ ಅಭಿವ್ಯಕ್ತಿಸಂಪ ತ್ತನ್ನು ಪಡೆದು ಬಂದಿರುವರು. ಅವರ ದಿವ್ಯದರ್ಶನ ಸ್ಪರ್ಶನಗಳ ಫಲವಾಗಿ, ಶಬ್ದಕ್ಕೆ ಅಸದೃಶವಾದ ಶಕ್ತಿ ಪ್ರಾಪ್ತವಾಗಿದೆ. ಅಂತೆಯೇ ಕಬ್ಬಿಗರನ್ನು ಅಘಟಿತ ಘಟನಾ ನೂತನ ಬ್ರಹ್ಮರೆಂದು ಕರೆಯಲಾಗಿದೆ. ಹೇಳಲಸಾಧ್ಯವಾದ ಅನುಭವವನ್ನು ವಿಲಕ್ಷಣವಾದ ರೀತಿಯಲ್ಲಿ ಪ್ರಕಟಪಡಿಸಿ, ಅದರ ಆನಂದವನ್ನು ಸಹೃದಯರಿಗೆ ನೀಡುವ ಕಾರ್ಯವೇನೂ ಸಾಮಾನ್ಯವಾದುದಲ್ಲ; ಅದೊಂದು ಅಘಟಿತ ಘಟನೆಯೇ ಸರಿ. ಲೋಕಾನುಭವದಿಂದ ಉಂಟಾದ ಆನಂದವನ್ನು ಅಭಿವ್ಯಕ್ತಗೊಳಿಸುವುದು ಅಘಟಿತ ಘಟನೆಯಾದರೆ, ಆತ್ಮಾನು ಭವಜನ್ಯವಾದ ಆನಂದವನ್ನು ನುಡಿಗಡಣದಲ್ಲಿ ಹುದುಗಿಸಿಡುವುದಂತೂ ಒಂದು ಮಹಾ

ಅಲೌಕಿಕ ಘಟನೆಯೆಂದೇ ಹೇಳಬೇಕಾಗುವುದು. ಅಂತಹ ಅಲೌಕಿಕ ವ್ಯಕ್ತಿಗಳಲ್ಲಿ ಚನ್ನ ಬಸವಣ್ಣನವರೂ ಒಬ್ಬರಾಗಿದ್ದಾರೆ. ಅವರು ತಮ್ಮ ಆತ್ಮಾನುಭವವನ್ನು ನೂರಾರು ವಿಧದಿಂದ ಪ್ರಕಟಪಡಿಸಿರುವರು. ಅವರು ತಿಳಿಯಪಡಿಸುವ ಅನುಭವ, ನಿಶ್ಶಬ್ದ ಭೋರ್ಗರೆದು ಬೋಧಿಸಿದಂತೆ; ಕುತೂಹಲ ಕಲ್ಪನೆಗಳಿಗೆ ಕಣ್ಣುಮೂಡಿ ಶೋಧಿಸಿದಂತೆ; ಪ್ರತಿಭೆ ಪ್ರತಿಮೆಯಾಗಿ ಆರಾಧಿಸಿದಂತೆ.

ಷಟ್‌ಸ್ಥಲವೆಂಬುದು ಸಿದ್ಧಾಂತವೇನೋ ನಿಜ. ಆದರೆ, ಅದು ಇದಿರಿಟ್ಟು ಅರಸುವ ಶಾಸ್ತ್ರವಲ್ಲ. ಸ್ವಾನುಭವ ಅರಳಿ, ಸುಜ್ಞಾನವಾಗುವ ಅನುಭಾವಮಾರ್ಗ. ಚನ್ನ ಬಸವಣ್ಣನವರು ತಮ್ಮ ವಚನಗಳಲ್ಲಿ ಷಟ್‌ಸ್ಥಲಸಿದ್ಧಾಂತವನ್ನು ಬೋಧಿಸಿದರೂ ಆ ಸಾಧನೆಯ ಕ್ರಮದಲ್ಲಿ ಅವರು ಇಟ್ಟ ಅಡಿ, ನುಡಿದ ನುಡಿ, ಕಂಡ ದಿವ್ಯದರ್ಶನ, ಅನುಭವಿಸಿದ ಮಹಾಸ್ಪರ್ಶನ ಎಲ್ಲವೂ ಅವರ ಹೃದಯದ ಜ್ಯೋತಿರ್ಜಲದಲ್ಲಿ ಮಿಂದು ಶುಭ್ರವಾಗಿ ಸಯವಚನಗಳಾಗಿ ನಿಂತಿವೆ. ಅವರ ದಿವ್ಯ ವ್ಯಕ್ತಿತ್ವಕ್ಕೆ ಈ ವಚನಗಳೇ ಸಾಕ್ಷಿ. ಅವರ ಭಾವಪಕ್ಷಿ ನಮ್ಮ ದೃಷ್ಟಿವಲಯವನ್ನು ಮೀರಿ, ನಿರ್ಭಾವ ಗಗನಕ್ಕೆ ಹಾರಿ, ಅಲ್ಲಿ ಲೀಯವಾಗಿ, ನಮ್ಮನ್ನು ನಿಬ್ಬೆರಗಿನ ನಿಟ್ಟಿನಲ್ಲಿ ನೂಕಿಬಿಡುವುದು. ಅವರ ವಚನಗಳು ಅನುಭವದ ಗುಡಿಯಲ್ಲಿ, ಅನುಭಾವದ ಮುಡಿಯಲ್ಲಿ ನಿಂತು, ನಿರಂತರವೂ ಮಿರುಗುವ ಜ್ಞಾನದ ಕಿಡಿಗಳು; ಜ್ಯೋತಿಯ ಕುಡಿಗಳು. ಷಟ್‌ಸ್ಥಲಾನುಭವವನ್ನು ಎಷ್ಟು ಹೇಳಿದರೂ ಅವರಿಗೆ ತೃಪ್ತಿಯಿಲ್ಲ, ಬೇಸರವಿಲ್ಲ; ಅಷ್ಟೊಂದು ತೀವ್ರತರವಾಗಿದೆ ಅವರ ಅನುಭವ. "poetry is the spontaneous overflow of the powerful feelings "ಎಂದು ಕವಿ ವರ್ಡ್ಸ್‌ವರ್ಥನು ಹೇಳುವಂತೆ ತೀಕ್ಷ್ಣವಾದ ಹಾಗೂ ತೀವ್ರವಾದ ಭಾವಪ್ರಕಟನೆಯೇ ಕಾವ್ಯ. ಆ ಭಾವೋದ್ರೇಕ ಯಾವ ನಿಲವಿನಲ್ಲಾದರೂ ನಡೆಯಬಹುದು. ಅದು ಅವರವರ ಅನುಭವಕ್ಕೆ ಸಂಬಂಧಪಟ್ಟ ಮಾತು. ಲೌಕಿಕದ ವಲಯದಲ್ಲಿ ನಿಂತು, ಅಲ್ಲಿಯ ಅನುಭವಗಳಿಗೆ ಪಕ್ಕಾಗಿ, ಅದರ ಪ್ರತಿಫಲವಾಗಿ ಹೊರಹೊಮ್ಮುವ ಕಾವ್ಯದ ರೀತಿನೀತಿ ಹೊಸತು. ಇಂತಹ ಅನುಭವ, ಲೋಕದಲ್ಲಿ ಅಸಂಖ್ಯ ಜನರಿಗೆ ಆಗಬಹುದು. ಆದರೆ, ಇದಕ್ಕಿಂತಲೂ ಎತ್ತರದ ನಿಲವೊಂದು ಉಂಟು; ಅದನ್ನು ಅಲ್ಲಗಳೆಯುವಂತಿಲ್ಲ. ಈ ಲೋಕವೇ ಆ ಲೋಕದ ಅಪೂರ್ಣವಾದ ಪ್ರತಿಕೃತಿಯೆಂದು ಹೇಳುವುದುಂಟು. ಈ ಲೋಕದ ಅನುಭವವಾದ ಮೇಲೆ ಆ ಲೋಕದ ಅನುಭವವೇಕೆ ಆಗಬಾರದು? ಅಂತರವಿಷ್ಟೆ: ಇಲ್ಲಿಯ ಅನುಭವ ಇಂದ್ರಿಯಪ್ರಚೋದಕವಾದುದರಿಂದ ಬಹುಜನವೇದ್ಯವಾದುದು; ಅಲ್ಲಿಯ ಅನುಭವ ಅತೀಂದ್ರಿಯವಾದುದರಿಂದ ಅದು, ಕೆಲವರಿಗೆ ಮಾತ್ರ ವೇದ್ಯವಾಗಬಲ್ಲುದು. ಇಂದ್ರಿಯ ಜನ್ಯವಾದ ಲೌಕಿಕ ಕಾವ್ಯಾನಂದವು ಸುಲಭಗ್ರಾಹ್ಯವಾದಷ್ಟೇ ತೀವ್ರ ಮಾಯವಾಗುವುದೂ ಉಂಟು. ಆದರೆ, ಸತ್ಯಾನುಭವ ನಿಮಿತ್ತವಾದ ಆ ಆನಂದ, ಕೆಲವರಿಗೆ ಮಾತ್ರ ವೇದ್ಯವಾದರೂ ಅದು ಶಾಶ್ವತವಾದುದು. ಆದುದರಿಂದ ಆಧ್ಯಾತ್ಮಿಕ ಸಾಹಿತ್ಯ, ಮೊತ್ತದಲ್ಲಿ ಕಿರಿದಾದರೂ ಸತ್ವದಲ್ಲಿ ಹಿರಿದು. ಚನ್ನಬಸವಣ್ಣನವರು ವಿಶಿಷ್ಟರೀತಿಯಲ್ಲಿ ಇಂತಹ ವಿಪುಲವಾದ ಸಾಹಿತ್ಯವನ್ನು ಸೃಷ್ಟಿಸಿರುವರು. ಎಲ್ಲೆಲ್ಲಿಯೂ ಅವರ ಪ್ರತಿಭೆ ಗರಿಗೆದರಿ

ಹಾರಿದೆ. ಭೂಗರ್ಭದಿಂದ ಪುಟಿಯುವ ಕಾರಂಜಿಯು ಸೂರ್ಯನ ಶುಭ್ರ ಪ್ರಕಾಶದಲ್ಲಿ ಇಂದ್ರಧನುಸ್ಸಿನ ಮನಮೋಹಕ ಸಪ್ತವರ್ಣಗಳನ್ನು ತಳೆಯುವಂತೆ ಅವರ ಹೃದ-ಯಾಂತರಾಳದಿಂದ ನೆಗೆವ ಅವರ್ಣನೀಯ ಅನುಭವಗಳು ವರ್ಣರಂಜಿತವಾಗಿವೆ; ಇವೆಲ್ಲ ಅವರ ದಿವ್ಯ ಹೃದಯದ ಕುಲುಮೆಯಲ್ಲಿ ಎರಕ ಹೊಯ್ದಂತಾಗಿ ಪರಮಾನಂದ ರಸ ಘಟ್ಟಿಯಾಗಿ ಮೂಡಿಬಂದಿವೆ. ಆದುದರಿಂದ ಚನ್ನಬಸವಣ್ಣನವರ ವಚನಗಳು ಕನ್ನಡ ಸಾಹಿತ್ಯಕ್ಕೆ ಅನರ್ಘ್ಯವಾದ ಕಾಣಿಕೆಯಾಗಿವೆ. ಅಂತಹ ಸಾಹಿತ್ಯಸಾಮಗ್ರಿಯನ್ನು ಪೃಥಕ್ಕರಿಸಿ ನೋಡಬಹುದಾಗಿದೆ.

ಚನ್ನಬಸವಣ್ಣನವರು ಷಟ್‌ಸ್ಥಲಸಿದ್ಧಾಂತಸರೋವರದಲ್ಲಿ ವಿಹರಿಸುವ ಪರಮಹಂಸ. ಆ ಸಿದ್ಧಾಂತದ ವಿಷಯಗಳು ಎಷ್ಟು ಆಳವಾಗಿದ್ದರೂ ಅವುಗಳನ್ನು ಒಳಹೊಕ್ಕು ನೋಡಿ, ಲೀಲಾಜಾಲವಾಗಿಯೂ ಸುಂದರವಾಗಿಯೂ ನಿರೂಪಿಸುವ ಶಕ್ತಿ ಅವರಲ್ಲಿ ಸದಾ ಸನ್ನಿಹಿತವಾಗಿದೆ. ಷಟ್‌ಸ್ಥಲ ಸಿದ್ಧಾಂತದ ಸಾಕಾರ ಮೂರ್ತಿಯೇ ಶ್ರೀಚನ್ನಬಸವಣ್ಣನವರಾಗಿರುವಾಗ ಅವರ ಉಸಿರು ಪರಿಮಳವಾಗಿ, ಸಿದ್ಧಾಂತವೆನಿಸದೆ ಇರದು. ಅಂದಮೇಲೆ, ಸಿದ್ಧಾಂತವಿಷಯಗಳನ್ನು ಅವರು ಸ್ವಲೀಲಾನಂದವಿಲಾಸದಲ್ಲಿ ಹೇಳಿರುವರೆಂದು ಬೇರೆ ಹೇಳಬೇಕೆ? ಅವರ ಲಿಂಗಲೀಲಾವಿಲಾಸವೇ ಸಿದ್ಧಾಂತ. ಇದಕ್ಕೆ ನಿದರ್ಶನಗಳು ಅವರ ಸಾಹಿತ್ಯದಲ್ಲಿ ಕಣ್ಣಿಟ್ಟಲ್ಲಿ ಕಾಣಿಸುತ್ತವೆ.

ವೀರಶೈವಸಿದ್ಧಾಂತದಲ್ಲಿ ಪರಶಿವನು ಶಕ್ತಿಸಮೇತನಾಗಿದ್ದಾನೆ. ನೆನಹು ನಿರ್ಧರಿಸದ ಮುನ್ನ ತನ್ನ ತಾನರಿಯದ ಸಹಜಸ್ಥಿತಿಯೊಂದು ಆ ಪರಬ್ರಹ್ಮ ವಸ್ತುವಿಗುಂಟು. ಅದನ್ನೇ ಸಹಜಸ್ಥಲ, ಬಯಲು, ಶೂನ್ಯ, ನಿಃಶೂನ್ಯ ಮುಂತಾದ ಪರಿಭಾಷೆಗಳಿಂದ ಕರೆಯಲಾಗಿದೆ. ಆ ಸಹಜಕ್ಕೆ ತನ್ನ ನೆನಹು ಆದ ಮಾತ್ರಕ್ಕೆ, ಅದರಲ್ಲಿ ಆ ನೆನಹು ನಿರ್ಧರಿಸದ ಮುನ್ನವೇ ಅವಿನಾಭಾವವಾಗಿ ಹುದುಗಿ ಕುಳಿತಿದ್ದ ಶಕ್ತಿಯು ಉನ್ಮೇಷವಾಗಿ, ಚರಾಚರ ಸೃಷ್ಟಿಯ ಉತ್ಪತ್ತಿಯಾಗುವುದು. ಈ ಸೃಷ್ಟಿ, ಪರಶಿವನಲ್ಲಿ ಹುದುಗಿದ್ದ ಶಕ್ತಿಯ ಆವಿಷ್ಕಾರ. ಸೃಷ್ಟಿಯ ಉತ್ಪತ್ತಿಗೆ ಸಾಧನಸಾಮಗ್ರಿಯಾದ ಪರಶಿವನು, ತಾನೇ ರೂಹುಗೊಂಡು ಲೀಲೆಯನ್ನೆಸಗುವನು. 'ಲೀಲೆಯಾದಡೆ ಉಮಾಪತಿ; ಲೀಲೆ ನಿಂದಡೆ ಸ್ವಯಂಭು'; ಇದೇ ವೀರಶೈವ ಸಿದ್ಧಾಂತದ ಮೂಲಸೂತ್ರ. ಅದನ್ನೇ ಚನ್ನಬಸವಣ್ಣನವರು ಎಷ್ಟು ಸುಂದರವಾಗಿ ಹೇಳಿರುವರೆಂಬುದನ್ನು ಗಮನಿಸಬೇಕು:

**"ಕಟಕ ಸೂತ್ರದ ಗೂಡ ಮಾಡಿಕೊಂಡಿಪ್ಪಲ್ಲಿ,**
**ಸೂತ್ರಕ್ಕೆ ನೂಲನು ಅದೆಲ್ಲಿಂದ ತಂದಿತ್ತು?**
**ರಾಟೆ ಇಲ್ಲ; ಹಂಜಿ ಇಲ್ಲ.**
**ತನ್ನಲ್ಲಿಯೇ ನೂಲ ಕಲ್ಪಿಸಿ, ತಾನದನು ಅಂಟಿಸಿಕೊಂಡು ಆಡಿ,**
**ಅಡಗಿಸಿಕೊಂಡು ಹೋಹಂತೆ,**

**ತನ್ನ ಲೀಲೆಗೆ ತಾನೇ ಮಾಡಿಕೊಂಡ ವಿಶ್ವಪ್ರಪಂಚವ**
**ತನ್ನಲ್ಲಿಯೆ ಲಯುವನೈದಿಸಿಕೊಂಡು,**
**ಕೂಡಲಚನ್ನಸಂಗಯ್ಯ ನಿರ್ವಯಲಾದನು"[೧]**

ಪರಮಾತ್ಮನು ತನ್ನ ಲೀಲೆಗೆ ತಾನೇ ವಿಶ್ವ ಪ್ರಪಂಚವನ್ನು ಸೃಷ್ಟಿಸಿಕೊಂಡನೆಂಬುದನ್ನು ಜೇಡಹುಳದ ಒಂದು ಸುಂದರ ಉಪಮೆಯನ್ನು ಕೊಟ್ಟು ಸ್ಪಷ್ಟಪಡಿಸಿರುವರು. ಕಲ್ಪನೆಗೆ ನಿಲುಕದ ಸೂಕ್ಷ್ಮ ವಿಷಯುಗಳನ್ನು ಲೌಕಿಕದ ದೃಷ್ಟಾಂತಗಳನ್ನೆತ್ತಿಕೊಂಡು ಅಭಿವ್ಯಕ್ತಗೊಳಿಸುವ ಜಾಣ್ಮೆ ಅವರಲ್ಲಿ ವಿಪುಲವಾಗಿದೆ.

**"ಇಷ್ಟಲಿಂಗವೆಂಬುದು ದರ್ಪಣ; ಪ್ರಾಣಲಿಂಗವೆಂಬುದು ಪ್ರತಿಬಿಂಬ.**
**ದರ್ಪಣ ಮಸುಳಿಸಿದಡೆ, ಪ್ರತಿಬಿಂಬ ಕಾಣಬಹುದೆ?"**

ಈ ವಚನದಲ್ಲಿ ಚನ್ನಬಸವಣ್ಣನವರು ಇಷ್ಟಲಿಂಗದ ಬಹು ಸೂಕ್ಷ್ಮ ಕಲ್ಪನೆಯನ್ನು ಸುಂದರವಾಗಿ ವಿವರಿಸಿರುವರು. ಪರಮಾತ್ಮನು ಪ್ರತಿಯೊಬ್ಬ ವ್ಯಕ್ತಿಯ ಮನೋಮಂದಿರದಲ್ಲಿ ಆರೂಢನಾಗಿರುವನು. ಆತನು ನೆಲೆಗೊಂಡುದು ಭಾವವನ್ನು ದಾಟಿ ಆಚೆಗೆ! ಭಾವವೆಂದರೆ ಮನದ ಅತ್ಯಂತ ಸೂಕ್ಷ್ಮಸ್ಥಿತಿ; ಇಷ್ಟವೆಂಬುದು ಅದೇ ಮನದ ಸ್ಥೂಲರೂಪ. ಆದುದರಿಂದ, ಭಾವಾತೀತವಾದ ಪರವಸ್ತು, ಭಾವದಲ್ಲಿ ಪ್ರಾಣದಲ್ಲಿ ಇಷ್ಟದಲ್ಲಿ ನೆಲೆಗೊಂಡು ಪೂಜೆಗೊಳ್ಳುವುದು. ಅದು ಒಂದು ಮೂರಾಗಿ ನಿಂತಿದೆ. ಭಾವದಲ್ಲಿರುವುದು ಪ್ರಾಣಕ್ಕೆ ಬಂದಿದೆ; ಪ್ರಾಣದಿಂದ ಇಷ್ಟಕ್ಕೆ ಬಂದಿದೆ. ಇಷ್ಟಲಿಂಗವೆಂಬುದು ಪ್ರಾಣಲಿಂಗದ ಕುರುಹು; ಸ್ವಸ್ವರೂಪದರ್ಶನ. ಆ ಇಷ್ಟಲಿಂಗದಲ್ಲಿ ಕಾಣಬೇಕು ಪ್ರಾಣಲಿಂಗವನ್ನು. ಈ ವಿಷಯುವನ್ನು ಚನ್ನಬಸವಣ್ಣನವರು ಮೇಗಣ 'ದರ್ಪಣ ಪ್ರತಿಬಿಂಬದ ಕಲ್ಪನೆ'ಯಲ್ಲಿ ಸ್ಪಷ್ಟಪಡಿಸಿರುವರು. ದರ್ಪಣದಲ್ಲಿ ಕಾಣುವ ಪ್ರತಿಬಿಂಬವೇ ಪ್ರಾಣಲಿಂಗ. ಇಷ್ಟಲಿಂಗದಲ್ಲಿ ನಿಷ್ಠೆ ಕಡಿಮೆಯಾದರೆ, ಅಂದರೆ ಆಚಾರ ಮಸುಳಿಸಿದಡೆ ಪ್ರಾಣಲಿಂಗ ಕಾಣುವುದಿಲ್ಲ. ಇಷ್ಟ ಸ್ಪಷ್ಟವಾಗಿದ್ದಷ್ಟು ಪ್ರಾಣಲಿಂಗ ಅಲ್ಲಿ ಒಡೆದುಕಾಣುತ್ತದೆ. ಸಿದ್ಧಾಂತದ ಇಂತಹ ಗೂಢವಿಚಾರವನ್ನು ಎರಡು ಚರಣಗಳಲ್ಲಿ ಸ್ಪಷ್ಟಪಡಿಸಿದುದು ಚನ್ನಬಸವಣ್ಣನವರ ಸಾಹಿತ್ಯಶಕ್ತಿದ್ಯೋತಕವಲ್ಲವೆ?

ವೀರಶೈವವು ಅವಿಕೃತ ಪರಿಣಾಮವಾದವನ್ನು ಆಧರಿಸಿದಂತಿದೆ. ಇದರಲ್ಲಿ ಪರಿಣಾಮವಿದೆ; ಆದರೆ, ಪರಿಣಾಮದಲ್ಲಿ ವಿಕಾರವಿಲ್ಲ. ಹಾಲು ಹೆಪ್ಪುಗಟ್ಟಿ ಮೊಸರಾಗುವುದು ವಿಕೃತ ಪರಿಣಾಮ. ಪರಮಾತ್ಮನು ತನ್ನ ಶಕ್ತಿಯ ಉನ್ಮೇಷದಿಂದ ಲೀಲೆನಿಂದು ತಾನೆ ಸೃಷ್ಟಿಯಾದರೆ, ಅಲ್ಲಿ ಉಂಟಾದ ಪರಿಣಾಮ, ಹಾಲು-ಮೊಸರಿನಂತೆ ವಿಕೃತವಲ್ಲ; ಸುವರ್ಣ-ಕುಂಡಲದಂತೆ ಅವಿಕೃತ. ಬಂಗಾರದಿಂದ ಅನೇಕ ಆಭರಣಗಳನ್ನು ಮಾಡಿದರೆ, ಅಲ್ಲಿ ಸುವರ್ಣತ್ವಕ್ಕೆ ಚ್ಯುತಿಯಿಲ್ಲ. ಆದರೆ, ಸುವರ್ಣಘಟ್ಟಿಯಿಂದ ಭಿನ್ನವೆನಿಸಿದ ರೂಪು ಅಲ್ಲಿದೆ. ಹೀಗೆ, ಪರಶಿವನು ತನ್ನ ಶಕ್ತಿಯ ಆವಿಷ್ಕರಣದಿಂದ ಅವಿಕೃತರೂಪವನ್ನು ತಾಳಿರುವನು. ಈ ವಿಚಾರವನ್ನೇ ವಿವರಿಸುವ ಚನ್ನಬಸವಣ್ಣನವರ ಬಗೆ ಮಿಗಿಲಾಗಿದೆ:

---

೧. **ಚಬವ. ೯.**

**'ಮಿಸುನಿಯಿಂದಾದ ಕಟಕಮುಕುಟಾದಿ ತೊಡವುಗಳು,**
**ಮಿಸುನಿಯಲ್ಲದೆ ಮತ್ತೊಂದು ರೂಪಾಗಬಲ್ಲುದೆ?**
**ಆತ್ಮನಿಂದಾದ ಆಕಾಶಾದಿ ಪಂಚಭೂತಗಳು,**
**ಆತ್ಮನೇ ಅಲ್ಲದೆ ಮತ್ತೊಂದು ರೂಪಾಗಬಲ್ಲುದೆ?'**

ಇಲ್ಲಿ ಆಕಾಶಾದಿ ಪಂಚಭೂತಗಳು ಆತ್ಮಸ್ವರೂಪವೆನ್ನುವ ಉದಾತ್ತತತ್ವವು ವ್ಯಕ್ತವಾಗಿದೆ. ಚನ್ನಬಸವಣ್ಣನವರ ವಚನಗಳಿಗಿರುವ ಬೆಲೆ ಇದಕ್ಕಾಗಿ. ಆಕಾಶಾದಿ ಪಂಚಭೂತಗಳು ಆತ್ಮಸ್ವರೂಪವಾಗಿದ್ದರೂ ಅಲ್ಲಿ ಅಜ್ಞಾನವೆಂಬ ಆವರಣದಿಂದ ಮೂಲ ಸ್ವರೂಪದ ಮರವೆಯುಂಟಾಗಿದೆ. ಆ ಮರವೆಯ ಪರದೆಯನ್ನು ತೆರೆಯದೆ, ಮೂಲ ಸ್ವರೂಪದ ಅರಿವಾಗುವಂತಿಲ್ಲ. ಈ ಭಾವವನ್ನು ಚನ್ನಬಸವಣ್ಣನವರು ಸುಂದರವಾದ ಕಲ್ಪನೆಯಿಂದ ವ್ಯಕ್ತಪಡಿಸಿರುವರು:

**"ಜ್ಞಾನಾಮೃತವೆಂಬ ಜಲನಿಧಿಯ ಮೇಲೆ**
**ಸಂಸಾರವೆಂಬ ಹಾವಸೆ ಮುಸುಕಿಹುದು;**
**ನೀರ ಮೊಗೆವರು ಬಂದು ನೂಕಿದಲ್ಲದೆ, ತೆರಳದು;**
**ಮರಳಿ ಮುಸುಕುವುದ ಮಾಣಿಸಯ್ಯಾ!"** ೧

ಇಲ್ಲಿ ಸಂಸಾರವನ್ನು ಹಾವಸೆಗೆ ಹೋಲಿಸುವುದರಲ್ಲಿರುವ ಸೌಂದರ್ಯವನ್ನು ಅನುಭವಿಸಿ ಸವಿಯಬೇಕು. ಹಾವಸೆ ನೀರ ಮೇಲಿದೆ. ಸಂಸಾರ ಸುಜ್ಞಾನಸಾಗರದ ಮೇಲಿದೆ. ಮೇಲಿನ ಈ ಆವರಣವನ್ನು ತೆಗೆಯದೆ ಮೂಲಸ್ವರೂಪದ ಸಾಕ್ಷಾತ್ಕಾರವಾಗದು. ಲೋಕಾನುಭವದಿಂದ ಎತ್ತಿದ ಇಂತಹ ಉದಾಹರಣೆಗಳು ಸೂಕ್ಷ್ಮತತ್ವನಿರೂಪಣೆಗೆ ಅತ್ಯಂತ ಸಹಾಯಕವಾಗಿವೆ.

**'ಪರತರ ಪರಂಜ್ಯೋತಿಯಪ್ಪ ಮಹಾಲಿಂಗವೇ ಲೋಕಸಂಗ್ರಹಕ್ಕಾಗಿ**
**ಅಗ್ಗಣಿಯೇ ಆಣೆಕಲ್ಲಾದಂತೆ,**
**ಕರಗಿದ ತುಪ್ಪವೇ ಹೆತ್ತುಪ್ಪವಾದಂತೆ,**
**ಗುರುಲಿಂಗಜಂಗಮವಾಗಿ ಪರಿಣಮಿಸಿರ್ಪುದು ಕಾಣಾ.'**

ವೀರಶೈವಕ್ಕೆ ಗುರುಲಿಂಗಜಂಗಮ ಪಂಚಪ್ರಾಣ. ಗುರುಲಿಂಗಜಂಗಮತತ್ವವೇ ವೀರಶೈವದರ್ಶನ. ಪರಮಾತ್ಮನ ಸತ್‌ಸ್ವರೂಪವೇ ಗುರುವಾಗಿ, ಚಿತ್‌ಸ್ವರೂಪವೇ ಲಿಂಗವಾಗಿ, ಆನಂದಸ್ವರೂಪವೇ ಜಂಗಮವಾಗಿ ಮೈವೆತ್ತಿದೆ. ಅಂದರೆ, ಸಚ್ಚಿದಾನಂದ ನಿತ್ಯಪರಿಪೂರ್ಣನಾದ ಪರಮಾತ್ಮನಲ್ಲಿ ಅವ್ಯಕ್ತರೂಪದಿಂದಿರುವ ಸತ್‌ಚಿತ್-ಆನಂದಗಳು ಕ್ರಮವಾಗಿ ಗುರು-ಲಿಂಗ-ಜಂಗಮ ರೂಹುದಳೆದಿವೆಯೆಂಬುದು ವೀರಶೈವಸಿದ್ಧಾಂತ. ಈ ವಿಷಯವನ್ನು ಅಗ್ಗಣಿಯೇ ಆಣೆಕಲ್ಲಾದಂತೆ, ಕರಗಿದ ತುಪ್ಪವೇ ಹೆತ್ತುಪ್ಪವಾದಂತೆ ಎಂಬ ಲೋಕಾನುಭವದ ಸಾದೃಶ್ಯಗಳಿಂದ ಸ್ಫುಟಗೊಳಿಸಿರುವರು.

---

೧. **ಚಬವ.** ೨೦೩.

ಇದೇ ಬಗೆಯ ಭಾವ. ಕೆಳಗಣ ವಚನದಲ್ಲಿ ಇನ್ನೊಂದು ಬಗೆಯ ಸಾದೃಶ್ಯದಿಂದ ಅಭಿವ್ಯಕ್ತವಾಗಿದೆ:

"ಕಿಱಿದಾದ ಬೀಜದಲ್ಲಿ ಹಿರಿಯ ತರುವಡಗಿದ ಪರಿಯಂತೆ,
ಕರಗತವಾದ ಕನ್ನಡಿಯಲ್ಲಿ ಕರಿಗಿರಿಗಳು ತೋಱುವ ಪರಿಯಂತೆ,
. . . . . . . . . . . . . . . . . . . . . . . .
ಪರತರ ಶಿವಲಿಂಗವು ಸದ್ಭಕ್ತರನ್ನುದ್ಧರಿಪ ಸದಿಚ್ಛೆಯಿಂದ
ಲಿಂಗಾಕಾರವಾಗಿ ನೆಲೆಗೊಂಡಿರ್ಪುದು."[೧]

ಹೀಗೆ, ಒಂದೇ ಬಗೆಯ ವಿಚಾರಗಳನ್ನು ಸುಂದರವಾದ ನೂರಾರು ಬಗೆಯಿಂದ ಹೇಳುವಶೈಲಿ, ಚನ್ನಬಸವಣ್ಣನವರಲ್ಲಿ ಗಮನಾರ್ಹವಾಗಿದೆ.

ಗುರುಲಿಂಗಜಂಗಮವು ಲೋಕೋದ್ಧಾರಕ್ಕಾಗಿ ಮೈವೆತ್ತು ನಿಂತಿದೆ. ಗುರುವಿನಿಂದ ಲಿಂಗದೀಕ್ಷೆಯಾಗಬೇಕು. ಅದು ಷಟ್‌ಸ್ಥಲ ಮಾರ್ಗದ ಮೊದಲ ಹೆಜ್ಜೆ. ಲಿಂಗದೀಕ್ಷೆಯಾಗದೆ ಷಟ್‌ಸ್ಥಲಮಾರ್ಗ ಮುಂದುವರಿಯುವಂತಿಲ್ಲ. ಅಂಗಕ್ಕೆ ಲಿಂಗ ಅವಶ್ಯವಾಗಬೇಕು. ಆ ಲಿಂಗದಲ್ಲಿಯೇ ಸ್ವಸ್ವರೂಪದರ್ಶನ. ಅದು ಅರುಹಿನ ಕುರುಹು. ಇಷ್ಟಲಿಂಗದ ಆವಶ್ಯಕತೆಯನ್ನು ಕುರಿತು ಚನ್ನಬಸವಣ್ಣನವರು ಹೇಳುವ ಸುಂದರವಾದ ವಚನದ ಸೊಬಗನ್ನು ಸವಿಯಬೇಕು:

"ಆಕಾಶದಲಾಡುವ ಪಟಕ್ಕಾದಡೆಯೂ ಮೂಲಸೂತ್ರವಿರಬೇಕು.
ಕಲಿಯಾದಡೆಯೂ ಕಜ್ಜವಿಲ್ಲದೆ ಆಗದು.
ಭೂಮಿಯಿಲ್ಲದೆ ಬಂಡಿ ನಡೆವುದೆ?
ಅಂಗಕ್ಕೆ ಲಿಂಗವಿಲ್ಲದೆ ನಿಸ್ಸಂಗವಾಗಬಾರದು"[೨]

ಮೇಗಣ ಪಟಸೂತ್ರದ ಉದಾಹರಣೆ, ಎಲ್ಲರ ಅನುಭವಕ್ಕೆ ಬಂದ ಮಾತು. ಪಟ ಆಕಾಶದಲ್ಲಿ ದೂರ ಹಾರಿದರೂ ಅದಕ್ಕೆ ಮೂಲ ಸೂತ್ರವಿರಬೇಕು. ಮೂಲಸೂತ್ರರೂಪವಾದ ಇಷ್ಟಲಿಂಗವಿಲ್ಲದಿದ್ದರೆ, ಹರಿದು ದಿಕ್ಕುಗೆಟ್ಟು ಹೋಗುವ ಪಟದಂತೆ ಆತ್ಮನ ಅವಸ್ಥೆಯಾಗುವುದು. ಎಂತಹ ಸುಜ್ಞಾನಿಯಾದರೂ ಲಿಂಗ ಬೇಕೇ ಬೇಕು. ಕಲಿಯಾಗಿಹೆನೆಂದು ಕಾರ್ಯಮಾಡದೆ ಕುಳಿತರೆ, ವೀರಶ್ರೀ ತಾನಾಗಿಯೇ ಬರುವಳೆ? ಆತನ ಕಲಿತನ ಕ್ರಿಯಾರೂಪದಲ್ಲಿ ಪ್ರಕಟವಾದಾಗಲೇ ಆಕೆ ಒಲಿಯುವುದು. ಹೀಗೆಯೇ ಸುಜ್ಞಾನಿಯಾದರೂ ಕ್ರಿಯಾರೂಪವಾದ ಲಿಂಗವಿಲ್ಲದಿದ್ದಡೆ ಅವನಿಗೆ ಬಿಡುಗಡೆ ದೊರೆಯದು. ಇಲ್ಲಿ ಮೂರನೆಯದಾಗಿ ಬರುವ ನಿದರ್ಶನವಂತೂ ಇಷ್ಟಲಿಂಗದ ಆವಶ್ಯಕತೆಯನ್ನು ಎತ್ತಿತೋರಿಸುವ ಮಹಾ ಪತಾಕೆಯಾಗಿದೆ. ಭೂಮಿ ಇಲ್ಲದೆ ಬಂಡಿ ನಡೆಯಲಾರದು. ಇದು ಲೋಕಸತ್ಯ. ಕರ್ಮೋದ್ಯೋಗ ಭೂಮಿಯ ಕರ್ಮತನುವಿಲ್ಲದೆ ಮೋಕ್ಷವಾಗದು. ಇಹದಲ್ಲಿ ಇಷ್ಟಲಿಂಗಾರಾಧನೆ ಮಾಡಿ, ಲಿಂಗಾಂಗ ಸಾಮರಸ್ಯವನ್ನು ಪಡೆಯಬೇಕು. ಮುನ್ನಡೆವ

---

೧. ಚಬವ. ೨೫೫. ೨. ಚಬವ. ೧೩೩.

ಬಂಡಿಗೆ ಭೂಮಿ ಎಷ್ಟು ಅವಶ್ಯವೋ ಅಷ್ಟೇ ಅಂಗಕ್ಕೆ ಲಿಂಗ ಅವಶ್ಯ. ಹೀಗೆ ಗಾಢವಾದ, ಗೂಢವಾದ ವಿಚಾರಗಳನ್ನು ಸರ್ವರ ಅನುಭವಕ್ಕೆ ಬಂದ ಉದಾಹರಣೆಗಳಿಂದ ವ್ಯಕ್ತ ಪಡಿಸುವುದು ಚನ್ನಬಸವಣ್ಣನವರ ಸಾಹಿತ್ಯಶಕ್ತಿಯ ಕುರುಹಾಗಿದೆ.

ಇಷ್ಟಲಿಂಗ, ಗುರುದೀಕ್ಷೆಯಿಲ್ಲದೆ ಪ್ರಾಪ್ತವಾಗದು. ಗುರುವಿನಿಂದಲೇ ಶಿಷ್ಯನ ಉದ್ಧಾರ. ಈ ವಿಚಾರವನ್ನು ಚನ್ನಬಸವಣ್ಣನವರು ಹೀಗೆ ಮಂಡಿಸಿದ್ದಾರೆ:

**"ಗುರುವೆಂಬ ಗೂಳಿಮುಟ್ಟಲು, ಶಿಷ್ಯನೆಂಬ ಮಣಿಕ ತನೆಯಾಯಿತ್ತು;**
**ಲಿಂಗವೆಂಬ ಕಿಳುಗಱು, ತನುವೆ ಕೆಚ್ಚಲು,**
**ಮನವೆ ಮೊಲೆವಾಲು.**
**ಅಱಿದಲ್ಲಿ ಐಕ್ಯ, ಮಱಿದಲ್ಲಿ ಸಾಹಿತ್ಯ"**[೧]

ಚನ್ನಬಸವಣ್ಣನವರು ಗಹನವಾದ ವಿಚಾರಗಳನ್ನು ಸರ್ವರ ಅನುಭವದ ಉದಾ ಹರಣೆಗಳಿಂದ ವಿವರಿಸುವರು. ಅವರ ಮಾತಿನಲ್ಲಿ ತೂಕವಿದೆ; ಲಯವಿದೆ. 'ಅಱಿದಲ್ಲಿ ಐಕ್ಯ;' 'ಮಱಿದಲ್ಲಿ ಸಾಹಿತ್ಯ'—ಇಂತಹ ಉಕ್ತಿಗಳನ್ನು ಗಮನಿಸಬೇಕು.

**"ಗುರುದೀಕ್ಷೆ ಮಹತ್ವಪೂರ್ಣವಾದುದು.**
**ಆಕಳ ಹೊಟ್ಟೆಯಲ್ಲಿ ಹೋರಿ ಹುಟ್ಟಿದಡೇನು,**
**ಲಿಂಗಮುದ್ರೆಯನೊತ್ತುವನ್ನಕ್ಕ ಬಸವನಲ್ಲ;**
**ಜಂಗಮದ ಆತ್ಮದಲ್ಲಿ ಪಿಂಡ ಉತ್ಪತ್ತಿಯಾದಡೇನು,**
**ದೀಕ್ಷಿತನಾಗದನ್ನಕ್ಕ ಜಂಗಮದೇವನಲ್ಲ;**
**ದೀಕ್ಷೆಯಿಲ್ಲದೆ ಹೋಗಿ ಭಕ್ತರಲ್ಲಿ ಅಗ್ಗಣಿಯ ಮುಕ್ಕುಳಿಸಿದಡೆ,**
**ಹಾದಿಗೊಂಡು ಹೋಗುವ ನಾಯಿ**
**ಗಿಡದ ಮೇಲೆ ಉಚ್ಚೆಯ ಹೊಯ್ದಂತಾಯಿತ್ತು!"**[೨]
**"ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕಱು ಹೋರಿಗಳು**
**ಬಸವಗಳಪ್ಪವೆ, ಲಿಂಗಮುದ್ರೆಯನೊತ್ತದನ್ನಕ್ಕರ?**
**ಭಕ್ತಂಗೆ ಭಕ್ತೆಗೆ ಮಕ್ಕಳೆಂದಡೆ,**
**ಗುರುಕಾರುಣ್ಯದಿಂದ ಲಿಂಗಧಾರಣವಿಲ್ಲದಿರ್ದಡೆ ಭಕ್ತರಪ್ಪರೆ**[೩]**"**

ಜಂಗಮರ ಮಕ್ಕಳು ಜಂಗಮರಲ್ಲ; ಜಂಗಮತ್ವ ದೀಕ್ಷೆಯಿಂದಲೇ ಪ್ರಾಪ್ತವಾಗ ಬೇಕು. ಆಕಳ ಹೊಟ್ಟೆಯಲ್ಲಿ ಹುಟ್ಟಿದ ಹೋರಿ ಲಿಂಗಮುದ್ರೆಯಿಲ್ಲದೆ ಬಸವನಾಗದು; ಅದರಂತೆ, ದೀಕ್ಷೆಯಿಲ್ಲದ ಜಂಗಮಪಿಂಡ ಜಂಗಮವಾಗದು. ಇದೊಂದು ಉದಾಹರಣೆ ಸಾಕು ಚನ್ನಬಸವಣ್ಣನವರು ಆತ್ಮನಿರೀಕ್ಷಣೆ ಲೋಕನಿರೀಕ್ಷಣೆ ಎರಡರಲ್ಲಿಯೂ ನಿಷ್ಣಾತ ರಾಗಿದ್ದರೆಂಬುದಕ್ಕೆ. ಇನ್ನು ದೀಕ್ಷೆಕೊಡುವ ಗುರು, ಅದನ್ನು ಸ್ವೀಕರಿಸುವ ಶಿಷ್ಯ

---

೧. **ಚಬವ.** ೮೧೫. ೨. **ಚಬವ.** ೧೧೫. ೩. **ಚಬವ.** ೪೨೪.

ಅವರಿಬ್ಬರ ಸಂಬಂಧ ಎಂತಿರುವುದೆಂಬುದನ್ನು ಅವರು ಉಪಮಿಸುವ ರೀತಿಯನ್ನು ನೋಡಿರಿ:

> **"ಜ್ಯೋತಿಯೊಳಡಗಿದ ಜ್ಯೋತಿಯಂತಿರಬೇಕು;**
> **ದರ್ಪಣದೊಳಗಿನ ಪ್ರತಿಬಿಂಬದಂತಿರಬೇಕು;**
> **ಸ್ಫಟಿಕದ ಘುಟದೊಳಗಿರಿಸಿದ ರತ್ನದಂತಿರಬೇಕು;**
> **ರೂಪಿನ ನೆಳಲ ಅಂತರಂಗದಂತಿರಬೇಕು;**
> **ದರ್ಪಣವ ದರ್ಪಣಕ್ಕೆ ತೋಱಿದಂತಿರಬೇಕು."**

ಈ ಒಂದೊಂದು ಉಪಮೆಗಳೂ ಆಚಾರದಲ್ಲಿ, ಅವಸ್ಥೆಯಲ್ಲಿ ಅಡಕಿಲನಿಟ್ಟಂತೆ ಮೇಲೇರುವವಲ್ಲದೆ, ಗುರುಶಿಷ್ಯರ ಸಂಬಂಧದ ಆರೋಹಣ ಕ್ರಮವನ್ನೂ ಸೂಚಿಸುವವು. ಪಾವನಾತ್ಮಕ ಗುರುವು, ಶಿಷ್ಯನ ಹೃತ್ಕಮಲದಲ್ಲಿ ಹುದುಗಿದ್ದ ಚಿತ್‌ಶಕ್ತಿಯನ್ನು ಹೊರ ದೆಗೆದು ಇಷ್ಟಲಿಂಗೋಪದೇಶ ಮಾಡುವುದು, ಜ್ಯೋತಿ ಜ್ಯೋತಿಯನ್ನು ಮುಟ್ಟಿದಂತೆ. ಆಗ ಗುರುಶಿಷ್ಯರಿಬ್ಬರೂ ಜ್ಯೋತಿಯೊಳಡಗಿದ ಜ್ಯೋತಿಯಂತಿರುವರು. ಅವರಿಬ್ಬರ ಸಂಬಂಧವನ್ನು ಮುಂದಿನ ಉಪಮೆಗಳು ಹೆಚ್ಚು ಸುಂದರವಾಗಿ ವ್ಯಕ್ತಪಡಿಸುತ್ತವೆ. ಇನ್ನು ಭಕ್ತಜಂಗಮದ ನುಡಿಗಡಣದ ಮೇಳಾಪವು ಎಂತಿರಬೇಕೆಂಬುದನ್ನು ಕೆಳಗಿನ ವಚನದಿಂದ ಅರಿಯಬಹುದು:

> **"ಭಕ್ತ ಜಂಗಮದ ನುಡಿಗಡಣದ ಮೇಳಾಪವೆಂತಿರಬೇಕೆಂದಡೆ:**
> **ಪ್ರಚ್ಛನ್ನನಾಗಿ ಲೋಕಕ್ಕೆ ಅದೃಶ್ಯನಾಗಿರಬೇಕು;**
> **ಜಲಚರ ಪಾದಪಥದಂತಿರಬೇಕು;**
> **ಶಿಶು ಕಂಡ ಕನಸಿನಂತಿರಬೇಕು;**
> **ಮೌನಿಯುಂಡ ರುಚಿಯಂತಿರಬೇಕು."**[೧]

ಈ ವಚನ ಚನ್ನಬಸವಣ್ಣನವರ ಸಾಹಿತ್ಯಶಕ್ತಿಗೆ ಎತ್ತಿ ಹಿಡಿದ ಪತಾಕೆಯಂತಿದೆ. ಗುರು-ಶಿಷ್ಯರು, ಭಕ್ತ-ಜಂಗಮರು ಮಾಡುವ ಮಾಟದಲ್ಲಿ, ಕೂಡುವ ಕೂಟದಲ್ಲಿ ಡಾಂಭಿಕತೆ ಇರಕೂಡದು. ಬೇಡುವ ಜಂಗಮಕ್ಕೆ ಬೇಡುವೆನೆಂಬ ಕಲ್ಪನೆ ಇರಕೂಡದು. ನೀಡುವ ಭಕ್ತನಿಗೆ ಮಾಡುವೆನೆಂಬ ಮಾಟವಿರಕೂಡದು. ಅವರಿಬ್ಬರ ಸಂಬಂಧ ಪ್ರಚ್ಛನ್ನವಾಗಿಯೇ ನಡೆಯಬೇಕು; ಅದೃಶ್ಯವಾಗಿರಬೇಕು. ಹೇಗೆಂದಡೆ:

(೧) ಜಲಚರಪಥದಂತೆ.
(೨) ಶಿಶು ಕಂಡ ಕನಸಿನಂತೆ.
(೩) ಮೌನಿಯುಂಡ ರುಚಿಯಂತೆ.

ಸಾಹಿತ್ಯಸೌಂದರ್ಯವಡಗಿರುವುದು ಇಂತಹ ಲೋಕೋತ್ತರವಾದ ದರ್ಶನಗಳಲ್ಲಿ. ನೀರಿನಲ್ಲಿ ಮೀನಗಳು ಸಂಚರಿಸುತ್ತವೆ. ಆದರೆ, ಅವುಗಳ ಹೆಜ್ಜೆಯ ಗುರುತು ತೋರದು. ಹೀಗೆಯೇ, ಕೂಸು ಕಂಡ ಕನಸು, ಮೌನಿಯುಂಡ ರುಚಿ ಇದ್ದರೂ ಇಲ್ಲದಂತಿರುತ್ತವೆ.

---

೧. **ಚಬವ.** ೭೧೯.

ಈ ಉದಾಹರಣೆಗಳು ಮೆಲಿದಷ್ಟು ರುಚಿಯಾಗುತ್ತವೆ; ಅವು ಅಧರಕ್ಕೂ-ಉದರಕ್ಕೂ, ಬುದ್ಧಿಗೂ-ಭಾವಕ್ಕೂ ಸಿಹಿ ನೀಡುತ್ತವೆ.

ಲಿಂಗಾಂಗ ಸಾಮರಸ್ಯಕ್ಕಾಗಿಯೇ ಗುರುಲಿಂಗಜಂಗಮದ ಆರಾಧನೆ. 'ಗುರು ಲಿಂಗಜಂಗಮವನ್ನು ಪೂಜಿಸುವವರು ಸಾಯರು; ಬರಿ ಸಾವು ಅವರಿಗೆ ಬಾರದು'. ಈ ಶಾಶ್ವತಸತ್ಯವನ್ನು ಉತ್ತಮ ನಿದರ್ಶನಗಳಿಂದ ಚನ್ನಬಸವಣ್ಣನವರು ಹೀಗೆ ಸ್ಫುಟ-ಗೊಳಿಸಿದ್ದಾರೆ:

**"ವಜ್ರವ ಗೊಱಲೆ ಮುಟ್ಟಬಲ್ಲುದೆ ಆಯ್ಯಾ?**
**ಮದ್ದಿನ ಚೀಲವ ಹಾವು ಮುಟ್ಟಬಲ್ಲುದೆ, ಆಯ್ಯಾ?**
**ಕಿಚ್ಚಿದ್ದ ಒಲೆಯಲ್ಲಿ ಶ್ವಾನ ಮಲಗಬಲ್ಲುದೆ, ಆಯ್ಯಾ?"[1]**

ಈ ನಿದರ್ಶನಗಳಲ್ಲಿ ಕಾವ್ಯಸೌಂದರ್ಯ ಕೆನೆಗಟ್ಟಿ ನಿಂತಿಲ್ಲವೆ? ಲಿಂಗೈಕ್ಯವೆಂದ ರೇನೆಂಬುದನ್ನು ಸುಂದರವಾದ ಉಪಮೆಗಳಿಂದ ತಿಳಿಸುವ ಪರಿ ತೀರ ಹೊಸದಾಗಿದೆ:

**'ಹೊನ್ನು ತನ್ನ ಲೇಸ ತಾನಱಿಯದಂತೆ,**
**ಬೆಲ್ಲ ತನ್ನ ಸಿಹಿಯ ತಾನಱಿಯದಂತೆ,**
**ವಾರಿಶಿಲೆ ಉದಕದೊಳಡಗಿದಂತೆ,**
**ಪುಷ್ಪದೊಳಗೆ ಪರಿಮಳವಡಗಿದಂತೆ,**
**ಅಗ್ನಿಯೊಳಗೆ ಕರ್ಪುರವಡಗಿದಂತೆ,**
**ಮಹಾಲಿಂಗದಲ್ಲಿ ಲೀಯವಾದುದೇ ಲಿಂಗೈಕ್ಯ.'**

ಉಪಮೆಗಳ ಸುಂದರವಾದ ಈ ಮಾಲೆಯಲ್ಲಿ ಮೊದಲಿನವೆರಡು ಚನ್ನಬಸವಣ್ಣ ನವರ ನೂತನ ಸೃಷ್ಟಿಯೆಂದೇ ಹೇಳಬಹುದು. ಅಲ್ಲಿರುವ ದೃಷ್ಟಿಸೃಷ್ಟಿಗಳೆರಡೂ ಪ್ರಶಂಸನೀಯವಾಗಿವೆ.

ಹೀಗೆ ಅಂಗಲಿಂಗೋದ್ಭವದಿಂದ ಲಿಂಗೈಕ್ಯದ ವರೆಗಿನ ತಾತ್ವಿಕ ವಿಚಾರಗಳನ್ನು ಚನ್ನಬಸವಣ್ಣನವರು ಸುಂದರವಾದ ಶೈಲಿಯಲ್ಲಿ ಅಭಿವ್ಯಕ್ತಗೊಳಿಸಿರುವುದನ್ನು ನೋಡಿ ದುದಾಯಿತು. ತಾತ್ವಿಕಕ್ಷೇತ್ರ ಭಾವನೋದ್ದೀಪನಾರಂಗವಲ್ಲ. ಅಲ್ಲಿ ಹೇಳುವುದನ್ನೆಲ್ಲ ಪ್ರಜ್ಞೆಯ ಕಕ್ಷೆಯಲ್ಲಿಯೇ ಹೇಳಬೇಕು. ಭಾವಪರವಶರಾದರೆ, ತೂಕತಪ್ಪಿ ಸಿದ್ಧಾಂತಕ್ಕೆ ಭಂಗ ಬರುತ್ತದೆ. ಇಂತಹ ಕ್ಷೇತ್ರದಲ್ಲಿ ಕಾವ್ಯನಿರ್ಮಿತಿ ಕರಕಷ್ಟ. ಆದರೆ, ಚನ್ನಬಸವಣ್ಣ ನವರು ಸಿದ್ಧಾಂತವಿಷಯಗಳನ್ನೂ ಸಹ ಅನುಭವಕ್ಷೇತ್ರದ ಸೀಮೆಯಲ್ಲಿ ವಿವರಿಸಿರು ವರು. ಒಂದೊಂದಕ್ಕೂ ಸುಂದರವಾದ ಹೋಲಿಕೆ ಕೊಟ್ಟು ಪ್ರತಿಯೊಂದು ವಚನವೂ ರಸಘಟ್ಟಿಯಾಗುವಂತೆ ನೋಡಿಕೊಂಡಿರುವರು. ಇದಕ್ಕೆ ಕಾರಣ, ಅವರಿಗೆ ಕಾವ್ಯಾನುಭವ ಲೋಕಾನುಭವ ಶಾಸ್ತ್ರಾನುಭವ ಮೂರೂ ಕರತಲಾಮಲಕವಾಗಿರುವುದು. ಸಿದ್ಧಾಂತ ವಿಷಯಗಳು ಲೌಕಿಕ ನಿದರ್ಶನಗಳ ನೆರಳಲ್ಲಿ ಬಂದು, ಅವುಗಳ ಸಾಹಿತ್ಯಸುಧೆಯಲ್ಲಿ ಮಿಂದು ತಾರ್ಕಿಕತೆಯ ಹಂಗನ್ನು ಹರಿದುಕೊಂಡಿವೆ. ತರ್ಕದ ವಿಷಯಗಳನ್ನು ತರ್ಕಾ

೧. ಚಬವ. ೪೪೭.

ಶೀತವಾದ ಅನುಭವದ ಹಾದಿಯಲ್ಲಿ ವಿವರಿಸಿರುವುದು ಚನ್ನಬಸವಣ್ಣನವರ ಸಾಹಿತ್ಯದ ಹಿರಿಮೆಯನ್ನು ತೋರಿಸುತ್ತದೆ.

ಸಿದ್ಧಾಂತದ ಎಲ್ಲ ವಿಷಯಗಳನ್ನೂ ಚನ್ನಬಸವಣ್ಣನವರು ಕಾವ್ಯಮಯವಾದ ಶೈಲಿಯಲ್ಲಿಯೇ ಹೇಳಿರುವರೆಂಬುದು ಸಾಹಸದ ಮಾತಾದೀತು. ಶೀರ ತಾರ್ಕಿಕವಾದ ಕೆಲವೊಂದು ಸಿದ್ಧಾಂತ ವಿಷಯಗಳನ್ನು ಕಾವ್ಯಾಂಶಗಳಿಲ್ಲದೆ ನೇರವಾಗಿ ಹೇಳಿಬಿಡುವುದೂ ಉಂಟು.

ಒಮ್ಮೆ ಶೀರ ತಾರ್ಕಿಕ ವಿಷಯಗಳ ಸೀಮೆಯನ್ನು ಬಿಟ್ಟು ಅನುಭಾವದ ಕ್ಷೇತ್ರಕ್ಕೆ ಬಂದರೆ ಸಾಕು; ಚನ್ನಬಸವಣ್ಣನವರ ಕಾವ್ಯ ಪುಟನೆಗೆದು ಜಿಗಿಯುತ್ತದೆ. ಅಲ್ಲಿ ಅವರ ಪ್ರತಿಭೆಯ ಶ್ರೀಮಂತಿಕೆಯನ್ನೂ ಭಾಷೆಯ ಮೇಲಿನ ಅಪಾರವಾದ ಪ್ರಭುತ್ವವನ್ನೂ ಉದ್ದೀಪನಗೊಳ್ಳುವ ಭಾವವಿಶೇಷಗಳನ್ನೂ ಹಾಗೂ ಅವನ್ನೆಲ್ಲ ಅವರು ಸಮುಚಿತವಾಗಿಯೂ ಔದಾರ್ಯಪೂರ್ಣವಾಗಿಯೂ ಬಳಸುವ ರೀತಿಯನ್ನೂ ನಾವು ಕಾಣಬಹುದು.

> "ಅಯ್ಯಾ, ನಿಮ್ಮ ನಿಜಾಚರಣೆಯ ನಿಲುಕಡೆಯ
> ಭವಪಾಶ ಪ್ರಾಣಿಗಳೆತ್ತ ಬಲ್ಲರಯ್ಯಾ?
> ಅದೆಂತೆಂದಡೆ, ಲೋಕದ ದೃಷ್ಟವುಂಟು:
> ಅಯ್ಯಾ, ಕುಱಿ ಬಲ್ಲುದೆ, ರಸದಾಳಿ ಕಬ್ಬಿನ ಸ್ವಾದವ?
> ಶುನಿ ಬಲ್ಲುದೆ, ಕಲ್ಪವೃಕ್ಷವ? ದಂಷ್ಟ್ರಿ ಬಲ್ಲುದೆ, ಕಾಮಧೇನುವ?
> ಗಾರ್ದಭ ಬಲ್ಲುದೆ, ಚಿಂತಾಮಣಿಯ? ನರಿ ಬಲ್ಲುದೆ, ಗಜಭದ್ರವ?
> ಕಾಗೆ ಬಲ್ಲುದೆ, ಪರಮಾಮೃತವ?
> ಅಂಧಕ ಬಲ್ಲನೆ, ಕನ್ನಡಿ ಬಿಂಬ ಮೊದಲಾಗಿ ಅನಂತ ಚಿತ್ರ ವಿಚಿತ್ರಂಗಳ?
> ಬಧಿರ ಬಲ್ಲನೆ, ಪ್ರಣವೋಂನಾದ ಮೊದಲಾದ ದಶನಾದಗಳ?
> ಷಂಡ ಬಲ್ಲನೆ. ರತಿಸಂಯೋಗವ?
> ತೊತ್ತು ಬಲ್ಲಳೆ ರಾಜ ಭೋಗವ? ಹೇಡಿ ಬಲ್ಲನೆ, ರಣಧೀರತ್ವವ?
> ದರಿದ್ರ ಬಲ್ಲನೆ ನವರತ್ನಂಗಳ? ಬೆಸ್ತ ಬಲ್ಲನೆ,
> ಅಂದಳ ಮೊದಲಾದ ಅಷ್ಟಭೋಗಂಗಳ?
> ಮೂಢ ಬಲ್ಲನೆ, ಶಿವಕವಿತ್ವವ? ಕಾಮಿಬಲ್ಲನೆ, ಶಿವಯೋಗದ ಸುಖವ?
> ರೋಗಿ ಬಲ್ಲನೆ, ರಂಭಾರಸವ? ಗೂಗಿ ಬಲ್ಲುದೆ, ಚಿತ್ಸೂರ್ಯನ ಬೆಳಗ?
> ಇಂತೆಂದುದಾಗಿ ಲೋಕದ ದೃಷ್ಟದಂತೆ ಹೊನ್ನು, ಮಣ್ಣು ಹೆಣ್ಣು,
> ಅನ್ನ, ನೀರು, ವಸ್ತ್ರ, ಆಭರಣ, ವಾಹನವೆಂಬ ಅಷ್ಟಮಲಂಗಳಲ್ಲಿ
> ಅಷ್ಟಕಾಮ ವಿಕಾರದಿಂದ ಮಾಯಾಪಾಶಬದ್ಧ ಮಲದಲ್ಲಿ ಬಿದ್ದು ತೊಳಲುವ
> ಜಡಜೀವಿಗಳೆತ್ತ ಬಲ್ಲರಯ್ಯಾ ನಿಮ್ಮ ಸರ್ವಾಚಾರ ಸಂಪತ್ತಿನಾಚರಣೆಯ,
> ನಿಜಸುಖದ ರಾಜಾಧಿರಾಜ ಶಿವಯೋಗದ ನಿಲುಕಡೆಯ,
> ಕೂಡಲಚನ್ನಸಂಗಮದೇವಾ?"[೧]

---

೧. ಚಬವ. ೩೨.

'ಶಿವಯೋಗದ ನಿಲುಕಡೆಯು ಜಡ ಜೀವಿಗಳೆತ್ತ ಬಲ್ಲರೆ'ಂಬುದನ್ನು ವಿವರಿಸಲು ಎಷ್ಟು ದೃಷ್ಟಾಂತಗಳನ್ನು ಕೊಟ್ಟರೂ ಚನ್ನಬಸವಣ್ಣನವರಿಗೆ ತೃಪ್ತಿಯಿಲ್ಲ. ಹೇಳುವ ವಿಷಯ ಅಷ್ಟು ಆಳವಾಗಿ ಕವಿ ಹೃದಯವನ್ನು ಭೇದಿಸಿದೆ. ಅದರಲ್ಲಿ ಅಷ್ಟುಮಟ್ಟಿಗೆ ತಾದಾತ್ಮ್ಯವನ್ನು ಅವರು ಹೊಂದಿರುವರು. ಮಹಾಕಾವ್ಯ ನಿರ್ಮಿತಿಯ ಪ್ರಥಮ ಸೋಪಾನವೇ ಇದು! ಜೊತೆಗೆ ಕವಿಹೃದಯವನ್ನು ವ್ಯಾಪಿಸಿದ ಲೋಕಾನುಭವ. ಜನ ಜೀವನದಿಂದೆತ್ತಿದ ದೃಷ್ಟಾಂತ ಪ್ರಪಂಚ. ಇವೆಲ್ಲ ಒಬ್ಬುಳಿಯಾಗಿ ಕಾವ್ಯದ ಮೆರುಗನ್ನು ತೋರುತ್ತವೆ.

ಪುಂಖಾನುಪುಂಖವಾಗಿ ಬರುವ ಮೇಲಿನ ದೃಷ್ಟಾಂತಗಳ ಜೊತೆಗೆ ಕೆಳಗಿನ ವಚನ ವನ್ನು ಓದಬೇಕು.

**"ಹಲವು ಕಾಲ ಹಂಸೆಯು ಸಂಗದಲ್ಲಿರ್ದಡೇನು,**
**ಬಕನು ಶುಚಿಯಾಗಬಲ್ಲುದೆ?**
**ಗಂಗಾನದಿಯೊಳಗಿರ್ದಡೇನು,**
**ಪಾಷಾಣ ಮೃದುವಾಗಬಲ್ಲುದೆ?**
**ಕಲ್ಪತರುವಿನ ಸನ್ನಿಧಿಯಲ್ಲಿರ್ದಡೇನು,**
**ಒಣಕೊರಡು ಕೊನರಿ ಫಲವಾಗಬಲ್ಲುದೆ?**
**ಕಾಶೀಕ್ಷೇತ್ರದಲ್ಲಿ ಒಂದು ಶುನಕನಿರ್ದಡೇನು;**
**ಅದಜ ಕ್ಷೀರ ಪಂಚಾಮೃತಕ್ಕೆ ಸಲ್ಲುವುದೆ?**
**ತೀರ್ಥದೊಳಗೊಂದು ಗಾರ್ದಭನಿರ್ದಡೇನು,**
**ಅದು ಕಾರಣಿಕನಾಗಬಲ್ಲುದೆ?**
**ಕಂಡುಗ ಹಾಲಿನೊಳಗೊಂದು ಇದ್ದಲಿ ಇರ್ದಡೇನು,**
**ಬಿಳಿದಾಗಬಲ್ಲುದೆ?**
**ಇದುಕಾರಣ, ನಮ್ಮ ಕೂಡಲ ಚನ್ನಸಂಗನ**
**ಶರಣಸನ್ನಿಧಿಯಲ್ಲಿರ್ದಡೇನು,**
**ಅಸಜ್ಜನನು ಸದ್ಭಕ್ತನಾಗಬಲ್ಲನೆ?"**[೧]

ಇಲ್ಲಿ ಒಂದು ವಿಷಯಪುಷ್ಟಿಗೆ ಚನ್ನಬಸವಣ್ಣನವರು ಕೊಡುವ ಸಾದೃಶ್ಯವನ್ನು ನೋಡಬೇಕು. ಅವು ಒಂದೊಂದೂ ತ್ರಿಕಾಲಾಬಾಧಿತವಾದ ಸತ್ಯವನ್ನು ಬಿತ್ತರಿಸುವ ಋತವಾಕ್ಯಗಳು. ಗಂಗಾಜಲದಲ್ಲಿ ಪಾಷಾಣ ಮೃದುವಾಗಬಲ್ಲುದೆ? ಕಲ್ಪತರುವಿನ ಬಳಿಯಲ್ಲಿದ್ದ ಒಣಕೊರಡು ಕೊನರಿ ಫಲವಾಗಬಲ್ಲುದೆ? ಹಾಲಿನೊಳಗಿನ ಇದ್ದಲು ಬಿಳಿದಾಗಬಲ್ಲುದೆ? ಈ ವಾಕ್ಯಗಳನ್ನು ಓದಿದೊಡನೆಯೇ ಮೈ ನವಿರೇಳುತ್ತದೆ. ಈ ಚಿಕ್ಕ ವಾಕ್ಯಗಳು ಅರ್ಥಭಾರದಿಂದ ಬಳುಕುವುದನ್ನು, ಸೌಂದರ್ಯದಿಂದ ಲಾಸ್ಯವಾಡುವು ದನ್ನು ಕಂಡು ಪರಮಾನಂದಭರಿತರಾಗುತ್ತೇವೆ. ಧ್ವನಿಯೆಂಬುದು ಇದೇ!

೧. ಚಬವ. ೭೭.

ಶರಣರು ಮನದೆರೆದು ಮಾತನಾಡಿದರೆ, ಮಹಾಸಾಗರ ಮೈದೋರಿದಂತೆ. ಅವರ ಮಾತಿನ ಅನುಭಾವದೊಳಗುಳ್ಳ ಪ್ರಯೋಗವನ್ನು ಆ ಕ್ಷಣವೇ ಅನುಭವಿಸಬೇಕು. ಇದಕ್ಕೆ ಅವರು ಕೊಟ್ಟ ಉಪಮೆಗಳ ಔಚಿತ್ಯವನ್ನು ನೋಡಿರಿ:

"ಮಿಂಚು ಮಿಂಚಿದಡೆ,
ಮಿಂಚಿನಲುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು.
ಇಂದ್ರಚಾಪ ತೋಱಿದಡೆ,
ಇಂದ್ರಚಾಪದಲುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು.
ಮಹಾನುಭಾವರು ಮನದೆಱೆದು ಮಾತನಾಡಿದಡೆ,
ಅನುಭಾವದೊಳಗುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು.
ಕೂಡಲ ಚನ್ನಸಂಗಯ್ಯನಲ್ಲಿ ಸ್ವಾಯತವಾದ ಶರಣರು ಸ್ವೇಚ್ಛಾಪರರು."[೧]

ಶರಣರ ಮಾತು ಮಿಂಚಿನ ಗೊಂಚಲು. ಅದರ ಬೆಳಗು ತತ್‌ಕ್ಷಣವೇ ಹೊಳೆಯು ದಿರದು. ಚನ್ನಬಸವಣ್ಣನವರು ಈ ಅನುಭವವನ್ನು ಸ್ವಾನುಭವದಿಂದಲೂ ಸಮಕಾಲೀನ ರಾದ ಶರಣರ ನಿರೀಕ್ಷಣೆಯಿಂದಲೂ ಕಂಡುಕೊಂಡಿರಬೇಕು.

ಚನ್ನಬಸವಣ್ಣನವರಿಗೆ ತೀವ್ರತರವಾದ ಸಂವೇದನೆ ಇದೆ .ಅವರು ಸಮಾಜದಲ್ಲಿದ್ದ ದೋಷಗಳನ್ನೂ, ಡಾಂಭಿಕ ವೃತ್ತಿಯನ್ನೂ ಕಟುವಾಗಿ ಟೀಕಿಸಿರುವರು. ಈ ಟೀಕೆಯ ಹಿಂದೆ ಅದ್ಭುತವಾದ ಅನುಕಂಪೆ ಇದೆ. ಸಮಾಜವನ್ನು ನಂದನವನವನ್ನಾಗಿ ಮಾಡ ಬೇಕೆಂಬ ಉದಾತ್ತಭಾವನೆಯಿದೆ. ಮರ್ತ್ಯಕ್ಕೆ ಮಹವ ತರಬೇಕೆಂಬ ಕರ್ತನ ಹೊಣೆ ಯನ್ನು ಹೊತ್ತುಕೊಂಡು ಬಂದ ಶರಣರವರು. ಆದುದರಿಂದಲೇ ಸಮಾಜದ ಲೋಪ ದೋಷಗಳನ್ನು ಕಂಡು, ಕಡುನೊಂದು ಅನೇಕ ವಚನಗಳನ್ನು ಹಾಡಿರುವರು. ಅಲ್ಲಿ ಕಾವ್ಯ ಮೈದೆರೆದು ಹೊರಸೂಸುತ್ತಿದೆ.

"ಕಬ್ಬುನದ ಸೊಣಗನ ತಂದು ಪರುಷವ ಮುಟ್ಟಿಸಲೊಡನೆ,
ಹೊನ್ನ ಸೊಣಗನಪ್ಪುದಲ್ಲದೆ, ಪರುಷವಾಗದು ನೋಡಾ.
ಲೋಕದ ಮಾನವನ ತಂದು ಭಕ್ತನ ಮಾಡಿದಡೆ,
ವೇಷಲಾಂಛನನಹನಲ್ಲದೆ, ಭಕ್ತನಾಗ ನೋಡಾ.
ಇದುಕಾರಣ, ಕೂಡಲ ಚನ್ನಸಂಗಮದೇವಯ್ಯಾ,
ಮಜ್ಜನಕ್ಕೆಱೆದ ಭವಿಗಳನೆಂತು ಭಕ್ತರೆಂಬೆನಯ್ಯಾ?"[೨]

ವೇಷಲಾಂಛನಧಾರಿಗಳನ್ನು ಅವರು ಹೀಗೆ ಕಟುವಾಗಿ ಟೀಕಿಸಿರುವರು. ಗುರು ಲಿಂಗಜಂಗಮ ಪಾದೋದಕ ಪ್ರಸಾದಾನುಭವದ ಹೆಸರು ಹೇಳಿ ಬದುಕುವವರು 'ಅರಸಿನ ಹೆಸರಿಟ್ಟ ಅನಾಮಿಕನಂತೆ ನಾಮಕ್ಕಱುಹರಲ್ಲದೆ ಪಟ್ಟಕ್ಕಱುಹರಪ್ಪರೆ?' ಎಂದು ಕೇಳು ವಲ್ಲಿ, ಎಂತಹ ಲೋಕಾನುಭವ, ಕಾವ್ಯಾನುಭವ ಹೆಪ್ಪುಗಟ್ಟಿವೆ? ಡಾಂಭಿಕನು ಅರಸಿನ ಹೆಸರಿಟ್ಟ ಅನಾಮಿಕನಂತೆ! ತನುವನು ಬಳಲಿಸದೆ ಉದ್ದಂಡವೃತ್ತಿಯಲ್ಲಿ ಧನವಗಳಿಸಿ,

೧. ಚಬವ. ೧೨೪೮. ೨. ಚಬವ. ೬೩.

ಗುರುಲಿಂಗ-ಜಂಗಮಕ್ಕೆ ಮೆಚ್ಚಿಸಿ ದಾಸೋಹವ ಮಾಡಿ, ಭಕ್ತರಾದೆವೆಂಬವರ ಬದುಕು 'ಹುಲಿ ಕಪಿಲೆಯ ತಿಂದು ಮಿಕ್ಕುದ ನರಿ ತಿಂಬಂತೆ'; 'ಶಿವಪಥವನರಿಯದ ಭಕ್ತ, ಆಡಿನ ಕೊರಳಲ್ಲಿ ಅಮೃತವಿಲ್ಲದ ಮೊಲೆಯಿದ್ದಂತೆ.'

ಹೀಗೆ ಹೇಳುವ ಲೋಕೋತ್ತರವಾದ ಉಕ್ತಿಗಳಲ್ಲಿ ಕಾವ್ಯದೇವಿ ಲೀಲಾಜಾಲವಾಗಿ ಲಾಸ್ಯವಾಡುತ್ತಿರುವಳು; ಧ್ವನಿಯಿಂದ ದನಿಗೈಯ್ಯುತ್ತೆ ನಿನದಿಸುತ್ತಿರುವಳು. ಮೇಗಣ ಅಭಿಪ್ರಾಯವನ್ನೇ ಮತ್ತೆ ಮತ್ತೆ ಹತ್ತಾರು ವಿಧದಲ್ಲಿ ಹೇಳಿ, ಮನಸ್ಸಿನಲ್ಲಿ ಅಚ್ಚೊತ್ತುವಂತೆ ಮಾಡುವರು.

'ಕತ್ತೆ ಭಕ್ತನಾದಡೆ, ಕಸಕಳ ತಿಂಬುದ ಮಾಣ್ಬುದೆ?
ಬೆಕ್ಕು ಭಕ್ತನಾದಡೆ, ಇಲಿಗಳ ತಿಂಬುದ ಮಾಣ್ಬುದೆ?
ಹಂದಿ ಭಕ್ತನಾದಡೆ, ಹಡಿಕೆಯ ತಿಂಬುದ ಮಾಣ್ಬುದೆ?
ಸೊಣಗ ಭಕ್ತನಾದಡೆ, ಹಳಿಯ ಮಾಂಸವ ತಿಂಬುದ ಮಾಣ್ಬುದೆ?'

ಕಿರುಕುಳ ದೈವಕ್ಕೆರಗಿ, ವ್ಯರ್ಥ ಪರಿಶ್ರಮ ಪಡುತ್ತಿರುವ ಜನವನ್ನು ಕಂಡು, ಹೇಳುವ ಮಾತುಗಳೆಷ್ಟು ಮಾರ್ಮಿಕವಾಗಿವೆ! ಇಲ್ಲಿ ನೀತಿಬೋಧೆ, ತತ್ವಬೋಧೆ, ಶಾಸ್ತ್ರ ಮುಂತಾದುವೆಲ್ಲ ಕಾವ್ಯದ ರಸಘಟ್ಟಿಯಲ್ಲಿ ಹುದುಗಿ ಕುಳಿತಿರುವುದರಿಂದ ಸಹೃದಯನಿಗೆ ಅವುಗಳ ಭಾರವೇ ಎನಿಸುವುದಿಲ್ಲ.

"ಉಣ್ಣೆ ಕೆಚ್ಚಲವ ಹತ್ತಿದಡೇನು, ಕ್ಷೀರದ ರುಚಿಯು ಬಲ್ಲುದೆ?
ತಗಣೆ ತನುವ ಹತ್ತಿದಡೇನು, ಅಂಗನೆಯುರ ಅಂಗಸುಖವ ಬಲ್ಲುದೆ?
ಹೇಸರವೆಷ್ಟು ದೊಡ್ಡದಾದಡೇನು ತೇಜಿಯಾಗಬಲ್ಲುದೆ?
ತತ್ವದ ಮಾತು ಅಂಗಸಂಗಿಗಳಿಗೇಕೆ, ಭರ್ಗನ ಸಂಗ ಭವಿಗೇಕೆ?
ಪಚ್ಚೆಯ ಪವಳದ ಗುಡಿ ಗೂಡಾರವೇಕೆ ಗೂಗೆಗೆ?
ಗೌಡರ ಮನೆಯ ತೊತ್ತಿಂಗೇಕೆ ಬಲ್ಲಹನಾಣೆ?
ಕಿರುಕಳ ದೈವಕ್ಕೆಱಗಿ ನರಕಕ್ಕಿಳಿವ ದುರಾಚಾರಿಗಳಿಗೆ
ಶಿವಾಚಾರವಳವಡುವುದೆ?"[೧]

ಹೀಗೆ ಉಣ್ಣೆ, ತಗಣೆ, ಇಲಿ, ನಾಯಿ, ನರಿ ಮುಂತಾದ ಪ್ರಾಣಿಲೋಕವೆಲ್ಲ ಚನ್ನಬಸವಣ್ಣನವರ ಪ್ರತಿಮಾಲೋಕದಲ್ಲಿ ಬಂದು ಅವರ ಸಾಹಿತ್ಯಕ್ಕೊಂದು ಬಗೆಯ ಸಹಜತೆಯನ್ನೂ ಶಕ್ತಿಯನ್ನೂ ನೀಡುತ್ತದೆ.

ಚನ್ನಬಸವಣ್ಣನವರ ಕಾವ್ಯ ಕಳೆಗೊಂಡುದಕ್ಕೆ ಅವರ ಲೋಕಾನುಭವವೇ ಕಾರಣ. ಲೋಕದ ಮಾನವನ ಹೃದಯ ವೀಕ್ಷಣೆ, ಸ್ವಭಾವ ಪರಿಶೀಲನೆ, ಪಶುಪಕ್ಷಿ ಕ್ರಿಮಿಕೀಟಕಾದಿಗಳ ವರ್ತನೆ, ಅಲ್ಲಿ ಇಲ್ಲಿ ಇರುವ ಸಾದೃಶ್ಯ ವೈಪರೀತ್ಯಗಳನ್ನೆಲ್ಲ ಅವರು ಬಹು ಸೂಕ್ಷ್ಮವಾಗಿ ಬಲ್ಲವರು. ಆದುದರಿಂದ ಅವರ ಪ್ರತಿಯೊಂದು ವಚನದಲ್ಲಿಯೂ ಕಾವ್ಯದ ಮಿನುಗು, ಮೆರಗು ಮೈವೆತ್ತು ನಿಂತಿದೆ. ಇದೆಲ್ಲಕ್ಕೆ ಕಾರಣ, ಅವರ ತೀವ್ರ ಸಂವೇದನೆ.

೧. ಚಬವ. ೪೪೫.

ಈ ಜೀವಿಗಳು ಸಂಸಾರವನ್ನು ತಮ್ಮದೆಂದು ಕರೆವ ಬಗೆಯನ್ನು ಬಹಳ ಕನಿಕರದಿಂದ ಹೀಗೆ ವಿವರಿಸಿರುವರು:

**"ಗುಬ್ಬಿ ಹೆಜಿರ ಮನೆಯ ತನ್ನಮನೆಯೆಂಬಂತೆ,**
**ಧರೆ, ಧನ, ವನಿತೆಯರು ಎನ್ನವರು ತನ್ನವರೆಂದು,**
**ಹೋರಿ ಹೋರಿ ಸಾಯುತ್ತಿದೆ ಜೀವ."[೧]**

ಈ ವಚನದಲ್ಲಿ ಕಾಣುವ ಗುಬ್ಬಿಯ ದೃಷ್ಟಾಂತ ಯಾವ ಲೋಕದ ಮಾನವನ ಮೆಚ್ಚಿಗೆಯನ್ನಾದರೂ ಪಡೆಯಬಹುದು. ಇಂತಹ ಉಪಮೆಗಳು ಚನ್ನಬಸವಣ್ಣನವರ ವಚನಗಳಲ್ಲಿ ಲೀಲಾಜಾಲವಾಗಿ ಬರುತ್ತವೆ. ಅನುಭವ ಸಂವೇದನೆಯಿದ್ದಲ್ಲಿ, ಅನುಭಾವದ ಆವಿಷ್ಕಾರವಾದಲ್ಲಿ, ಅವು ಚಿಮ್ಮಿ ಚಿಮ್ಮಿ ಹೊರಹೊಮ್ಮುತ್ತವೆ. ಜೀವ ಸತ್ತುಹೋಗುವುದನ್ನು 'ಹೋರಿ ಹೋರಿ ಸಾಯುತ್ತಿದೆ' ಎಂದು ದೀರ್ಘಯುಕ್ತವಾದ ಪದಗಳಿಂದ ಆ ಕೋಟಲೆಯ ವ್ಯಾಪ್ತಿಯನ್ನು ಧ್ವನಿಸುವರು.

ಭಕ್ತಿಯನ್ನು ಮಾಡುವವರು ಎಲ್ಲ ಬಗೆಯ ಜನಗಳುಂಟು. ಅರಸನನ್ನು ಮೊದಲು ಮಾಡಿಕೊಂಡು ಅನಾಮಿಕನವರೆಗೆ, ಅವರವರಿಗೆ ತಕ್ಕಂತೆ ಎಲ್ಲರೂ ಭಕ್ತಿಯನ್ನು ಆಚರಿಸುವರು. ಅವರವರ ಭಕ್ತಿಯ ಸ್ವರೂಪವನ್ನು ಚನ್ನಬಸವಣ್ಣನವರು ನಿರೂಪಿಸುವಲ್ಲಿ ಅದ್ಭುತವಾದ ಸಮಾಜವಿಶ್ಲೇಷಣೆಯನ್ನು ಮಾಡಿರುವರು:

**"ಅರಸನ ಭಕ್ತಿ ಅಹಂಕಾರದಿಂದ ಕೆಟ್ಟಿತ್ತು,**
**ಸೂಳೆಯ ಭಕ್ತಿ ಎಂಜಲ ತಿಂದಾಗಲೇ ಹೋಯಿತ್ತು,**
**ನಂಟುತನದ ಭಕ್ತಿ ನಾಯಕ ನರಕ,**
**ಬಡವನ ಭಕ್ತಿ ನಿಧಾನ,**
**ಇದು ಕಾರಣ, ಕೂಡಲ ಚನ್ನ ಸಂಗಮದೇವಾ,**
**ನಿಮ್ಮ ಭಕ್ತಂಗೆ ಬಡತನವನೇ ಕೊಡು."[೨]**

ಬಡವನ ಭಕ್ತಿ ನಿಧಾನವೆಂದೂ ಅದನ್ನೇ ತಮಗೆ ಕರುಣಿಸಬೇಕೆಂದೂ ಕೇಳುವಲ್ಲಿ ಚನ್ನಬಸವಣ್ಣನವರ ವ್ಯಕ್ತಿತ್ವದ ಚಿತ್ರ ಸ್ಫುಟವಾಗುತ್ತದೆ. ಅರಸನ ಅಹಂಕಾರ ಸೂಳೆಯ ಎಂಜಲು ಇವುಗಳನ್ನು ನಿರೀಕ್ಷಿಸುವಲ್ಲಿ ಚನ್ನಬಸವಣ್ಣನವರ ಸೂಕ್ಷ್ಮವಾದ ಮನೋವಿಶ್ಲೇಷಣೆಯನ್ನು ಕಾಣಬೇಕು. ಹೀಗೆಯೇ ಇನ್ನೊಂದು ವಿಧದಲ್ಲಿ ಡಾಂಭಿಕಭಕ್ತರ ಚಿತ್ರವನ್ನು ಸುಂದರವಾಗಿ ನಿರೂಪಿಸಿರುವರು:

**"ಅರಸಿನ ಭಕ್ತಿ ಅಹಂಕಾರದಲ್ಲಿ ಹೋಯಿತ್ತು;**
**ಓಲೆಕಾಜಿನ ಭಕ್ತಿ ಅಲಗಿನ ಮೊನೆಯಲ್ಲಿ ಹೋಯಿತ್ತು;**
**ಬಣಜಿಗನ ಭಕ್ತಿ ಬಳ್ಳದ ಮೊನೆಯಲ್ಲಿ ಹೋಯಿತ್ತು;**
**ಅಕ್ಕಸಾಲೆಯ ಭಕ್ತಿ ಅಗ್ಗಿಷ್ಟಿಗೆಯಲ್ಲಿ ಹೋಯಿತ್ತು;**
**ಶೀಲವಂತನ ಭಕ್ತಿ ಶಂಕೆಯಲ್ಲಿ ಹೋಯಿತ್ತು;**

---

೧. **ಚಬವ.** ೩೧. ೨. **ಚಬವ.** ೯೪.

ನಾಟಕಕೂಟದವನ ಭಕ್ತಿ ಅಂಜಿಕೆಯಲ್ಲಿ ಹೋಯಿತ್ತು;
ವ್ರತಸ್ಥನ ಭಕ್ತಿ ಪ್ರಪಂಚಿನಲ್ಲಿ ಹೋಯಿತ್ತು"[೧]

ಇಲ್ಲಿ ಓಲೆಕಾರ, ಬಣಜಿಗ, ಅಕ್ಕಸಾಲಿಗ ಮುಂತಾದವರನ್ನೆಲ್ಲ ಅವರವರ ದೃಷ್ಟಿಯಲ್ಲಿಯೇ ನೋಡಿ ಆ ವೃತ್ತಿಗಳನ್ನು, ಅಲ್ಲಿಯ ಅವರ ಆಚಾರ ವಿಚಾರಗಳನ್ನು ಚನ್ನಬಸವಣ್ಣನವರು ಬಹು ಸೂಕ್ಷ್ಮವಾಗಿ ಪೃಥಕ್ಕರಿಸಿರುವರು:

"ದಾಸಿಯ ಸಂಗ ಕಸನೀರ ಹೊರಿಸಿತ್ತು,
ವೇಸಿಯ ಸಂಗ ಎಂಜಲ ತಿನಿಸಿತ್ತು."[೨]

ಎಂದು ಪರಸ್ತ್ರೀಸಂಗ ಮಾಡುವ ಪಂಚಮಹಾಪಾತಕರನ್ನು ಕಟುವಾಗಿಯೂ ಸುಂದರವಾಗಿಯೂ ಟೀಕಿಸಿರುವರು. ಇನ್ನೂ ಅನೇಕ ವಚನಗಳಲ್ಲಿ ಲೋಕಾನುಭವದಿಂದ ತುಂಬಿ ತುಳುಕುವ ಉಕ್ತಿಗಳನ್ನು ಕಾಣಬಹುದು.

"ಬೆಲ್ಲದ ನೀರೆಱೆದಡೇನು, ಬೇವು ಸಿಹಿಯಪ್ಪುದೆ?
ಕತ್ತುರಿಯಲೇಪವಿತ್ತಡೇನು, ನೀರುಳ್ಳಿಯ ದುರ್ಗಂಧ ದೂರಪ್ಪುದೆ?
ಕಸುಗಾಯಿ ಹಿಸುಕಿದಡೇನು, ಹಣ್ಣಿಗೆ ಹವಣಪ್ಪುದೆ?"[೩]

ಇಂಥ ಅನುಭವಪೂರ್ಣವಾದ ವಚನಗಳಲ್ಲಿ ಚನ್ನಬಸವಣ್ಣನವರ ಕಾವ್ಯದ ನವಿರನ್ನೂ ಮಾಧುರ್ಯವನ್ನೂ ಕಾಣಬಹುದು. ಈ ಉಕ್ತಿಗಳು ಸುಂದರವಾದ ಆಣಿಮುತ್ತುಗಳು. ಕಾವ್ಯ ತನ್ನ ಉತ್ತುಂಗ ಶಿಖರವನ್ನೂ ಮಹೋನ್ನತ ಸ್ಥಲವನ್ನೂ ಮುಟ್ಟುವ ಅನೇಕ ವಚನಗಳು ಚನ್ನಬಸವಣ್ಣನವರ ಸಾಹಿತ್ಯದಲ್ಲಿ ಉಂಟು. ಅವನ್ನು ಯಾವ ಅಂದದಿಂದ ಪರೀಕ್ಷಿಸಿದರೂ, ಯಾವ ಮಾನದಿಂದ ಅಳೆದರೂ ಪ್ರತಿಯಿಲ್ಲದ ಅಪ್ರತಿಮದಂತೆ ಒರೆಗೆ ನಿಲ್ಲುತ್ತವೆ. ಅವುಗಳಲ್ಲಿ ಒಂದನ್ನು ಇಲ್ಲಿ ಉದಾಹರಿಸಬಹುದು.

"ಹುಸಿ ಅಂಕುರಿಸಿತ್ತು ಹೊಲೆಯನಲ್ಲಿ;
ಹುಸಿ ಎರಡೆಲೆಯಾಯಿತ್ತು ಮಾದಿಗನಲ್ಲಿ;
ಹುಸಿ ನಾಲ್ಕೆಲೆಯಾಯಿತ್ತು ಸಮ್ಮಗಾಱನಲ್ಲಿ;
ಹುಸಿ ಆಱೆಲೆಯಾಯಿತ್ತು ಅಗಸನಲ್ಲಿ;
ಹುಸಿ ಎಂಟೆಲೆಯಾಯಿತ್ತು ವ್ಯವಹಾರಿಯಲ್ಲಿ;
ಹುಸಿ ಸಸಿಯಾಯಿತ್ತು ಹಾದರಿಗನಲ್ಲಿ;
ಹುಸಿ ಗಿಡವಾಯಿತ್ತು ಮದ್ಯಪಾನಿಯಲ್ಲಿ;
ಹುಸಿ ಮರನಾಯಿತ್ತು ಜೂಜುಗಾಱನಲ್ಲಿ;
ಹುಸಿ ಹೂವಾಯಿತ್ತು ಡೊಂಬನಲ್ಲಿ;
ಹುಸಿ ಕಾಯಿಯಾಯಿತ್ತು ಅಕ್ಕಸಾಲಿಗನಲ್ಲಿ;
ಹುಸಿ ಹಣ್ಣಾಯಿತ್ತು ಸೂಳೆಯಲ್ಲಿ;
ಹುಸಿ ಹಣ್ಣಾಗಿ ತೊಟ್ಟು ಬಿಟ್ಟಿತ್ತು ಅರಸನಲ್ಲಿ;"[೪]

---

೧. ಚಬವ. ೭೩. ೨. ಚಬವ. ೬೫. ೩. ಚಬವ. ೧೧೭. ೪. ಚಬವ. ೨೨೯.

ಇದೊಂದು ವಚನ ಸಾಕು ಚನ್ನಬಸವಣ್ಣನವರ ಕಾವ್ಯಶಕ್ತಿಯನ್ನು ಅರಿತುಕೊಳ್ಳಲು. ಇಲ್ಲಿ ಅಂಕುರದಿಂದ ಪೂರ್ಣಫಲವಾಗುವವರೆಗೆ ರೂಪಕವನ್ನು ಬೆಳೆಸಿಕೊಂಡುಹೋಗಿರುವ ದರ್ಶನಶಕ್ತಿ ಅನ್ಯಾದೃಶವಾದುದು. ಚನ್ನಬಸವಣ್ಣನವರ ವಚನಗಳಲ್ಲಿ ಕಾವ್ಯ ಕಡಿಮೆಯೆಂದು ನುಡಿವವರು ಇಂತಹ ವಚನಗಳ ಬೆಡಗನ್ನು ಅವಶ್ಯವಾಗಿ ಗಮನಿಸಬೇಕು. ಅಲ್ಲಿ, ನಿಚ್ಚಳವಾದ ಕಾವ್ಯಗಂಗೆ ಸ್ವಚ್ಛವಾದ ಪಾತ್ರದಲ್ಲಿ ಹರಿದಂತಿದೆ. ಸೂಕ್ಷ್ಮವಾದ ಲೋಕಾನುಭವ, ಸುಂದರವಾದ ಕಲ್ಪನೆಯ ಕುದುರೆಯನ್ನೇರಿ ವಿಹರಿಸುವ ಇಂತಹ ವಚನಗಳು ವಿಶ್ವಸಾಹಿತ್ಯದಲ್ಲಿ ಮನ್ನಣೆಯನ್ನು ಪಡೆಯಬಲ್ಲುವು. ಹೀಗೆ ಮಾತು ಮಾತಿಗೆ ಮಿಂಚಿನ ಸಂಚನ್ನು ಒಳಗೊಂಡ ಲೋಕೋಕ್ತಿಗಳು ಅಡಿಯಿಡುತ್ತಿರುವುದನ್ನು ಕಾಣಬಹುದು. 'ಮಧುರದ ಗುಣವ ಇರಿವೆ ಬಲ್ಲುದು', 'ವೇಳೆಯ ಗುಣವ ಕೋಳಿ ಬಲ್ಲುದು', 'ಗೋತ್ರದ ಗುಣವ ಕಾಗೆ ಬಲ್ಲುದು', 'ಹದಿರು ಸೂಳೆಗೆ', 'ಕಟಕಿ ವಿದ್ಯಾವಂತಂಗೆ', 'ಮದ್ದು ಮರ ಹಾವಡಿಗಂಗೆ', 'ಗೆಲ್ಲಸೋಲದ ಮತ್ಸರ ಕೊಲ್ಲಡಿಗಂಗೆ', 'ವೇಷ ಲಾಂಛನವಾದಡೇನು ಗ್ರಾಸಕ್ಕೆ ಭಾಜನರಲ್ಲದೆ ಲಿಂಗಕ್ಕೆ ಭಾಜನರಲ್ಲ', 'ಹಲವು ಜಾತಿಯ ಕಟ್ಟಿಗೆ ಸುಟ್ಟಲ್ಲಿ ಅಗ್ನಿಯೊಂದಲ್ಲದೆ ಕಟ್ಟಿಗೆಗಳ ಕುರುಹ ಕಾಂಬುದೆ'? ಇಂತಹ ಮಾತುಗಳನ್ನು ಮನವಾರೆ, ತನುಹೇರೆ ಬಳಸಿದ ಚನ್ನಬಸವಣ್ಣನವರ ವಚನಗಳನ್ನು ಉತ್ತಮ ಕಾವ್ಯಗಳ ತುತ್ತತುದಿಯಲ್ಲಿ ನಿಲ್ಲಿಸಬೇಕಾಗುತ್ತದೆ!

ಆದರೆ, ಕಾವ್ಯದ ನಿರ್ಮಿತಿ ಚನ್ನಬಸವಣ್ಣನವರ ಉದ್ದೇಶವಾಗಿರಲಿಲ್ಲ. ಅವರು ಅದಕ್ಕಿಂತಲೂ ಎತ್ತರವಾದ ಶಿಖರವನ್ನೇರಿದವರು, ಸಮಾಜವನ್ನು ಅದರ ಕುಂದು ಕೊರತೆಗಳಿಂದ ಬಂಧವಿಮೋಚನೆ ಮಾಡಿ, ಅಂದಂದಿಗೆ ಮಾನವನಿಗೆ ಮೋಕ್ಷಸಂಪದವನ್ನೀಯಬೇಕೆಂಬುದು ಅವರ ಉದ್ದೇಶ. ಆದುದರಿಂದ ಆ ಲೋಕದ ಡೊಂಕನ್ನು ಸಹಸ್ರ ಪುರುಷನಾಗಿ ಸಹಸ್ರಾಕ್ಷಗಳಿಂದ ನಿರೀಕ್ಷಿಸಿರುವರು.

> "ಲೋಕದ ಹೊಲೆ ಉದಕದಿಂದ ಹೋಹುದೆಂಬರು;
> ಉದಕದ ಹೊಲೆ ಏತಱಿಂದ ಹೋಹುದು?
> ವಾಕ್ ಪ್ರಮಾಣಿನಿಂದ ಅಗ್ಗವಣಿಯೆನಿಸಿತ್ತು."[೧]
>
> 'ಕೋಟ ವಚನವ ದೊಡ್ಡ ವೃಕ್ಷಕ್ಕೆ ಕಟ್ಟಿದಂತೆ
> ಅಂಗದ ಮೇಲೆ ಲಿಂಗವ ಕಟ್ಟಿಕೊಂಡು ಸುಳಿವವ ಜಂಗಮನಲ್ಲ'
>
> "ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ ಎಂದು,
> ತಮ್ಮಿಚ್ಛೆಗೆ ಬಗುಳುವ ಕುನ್ನಿಗಳ ನೋಡಾ!
> ಬಱದ ನಾಡಿಂದ ಬಂದ ಬಣಗುಗಳಂತೆ
> ಮತ್ತಿಕ್ಕುವರೋ ಇಕ್ಕರೋ ಎಂದು ಒಟ್ಟಿಸಿಕೊಂಡು,
> ತಿಂದು, ಮಿಕ್ಕುದ ಬಿಸುಡುವ ಕುನ್ನಿಗಳ ಮೆಚ್ಚುವನೆ
> ನಮ್ಮ ಕೂಡಲಚನ್ನಸಂಗಮದೇವ?"[೨]

೧. ಚಬವ. ೬೧೫. ೨. ಚಬವ. ೭೪೯.

ಹೀಗೆ ಸಮಾಜಪರಿಶೀಲನೆ, ಮಾನವ ಹೃದಯಸಂಶ್ಲೇಷಣೆ ಇವು ಚನ್ನಬಸವಣ್ಣನವರ ವಚನಗಳ ಬಹು ಮುಖ್ಯವಾದ ವಸ್ತು. ನೂತನ ಸಮಾಜದ ನಿರ್ಮಾತೃಗಳವರು. 'ಅಲ್ಲಿಂದ ಶಕ್ತಿಯನ್ನು ಹೀರಿ, ಆ ಲೋಕವನ್ನೇ ಮೇಲಕ್ಕೆತ್ತಿ ಕೈಲಾಸಕ್ಕೊಯ್ಯಬೇಕು, ಇಲ್ಲವೆ ಕೈಲಾಸವನ್ನೇ ಇಲ್ಲಿಗೆ ತರಬೇಕು' ಎಂಬ ದಿವ್ಯಾದರ್ಶದಲ್ಲಿ ಈ ವಚನ ಸಾಹಿತ್ಯ ಒಡಮೂಡಿ ನಿಂತಿದೆ. ಆ ಸಮಾಜದ ಚಿತ್ರ, ಅದರ ಮುಂದಿದ್ದ ಆದರ್ಶ ಇವನ್ನೆಲ್ಲ ಅವರು ಸಂಸ್ಮರಣೀಯವಾಗಿ ನಿರೂಪಿಸಿರುವರು.

ಒಂದೆಡೆ ಡಾಂಭಿಕ ವೃತ್ತಿಯನ್ನು ಕಂಡು ಮನಸೊಂದು ಕಟುವಾಗಿ ಟೀಕಿಸಿದರೆ, ಇನ್ನೊಂದೆಡೆ ಈ ಲೋಕದ ಬದುಕನ್ನು ಬಂಗಾರವನ್ನಾಗಿ ಮಾಡಿ, ಕಾಯದಲ್ಲಿ ಗುರು ಲಿಂಗಜಂಗಮ ಆಯತವನ್ನು ಮಾಡಿಕೊಂಡ ಶರಣನ ಇರವನ್ನೂ, ಬರವನ್ನೂ ಎದೆ ತುಂಬಿ ಬಣ್ಣಿಸಿರುವರು. ಅಲ್ಲಿ ಅವರ ಆನಂದಾಶ್ರು ಉದುರಿ, ಆಣಿಮುತ್ತುಗಳಾಗಿ ಮಾಲೆಗೊಂಡಂತಿವೆ.

> "ಮಾತು ಮಾಣಿಕ್ಯವ ನುಂಗಿ, ಜ್ಯೋತಿ ಕತ್ತಲೆಯ ನುಂಗಿ,
> ಆಳು ಆಳ್ದನ ನುಂಗಿ ಉಗುಳಲಿನ್ನೆಂತೊ?
> ಮಥನವಿಲ್ಲದ ಸಂಗ, ಮರಣವಿಲ್ಲದ ಉದಯ,
> ಅಳಲಿಲ್ಲದ ಶೋಕ ಸಮರಸದಲ್ಲಿ"[೧]

ಸಾಮರಸ್ಯದಲ್ಲಿ ಉಂಟಾದ ಅನುಭವವನ್ನು ಮಾರ್ಮಿಕವಾದ ರೀತಿಯಲ್ಲಿ ಅಭಿವ್ಯಕ್ತಪಡಿಸಿರುವುದನ್ನು ಇಲ್ಲಿ ಕಾಣಬಹುದು. ಇವು ಹೆಚ್ಚು ಕಡಿಮೆ ಸ್ವಾನುಭವದ ನುಡಿಗಳು. ಆ ಹಂತದಲ್ಲಿ ನಿಂತ ಚನ್ನಬಸವಣ್ಣನವರೀಗ, ಒಳಗಣ ಆನಂದಕ್ಕೆ ಬಹಿರಂಗದರ್ಶನ ಮಾಡಿಸುತ್ತಿರುವರು. ಸಾಮರಸ್ಯದಲ್ಲಿ ಮಾತು ಮಾಣಿಕ್ಯವನ್ನು ನುಂಗಿತು. ಅಲ್ಲೆಲ್ಲ ಮಾತೆಂಬ ಜ್ಯೋತಿಯೇ ಹೊರಹೊಮ್ಮುವುದು. ಆ ಮಾತೆಂಬ ಜ್ಯೋತಿ, ಅಜ್ಞಾನವೆಂಬ ಕತ್ತಲೆಯನ್ನೆಲ್ಲ ನುಂಗಿತು. ಇದುವರೆಗಿದ್ದ ದ್ವೈತವೆಲ್ಲ ಹಿಂಗಿತು. ಸ್ವಾಮಿಭೃತ್ಯಭಾವ ಕರಗಿತು. ಸ್ವಸ್ವರೂಪದರ್ಶನವಾಯಿತು. ಪೂಜ್ಯಪೂಜಕ ದೃಷ್ಟಿ ಮಾಯವಾಯಿತು. ಸ್ವಲೀಲಾನಂದವಿಲಾಸ ಪ್ರಾಪ್ತವಾಯಿತು. ಆಗ ಅಳಲಿಲ್ಲದ ಶೋಕ ಉಂಟಾಯಿತಂತೆ. ಇಲ್ಲಿ ಒಂದೊಂದು ಮಾತೂ ವಿಶ್ವದಷ್ಟು ವಿಶಾಲವಾದ ಅರ್ಥವನ್ನು ಹುದುಗಿಸಿಕೊಂಡಿದೆ.

> "ತೆಱಹಿಲ್ಲದ ಘನವು ಮನದೊಳಗೆ ನಿಂದು ನೆಲೆಗೊಂಡ ಬಳಿಕ,
> ಆ ಘನವ ತೆರೆಯ ಮಱೆಯುಲಡಗಿಸಿಹೆನೆಂದಡೆ, ಅಡಗುವದೆ?
> ಹೇಮಗಿರಿಯ ಕದ್ದು ಭೂಮಿಯುಲಡಗಿಸಿಹೆನೆಂದಡೆ,
> ಆ ಕಳವು ಸಿಕ್ಕದೆ ಮಾಣ್ಬುದೆ?
> ಕೂಡಲಚನ್ನಸಂಗನ ಶರಣ ಪ್ರಭುವಿನಲ್ಲಿ ಬೆರಸಿದ ಸುಖವ
> ಮಱೆಸಿಹೆನೆಂದಡೆ ನಿನ್ನಳವೆ ಹೇಳಾ?"[೨]

> "ಓಲೆಯನಿಕ್ಕಿದ ಬಾಲೆಯ ಓಲೆಗಳೆಯದಿನ್ನೆಂತೊ?
> ಓಲೆಯಿದ್ದು ಒಳಗಾಯತವಾಯಿತ್ತೆಲ್ಲರಿಗೆಯು

---

೧. ಚಬವ. ೧೩೩೨ ೨. ಚಬವ. ೧೩೭೯.

ಓಲೆಯೂ ಹೋಯಿತ್ತು, ಬಾಲೆಯೂ ಹೋಯಿತ್ತು!
ಓಲೆಯ ಬಾಲೆಯ ಕೀಲ ಬಲ್ಲವರ, ಕೂಡಲಚನ್ನಸಂಗನೆಂಬೆನು"[೧]

"ಅಕ್ಷರ ಪಂಚಕದ ನಿಕ್ಷೇಪವನಱಿದಡೆ ಬೋಳು;
ಕುಕ್ಷಿಯೊಳಗೈವತ್ತೆರಡಕ್ಷರದ ಲಕ್ಷಣವನಱಿದಡೆ ಬೋಳು;
ಅಕ್ಷಯನಿಧಿ ಕೂಡಲಚನ್ನಸಂಗಯ್ಯಾ, ಭವಕ್ಕೆ ಬಾರದುದೆ ಬೋಳು"[೨]

ಈ ಪರಮಾನಂದದಲ್ಲಿ ಚನ್ನಬಸವಣ್ಣನವರ ವ್ಯಕ್ತಿತ್ವ ಮೇರುಗಿರಿಯಷ್ಟು ಎತ್ತರವಾಗಿ ಕಂಡುಬರುತ್ತದೆ. ಅವರು ಕೂಡಲ ಚನ್ನಸಂಗಯ್ಯನಿಗೆ ಆರೋಗಣೆಯನ್ನು ಮಾಡಿಸುತ್ತಿರುವ ದೃಶ್ಯವನ್ನು ನೋಡಬೇಕು.

"ಕಂದದ ಹೂವನೆ ಕೊಯ್ದು ನಂದದಾರತಿಯನೆ ಬೆಳಗಿ
ಅಂದವಳಿಯದೆ, ಬಿಂದು ತುಳುಕದೆ, ನಂದಿ ಮುಂದುಗೆಡದ ಮುನ್ನ
ಅಂದಂದಿನ ಹೊಸಪೂಜೆ,
ಆ ಲಿಂಗಮಧ್ಯವನೆ ತಿಳಿದು ನೋಡಿ, ಮೇರುಗಿರಿಯಾಕಳನೆ ಕಱೆದು
ಕ್ಷೀರದಲ್ಲಿ ಅಡಿಗೆಯ ಮಾಡಿ, ಕೂಡಲಚನ್ನಸಂಗಯ್ಯನೆಂಬ ಲಿಂಗಕ್ಕೆ
ಆರೋಗಣೆಯ ಸಮಯ"[೩]

ಹೀಗೆ ಹೃದಯದ ಆನಂದಾಬ್ಧಿ ಮುದದಿಂದ ಮೈದೋರಿ ಶಬ್ದಬ್ರಹ್ಮನ ಸೃಷ್ಟಿಯಾಗಿದೆ. ಅರಿದು ನೋಡುವವರಿಗೆ, ಅನುಭವಿಸುವವರಿಗೆ, ಅರೆದುನೋಡುವವರಿಗೆ, ಒರೆದುನೋಡುವವರಿಗೆ ಎಲ್ಲ ಶಾಶ್ವತವಾದ ಜೀವನ ಸಾಮಗ್ರಿಯುಂಟು. ಸತ್ಪಥವುಂಟು; ಚಿದಾನಂದವುಂಟು.

ಸಾಹಿತ್ಯದಲ್ಲಿ ರೂಪಕಪ್ರಪಂಚಕ್ಕೊಂದು ವಿಶಿಷ್ಟಸ್ಥಾನವುಂಟು. ಏಕೆಂದರೆ, ಅದು ಸೌಂದರ್ಯಸಾರ ಗಟ್ಟಿಗೊಳ್ಳುತ್ತ ಧ್ವನಿಯತ್ತ ನಡೆದಿರುವ ಘಟ್ಟಗಳಲ್ಲಿ ಮಹತ್ವದ ಸೋಪಾನ. ಆದುದರಿಂದ ಕವಿಶಕ್ತಿಗೆ ಆತನ ರೂಪಕಪ್ರಪಂಚವೊಂದು ಒರೆಗಲ್ಲಾಗಿ ನಿಲ್ಲುತ್ತದೆ. ಚನ್ನಬಸವಣ್ಣನವರ ಹಲವಾರು ರೂಪಕಗಳು ಸಾಹಿತ್ಯಪ್ರಪಂಚದಲ್ಲಿಯೇ ಅನ್ಯಾದೃಶವಾಗಿವೆ.

"ಬಸವನೇ ಬಿಲ್ಲಾಳಾಗಿ, ಹೊಸಭಕ್ತಿ ಅಂಬಾಗಿ,
ಎಸೆದನಯ್ಯಾ ಆ ಲಿಂಗವನು ಗುಱಿಮಾಡಿ;
ಶಿಶುವ ಬಾಣಕೊಂಡು, ಬಸುಱಿಮಧ್ಯವ ತಾಗೆ,
ಹೊಸದೆಸೆಗಳೆಲ್ಲಾ ಕಾಣಬಂದುವಯ್ಯಾ;
ಭಸ್ಮದೆಣ್ಣೆಯ ಹೂಸಿ ಕೂಡಲಚನ್ನಸಂಗಯ್ಯನಲ್ಲಿ
ಬಸವ ಪೂಯುದ ಬಂದು ಆರೈದ ಲಿಂಗವನು."[೪]

---

೧. ಚಬವ. ೧೩೨. ೨. ಚಬವ. ೧೩೩. ೩. ಚಬವ. ೯೪೬. ೪. ಚಬವ. ೫೨.

ಇಲ್ಲಿ ಮೈದೋರಿದ ರೂಪಕ ಆಧ್ಯಾತ್ಮಿಕ ಪ್ರಪಂಚದಲ್ಲಿಯೂ ಸಾಹಿತ್ಯಸೃಷ್ಟಿಯಲ್ಲಿಯೂ ನೂತನವಾದುದು. ತನಗೆ ದೀಕ್ಷೆಯನ್ನಿತ್ತ ಬಸವಣ್ಣ ಬಿಲ್ಲಾಳಾಗಿರುವನು. ಆತನ ಹೊಸ ಭಕ್ತಿಯೇ ಬಾಣವಾಗಿರುವುದು. ಲಿಂಗವನ್ನೇ ಗುರಿಮಾಡಿ ಎಸೆದನಂತೆ, ಶಿಶುವಾದ ಅವರಿಗೆ ಆ ಬಾಣ ತಾಗಿ ಬಸುರ ಮಧ್ಯವನ್ನು ಪ್ರವೇಶಿಸಿ ಹೊಸಲೋಕಗಳನ್ನು ತೋರಿಸಿತಂತೆ. ಗುರುದೀಕ್ಷೆಯಿಂದಾದ ಅನುಭವವನ್ನು ಇದಕ್ಕಿಂತ ಬೇರೆ ಸುಂದರವಾಗುವಂತೆ ಹೇಳಲು ಸಾಧ್ಯವಿಲ್ಲವೆನಿಸುತ್ತದೆ. ಹೀಗೆ ಶಿಶುವು ಗಾಯಗೊಂಡಿರಲು ಬಸವ ಪೂಯದ (ಬೇಟೆಗಾರ)ನೇ ಬಂದು, ಭಸ್ಮದೆಣ್ಣೆಯನ್ನು ಹೂಸಿ ಆರೈದನಂತೆ. ಬಸವಣ್ಣ ಚನ್ನಬಸವಣ್ಣನವರ ಗುರು ಶಿಷ್ಯ ಸಂಬಂಧ ಇಲ್ಲಿ ಉಜ್ವಲವಾಗಿ ಪ್ರಜ್ವಲಿಸುತ್ತಿದೆ. ಇನ್ನೊಂದೆಡೆ ಇದೇ ಭಾವವನ್ನು ವಿವರಿಸುವಲ್ಲಿ ಗುರುವು ಗೂಳಿಯಾಗಿರುವನು. ಶಿಷ್ಯ ಮಣಕವಾಗಿರುವನು. ಮಗುದೊಂದೆಡೆ ಇನ್ನೊಂದು ರೂಪಕದಿಂದ ಇದೇ ಅಭಿಪ್ರಾಯವನ್ನು ವ್ಯಕ್ತಮಾಡಿರುವುದನ್ನು ನೋಡಬೇಕು.

**“ಆಚಾರವೆಂಬ ಬಿಲ್ಲಿಗೆ ವಿಚಾರವೆಂಬ ನಾರಿ**
**ಸಮತೆಯೆಂಬ ತಿರುವ ಮೆಟ್ಟಿ ಜೇವಡೆಗೈದು,**
**ಶಿಷ್ಯನೆಂಬ ಅಂಬ ತೊಡಚಿ,**
**ಗುರುವೆಂಬ ವ್ಯಾಧನು ಲಿಂಗವೆಂಬ ಬಯಲ ಗುಱಿಯನೆಚ್ಚಡೆ**
**ಗಱಿದೋಱದಂತೆ ಮುಳುಗಿಯಡಗಿತ್ತು.**
**ಆ ಗುಱಿಯನು ಬಾಣವನು ಅಱಸಲುಂಟೆ**
**ಕೂಡಲಚನ್ನಸಂಗಾ, ನಿಮ್ಮಲ್ಲಿ?”೧**

ರೂಪಕಗಳ ಮಾಲೆ ಕೂಡಲ ಚನ್ನಸಂಗಯ್ಯನ ಕೊರಳಲ್ಲಿ ಎಂದೂ ಬಾಡದ ಪುಷ್ಪಗಳಿಂದ ಶೋಭಿಸುವುದನ್ನು ನೋಡಬೇಕು:

**“ಕಾಯವೇ ಶಿವಾಲಯ, ಕಮಲಮಧ್ಯಮಂಟಪವೆ ಸುಖಾಸನ ನೋಡಯ್ಯಾ;**
**ಜ್ಞಾನರೂಢ ಪ್ರಾಣೇಶ್ವರನೆಂಬಾತನಲ್ಲಿಯ ದೇವರು;**
**ಒಂಬತ್ತು ಮಾನಿಸರು ತಂಡಾಲಯರು;**
**ಅಲ್ಲಿಪ್ಪ ಇಂಜಿನ ಮಠಪತಿ ಹಂಸಜೀಯನೆಂಬಾತ**
**ಆ ದೇವರ ಪೂಜಿಸುವ ತನ್ನ ದಳವಳಯವನೊಲ್ಲದೆ, ಲಿಂಗವೇ ಗೂಡಾದನು.**
**ಕೂಡಲಚನ್ನಸಂಗಾ, ನಿಶ್ಚಿಂತ ನಿಜೈಕ್ಯನು.”೨**

ಹೀಗೆ ಪ್ರಜ್ಞೆಯ ಬಲದಲ್ಲಿ ಬರುವ ರೂಪಕಗಳಿಗೆ ಕೊರತೆಯಿಲ್ಲ. ‘ಕಾಯವೆಂಬ ಪಟ್ಟಣಕ್ಕೆ’ ಎಂಬ ಸುದೀರ್ಘವಾದ ವಚನವನ್ನು ನೋಡಬಹುದು.

ಚನ್ನಬಸವಣ್ಣನವರು ಶರಣರೊಡನೆ ಸ್ವಯವಾಗುವಲ್ಲಿ ಅವರವರ ಗುಣಸ್ವಭಾವಗಳನ್ನು ಭಕ್ತಿಭಾವದಿಂದ ಗ್ರಹಿಸಿ, ಕವಿಸಹಜವಾದ ಶೈಲಿಯಲ್ಲಿ ಚಿತ್ರಿಸಿರುವರು. ಅವರ ಕಣ್ಣಲ್ಲಿ ಕಂಡ ಬಸವಣ್ಣನ ಮೂರ್ತಿಯನ್ನು ನೋಡಬೇಕು:

---

೧. **ಚಬವ.** ೧೪೫೧. ೨. **ಚಬವ.** ೧೦೭೮.

**"ಸಮತೆಯೆಂಬ ಕಂಥೆಯ ತೊಟ್ಟು,**
**ಸುಬುದ್ಧಿಯೆಂಬ ಟೊಪ್ಪರನಿಕ್ಕಿ,**
**ವಿಷಯವೆಂಬ ಹಾವುಗೆಯ ಮೆಟ್ಟಿ,**
**ತಮಂಧವೆಂಬ ಕುಣಿಯ ಬೀಳದೆ,**
**ಮದವೆಂಬ ಚೇಳ ಮೆಟ್ಟದೆ,**
**ವೈರಾಗ್ಯವೆಂಬ ಕೊಱಡನೆಡಹದೆ,**
**'ಭಕ್ತಿ ಭಿಕ್ಷಾಂದೇಹಿ' ಎಂದು ಬಸವಣ್ಣ ಕಪ್ಪಡಿಗೆ ಬಂದ**
**ಕೂಡಲ ಚನ್ನ ಸಂಗಮದೇವಾ."** [೧]

ಬಸವಣ್ಣನವರ ಚಿತ್ರವನ್ನು ರೂಪಿಸಬೇಕೆನ್ನುವವರು ಇಂತಹ ವಚನಗಳನ್ನು ಅವಶ್ಯವಾಗಿ ಗಮನಿಸಬೇಕು. ಅವರ ಅಂತರಂಗದ ಇರವನ್ನೂ ಬಹಿರಂಗದ ವೇಷವನ್ನೂ ಈ ವಚನ ಸುಂದರವಾಗಿ ಕನ್ನಡಿಸುತ್ತದೆ. ಇನ್ನೊಂದೆಡೆ, ಮೋಳಿಗೆಯ ಮಾರಯ್ಯನವರ ಕಾಯಕವೆಲ್ಲ ಕಾಯದಲ್ಲಿ ಮೈದೋರಿದಂತೆ ಚಿತ್ರಿಸಿರುವ ರೀತಿಯನ್ನು ನೋಡಬೇಕು.

**"ಹಸಿವು, ತೃಷೆ, ವಿಷಯವೆಂಬ ಮರಂಗಳನೆ ಕಂಡು**
**ಪರಿಣಾಮವೆಂಬ ಕೊಡಲಿಯಲ್ಲಿ ತತ್ತಱಿದಱಿದು**
**ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ**
**ತಱಿದೊಟ್ಟದನೊಂದೆಡೆಯಲ್ಲಿ,**
**ಪಂಚೇಂದ್ರಿಯ, ಷಡುವರ್ಗ, ಸಪ್ತಧಾತು, ಅಷ್ಟಮದವೆಂಬ ಬಳ್ಳಿಯ ಸೀಳಿ,**
**ಏಳು ಕಟ್ಟಿನ ಮೋಳಿಗೆಯನೆ ಹೊತ್ತು ನಡೆದನಯ್ಯಾ,**
**ಆಸೆ ಆಮಿಷ ತಾಮಸವೆಂಬ ತುರಗವನೇಱಿ**
**ಆತುರದ ತುರವನೆ ಕಳೆದನಯ್ಯಾ, ಈ ಮಹಾಮಹಿಮನು."** [೨]

ಈ ಮೇರೆಗೆ ಚನ್ನಬಸವಣ್ಣನವರ ಅನುಭವವು ವಿಶ್ವದ ಒಳಹೊರಗೆ ಸಂಚರಿಸಿ, ಲೌಕಿಕ ಅಲೌಕಿಕ ಪಾರಲೌಕಿಕವಾಗಿ ಹಬ್ಬುತ್ತ, ಅದೃಷ್ಟಕ್ಕೆ ದೃಷ್ಟವನ್ನು ಕೊಟ್ಟು, ನಿರಾಕಾರವನ್ನು ಆಕಾರಕ್ಕೆ ತಂದು, ನಿರುಪಮನನ್ನು ಉಪಮೆಗಳಲ್ಲಿ ತೋರಿ, ಅಪ್ರತಿಮನನ್ನು ಪ್ರತಿಮೆಗಳಲ್ಲಿ ಕಂಡರಸಿ ಆತ್ಮಸಾಹಿತ್ಯವಾಗಿ, ವಿಶ್ವಸಾಹಿತ್ಯವಾಗಿ ಕೃತಾರ್ಥವಾಗಿದೆ.

ಅವರ ಶೈಲಿಯಲ್ಲಿ 'ಧ್ವನಿ' ಧುಮ್ಮಿಕ್ಕುವುದನ್ನು ಕಾಣಬೇಕು. ಆ ಧ್ವನಿಯೇ ಉತ್ತಮ ಕಾವ್ಯದ ಸಲ್ಲಕ್ಷಣ. ಕೆಳಗಣ ಉಕ್ತಿಗಳಲ್ಲಿ ಕಾಣುವ ಧ್ವನಿಯನ್ನು ಅರ್ಥೈಸಿ ಅನುಭವಿಸಿ ಆನಂದಪಡಬೇಕು.

೧. 'ಶರಣರು ಸಾಣೆಯಲ್ಲಿ ಸವೆವ ಶ್ರೀಗಂಧದಂತಿರಬೇಕು.'
೨. 'ಗುರುವಾದಾತ ಸೊನ್ನೆಗಾಱನಾಗಬೇಕು.'
೩. 'ಶಿಷ್ಯನಾದಾತ ಜೆವಹಾರಿಯಾಗಬೇಕು.'

---

೧. **ಚಬವ.** ೧೧೨೧. ೨. **ಚಬವ.** ೨೭೬.

೪. ‘ಬಟ್ಟ ಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವಿನ್ನೆಲ್ಲಿಯದೋ?’

೫. ಮೇಘ ನಿರ್ಮಲ ಜಲವೆಲ್ಲ ಮುತ್ತಾದಡೆ. ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಯದೋ?’

೬. ‘ಕಣ್ಣಱಿಯದಿದ್ದಡೆಯೂ ಕರುಳಱಿಯಬೇಡವೆ?’

೭. ‘ವಿಷದ ಕೊಡವ ತುಡುಕಲೆ ಬಾರದು.’

೮. ಹೆಗ್ಗಣವನಿಕ್ಕಿ ನೆಲಗಟ್ಟ ಕಟ್ಟಿದಂತೆ.’

೯. ‘ಮಡಿಲ ಸುತ್ತಿದ ಹಾವಿನಂತೆ ಮಡಿಲಲ್ಲಿ ಕಟ್ಟಿದಡೇನೋ?’

೧೦. ‘ಮಹಾ ಮೇರುವಿನ ಮಱೆಯಲಿರ್ದು ತನ್ನ ನೆಳಲನಱಸುವ ಭಾವಭ್ರಮಿತರ ಮೆಚ್ಚ.’

೧೧. ‘ಅಶನ ಮರಳುವುದಲ್ಲದೆ ರುಚಿ ಮರಳಲುಂಟೆ?’

೧೨. ‘ಸುಳಿವ ಜಂಗಮು ಕಾಲಿಲ್ಲದೆ ಸುಳಿಯಬೇಕು.’

೧೩. ‘ಮಾಡುವ ಭಕ್ತ ಕೈಯಿಲ್ಲದೆ ಮಾಡಬೇಕು.’

ಈ ಉಕ್ತಿಗಳಲ್ಲಿ ಧ್ವನಿ, ಕಾವ್ಯನಿನಾದ ಮಾಡುತ್ತ ನಿಂತಿದೆ. ಅಲ್ಲಿರುವ ಲೋಕಾನುಭವ ಅಪ್ರತಿಮ. ಅರ್ಥ, ಆನಂದ ಕೊನೆಯಿಲ್ಲದಷ್ಟು. ಇಂತಹ ಧ್ವನಿ ಅವರ ವಚನಗಳ ತುಂಬ ಚೆಲ್ಲವರಿದು ಚನ್ನಬಸವಣ್ಣನವರ ವಚನಗಳಿಗೆ ಸಾಹಿತ್ಯ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವನ್ನು ಕಲ್ಪಿಸಿದೆ.

ವಚನ ಸಾಹಿತ್ಯ ಜನಸಾಮಾನ್ಯದ ಜೀವನದಿಂದ ಅಂಕುರಿಸಿ, ಅವರ ನುಡಿಗಡಣದ ಬೆಡಗಿನಲ್ಲಿಯೇ ಮುನ್ನಡೆಯುತ್ತಿದೆ. ಆದುದರಿಂದ ಕನ್ನಡ ನುಡಿಯ ಮಾತಿನ ಹಲವಾರು ರೀತಿಗಳನ್ನು, ಅಭಿವ್ಯಕ್ತಿಯ ಕೆಲವು ಸಾಧನಗಳನ್ನು ಚನ್ನಬಸವಣ್ಣನವರ ವಚನಗಳಲ್ಲಿ ಕಾಣಬಹುದು.

“ಉಚ್ಛಿಷ್ಟದ ಉದಕದೊಳಗೆ ಚಂದ್ರಮನ ನೆಳಲಿದ್ದಡೇನು,
ಅಲ್ಲಿ ಚಂದ್ರಮನಿದ್ದಾತನೇ?
ಸಂಸಾರದ ವ್ಯಾಪ್ತಿಯಲ್ಲಿ ಶರಣನ ಕಾಯವಿರ್ದಡೇನು,
ಅಲ್ಲಿ ಶರಣನಿದ್ದಾತನೇ?”[೧]

“ಕಾದನಂತೆ! ಕಣನೇಱಲೇಕೋ?
ನಪುಂಸಕನಂತೆ! ಗಣಿಕಾಸ್ತ್ರೀ ಏಕೋ?
ನಡೆಯ ಹೆಣನಂತೆ! ನುಡಿಯಲೇಕೋ?
ಪುರಾತನರು ನುಡಿದಂತೆ ನಡೆಯದವರೆಲ್ಲ
ಹಾಳೂರೊಳಗೆ ನರಿ, ಗುಳ್ಳೆಯ ತಿಂದು ಬಗುಳಿದಂತೆ.”[೨]

---

೧. ಚಬವ. ೭೯೩. ೨. ಚಬವ. ೩೯೬.

**ಊರ ಮುಂದೆ ಸೊಣಕನ ಕಾಣಬಹುದಲ್ಲದೆ,**
**ಸಿಂಹನ ಕಾಣಬಾರದು.**
**ಸರದೊಳಗೆ ಕಾಜಿನ ಮಣಿಯು ಕಾಣಬಹುದಲ್ಲದೆ,**
**ರತ್ನವ ಕಾಣಬಾರದು.**
**ನದಿಯು ಮುಂದೆ ಬಕನ ಕಾಣಬಹುದಲ್ಲದೆ,**
**ಹಂಸನ ಕಾಣಬಾರದು.**
**ಧರೆಯು ಮೇಲೆ ವೇಷಧಾರಿಗಳ ಕಾಣಬಹುದಲ್ಲದೆ,**
**ಶಿವಜ್ಞಾನಿಗಳ ಕಾಣಬಾರದು"**[೧]

ಹೀಗೆ ಮಾತಿನ ರೀತಿಯಲ್ಲಿ ವೈವಿಧ್ಯವನ್ನು ತೋರಿ, ಕಲಾವಿದನ ಸೂಕ್ಷ್ಮಾಂಶ ಗಳನ್ನು ಪ್ರಕಟಪಡಿಸಿರುವರು. ಅವರ ವಚನಗಳಿಂದ ಕನ್ನಡ ಶಬ್ದಭಂಡಾರಕ್ಕೆ, ವಾಕ್ಯ ರಚನೆಗೆ ಹೇರಳವಾದ ಶ್ರೀಮಂತಿಕೆ ಪ್ರಾಪ್ತವಾಗಿದೆ.

ಯಾವ ಕೋಶದಲ್ಲಿಯೂ ಪ್ರವೇಶವಾಗದ ಅನೇಕ ಹೊಸ ಶಬ್ದ ಸಂಪತ್ತಿಯನ್ನು ಚನ್ನಬಸವಣ್ಣನವರ ವಚನಗಳಲ್ಲಿ ವಿಪುಲವಾಗಿ ಕಾಣಬಹುದು. ಕನ್ನಡ ಸಾಹಿತ್ಯಕ್ಕೆ, ತನ್ಮೂಲಕ ವಿಶ್ವಸಾಹಿತ್ಯಕ್ಕೆ ಚನ್ನಬಸವಣ್ಣನವರ ಕಾಣಿಕೆ ಉನ್ನತವಾದುದೆಂಬುದು ಇದು ವರೆಗಣ ವಿವೇಚನೆಯಿಂದ ವಿದಿತವಾಗಿರಲು ಸಾಕು. ಅವರ ವಚನಗಳಲ್ಲಿ ಬಸವಣ್ಣನವರ ಭಾವದ ತೀಕ್ಷ್ಣತೆ ಇರದಿದ್ದರೂ, ಪ್ರಭುದೇವರ ವಚನಗಳ ಗಾರುಡಿಗತನವಿರದಿದ್ದರೂ, ಅವೆರಡನ್ನೂ ಒಳಗೊಂಡು ಅವು ನೂತನ ಸೃಷ್ಟಿಯಾಗಿವೆ. ಭಾವ, ಪ್ರಜ್ಞೆಯ ಹಿಡಿತಕ್ಕೆ ಸಿಕ್ಕು, ಗಾರುಡಿಗತನ, ಸ್ಪಷ್ಟತೆಯ ಸೀಮೆಯನ್ನು ಸೇರಿ, ಚನ್ನಬಸವಣ್ಣನವರ ವಚನಗಳು ವಚನವಾಙ್ಮಯದಲ್ಲಿ ವಿಶಿಷ್ಟಸ್ಥಾನವನ್ನು ಪಡೆದಿವೆ. ಚನ್ನಬಸವಣ್ಣನವರ ಸೂಕ್ತಿಸುಧಾ ಸಾರವನ್ನು ಬಯಸುವವರು ಕೆಳಗಣ ಉಕ್ತಿಗಳನ್ನು ಗಮನಿಸಬಹುದು.

## ಚನ್ನಬಸವಣ್ಣನವರ ಸೂಕ್ತಿಸುಧೆ

೧. ಅಗ್ಗಣಿಯೆ ಆಣೆಕಲ್ಲಾದಂತೆ.

೨. ಅಟ್ಟುದ ಅಡುವರೆ? ಸುಟ್ಟುದ ಸುಡುವರೆ? ಬೆಂದನುಲಿಯ ಸಂಧಿಸ ಬಹುದೆ? ಪಂಚಾಕ್ಷರಿಯಲ್ಲಿ ದಗ್ಧನಾದ ನಿರ್ದೇಹಿಗೆ ದೇಹವುಂಟೆ?

೩. ಅನುಭಾವವೆಂಬುದು ನೆಲದ ಮಱೆಯ ನಿಧಾನ; ಶಿಶು ಕಂಡ ಕನಸು.

೪. ಅಂತರಂಗದ ಭಕ್ತಿ ಹಾದರಗಿತ್ತಿಯ ತೆಱನಂತೆ; ಬಹಿರಂಗದ ಭಕ್ತಿ ವೇಸಿಯ ತೆಱನಂತೆ.

೫. ಅಂಧಕನ ಕೈಯ ಅಂಧಕ ಹಿಡಿದಂತೆ.

೬. ಅಂಧಕನು ಓಡಹಿಡಿದು, ತನ್ನ ಸ್ವರೂಪವ ತಾ ನೋಡುವಂತೆ.

---

೧. **ಚಬವ.** ೪೨೦.

೭. ಅರಸಿನ ಹೆಸರಿಟ್ಟ ಅನಾಮಿಕನಂತೆ ನಾಮಕ್ಕಱುಹರಲ್ಲದೆ, ಪಟ್ಟಕ್ಕಱುಹರಪ್ಪರೆ?
೮. ಅರಸಿನ ಹೆಸರಿನ ಅನಾಮಿಕಂಗೆ ಅರಸೊತ್ತಿಗೆಯ ಸಿರಿ ದೊರೆಯದಂತೆ.
೯. ಅಱಸುವಂಗೆ ಅಱಕೆ ಸಾಧ್ಯವಪ್ಪುದು ತಪ್ಪದು ನೋಡಾ.
೧೦. ಅಱದಾಗಲೆ ಇದ್ದಿತ್ತು, ಮಱದಾಗಲೆ ಬಿದ್ದಿತ್ತು.
೧೧. ಅಱವೆ ಗುರು; ಅನುಭಾವವೆ ಲಿಂಗ.
೧೨. ಅಶನ ಮರಳುವುದಲ್ಲದೆ ರುಚಿ ಮರಳಲುಂಟೆ?
೧೩. ಆದ್ಯರ ವಚನವೇನು ಬಟ್ಟೆಯ ಸಂಬಳವೆ? ಮನೆಯ ಮನೆಯ ಹೊಕ್ಕು ಬೋಧಿಸುವಂತಾಗಿ, ಮನೆಯ ಮನೆಯ ಹೊಕ್ಕು ಮುಟ್ಟಿಸುವಂತಾಗಿ.
೧೪. ಇನಿಗಬ್ಬಿನೊಳಗಿನ ತನಿರಸವನಱಯದೆ, ಸೋಗೆಯ ಹೊಱಗಿನ ರವದಿಯ ಸವಿದು ಸಂತಸಬಡುವ ಮೇಷನಂತೆ.
೧೫. ಇಂಗಡಲಣುಗನ ಕೂಡಿದ ಪತಂಗನು.
೧೬. ಇಂತಿವರ ಬದುಕು, ಹುಲಿ ಕಪಿಲೆಯ ತಿಂದು ಮಿಕ್ಕುದ ನರಿ ತಿಂಬಂತೆ.
೧೭. ಉದಕದೊಳಗಣ ಬಿಂದುವಿನ ಉದಯರತ್ನದಂತೆ ನಿಮ್ಮ ಶರಣನ ನಿಲವು.
೧೮. ಉದಯಾಸ್ತಮಾನವೆಂಬ ಕೊಳಗದಲ್ಲಿ ಆಯುಷ್ಯವೆಂಬ ರಾಸಿಯನಳೆವರು.
೧೯. ಉಪಾಧಿವಿಡಿದು ಉಪದೇಶ ಮಾಡುವಾತ ಗುರುವಲ್ಲ; ಉಪಾಧಿವಿಡಿದು ಉಪದೇಶ ಮಾಡಿಸಿಕೊಂಬಾತ ಶಿಷ್ಯನಲ್ಲ. ಇವರಿಬ್ಬರ ನಿಲವು ಠಕ್ಕನ ಮನೆಗೆ ಠಕ್ಕ.
೨೦. ಊರಮುಂದೆ ಸೊಣಗನ ಕಾಣಬಹುದಲ್ಲದೆ, ಸಿಂಹನ ಕಾಣಬಾರದು.
೨೧. ಒಂದೆರಡೆಣಿಕೆಯ ಉದಯಾಸ್ತಮಾನವುಂಟೆ ಆತ್ಮನಿತ್ತುವಿಂಗೆ? ಉಪಾಧಿಯಿಲ್ಲದುಪಮೆ, ಭಾವವಿಲ್ಲದ ಭರಿತ, ಇಂದ್ರಿಯವಱತ ಪ್ರಕಾಶ ನೋಡಿರೆ ! ಕಾರಣವಿಲ್ಲದ ಕಾರ್ಯ, ಕೇಳಲಿಲ್ಲದ ಉಲುಹು, ಬೇಡಲಿಲ್ಲದ ಪದವಿಯ ತೋಱ, ಆದಿಯಂತ್ಯವಿಲ್ಲದ ತೃಪ್ತಿಯಡಗಿದ.
೨೨. ಓಡ ಹಿಡಿದು ಮಸಿಯಾಗಲೇಕೆ?
೨೩. ಕಣ್ಣಱಯದಿದ್ದಡೆಯೂ ಕರುಳಱಯಬೇಡವೆ?
೨೪. ಕತ್ತಲೆಯ ಮನೆಯಲ್ಲಿದ್ದ ಮನುಜನು ಜ್ಯೋತಿಯನೆನಿತು ಹೊತ್ತು ನೆನೆ-ದಡೆಯು ಬೆಳಕಾಗಬಲ್ಲುದೆ, ಬೆಂಕಿಯ ಹೊತ್ತಿಸದನ್ನಕ್ಕ?
೨೫. ಕಬ್ಬುನಗಿದ ಗಾಣ ಬಲ್ಲುದೆ, ಹಾಲ ಸವಿಯ?
೨೬. ಕಬ್ಬುನದ ಸೊಣಗನ ತಂದು ಪರುಷವ ಮುಟ್ಟಿಸಲೊಡನೆ, ಹೊನ್ನ ಸೊಣಗನಪ್ಪುದಲ್ಲದೆ ಪರುಷನಾಗದು ನೋಡಾ.
೨೭. ಕರುಳು ಕೊಳ್ಳದ ವಿಧಾನವ ಮರಳಿ ಅರ್ಪಿತವೆಂದು ಕೊಳಬಹುದೆ?
೨೮. ಕಾಡುಗಿಚ್ಚಿನ ಕೈಯಲ್ಲಿ ಕರಡವ ಕೊಯ್ಸಿದಂತಿರಬೇಕು ಭಕ್ತ. ಹಿಂದೆ ಮುಂದೆ ಮೆದೆ ಇಲ್ಲ.

೨೯. ಕಾಯವೆಂಬ ಘಟಕ್ಕೆ ಕರಣಾದಿಗಳೇ ಸಯಿಧಾನ.

೩೦. ಕಿಱಿದಾದ ಬೀಜದಲ್ಲಿ ಹಿರಿಯ ತರುವಡಗಿದ ಪರಿಯಂತೆ; ಕರಗತವಾದ ಕನ್ನಡಿಯಲ್ಲಿ ಕರಿ-ಗಿರಿಗಳು ತೋಱುವ ಪರಿಯಂತೆ.

೩೧. ಕುಱಿ ಬಲ್ಲುದೆ ರಸವಾಳಿ ಕಬ್ಬಿನ ಸ್ವಾದವ?

೩೨. ಕೈಸೇರಿದ ರತ್ನವನೊಗೆದು ಕಾಜಿನ ಗುಂಡನು ಕೊಂಡ ಮರುಳನಂತೆ.

೩೩. ಕೊರಳ ಸುತ್ತಿದ ಹಾವಿನಂತೆ ಕೊರಳಲ್ಲಿ ಕಟ್ಟಿದಡೇನು?

೩೪. ಕ್ಷೀರ ಸೋಂಕಿದ ಜಲವ ಬೇಱೆ ಮಾಡಬಹುದೆ? ಪರಿಮಳವ ಸೋಂಕಿದ ವಾಯುವ ವಿವರಿಸಬಹುದೆ?

೩೫. ಗಗನದಲಾಡುವ ಪಕ್ಷಿ ಬಲ್ಲುದೆ, ರವಿಯ ನಿಲವ?

೩೬. ಗುಬ್ಬಿ ಹೆಱರ ಮನೆಯ ತನ್ನ ಮನೆ ಎಂಬಂತೆ.

೩೭. ಗುರುವಾದಾತ ಸೊನ್ನೆಗಾಱನಾಗಬೇಕು; ಶಿಷ್ಯನಾದಾತ ಬೆವಹಾರಿಯಾಗ ಬೇಕು.

೩೮. ಗೋವಿನ ಹೊಟ್ಟೆಯಲ್ಲಿ ಘೃತವಿದ್ದಡೇನೋ, ಆ ಗೋವು ದಿನ ದಿನಕ್ಕೆ ಪುಷ್ಟವಾಗಬಲ್ಲುದೆ?

೩೯. ಚದುರ ಬಿದಿರನೆ ಬಿತ್ತುವ.

೪೦. ಚಾಂಡಾಲಭಾಂಡದಲ್ಲಿ ಭಾಗೀರಥಿಯುದಕವ ತುಂಬಿದಡೇನೊ, ಶುದ್ಧ ವಾಗಬಲ್ಲುದೆ?

೪೧. ಜಲದಲ್ಲಿ ಹುಟ್ಟಿದ ಕೆಸಱು, ಕ್ಷೀರದಲ್ಲಿ ತೊಳೆದಡೆ ಹೋಹುದೆ, ಜಲದಲ್ಲಿ ತೊಳೆದಲ್ಲದೆ?

೪೨. ಜ್ಞಾನದೀಪ್ತಿಯ ಬೆಳಗುವ ತೈಲವಾವುದೆಂದಡೆ: ಶಿವಶರಣರ ನುಡಿಗಡ ಣದ ಒಸರು.

೪೩. ಜ್ಞಾನಿಗೆ ಕತ್ತಲೆಯಿಲ್ಲ, ಅಜಾತಂಗೆ ಹೊಲೆಯಿಲ್ಲ.

೪೪. ತಾಯ ಮಾಱಿ ತೊತ್ತ ಕೊಂಬುವರನೇನೆಂಬೆನಯ್ಯಾ?

೪೫. ತಿಳಿದುಪ್ಪ, ಘಟ್ಟಿದುಪ್ಪಕ್ಕೆ ಭೇದವುಂಟೆ? ದೀಪಕ್ಕೆ ದೀಪ್ತಿಗೆ ಭಿನ್ನವುಂಟೇ?

೪೬. ತುರುಬಾಗಲಿ ಬೋಳಾಗಲಿ ಜಡೆಯಾಗಲಿ ಅಱಿವುಳ್ಳಡೆ ಜಂಗಮ.

೪೭. ದಾಸಿಯ ಸಂಗ, ಕಸ ನೀರ ಹೊಱಿಸಿತ್ತು; ವೇಸಿಯ ಸಂಗ ಎಂಜಲ ತಿನಿಸಿತ್ತು.

೪೮. ನಿಜಕ್ಕೆ ನಾನು ನೀನೆಂಬೊಂದು ಪ್ರತಿಯುಂಟೆ?

೪೯. ನಿತ್ಯವೆಂಬ ಭಕ್ತನ ಮನೆಗೆ ಘನ ಚೈತನ್ಯವೆಂಬ ಜಂಗಮ ಬಂದಡೆ, ಜಲ ವಿಲ್ಲದ ಜಲದಲ್ಲಿ ಪಾದಾರ್ಚನೆಯ ಮಾಡಿವಡೆ, ಆ ಪಾದೋದಕವೇ ಮಹಾ ಪಾದೋದಕವಯ್ಯಾ.

೫೦. ನಿರಾಳನ ಬಯಸಿ ಬಯಲು ಬೆಸಲಾಯಿತ್ತು.

೫೧. ನಿರಾಳ ಸಿಂಹಾಸನದ ಮೇಲೆ ನಿರವಯ ಬಂದೆಱಗಿದಡೆ, ಆ ನಿರಾಕಾರ ಪದಾರ್ಥವನರ್ಪಿಸಿ ಪ್ರಸನ್ನತೆಯ ಪಡೆದ ಬಸವಣ್ಣ.

೫೨. ನೈ ಹತ್ತದ ನಾಲಗೆಯಂತೆ, ಕಾಡಿಗೆ ಹತ್ತದ ಆಲಿಯಂತೆ, ಧೂಳು ಹತ್ತದ ಗಾಳಿಯಂತೆ, ಜಲ ಹತ್ತದ ಜಲಜದಂತೆ, ಉಷ್ಣ ಹತ್ತದ ಅಗ್ನಿಯಂತಿರ್ಪ ನಿಮ್ಮ ಶರಣ.

೫೩. ಪರುಷದ ಪರ್ವತದಲ್ಲಿ ಕಬ್ಬುನವುಂಟೆ?

೫೪. ಪರುಷದ ಪುತ್ಥಳಿಯ ಬಸುಱಲ್ಲಿ ಅವಲೋಹ ಹುಟ್ಟುವುದೇ ಅಯ್ಯಾ?

೫೫. ಪಾತಾಳದಗ್ಗವಣಿಯ ನೇಣಿಲ್ಲದೆ ತೆಗೆಯಬಹುದೆ? ಸೋಪಾನಬಲ ದಿಂದಲ್ಲದೆ.

೫೬. ಬಟ್ಟಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವೆಲ್ಲಿ ಯದು?

೫೭. ಬಂದುದೇ ಓಗರ, ನಿಂದುದೇ ಪ್ರಸಾದ.

೫೮. ಬಯಲಲೊದಗಿದ ಘನವು ನಿಮ್ಮ ಶರಣ.

೫೯. ಬಱದ ನಾಡುಗಳಿಂದ ಬಂದ ಬಣಗುಗಳಂತೆ.

೬೦. ಬಾಗಿಲ ಕಾಯ್ದಿರ್ದ ಗೊಲ್ಲಂಗೆ ಪೆಚ್ಚಕ್ಕೆ ಒಡೆತನವುಂಟೆ?

೬೧. ಬಾವನ್ನದ ವೃಕ್ಷ ಊರೊಳಗಿರ್ದಡೇನು, ಅಡವಿಯೊಳಗಿರ್ದಡೇನು? ಪರಿಮಳ ಒಂದೇ.

೬೨. ಬಿತ್ತಿದ ಬೀಜದ ಫಲವು ವಿಪರೀತ ಚಾರಿತ್ರ ನೋಡಾ.

೬೩. ಬುತ್ತಿಯ ಕಟ್ಟಿ ಹೊಟ್ಟೆಯ ಮೇಲಿಕ್ಕಿಕೊಂಡಿರ್ದಡೆ, ಹಸಿವು ಹೋಗಿ ಆಪ್ಯಾಯನವಳವಡುವುದೆ?

೬೪. ಬೆಲ್ಲದ ನೀರೆಱೆದಡೇನು, ಬೇವು ಸಿಹಿಯಪ್ಪುದೆ?

೬೫. ಬೇವಿನ ಹಣ್ಣು ಕಾಗೆಗಲ್ಲದೆ, ಕೋಗಿಲೆಗಲ್ಲ.

೬೬. ಮಂಚ ಒಂದೇ, ಕಂಚು ಬೇಱೆ ಎಂಬ ಪ್ರಪಂಚದ ಸೊಲ್ಲ.

೬೭. ಮಂಜಿನ ಗುಱಿಯ ಬಿಸಿಲ ಅಂಬಿನಲ್ಲಿ ಎಚ್ಚಡೆ, ಕರ ಹೊಸತಾಯಿತ್ತಲ್ಲಾ.

೬೮. ಮಂಜಿನ ಮೋಹದ ರವಿಯ ಕಿರಣವ ಕೆಡಿಸಲಾಪುದೆ?

೬೯. ಮಡಿಲ ಸುತ್ತಿದ ಹಾವಿನಂತೆ ಮಡಿಲಲ್ಲಿ ಕಟ್ಟಿದಡೇನು?

೭೦. ಮಣ್ಣಿಲ್ಲದ ಮರನುಂಟೆ, ಮರನಿಲ್ಲದ ಹಣ್ಣುಂಟೆ, ಹಣ್ಣಿಲ್ಲದ ಸ್ವಾದ ವುಂಟೆ?

೭೧. ಮಧುರದ ಗುಣ ಇರುವೆ, ವೇಳೆಯ ಗುಣ ಕೋಳಿ, ಗೋತ್ರದ ಗುಣ ಕಾಗೆ ಬಲ್ಲುದು.

೭೨. ಮಹಾಮೇರುವಿನ ಮಱೆಯಲಿರ್ದು ತನ್ನ ನೆಳಲನಱಸುವ ಭಾವಭ್ರಮಿ ತರ ಮೆಚ್ಚ.

೭೩. ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ?

೭೪. ಮೇಘ ನಿರ್ಮಲ ಜಲವೆಲ್ಲ ಮುತ್ತಾದಡೆ, ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಯದೊ?

೭೫. ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೆ?

೭೬. ಲೋಕದ ನುಡಿ ತನಗೆ ಡೊಂಕು, ತನ್ನ ನುಡಿ ಲೋಕಕ್ಕೆ ಡೊಂಕು.

೭೭. ವಜ್ರವ ಗೊಱಲೆ ಮುಟ್ಟಬಹುದೇ ಅಯ್ಯಾ?

೭೮. ವಿಷದ ಕೊಡನ ತುಡುಕಲೆ ಬಾರದು.

೭೯. ವ್ಯಾಕುಳವೆ ಭವ, ನಿರಾಕುಳವೆ ನಿರ್ಭವ.

೮೦. ವೃಕ್ಷದ ಕೊನೆಗಳಿಗೆ ಉದಕವ ನೀಡಿದಡೆ ಫಲವಹುದೆ, ಬೇರಿಂಗೆ ನೀಡಬೇಕಲ್ಲದೆ?

೮೧. ಶರಣರು ಸಾಣೆಯಲ್ಲಿ ಸವೆವ ಶ್ರೀಗಂಧದಂತಿರಬೇಕು.

೮೨. ಶರಣರು ಮಲೆಯೊಳಗಿರ್ದಡೇನು, ಮೊಲೆಯೊಳಗಿರ್ದಡೇನು?

೮೩. ಶಶಿಧರನಟ್ಟಿದ ಬೆಸನದೊಳಗೆ ಎವೆಮಾತ್ರವೆ ಪೂರೈಸಲು.

೮೪. ಸತಿ ಪತಿಯ ಒಲುಮೆಯ ಮುನಿಸು ಅತಿ ಬೇಟವೆಂಬುದು ತಪ್ಪದು.

೮೫. ಸವೆಯುದ ಮುನ್ನವೆ ಸಯವಾಗಲುಂಟೆ?

೮೬. ಸಂತೆಯ ನೆಱವಿಯಲ್ಲಿ ಅಭಿಮಾನದ ಮಾತು ಮಾಱಬಹುದೆ? ಬೀದಿಯಲ್ಲಿ ನಿಂದು ನುಡಿವ ಅನುಭಾವದ ಱಚ್ಚೆ, ನಗೆಗೆಡೆ ನೋಡಯ್ಯಾ.

೮೭. ಸಿಡಿಲ ಮಿಂಚಿನ ಬೆಳಗನೊಂದೆಡೆಯಲ್ಲಿ ಹಿಡಿಯಲುಂಟೆ?

೮೮. ಸುಳಿವ ಜಂಗಮ ಕಾಲಿಲ್ಲದೆ ಸುಳಿಯಬೇಕು; ಮಾಡುವ ಭಕ್ತ ಕೈಯಿಲ್ಲದೆ ಮಾಡಬೇಕು.

೮೯. ಸೂತ್ರದ ಬೊಂಬೆಗೆ ಪ್ರಾಣವುಂಟೆ?

೯೦. ಸೂಳೆಯ ಮಗ ಮಹಳವ ಮಾಡಿದಡೆ, ತಾಯ ಹೆಸರಾಯಿತ್ತು; ತಂದೆಯ ಹೆಸರಿಲ್ಲ.

೯೧. ಸ್ಥಲದಿಂದ ನಡೆ ನುಡಿಯಾಯಿತ್ತು; ನಿಸ್ಥಲದಿಂದ ನಡೆ ನುಡಿಗೆಟ್ಟಿತ್ತು.

೯೨. ಹಂಸೆಗೆ ಹಾಲನೆಱೆವರಲ್ಲದೆ, ಹುಳಿಯನೆಱೆವರೆ?

೯೩. ಹಾಲುಂಡ ಸವಿಯು ಮೇಲುಪಱ್ತಿಯ ಹೇಳಬಹುದಲ್ಲದೆ, ಸುಖಸೋಂಕಿನ ಸ್ವಾನುಭಾವವ ಹೇಳಬಾರದು.

೯೪. ಹಾಲು ಹಿಡಿದು ಬೆಣ್ಣೆಯನಱಸಲುಂಟೆ?

೯೫. ಹೆಗ್ಗಣವನಿಕ್ಕಿ ನೆಲಗಟ್ಟ ಕಟ್ಟಿದಂತೆ.

೯೬. ಹೇಮಗಿರಿಯ ಕದ್ದು ಭೂಮಿಯಲಡಗಿಸಿಹೆನೆಂದಡೆ, ಆ ಕಳವು ಸಿಕ್ಕದೆ ಮಾಣ್ಬುದೆ?

೯೭. ಹೊಂಗಿದ ಪುಷ್ಪದ ಪರಿಮಳವನುಂಡೆಳ್ಳವು ತಮ್ಮಂಗವ ಬಿಟ್ಟುಹೋಹಾಗ ಕಮ್ಮೆಣ್ಣೆಯಾಗದಿರ್ಪುದೆ?

# ವ್ಯಕ್ತಿತ್ವ-ಪ್ರಭಾವಮುದ್ರೆ

"ಕಂಗಳ ನೋಟ, ಹೃದಯದ ಜ್ಞಾನ; ಮನದೊಳಗೆ
ಮಾತಾಡುತ್ತಿರ್ದೆನಯ್ಯಾ.
ಜೇನಮಳೆಗಳು ಕಱೆದವು; ಅಮೃತದ ಕಳೆಗಳು ಸುರಿದವು.
ಕೂಡಲಚನ್ನಸಂಗನೆಂಬ ರಸಸಾಗರದೊಳಗೋಲಾಡುತ್ತಿರ್ದೆನಯ್ಯಾ"[೧]

"ಸ್ಥಲವೆಂದೆನ್ನೆ, ನಿಃಸ್ಥಲವೆಂದೆನ್ನೆ; ನಿರ್ಣಯವೆನಗಾದ ಬಳಿಕ
ಏನೆಂದಱಿಯೆನಯ್ಯಾ.
ಇದುಕಾರಣ, ಕೂಡಲ ಚನ್ನಸಂಗಯ್ಯಾ ಲಿಂಗೈಕ್ಯವೆಂದೆನ್ನೆ."[೨]

ಚನ್ನಬಸವಣ್ಣನವರು ಸ್ವಲೀಲಾನಂದವಿಲಾಸದಲ್ಲಿದ್ದ ಭಾವಗಳನ್ನು ಇಲ್ಲಿ ವಚನಿಸಿರುವರು. ಇದು ಅವರು ಮುಟ್ಟಿದ ಎತ್ತರದ ಒಂದು ಹಂತ. ಸುಜ್ಞಾನವೇ ಮೈವೆತ್ತು ಬಂದಂತಿದ್ದ ಚನ್ನಬಸವಣ್ಣನವರು ಇಂತಹ ಸಹಜಸ್ಥಿತಿಯನ್ನು ಪಡೆಯಬೇಕಾದರೆ ಸಾಧನ ಮಾರ್ಗ ನಿರಂತರ ನಡೆದಿದೆ. ಷಟ್‌ಸ್ಥಲಸಾಧನೆಗೆ ಅಂತರಂಗನಿರೀಕ್ಷಣೆ, ಆತ್ಮಾನುಸಂಧಾನ, ಭಕ್ತಿಯ ಉದಯ ಇವು ಕಾರಣವಾಗುತ್ತವೆ. ಪ್ರಸಾದಕಾಯರಾಗಿ ಜನಿಸಿದ ಚನ್ನಬಸವಣ್ಣನವರೂ ಅಂತರಂಗನಿರೀಕ್ಷಣೆಯನ್ನು ಮಾಡಿಕೊಳ್ಳದೆ ಹೋಗಿಲ್ಲ.

"ಆನು ಶುದ್ಧಧವಳಿತನು; ಎನಗೆ ಅನಾದಿ ಬಂದು ಹೊದ್ದಿದ
ಕಾರಣವೇನಯ್ಯಾ ?
ಜಗವ ಮೊಗೆಯಲು ಬಂದೆನೇಕಯ್ಯಾ ?
ಗಿಡುವ ಹಱಿಯಲು ಬಂದೆನೇಕಯ್ಯಾ ?
ಎಲ್ಲರ ನಡುವೆ ಕುಳ್ಳಿರ್ದು, ಗೀತವ ಪಾಡಬಂದೆನೇಕಯ್ಯಾ ?
ಚನ್ನಬಸವಣ್ಣನೆಂಬೆರಡು ಶಬ್ದವೇಕಯ್ಯಾ, ಕೂಡಲ ಚನ್ನಸಂಗಮದೇವಯ್ಯಾ ?"[೩]

ಶರಣರ ಮಧ್ಯದಲ್ಲಿ ಕುಳಿತು ಗೀತವ ಪಾಡುತ್ತಿರ್ದ ಚನ್ನಬಸವಣ್ಣನವರೇ ಸ್ವತಃ ತಮ್ಮ ಇರವನ್ನು, ನಿಲವನ್ನು ಪರೀಕ್ಷಿಸಿಕೊಂಡಿರುವರು. ಆತ್ಮಜ್ಞಾನವೇನೋ ಆಗಿದೆ. ಅದು ಪೂರ್ವಸುಕೃತದ ಫಲವೋ, ಶರಣಸಂಗದ ಒಲವೋ ಆಗಿದ್ದಿತು. ಆದರೆ, ಶುದ್ಧ ಧವಳಿತನೆಂಬ ಆತ್ಮಜ್ಞಾನಮಾತ್ರದಿಂದಲೇ ಮೋಕ್ಷ ಸಾಧ್ಯವಾಗುವಂತಿಲ್ಲ. ಆ ಜ್ಞಾನ, ಕ್ರಿಯೆಯಲ್ಲಿ ಅಳವಟ್ಟು, ಮೇಲೆ ನಿರ್ದೇಶಿಸಿದಂತೆ ಕ್ರಿಯಾಜ್ಞಾನಸಾಮರಸ್ಯವಾಗಬೇಕು. ಹಾಗೆ ಆಗುವ ವರೆಗೆ ಲೋಕದ ಬಂಧ ಉಂಟು. ಚನ್ನಬಸವಣ್ಣನವರಂಥ ದಿವ್ಯಜ್ಞಾನಿಗಳು 'ಜಗವ ಮೊಗೆಯಲು ಬಂದೆನೇಕಯ್ಯಾ?' ಎಂದು ಕೇಳಿದುದು ಮಾರ್ಮಿಕವಾಗಿದೆ.

---

೧. ಚಬವ. ೧೩೬೬. ೨. ಚಬವ. ೧೩೭೧. ೩. ಚಬವ. ೨೩

ಬಹುಜನಗಳಿಗೆ ಸಂಸಾರಬಂಧ ಬಹು ಬಿಗಿಯಾಗಿದ್ದರೆ, ಮಹಾಜ್ಞಾನಿಯಾಗಿದ್ದವರಿಗೆ ಅತಿ ಸೂಕ್ಷ್ಮವಾದ ಲೇಪನವಿದ್ದಂತೆ ತೋರುತ್ತದೆ. ಅಂತೆಯೇ ಚನ್ನಬಸವಣ್ಣನವರಿಗೆ ತಾವು ಈ ಲೋಕವೃಕ್ಷದ ಫಲಗಳನ್ನು ಹರಿದು ತಿಂದು, ತಿರಿದು ಉಂಡು ಲೋಕವನ್ನೇ ನುಂಗಲು ಬಂದಿರುವೆನೆಂಬ ಭಾವನೆಯುಂಟಾಗುತ್ತದೆ. ಮಹಾನುಭಾವರಿಗೆ ಒಳಹೊರಗೆಂಬುದಿಲ್ಲ. ಸಾಮಾನ್ಯರಾದರೋ ಡಾಂಭಿಕವೃತ್ತಿಯಲ್ಲಿ ಇರಿಯದೆ ಮರೆವ ವೀರನಂತೆ ಹಿರಿಯತನ ವನ್ನು ಪ್ರಕಟಪಡಿಸಬಹುದು. ಆದರೆ, ಮಹಾತ್ಮರಾದವರು ತಮ್ಮಂತರಂಗದ ಎಂತಹ ಮುಚ್ಚುಮರೆಯ ಮಾತಾದರೂ ಅದನ್ನು ಬಿಚ್ಚಿ ಹೇಳಿ, ಲೋಕದ ಮುಂದಿಡುವರು; ತಪ್ಪನ್ನು ಒಪ್ಪಿಕೊಳ್ಳುವರು; ಅನುತಾಪಪಡುವರು. ಮೋಕ್ಷಕ್ಕೆ ಇದೇ ಪ್ರಥಮ ಸೋಪಾನ. ಹನ್ನೆರಡನೆಯ ಶತಮಾನದ ಕಲ್ಯಾಣದ ಶರಣವೃಂದವನ್ನೆಲ್ಲ ತಮ್ಮ ಅದ್ಭುತ ವಾದ ಸುಜ್ಞಾನಪ್ರಭೆಯಿಂದ ಹುಟ್ಟುತ್ತಲೇ ಕಣ್ಣು ಕುಕ್ಕಿಸಿದ ಚನ್ನಬಸವಣ್ಣನವರು ಹೀಗೆ ಅಂತರಂಗಸಮೀಕ್ಷಣೆ ಮಾಡುತ್ತಿರುವುದು ಗಮನಾರ್ಹವಾಗಿದೆ.

ಭಕ್ತಿಯಂಕುರದ ಪ್ರಥಮದರ್ಶನವಿದು. ಪಿಂಡಸ್ಥಲ ಪಿಂಡಜ್ಞಾನಸ್ಥಲಗಳಲ್ಲಿ ಇಂತಹ ಅವಸ್ಥೆ ಕಂಡುಬರುತ್ತದೆ. ಶರಣನೋ ಆಗ ಸಂಸಾರಬಂಧವನ್ನು ತ್ಯಜಿಸಿ, ಸದ್ಭಕ್ತಿಯನ್ನು ಕೋರುವನು.

> **"ಅಂಗದ ಮೇಲೆ ಲಿಂಗವುಳ್ಳುದೆಲ್ಲಾ ಸಂಗಮನಾಥನೆಂಬ ಭಾವ**
> **ಬಸವಣ್ಣಂಗಾಯಿತ್ತಲ್ಲದೆ ಎನಗೆ ಆ ಭಾವವಿಲ್ಲ."**[೧]
> **"ನಿಮ್ಮಡಿಯ ಭಕ್ತಿಯನೊಂದನೇ ಕರುಣಿಸಿ ಕಾಪಾಡಯ್ಯಾ"**[೨]

ಎಂದು ಕೂಡಲ ಚನ್ನಸಂಗಯ್ಯನಲ್ಲಿ ಮೊರೆಹೊಗುವರು. ಈ ಭಕ್ತಿಸಂಪುಟವನ್ನು ಮುಚ್ಚಿರುವ ಅಜ್ಞಾನ ಹೊರಗಿಲ್ಲವೆಂಬ ಅರಿವೂ ಚನ್ನಬಸವಣ್ಣನವರಿಗೆ ಆಗಿದೆ.

> **"ಎನಗೆ ನಾನೇ ಹಗೆಯು ನೋಡಯ್ಯಾ, ಎನಗೆ ನಾನೆ ಕೆಳೆಯು ನೋಡಯ್ಯಾ!**
> **ಅನ್ಯರು ಹಗೆಯಲ್ಲ; ಕೆಳೆಯಲ್ಲ. ಬಾಗಿದ ತಲೆ, ಮುಗಿದ ಕೈಯಾಗಿರಿಸು"**[೩]

ಎಂದು ದೇವ ದೇವನನ್ನು ಪ್ರಾರ್ಥಿಸುವರು. ತನಗೆ ತಾನೇ ಹಗೆ. ತನ್ನನಿಜ ಸ್ವರೂಪ ವನು ತಾನೇ ಮರೆತುದರಿಂದ. ತನಗೆ ತಾನೇ ಕೆಳೆ, ಆ ಮರವೆಯ ಪರೆಯನ್ನು ತಾನೇ ಹರಿಯಬೇಕಾದುದರಿಂದ. ಇದಕ್ಕೆ ಸದ್ಭಕ್ತಿ ಬೇಕು. ಅದಕ್ಕೂ ಮೊದಲು, ಅದನ್ನು ಹರಿ ದೊಗೆಯಬೇಕೆಂಬ ಸುಜ್ಞಾನ, ಸದ್ಭಕ್ತನ ಹೃದಯದಲ್ಲಿ ಅಂಕುರಿಸಬೇಕು. ಚನ್ನಬಸವಣ್ಣ ನವರ ಹೃದಯದಲ್ಲಿ ಅಂಕುರಿಸಿದ ಆ ಸುಜ್ಞಾನವೇ ಹೀಗೆ ಪ್ರಾರ್ಥಿಸುತ್ತಿರುವುದು. ಅದು ತಾನೇ ಬಲಗೊಂಡು, ಕರಿಗೊಂಡು ಸ್ವಸ್ವರೂಪಜ್ಞಾನವನ್ನು ಪಡೆಯಬೇಕಾಗಿರುವದಾ ದರೂ ಅಲ್ಲಿ ಶ್ರೀಗುರುವಿನ ಕರುಣೆ ಅವಶ್ಯವೆಂದು ತೋರುತ್ತದೆ. ಅಂತೆಯೇ ಚನ್ನ ಬಸವಣ್ಣನವರು 'ಬಸವಣ್ಣನ ಶ್ರೀಪಾದವ ತೋಱಿ ಬದುಕಿಸಯ್ಯಾ'[೪] ಎಂದು ಪ್ರಾರ್ಥಿಸಿ ರುವರು. ಬಸವಣ್ಣನವರ ಸೋದರಳಿಯನಾಗಿ, ಅವರ ಮಹಾಮನೆಯಲ್ಲಿಯೇ ಜನಿಸಿ, ನಿತ್ಯವೂ ಅವರ ಸನ್ನಿಧಿಯಲ್ಲಿಯೇ ಇರುವ ಚನ್ನಬಸವಣ್ಣನವರು ಹೀಗೆ ಪ್ರಾರ್ಥಿಸುವಲ್ಲಿ

೧. **ಚಬವ.** ೪೪೦ ೨. **ಚಬವ.** ೧೨೬. ೩. **ಚಬವ.** ೧೦೭. ೪. **ಚಬವ** ೨೯.

ಅವರ ಹೃದಯದ ಆರ್ತಧ್ವನಿ ತೀಕ್ಷ್ಣವಾಗಿದೆಯೆಂಬುದು ವ್ಯಕ್ತವಾಗುತ್ತದೆ. ಶರಣರು ಕಂಡವರಿಗೆ ಕಂಡಂತೆ ದೀಕ್ಷೆಯನ್ನು ಕೊಡುತ್ತಿರಲಿಲ್ಲೆಂಬ ಅಂಶವೂ ಇಲ್ಲಿ ಸ್ಮರಣೀಯವಾಗಿದೆ. ಚನ್ನಬಸವಣ್ಣನವರ ಹೃದಯದಲ್ಲಿ ಅಂತಹ ಭಕ್ತಿಯ ಕಾತರ ಕಂಡುಬಂದಾಗ ಅಣ್ಣ ಬಸವಣ್ಣನವರು ಅವರಿಗೆ ಲಿಂಗದೀಕ್ಷೆಯನ್ನು ಕೊಟ್ಟಿರುವರು.

ಅಲ್ಲಿಂದ ಸುಜ್ಞಾನದ ಹೆಜ್ಜೆ ಸುಸ್ಪಷ್ಟವಾಗಿ ಗೋಚರವಾಗುತ್ತವೆ. ದಾಸೋಹಂ ಭಾವ ಮೊದಲು ತಲೆದೋರಿರಬೇಕು. ಅಂತಹ ಭಾವವಿಲ್ಲದೆ ಭಕ್ತಿ ಬಲಿಯದು; ಜ್ಞಾನ ಬೆಳೆಯದು.

> "ಆವಾವ ಪರಿಯಲ್ಲಿ ಆವಾವ ಭಾವದಲ್ಲಿ
> ಗುರು ಲಿಂಗ ಜಂಗಮಕ್ಕೆ ದಾಸೋಹವ ಮಾಡಿಹೆನೆಂಬ, ಕೂಡಿಹೆನೆಂಬ
> ಸದ್ಭಕ್ತರ ಬಾಗಿಲ ತೋಱಿ ಬದುಕಿಸಯ್ಯಾ"[೧]
> "ಪುರಾತನರ ಮನೆಯಲ್ಲಿ ಭೃತ್ಯಭೃತ್ಯನಾಗಿಪ್ಪೆನಯ್ಯಾ."[೨]
> "ತನು ಮನ ಧನವ ಎರಡಿಲ್ಲದೆ, ಸಮರ್ಪಿಸುವ
> ಭಕ್ತರ ಭಕ್ತ ನಾನು; ಆಳಿನಾಳಯ್ಯಾ!"[೩]

ಹೀಗೆ ದಾಸೋಹಂಭಾವ ಚನ್ನಬಸವಣ್ಣನವರಲ್ಲಿ ದಿಟಪುಟವಾಗಿ ಮೈದೋರುತ್ತದೆ. ಜೊತೆಗೆ ಈ ಮರ್ತ್ಯಲೋಕದ ಬಗೆಗೆ ಶ್ರದ್ಧೆಯೂ ತಲೆದೋರುತ್ತದೆ. ಈ ಚರಾಚರ ಸೃಷ್ಟಿಯೆಲ್ಲಾ 'ಒಂದಿಂದ್ರಿಯ ಮೊದಲಾಗಿ ಐದಿಂದ್ರಿಯ ಕಡೆಯಾಗಿ ಜೀವ ಜಾಲವಲ್ಲವೆ ಸಚರಾಚರವೆಲ್ಲಾ?' ಎಂದು 'ಈ ಲೋಕದಲ್ಲಿ ಜಡವೂ ಚೈತನ್ಯಮಯ' ಎಂದು ಚನ್ನಬಸವಣ್ಣನವರ ದೃಢವಾದ ನಂಬುಗೆ. ಷಟ್‌ಸ್ಥಲಸಾಧನೆಯಲ್ಲಿ ಲಿಂಗಾಂಗ ಚರಾಚರಸೃಷ್ಟಿಗಳ ಬಗೆಗೆ ಶ್ರದ್ಧೆ ಒಡಮೂಡಬೇಕಾಗುತ್ತದೆ. 'ಭೂಮಿಯನೊಲ್ಲದೆ ಗಗನಕ್ಕೆ ಹಾರಿದವಂಗೆ ಆ ವ್ಯೋಮದಲ್ಲಿ ನಿಲುವುದಕ್ಕೆ ಎಡೆಯುಂಟೇ?' ಎಂದು ಚನ್ನಬಸವಣ್ಣನವರು ಕೇಳುವರು. ಮೋಕ್ಷಸಂಪಾದನೆಯಾಗಬೇಕಾದರೆ, ಪರಮಾತ್ಮನ ಸಚ್ಚಿದಾನಂದಸ್ವರೂಪವಾದ ಈ ಚರಾಚರ ಸೃಷ್ಟಿಯನ್ನು ನಂಬಿ, ಅಲ್ಲಿ ಗಟ್ಟಿಯಾಗಿ ನಿಲ್ಲಬೇಕಾಗುತ್ತದೆ. ಇದು ವೀರಶೈವದ ದೃಢನಂಬುಗೆ.

> "ಭೋಗಭೂಮಿಯ ಭೊಗತನುವಿನ
> ಲಾಗದನುಪಮಸಿದ್ಧಿ ಕರ್ಮೋ
> ದ್ಯೋಗಭೂಮಿಯ ಕರ್ಮತನುವಿನಲಲ್ಲದೆ . . . ."[೪]

ಕರ್ಮೋದ್ಯೋಗಭೂಮಿಯಲ್ಲಿ ಮುಮುಕ್ಷುವಾದವನಿಗೆ ನಂಬುಗೆ ಬೇಕೇ ಬೇಕು; ಸತ್ಕ್ರಿಯೆಗಳು ಅಲ್ಲಿ ನಡೆಯಲೇಬೇಕು. ಆದರೆ, ಆತನು ಲೋಕ ವ್ಯವಹಾರವನ್ನು ಮಾಡುವ ರೀತಿ ಬೇರೆಯಾಗಿರುತ್ತದೆ.

> "ನಾನು ಮೆಟ್ಟುವ ಭೂಮಿಯು ಭಕ್ತನ ಮಾಡಿದಲ್ಲದೆ, ಮೆಟ್ಟೆನಯ್ಯಾ.
> ನಾನು ನೋಡುತ್ತಿಹ ಆಕಾಶ ಚಂದ್ರ ಸೂರ್ಯರ ಭಕ್ತರ ಮಾಡಿದಲ್ಲದೆ,
> ನೋಡೆನಯ್ಯಾ.

---

೧. ಚಬವ. ೧೨೨. ೨. ಚಬವ. ೧೧೮. ೩. ಚಬವ. ೪೯೧. ೪. ಪ್ರಲಿಂ. ೨–೬೪.

ನಾನು ಬಳಸುವ ಜಲವ ಭಕ್ತನ ಮಾಡಿದಲ್ಲದೆ, ಬಳಸೆನಯ್ಯಾ.
ನಾನು ಕೊಂಬ ಹದಿನೆಂಟು ಧಾನ್ಯಗಳ ಭಕ್ತರ ಮಾಡಿದಲ್ಲದೆ,
ಕೊಳ್ಳೆನಯ್ಯಾ.
ಕೂಡಲಚನ್ನಸಂಗಯ್ಯಾ ನಿಮ್ಮಾಣೆ."[೧]

ಆದುದರಿಂದಲೇ ಚನ್ನಬಸವಣ್ಣನವರು ಈ ಲೋಕದಲ್ಲಿ ವ್ಯವಹರಿಸಲು ಅಂಜುವುದಿಲ್ಲ.

"ನೀ ನಿಲಿಸಿದಲ್ಲಿ ನಾನಂಜೆ ನಾನಂಜೆ ನಾನಂಜೆನಯ್ಯಾ-
ಮನವು ಮಹಾಘನಕ್ಕೆ ಶರಣುವೊಕ್ಕುದಾಗಿ.
ನೀ ನಿಲಿಸಿದ ಧನದಲ್ಲಿ ನಾನಂಜೆ ನಾನಂಜೆ ನಾನಂಜೆನಯ್ಯಾ
ಧನವು ಸತಿ ಸುತ ಮಾತಾಪಿತರಿಗೆ ಹೋಗದಾಗಿ,
ನೀನಿರಿಸಿದ ತನುವಿನಲ್ಲಿ ನಾನಂಜೆ ನಾನಂಜೆ ನಾನಂಜೆನಯ್ಯಾ
ತನುಸರ್ವಾರ್ಪಿತದಲ್ಲಿ ನಿಹಿತಪ್ರಸಾದಭೋಗಿಯಾಗಿ."[೨]

ಪದಾರ್ಥಗಳ ಮಧ್ಯದಲ್ಲಿ ವ್ಯವಹರಿಸಿದರೆ, ವಿಷಯವಾಗಿ ಬಂಧವಾಗುತ್ತದೆ; ಆ ಪದಾರ್ಥಗಳನ್ನೇ ಪ್ರಸಾದವನ್ನಾಗಿ ಮಾಡಿದರೆ, ಮೋಕ್ಷವಾಗುತ್ತದೆ. ಲೋಕದ ವ್ಯವಹಾರವನ್ನೆಲ್ಲಾ ಮಿಕ್ಕವರಂತೆ ಶರಣನೂ ಆಚರಿಸುತ್ತಿರುತ್ತಾನೆ. ಆದರೆ, ಅಲ್ಲಿ ಒಂದು ಅಂತರವುಂಟು. ಲೋಕವನ್ನೇ ಪ್ರಸಾದಭಾವನೆಯಿಂದ ಲಿಂಗಕ್ಕರ್ಪಿಸಿ ಸ್ವೀಕರಿಸುತ್ತಾನೆ ಶರಣ. ಆತನ ಮಾಟ ಕೂಟ ನೋಟ ಎಲ್ಲಾ ಲಿಂಗಮಯವಾಗುತ್ತದೆ. ಹಾಗೆ ಆಗಬೇಕೆಂಬುದೇ ಚನ್ನಬಸವಣ್ಣನವರ ಛಲ. ಅಂತೆಯೇ ಭಕ್ತನ ಮಾಡಿದಲ್ಲದೆ ಲೋಕವನ್ನು ಮುಟ್ಟೆನೆಂದು ಅವರು ಪಣತೊಡುವರು. ಇದಕ್ಕನುಗುಣವಾಗಿ ಗುರು ಕೊಟ್ಟ ಇಷ್ಟ ಲಿಂಗಕ್ಕೆ ಜಲ ಗಂಧ ಅಕ್ಷತೆಯ ಪೂಜೆ ನಡೆಯುತ್ತದೆ. 'ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವೆನಯ್ಯಾ, ಸಕಲ ಕ್ಷೇಮದಿಂದ ನಡೆದು ನಿಮ್ಮಲ್ಲಿಗೆ ಸಾರುವೆನು' ಎಂದು ಸುಕ್ಷೇಮವಾದ ಹಾದಿಯನ್ನು ಹಿಡಿಯುವರು. ಗುರುಲಿಂಗ ಜಂಗಮದ ಆರಾಧನೆ ನಿರಂತರವೂ ನಡೆಯುತ್ತದೆ. 'ಲಿಂಗೈಕ್ಯವಿಲ್ಲದವರ ನಾನೊಲ್ಲೆ'[೩]ನೆಂದು ಶರಣಸಂಗವನ್ನೇ ಸದುಹೃದಯ ಬಯಸುತ್ತದೆ. ಗುರು ಲಿಂಗ ಜಂಗಮಕ್ಕೆ ತನು ಮನ ಧನಗಳನ್ನರ್ಪಿಸುವ ತಮ್ಮ ಛಲವನ್ನು ಚನ್ನಬಸವಣ್ಣನವರು ಹೀಗೆ ವ್ಯಕ್ತಪಡಿಸುವರು:

"ಮಾಡುವಲ್ಲಿ ಎನ್ನ ನಾನು ಅರೆಯಿತ್ತು ಮಾಡಿದೆನಾದಡೆ,
ನೀಡುವಲ್ಲಿ ಎನ್ನ ನಾನು ಅರೆಯಿತ್ತು ನೀಡಿದೆನಾದಡೆ,
ನೀಡುವ ಅವಸರದಲ್ಲಿ ರುಚಿಗೆ ಹಾರೈಸಿದೆನಾದಡೆ,
ನಿಮಗೆಂದೆ ದ್ರೋಹಿಯಯ್ಯಾ!
ಮಾಡುವಲ್ಲಿ ನೀಡುವಲ್ಲಿ ಕೂಡೆ ಶುದ್ಧನಲ್ಲದಡೆ
ನೀನೆಂದೆ ಮೂಗಕೊಯ್ಯಾ, ಕೂಡಲಚನ್ನಸಂಗಮದೇವಾ."[೪]

---

೧. ಚಬವ. ೨೪೦. ೨. ಚಬವ. ೫೫೮. ೩. ಚಬವ. ೨೧೪. ೪. ಚಬವ. ೬೧೪.

"ನೆರೆ ನಂಬೊ ನೆರೆನಂಬೊ ಗುರುಲಿಂಗಜಂಗಮವ.
. . . . . . . . ನೆರೆನಂಬಿದೆಯಾದಡೆ,
ತನ್ನನೀವ ಕೂಡಲಚನ್ನಸಂಗಮದೇವ"[೧]

ಹೀಗೆ ನಂಬಿ, ಗುರುಲಿಂಗಜಂಗಮಕ್ಕೆ ಛಲದಿಂದ ಆತ್ಮಸಾಕ್ಷಿಯಾಗಿ ಮಾಡಿ ನೀಡಿ, ಪರಿಣಾಮಿಸುವ ಪಣತೊಡುವರು. ಲಿಂಗಪ್ರಸಾದವಲ್ಲದುದನ್ನು ಅವರು ಮುಟ್ಟರು.

"ಲಿಂಗಮುಖಕ್ಕೆ ಬಾರದುದು ಕೃತಕಿಲ್ಬಿಷವಯ್ಯಾ.
ಕೂಡಲಚನ್ನಸಂಗಯ್ಯಾ, ನಿಮ್ಮತ್ತ ಮುಂದಾಗದುದೆಲ್ಲ
ಎನ್ನತ್ತಮುಂದಾಗದು."[೨]

ಹೀಗೆ ಗುರು ಲಿಂಗ ಜಂಗಮದ ಪ್ರಸಾದ, ಪ್ರಸಾದಕಾಯರಾದ ಚನ್ನಬಸವಣ್ಣನವರನ್ನೇ ಪ್ರಸಾದಮಯವಾಗಿ ಮಾಡುತ್ತದೆ. ಎಲ್ಲವೂ ಶ್ರೀಗುರುಕರುಣೆಯಿಂದ ಪ್ರಸಾದವಾಗುತ್ತದೆ.

"ಸರ್ವಾಂಗ ಪ್ರಸಾದವವ್ವಾ, ಸರ್ವಾರ್ಥ ಪ್ರಸಾದವವ್ವಾ.
ಸರ್ವಾಂಗ ಸ್ವಯವವ್ವಾ, ಕೂಡಲಚನ್ನಸಂಗನ ಪ್ರಸಾದವವ್ವಾ."[೩]

"ವಲಿತ ಪಲಿತ ಪ್ರಸಾದವವ್ವಾ, ಆದಿ ವ್ಯಾಧಿ ಪ್ರಸಾದವವ್ವಾ.
ಗಮನಾಗಮನ ಪ್ರಸಾದವವ್ವಾ, ಸ್ವಯವವ್ವಾ.
ಕೂಡಲಚನ್ನಸಂಗನ ಪ್ರಸಾದವವ್ವಾ."[೪]

ಹೀಗೆ ಪ್ರಸಾದಭಾವ ಕರಿಗೊಳ್ಳುತ್ತದೆ. ಶ್ರೀಗುರುವಿನ ಆ ಕೃಪೆಯನ್ನು ಚನ್ನಬಸವಣ್ಣನವರು ಗೀತಮಾತೆಂಬ ಜ್ಯೋತಿಯಲ್ಲಿ ಪಡಿಮೂಡಿಸಿರುವರು:

"ಅಜ್ಞಾನವೆಂಬ ಕಾಳಿಕೆವಿಡಿದ ಮನದ ಮೋಹವ, ಪರಿಹರಿಸಿದ ಪರಿಯ ನೋಡಿರೇ
ಒಮ್ಮೆಕಾಸಿ, ಒಮ್ಮೆ ಕರಗಿಸಿ, ಒಮ್ಮೆ ಬಣ್ಣವಿಟ್ಟು[೧],
ಎನ್ನ ಮನದ ಮೋಹವ ಕಳೆದನಯ್ಯಾ, ನಿಮ್ಮ ಶರಣ ಬಸವಣ್ಣ."[೫]

ಎಂದು ಮನದ ಮೋಹವನ್ನು ಗುರು ಪರಿಹರಿಸಿದ ಬಗೆಯನ್ನು ಬಣ್ಣಿಸಿರುವರು. ಭಕ್ತಿಮಾರ್ಗವೇನು ಸುಲಭವಾದುದಲ್ಲ. ಭಕ್ತಿ ಕರಗಸದಂತೆ ಹೋಗುತ್ತ ಕೊಯ್ವುದು, ಬರುತ್ತ ಕೊಯ್ವುದು. ಅಂತೆಯೇ ಅದನ್ನು ಮಾಡುವುದು ಕರಕಷ್ಟವೆಂದು ಭಕ್ತಿಭಂಡಾರಿ ಬಸವಣ್ಣನವರು ಸಾರಿರುವರು. ಪರಮಾತ್ಮನು ಮೆಚ್ಚಿದನೆಂದಡೆ, ಸಲೆ ಮಾರುವೋದನೆಂದಡೆ ತನುವನಲ್ಲಾಡಿಸಿ ನೋಡುವ, ಮನವನಲ್ಲಾಡಿಸಿ ನೋಡುವ, ಧನವನಲ್ಲಾಡಿಸಿ ನೋಡುವ. ಇದಕ್ಕಂಜದಿದ್ದಡೆ ಕೃಪೆದೋರುವ. ಹಾಗೆಯೇ ಶ್ರೀಗುರು ಚನ್ನಬಸವಣ್ಣನವರನ್ನು ಒಮ್ಮೆ ಕಾಸಿ, ಒಮ್ಮೆ ಕರಗಿಸಿ, ಒಮ್ಮೆ ಬಣ್ಣವಿಟ್ಟು ಅವರ ಮನದ ಮೋಹವನ್ನು ಕಳೆದು ಪ್ರಸಾದಕಾಯನನ್ನಾಗಿ ಮಾಡಿದರು. ಅದನ್ನು ಚನ್ನಬಸವಣ್ಣನವರು ಭಕ್ತಿಭರಭಾರದಿಂದ ಸಂಸ್ಮರಿಸಿರುವರು.

---

೧. ಚಬವ. ೪೧೫. ೨. ಚಬವ. ೫೭೯. ೩. ಚಬವ. ೧೪೮೦. ೪. ಚಬವ. ೧೪೮೧.
೫. ಚಬವ ೧೮೧.

**"ಸಾಕಾರವಿಡಿದು ಉಪದೇಶವ ಕೊಟ್ಟು, ಎನ್ನ ಕಾಯುವ ಸಮರ್ಪಿಸಿಕೊಂಡು ಶುದ್ಧನ ಮಾಡಿದನಯ್ಯಾ ಶ್ರೀಗುರು.**

**ಪ್ರಾಣದಲಡಗಿ ಸಿದ್ಧನ ಮಾಡಿದನಯ್ಯಾ ಶ್ರೀಗುರು.**

**ಎನ್ನ ಆತ್ಮಪದದಲ್ಲಿ ಬೆರಸಿ, ಪ್ರಸಿದ್ಧನ ಮಾಡಿದನಯ್ಯಾ ಶ್ರೀಗುರು."**[೧]

ಬಸವಣ್ಣನವರ ಕೃಪೆಯಿಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಗಳು ಚನ್ನಬಸವಣ್ಣನವರಿಗೆ ಸಂಪ್ರಾಪ್ತವಾಗುವವು. ಆಗ ದ್ವೈತಸಂದೇಹ ತಾನೆ ಕರಗುತ್ತದೆ.

**"ಉಂಟೆಂಬುದ ಬಸವಣ್ಣ ಕೊಂಡ; ಇಲ್ಲೆಂಬುದನಲ್ಲಮ ಕೊಂಡ"**[೨]

ಹೀಗೆ ಉಂಟು ಇಲ್ಲ ಎಂಬ ದ್ವೈತದ ಬೇರುಗಳನ್ನು ಬಸವಣ್ಣ ಪ್ರಭುದೇವರು ಕಿತ್ತು ಕೊಳ್ಳುವರು. ಆಗ ಎಲ್ಲವೂ ಲಿಂಗಮಯವಾಗುವುದು; ಪರಮಾತ್ಮನ ಸಾಕ್ಷಾತ್ಕಾರ ವಾಗುವುದು.

**"ಕಾಯದಿಂದ ಲಿಂಗದರುಶನ, ಕಾಯದಿಂದ ಜಂಗಮದರುಶನ;**

**ಕಾಯದಿಂದ ಪ್ರಸಾದ ಸಂಪತ್ತು.**

**ಕೂಡಲ ಚನ್ನಸಂಗಮದೇವಾ, ಈ ಕಾಯದಿಂದ ನಿಮ್ಮುವ ಕಂಡೆನಯ್ಯಾ"**[೩]

ಕಾಯವಿಡಿದು ಪ್ರಸಾದಕಾಯರಾಗಿ, ಕೂಡಲಚನ್ನಸಂಗಮದೇವರನ್ನು ಕಂಡ ವಿಷಯ ವನ್ನು ಚನ್ನಬಸವಣ್ಣನವರು ಪರಮಾನಂದಭರಿತರಾಗಿ ವ್ಯಕ್ತಪಡಿಸಿರುವರು:

ಮರ ಮರ ಮಥನಿಸಿ ಜ್ಯೋತಿ ಹುಟ್ಟುವಂತೆ, ಮಾತು ಮಾತು ಹಳಚಿ ಜ್ಯೋತಿ ಹುಟ್ಟುತ್ತದೆ. ಈ ಜ್ಯೋತಿ ಶರಣಸಂಗದಿಂದ, ಶಿವಾನುಭವಸದ್ಗೋಷ್ಠಿಯಿಂದ ಹುಟ್ಟು ತ್ತದೆ. ವೀರಶೈವ ಧರ್ಮ, ವೈಯಕ್ತಿಕವಾಗಿರದೆ ಸಾಮೂಹಿಕ ತತ್ವವನ್ನು ಎತ್ತಿಹಿಡಿಯು ವುದರಿಂದ ಶರಣಸಂಗಕ್ಕೆ ಅಲ್ಲಿ ವಿಶೇಷ ಮಹತ್ವವುಂಟು. ಶರಣಸಂಗವಿಲ್ಲದೆ ವೈಯಕ್ತಿಕ ಕಾರ್ಯಕಲಾಪಗಳಿಂದ ಅದ್ಭುತವಾದ ಕ್ರಾಂತಿ ತಲೆದೋರುವಂತಿರಲಿಲ್ಲ. ಪ್ರಭು, ಬಸ-ವಣ್ಣನವರಂತಹ ದಿವ್ಯ ಮಹಾನುಭಾವಿಗಳು ನಡೆದುದು ಮಾರ್ಗವಾಗಿದೆ; ನುಡಿದುದು ಮಂತ್ರವಾಗಿದೆ. ಮುಟ್ಟಿದುದು ಲಿಂಗವಾಗಿದೆ. ಆದುದರಿಂದ ಪ್ರತಿಯೊಬ್ಬ ಶರಣರ ಜೀವನದಲ್ಲಿ ಇತರ ಶರಣರ ಪ್ರಭಾವ ಸುಸ್ಪಷ್ಟವಾಗಿ ಒಡೆದುಕಾಣುತ್ತದೆ. ಚನ್ನಬಸವಣ್ಣ ನವರ ಜೀವನದಲ್ಲಿ ಅಂತಹ ಶರಣರ ಪ್ರಭಾವವನ್ನು ನಿಸ್ಸಂದೇಹವಾಗಿ ಕಾಣುತ್ತೇವೆ. ಅವರ ವಚನಗಳನ್ನು ಮಥಿಸಿದರೆ, ಬಸವಣ್ಣನವರು, ಪ್ರಭುದೇವರು, ಮಡಿವಾಳ ಮಾಚಿ ದೇವರು ಮುಂತಾದವರ ಪ್ರಭಾವಮುದ್ರೆಯನ್ನು ಖಚಿತವಾಗಿ ಕಾಣುತ್ತೇವೆ.

**"ಬೆನ್ನಿನಲ್ಲಿ ಬಸವಣ್ಣನ ತೆಗೆದ, ಹೊಟ್ಟೆಯಲ್ಲಿ ಎನ್ನ ತೆಗೆದ, ಬ್ರಹ್ಮರಂಧ್ರದಲ್ಲಿ ಅಲ್ಲಮನ ತೆಗೆದ.**

**ಸಂಗನೊ ಮಡಿವಾಳನೋ, ಮಡಿವಾಳನೊ ಸಂಗನೋ ಎಂದು ನುಡಿಯಲಮ್ಮೆನು."**[೪]

---

೧. ಚಬವ. ೨೭೧. ೨. ಚಬವ. ೫೦೩. ೩. ಚಬವ. ೩೧೮. ೪. ಚಬವ. ೫೭೪.

ಎಂದು ಮಡಿವಾಳನ ವಿಷಯವಾಗಿ ಭಕ್ತಿಭಾವವನ್ನು ವ್ಯಕ್ತಪಡಿಸಿರುವರು. ಮಡಿವಾಳ ಮಾಚಿದೇವನು ಕ್ರಿಯಾಮೂರ್ತಿ. ಆತನ ಭಕ್ತಿ ಬಸವಣ್ಣ, ಜ್ಞಾನ ಚನ್ನಬಸವಣ್ಣ, ಅನುಭಾವ ಪ್ರಭುದೇವರು. ಹೀಗೆಯೇ ಅನೇಕ ಶರಣರ ಬಗೆಗೆ ಚನ್ನಬಸವಣ್ಣನವರು ಭಕ್ತಿ ಕುಸುಮವನ್ನರ್ಪಿಸಿರುವರು. ಬಸವಣ್ಣನವರ ಬಗೆಗಂತೂ ಅವರಿಗೆ ಎಷ್ಟು ಕೊಂಡಾಡಿದರೂ ತೃಪ್ತಿಯಿಲ್ಲ. ಅಂತಹ ಸದ್ಗುರುವನ್ನು ಪಡೆದ ತಾವು ಕೃತಕೃತ್ಯರೆಂದು ಮತ್ತೆ ಮತ್ತೆ ಹೇಳಿಕೊಳ್ಳುವರು.

> "ಬಸವಣ್ಣಾ, ನಿಮ್ಮ ತೊತ್ತಿನ ತೊತ್ತಿನ ಮಱಿದೊತ್ತಿನ ಮಗ ನಾನಯ್ಯಾ"[೧]

> "ಅಂತರಂಗದಲ್ಲಿ ಅಱಿವು ಪರಿಪೂರ್ಣ,
> ಬಹಿರಂಗದಲ್ಲಿ ದಾಸೋಹಸಂಪನ್ನ,
> ಮನೋವಾಕ್ಕಾಯ ಕರ್ಮಂಗಳಲ್ಲಿ ಸದ್ಭಕ್ತಿಸಂಪನ್ನ,
> ಎಡೆದೆಱಹಿಲ್ಲದ ಲಿಂಗಸಂಪನ್ನ,
> ಸರ್ವ ಅಂಗದಲ್ಲಿ ಸರ್ವಾಚಾರಸಂಪನ್ನ."[೨]

> "ಲಿಂಗಪ್ರಾಣ, ಪ್ರಾಣಲಿಂಗವೆಂಬುದ ಎನ್ನಂತರಂಗದಲ್ಲಿ ಸ್ಥಾಪ್ಯವ ಮಾಡಿ,
> ಎನ್ನ, ನಿನ್ನಂತೆ ಮಾಡಿ, ನಿಜಲಿಂಗದೊಳಗೆ ನಿರವಯವಾದೆಯಲ್ಲಾ, ಬಸವಣ್ಣಾ!
> ನಿನ್ನ ಒಕ್ಕ ಮಿಕ್ಕ ಶೇಷವನಿಕ್ಕಿ ಆಗುಮಾಡಿ,
> ನಿನ್ನಂತರಂಗದಲ್ಲಿ ಅನ್ವೈನಾಗಾಯಿಯ ಇಂಬುಗೊಂಡಡೆ,
> ಎಮ್ಮ ಮನ, ನಿಮ್ಮ ಪಾದದಲ್ಲಿ ಕರಗಿ ಕೊಱಗಿತ್ತಯ್ಯಾ, ಸಂಗನಬಸವಣ್ಣಾ!"[೩]

> "ಸಂಗನ ಬಸವಣ್ಣನ ಕರುಣದ ಶಿಶುವೆಂದು
> ಮೂಱುಲೋಕವೆಲ್ಲವು ಅಱಿದು ಜಯ ಜಯ ಎನುತಿರ್ದುದು"[೪]

> "ಬಸವಣ್ಣನ ಸಂಪ್ರದಾಯದ ಕಂದ ನೋಡಾ, ನಾನು"[೫]

ಹೀಗೆ ಬಸವಣ್ಣನವರನ್ನು ಕುರಿತು, ಹೃದಯದ ಕೋಡಿ ಹರಿದು ಮಹಾಸಾಗರವಾಗುವಂತೆ ಚನ್ನಬಸವಣ್ಣನವರು ಹಾಡಿ ಹಣ್ಣಾಗಿರುವರು.

ಇದೇ ರೀತಿಯಲ್ಲಿ ಪ್ರಭುದೇವರನ್ನು ಕುರಿತು ಚನ್ನಬಸವಣ್ಣನವರು ಮನವಾರೆ ಸ್ತೋತ್ರಮಾಡಿರುವರು.

> "ಶರಣ ಪ್ರಭುದೇವರು ಅಜಾತನೆಂಬ ಭೇದವೆನಗಿಂದು ತಿಳಿಯಿತ್ತು."[೬]

> "ಅಱಿವಿನ ತೃಪ್ತಿಗೆ ಅನುಭಾವವಾಶ್ರಯ;
> ಲಿಂಗದ ಅನುಭಾವದಿಂದ ನಿಮ್ಮ ಕಂಡೆನು.
> ನಿಮ್ಮ ಕಂಡೆನ್ನ ಮಱೆದೆ ಕಾಣಾ, ಪ್ರಭುವೇ!"[೭]

---

೧. ಗೂಸಿಶೂಸಂ. ೧೧೩೯. ೨. ಗೂಸಿಶೂಸಂ. ೧೯–೧೧೭. ೩. ಗೂಸಿಶೂಸಂ. ೨೧–೬೪. ೪. ಚಬವ. ೧೫೩. ೫. ಚಬವ. ೨೭೫. ೬. ಗೂಸಿಶೂಸಂ. ೮–೨೩. ೭. ಗೂಸಿಶೂಸಂ. ೮-೨೨.

"ಎನ್ನ ಅನುಭಾವದ ಗಮ್ಯವೇ, ಅಱಿವಿನ ವಿಶ್ರಾಮವೇ,
ಭಾವದ ಬಯಕೆಯೇ, ನಿಜದ ನಿಲವೇ,
ಪರಿಣಾಮದ ಮೇರುವೇ, ಮನದ ಮಹಿಮನೇ
ನಿಮ್ಮ ಸುಳುಹೆತ್ತಲಡಗಿತ್ತು?
ಎಲೆ ಲಿಂಗವೆ, ನಿನ್ನ ನಾಮವೆತ್ತ ನಿರ್ನಾಮವಾಯಿತ್ತು?
ಎಲೆ ಪರಮಗುರುವೆ, ಕೂಡಲ ಚನ್ನಸಂಗಯ್ಯನಲ್ಲಿ
ಉರಿಯುಂಡ ಕರ್ಪುರದಂತಾದೆಯಲ್ಲಾ ಪ್ರಭುವೇ!"[೧]

ಹೀಗೆ ಪ್ರಭುದೇವರನ್ನು ಅನನ್ಯಭಾವದಿಂದ ಚನ್ನಬಸವಣ್ಣನವರು ಕೊಂಡಾಡಿರುವರು.

ಮರುಳಶಂಕರದೇವರ ವಿಷಯವಾಗಿಯೂ ಚನ್ನಬಸವಣ್ಣನವರು ತಮ್ಮ ಭಕ್ತಿ ಭಾವವನ್ನು ಪ್ರಕಟಪಡಿಸಿರುವರು:

"ಅಂಗ ಪ್ರಾಣ ದೇಹ ಭಾವಗಳನ್ನು ಇಷ್ಟ ಪ್ರಾಣ ಭಾವಲಿಂಗಗಳಿಗೆ ಅರ್ಪಿಸಿ,
ಆಚಾರಲಿಂಗಪ್ರಸಾದಿ, ಪ್ರಾಣಲಿಂಗಪ್ರಸಾದಿ, ಜಂಗಮಲಿಂಗಪ್ರಸಾದಿಯಾದ
ಮರುಳಶಂಕರದೇವರು, ಸತ್ಯಶರಣರ ಅಂಗಳದೊಳಗೆ ಬಿದ್ದ
ಅಗುಳನೆತ್ತಿಪ್ಪೆಕೊಂಡೆಹೆನೆಂದು ನಿಮ್ಮ ಪ್ರಸಾದದ ಕುಳಿಯೊಳಗೆ
ಹನ್ನೆರಡು ವರ್ಷ ಪರ್ಯಂತರ ಪ್ರಸಾದಿಯಾಗಿರ್ದ."[೨]

"ಗುರು ಲಿಂಗ ಜಂಗಮ ತಾನೇ ಆಗಿ, ಮತ್ತೆ ತಾನೆಂಬುದೇನೂ ಇಲ್ಲದೆ ಇಪ್ಪ;
ತನ್ನ ತಾ ನಿರ್ದೇಶವಂ ಮಾಡಿಕೊಂಡು ನಿಜಪದವನೈದಿಪ್ಪ."[೩]

ಮಾಡಬಾರದ ಭಕ್ತಿಯನೆ ಮಾಡಿ,
ನೋಡಬಾರದ ನೋಟವನೆ ನೋಡಿ,
ಕೂಡಬಾರದ ಕೂಟವನೆ ಕೂಡಿ
ಸ್ತುತಿಸುವಂಗೆ ಸ್ತುತಿಗೆ ಬಾರದೆ,
ಮುಟ್ಟುವಂಗೆ ಮುಟ್ಟಬಾರದೆ,
ಬಟ್ಟಬಯಲಾಗಿ ಹೋದ ಮರುಳ ಶಂಕರದೇವ!"[೪]

ಮಹಾದೇವಿಯಕ್ಕನವರನ್ನು ಕುರಿತು ಚನ್ನಬಸವಣ್ಣನವರು ಹಾಡಿ ಹರಸಿರುವರು:

"ಆದ್ಯರ ಅಱುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ,
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ,
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ,
ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ
ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ, ಸಿದ್ಧರಾಮಯ್ಯಾ!"[೫]

---

೧. ಗೂಸಿಶೂಸಂ. ೨೧–೧೪. ೨. ಶೂಸಂ. ೬–೨೩. ೩. ಶೂಸಂ. ೬–೨೫.
೪. ಶೂಸಂ ೬–೪೦. ೫. ಶೂಸಂ ೧೬–೧೬೦.

ಹೀಗೆ ಚನ್ನಬಸವಣ್ಣನವರು ಶಿವಶರಣರನ್ನು ಅನಂತಮುಖವಾಗಿ ಅನನ್ಯಭಾವದಿಂದ ಸ್ತೋತ್ರಮಾಡಿರುವರು.

**"ಎನ್ನಂತರಂಗವೆ ಬಸವಣ್ಣ, ಬಹಿರಂಗ ಮಡಿವಾಳ ಮಾಚಯ್ಯ,**
**ಈ ಉಭಯಸಂಗವೇ ಪ್ರಭುದೇವರು."**[೧]

ಎಂದು ತಮ್ಮ ಅಂತರಂಗ ಬಹಿರಂಗವೆಲ್ಲಾ ಶರಣಸಂಪದವೆಂದು ನಿಜದರಿವಿನಲ್ಲಿ ನುಡಿದು ಕೃತಾರ್ಥರಾಗಿರುವರು. ಲಿಂಗವೇ ತಾವಾಗಿ ಬೇರೆಂಬುದಿಲ್ಲದೆ ನಿರವಯಸ್ಥಿತಿಯನ್ನು ಪಡೆದರು; ಅಚಲಲಿಂಗ ಸೋಂಕಿ, ಅನುಭಾವಸಂಪನ್ನರಾದರು. ಅವರು ಭೋಗಿಸಿತ್ತೆಲ್ಲ ಸಮರ್ಪಿತವಾಯಿತು; ರುಚಿಸಿತ್ತೆಲ್ಲ ಪ್ರಸಾದವಾಯಿತು. ಅರಿದುದೆಲ್ಲಾ ಪರಬ್ರಹ್ಮವಾಯಿತು; ನುಡಿದುದೆಲ್ಲಾ ಪರತತ್ವವಾಯಿತು. ಅಪ್ಪುವನಪ್ಪಿದ ವಾರಿಕಲ್ಲಂತೆ, ವಾಯುವನಪ್ಪಿದ ಪರಿಮಳದಂತೆ, ಅನಲನನಪ್ಪಿದ ಕರ್ಪುರದಂತೆ, ಲಿಂಗವನಪ್ಪಿ ಲಿಂಗವೇ ಆದರು. ಗಾಳಿಯ ಮರೆಯ ಜ್ಯೋತಿಯಂತೆ ಸುಖಸೂಸದೆ ಇದ್ದರು. ಸಹಜವಿಡಿದು, ನಿಜವಳವಟ್ಟು, ಅದು ಇದು ಎನ್ನಲು ಎಡೆಯಿಲ್ಲದಿದ್ದರು. ಭಾವವಳಿದು ನಿರ್ಭಾವವಾಗಿದ್ದರು. ಮಾತು ಮಾಣಿಕ್ಯವ ನುಂಗಿತು, ಜ್ಯೋತಿ ಕತ್ತಲೆಯ ನುಂಗಿತು, ತನು ಬಯಲಾಗಿ ನಿರವಯಲೊಳಡಗಿತ್ತು, ಮನ ಬಯಲಾಗಿ ನಿರವಯಲೊಳಡಗಿತ್ತು, ಭಾವ ಬಯಲಾಗಿ ನಿರವಯಲೊಳಡಗಿತ್ತು, ಬಯಲು ಬಯಲ ಬೆರಸಿ ಬಯಲೇ ಆಗಿತ್ತು. ಆಗ ಊಹೆ-ಉತ್ತರ, ದೇಹಿ-ದೇಹಿಕ, ನಾನು-ನೀನು ಎಂಬ ಭ್ರಾಂತು, ಸಂದು ಸಂಶಯವಿಲ್ಲದೆ ನಿಭ್ರಾಂತು ಆಗುತ್ತದೆ. ಅನುಭಾವವಿಲ್ಲದ ಸಂಗಸುಖವನ್ನು ಚನ್ನಬಸವಣ್ಣನವರು ಅನುಭವಿಸುವರು. ನೆನಹಿನ ಸುಖವ ನೋಟ, ನೋಟದ ಸುಖವ ಕೂಟ, ಕೂಟದ ಸುಖವ ಆಲಿಂಗನ, ಆಲಿಂಗನದ ಸುಖವ ಸಂಗ, ಸಂಗಸುಖವ ಸಮರತಿ, ಸಮರತಿಯ ಸುಖವ ಪರವಶತೆ ನುಂಗಿ, ಚನ್ನಬಸವಣ್ಣನವರು ಉಪಮಾತೀತಸ್ಥಿತಿಯಲ್ಲಿದ್ದರು. ರೂಪಿಲ್ಲದ ರೂಪು, ಗಮನವಿಲ್ಲದ ಗಮ್ಯ ಪ್ರಾಪ್ತವಾದುವು.

ಹೀಗೆ ಅವಿರಳಾನಂದಪರವಶರಾದ ಚನ್ನಬಸವಣ್ಣನವರು ನಿಷ್ಕ್ರಿಯಾತ್ಮಕರಾಗಿರಲಿಲ್ಲ. ಶರಣರ ಅನುಭಾವ, ನಿಷ್ಕ್ರಿಯೆಯನ್ನು ಬೋಧಿಸುವುದೇ ಇಲ್ಲ. ಅದು ಮೊದಲಿನಿಂದ ಕೊನೆಯುವರೆಗೂ ಕ್ರಿಯಾಜ್ಞಾನಸಾಮರಸ್ಯಯುಕ್ತವಾಗಿಯೇ ಸಾಗುವುದು. ಆದುದರಿಂದ ಚನ್ನಬಸವಣ್ಣನವರ ಶಿವಾನುಭಾವ ಅಸದೃಶವಾದ ಲೋಕಸಂಗ್ರಹಕಾರ್ಯವನ್ನೆಸಗಿದೆ. ಅವರು ಬಸವಣ್ಣನವರಿಗೆ ಸದ್ಭಾವವಾಗಿ, ಸುಜ್ಞಾನವಾಗಿ, ಸತ್ಕ್ರಿಯೆಯಾಗಿ ನಿಂತಿರುವರು. ಅವರು ಕೈಕೊಂಡ ತಾತ್ವಿಕ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಕ್ರಾಂತಿಯಲ್ಲಿ ಚನ್ನಬಸವಣ್ಣನವರೇ ನೇತಾರ. ಷಟ್‌ಸ್ಥಲನಿರ್ಣಯಮಾಡಿದ ವಿಷಯವನ್ನು ಹಿಂದೆ ವಿವರಿಸಲಾಗಿದೆ. ಶಿವಯೋಗ ಸರ್ವಾಚಾರಸಂಪತ್ತಿನ ಘನಮಹಿಮೆಯನ್ನು ನಿಷ್ಕರ್ಷಿಸಿ, ಅದನ್ನು ಜೀವಿಸಿ ಶರಣಜೀವಿಗಳಾದರು.

ತತ್ವನಿರ್ಣಯದ ಗುರಿ ಸಮಾಜೋದ್ಧಾರವಾಗಿದ್ದಿತು. ಆದುದರಿಂದ ಅಷ್ಟಾವರಣ ಪಂಚಾಚಾರಗಳನ್ನು ನೂತನ ಸಮಾಜ ರಚನೆಗೆ ಅನುವಾಗುವಂತೆ ಅಣಿಗೊಳಿಸಿದುದರ

೧. ಶೂಸಂ. ೧೧-೪೮,

ಶ್ರೇಯಸ್ಸು ಚನ್ನಬಸವಣ್ಣನವರಿಗೆ ಸಲ್ಲುತ್ತದೆ. ಧರ್ಮತತ್ವಗಳು ನಿರ್ಮಲವಾದ ಸಮಾಜವನ್ನು ಕಟ್ಟಲಿಕ್ಕೆ ಅನುಕೂಲವಾಗಬೇಕೆಂದು ವೀರಶೈವವನ್ನು ವಿಶಾಲವಾದ ತಳಹದಿಯ ಮೇಲೆ ನಿಲ್ಲಿಸಿದರು. ಜಾತಿ-ಮತ, ಕುಲ-ಗೋತ್ರ, ನಾಮ-ಸೀಮೆಗಳ ಹಂಗು ಹರಿದುಹಾಕಿ, ಧರ್ಮವನ್ನು ಸರ್ವರ ಸ್ವತ್ತನ್ನಾಗಿ ಮಾಡಿದರು. ವೀರಶೈವ ಧರ್ಮವನ್ನು ವಿಶ್ವಧರ್ಮವಾಗುವಂತೆ ಮಾಡಿದುದರ ಪುಣ್ಯವಿಶೇಷದ ಬಹುಭಾಗ ಚನ್ನಬಸವಣ್ಣನವರಿಗೆ ಸಲ್ಲುತ್ತದೆ.

ಕನ್ನಡ ಸಾಹಿತ್ಯದಲ್ಲಿ ವಚನವಾಙ್ಮಯವೊಂದು ಮಹಾಮೇರುವಿದ್ದಂತೆ. ಅಲ್ಲಿ ಚನ್ನಬಸವಣ್ಣನವರ ವಚನಗಳು ಅತ್ಯುನ್ನತವಾದ ಸ್ಥಾನವನ್ನು ಅಲಂಕರಿಸಿವೆ. 'ಎಮ್ಮಯ್ಯ ಉಸುರಿದುದು ವಚನವಾಗಿದೆ' ಎಂದು ಸಿದ್ಧರಾಮಯ್ಯದೇವರು ಹೇಳಿದ ಮಾತು ನಿತ್ಯ ಸತ್ಯವಾಗಿದೆ ! ಅಸಂಖ್ಯ ವಚನಗಳಲ್ಲದೆ,

(೧) ಕರಣಹಸಿಗೆ
(೨) ಮಿಶ್ರಾರ್ಪಣ
(೩) ಹಿರಿಯ ಮಂತ್ರಗೋಪ್ಯ
(೪) ಪದಮಂತ್ರ ಗೋಪ್ಯ
(೫) ಸಕೀಲದ ವಚನಗಳು

ಇವೇ ಮೊದಲಾದುವುಗಳನ್ನು ಚನ್ನಬಸವಣ್ಣನವರು ರಚಿಸಿರುವರು. ಇವನ್ನು ಅವಲೋಕಿಸಿದರೆ, ತತ್ವಶಾಸ್ತ್ರದಲ್ಲಿ ಅವರಿಗಿದ್ದ ಅಪಾರವಾದ ಶಕ್ತಿ ವ್ಯಕ್ತವಾಗುತ್ತದೆ. ಅನುಭಾವ ಅದರೊಂದಿಗೆ ಕೂಡಿ ಕಾವ್ಯವೂ ಆಗಿದೆ. ಇಂತಹ ಕಾವ್ಯಶ್ರೀಯನ್ನು ಮಂತ್ರಗೋಪ್ಯ ಹಿರಿಯಮಂತ್ರಗೋಪ್ಯಗಳಲ್ಲಿ ಕಾಣಬಹುದು.

'ರುದ್ರಭಾರತ'ವೆಂಬ ಇನ್ನೊಂದು ಕೃತಿಯ ಕರ್ತೃತ್ವವನ್ನು ಚನ್ನಬಸವಣ್ಣನವರಿಗೆ ಆರೋಪಿಸಲಾಗಿದೆ. ಆ ಗ್ರಂಥವು ಸೃಷ್ಟಿಯ ವ್ಯುತ್ಪತ್ತಿಯ ವಿವರಣೆಯಿಂದ ಆರಂಭವಾಗಿ, ಮುಂದೆ ಮುಸಲ್ಮಾನವನ್ನೊಳಗೊಂಡ ಅನೇಕ ಜಾತಿ ಉಪಜಾತಿಗಳೂ ಉದ್ಭವವಾದ ಅಸಂಗತ ವಿಷಯಗಳಿಂದ ಮುಕ್ತಾಯವಾಗುತ್ತದೆ. ವಿಷಯ, ಶೈಲಿ ಮುಂತಾದ ಯಾವ ದೃಷ್ಟಿಯಿಂದ ವಿಚಾರಿಸಿದರೂ ಅದು ಚನ್ನಬಸವಣ್ಣನವರ ಕೃತಿಯಾಗಿರಲು ಸಾಧ್ಯವೇ ಇಲ್ಲ. ಆ ಗ್ರಂಥದ ಕರ್ತೃ ಚನ್ನಬಸವಣ್ಣನೆಂಬವನೇ ಆಗಿದ್ದರೆ, ಆತನು ಬೇರೊಬ್ಬನಾಗಿರಬೇಕಲ್ಲದೆ ಷಡುಸ್ಥಲಮೂರ್ತಿ ಚನ್ನಬಸವಣ್ಣನವರಲ್ಲ. ಅವರ ಹೆಸರಿನಲ್ಲಿ ಮೇಘಚಕ್ರ, ಭೂಚಕ್ರ, ಜಪದ ಸಕೀಲ ಮುಂತಾದ ಚಿಕ್ಕ ಗ್ರಂಥಗಳು ದೊರೆಯುತ್ತವೆ. ಆದರೆ, ಅವು ಚನ್ನಬಸವಣ್ಣನವರವೇ ಎಂದು ನಿಷ್ಕರ್ಷಿಸಲು ಪ್ರಬಲವಾದ ಆಧಾರಗಳಿಲ್ಲ. ಅಲ್ಲಿಯ ವಿಷಯನಿರೂಪಣೆಯೂ ಅಷ್ಟೊಂದು ಸುಸಂಗತವಾಗಿರುವುದಿಲ್ಲ. ಆದುದರಿಂದ ಅವನ್ನು ನಾವು ಈಗ ಗಣನೆಗೆ ತೆಗೆದುಕೊಂಡಿರುವುದಿಲ್ಲ.

ವಚನಗಳ ಕರ್ತೃವಾಗಿ, ಶಾಸ್ತ್ರಗ್ರಂಥಗಳ ಸ್ರಷ್ಟಾರರಾಗಿ, ಚನ್ನಬಸವಣ್ಣನವರು ಕನ್ನಡ ಸಾಹಿತ್ಯದಲ್ಲಿ ಉನ್ನತವಾದ ಸ್ಥಾನವನ್ನು ಅಲಂಕರಿಸಿರುವರು. ವಿಶ್ವಧರ್ಮವೆನಿಸಿದ ವೀರಶೈವಕ್ಕೆ ಪಂಚಪ್ರಾಣರೆನಿಸಿ, ಅದನ್ನು ನಿರ್ಣಯಿಸಿ ತೋರಿಸಿದುದರಿಂದ ಭಾರತೀಯ

ಹಾಗೂ ಕನ್ನಡನಾಡಿನ ತಾತ್ವಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಚನ್ನಬಸವಣ್ಣನವರ ಸ್ಥಾನ ಹಿರಿದಾಗಿದೆ. ಅದ್ಭುತವಾದ ಸಾಮಾಜಿಕ ಕ್ರಾಂತಿಗೆ ನೇತಾರರಾಗಿ ನಿಂತುದರಿಂದ ಭಾರತೀಯ ಹಾಗೂ ಜಾಗತಿಕ ಸಮಾಜೋದ್ಧಾರಕರಲ್ಲಿ ಚನ್ನಬಸವಣ್ಣನವರ ಸ್ಥಾನ ಮಿಗಿಲಾಗಿದೆ. ಬಸವಾದಿ ಪ್ರಮಥರಲ್ಲಿ ಅವರ ಸ್ಥಾನ ಅತ್ಯಂತ ಹಿರಿದಾಗಿದ್ದಿತೆಂದು ಬೇರೆ ಹೇಳಲೇಬೇಕಿಲ್ಲ. ಮುಂದೆ ಉದ್ಧರಿಸುವ ವಚನಗಳು ಅದಕ್ಕೆ ಸಾಕ್ಷಿಯಾಗಿ ನಿಲ್ಲುತ್ತವೆ. ಅವರ ಹೆಸರನ್ನು ತಮ್ಮ ಅಂಕಿತವನ್ನಾಗಿಟ್ಟುಕೊಂಡು ಶರಣರು ವಚನಗಳನ್ನು ರಚಿಸಿದು ದುಂಟು. ಆ ಅಂಕಿತಗಳು ಇಂತಿವೆ:

| | ಅಂಕಿತ | ಶರಣರು |
|---|---|---|
| ೧. | ಬಸವಣ್ಣ ಪ್ರಿಯ ಕೂಡಲ ಚನ್ನ ಸಂಗಮದೇವ | ಅಕ್ಕನಾಗಮ್ಮ |
| ೨. | ನಿಃಕಳಂಕ ಕೂಡಲ ಚನ್ನಸಂಗಮದೇವ | ಹಡಪದ ರೇಚಣ್ಣ |
| ೩. | ಚನ್ನಬಸವಣ್ಣ ಸಾಕ್ಷಿ | ಕನ್ನಡಿಕಾಯಕದ ಅಮುಗಿದೇವಯ್ಯ |
| ೪. | ಕಮಳೇಶ್ವರಲಿಂಗ ಚನ್ನಕೂಡಲ ರಾಮೇಶ್ವರಲಿಂಗ | ,, |
| ೫. | ಚನ್ನಬಸವಣ್ಣ ಪ್ರಿಯ ಭೋಗ ಮಲ್ಲಿ-ಕಾರ್ಜುನ | ಪ್ರಸಾದಿ ಭೋಗಣ್ಣ |
| ೬. | ಚನ್ನಬಸವಣ್ಣಪ್ರಿಯ ಚಂದೇಶ್ವರಲಿಂಗ | ನುಲಿಯ ಚಂದಯ್ಯ |
| ೭. | ಚನ್ನಬಸವಣ್ಣಪ್ರಿಯ ಏಲೇಶ್ವರಲಿಂಗ | ಏಲೇಶ್ವರದ ಕೇತಯ್ಯ. |

ಹೀಗೆ ವಚನಾಂಕಿತಗಳಲ್ಲಿ ಚನ್ನಬಸವಣ್ಣನವರ ಹೆಸರು ಕಂಡುಬರುವುದು ಅವರ ದಿವ್ಯಘನದ್ಯೋತಕ. ವಚನಗಳಲ್ಲಿ ಕಂಡುಬಂದಂತೆ. ಕ್ರಿ. ಶ. ೧೭೪೪ನೆಯ ಇಸ್ವಿಯ ಒಂದು ತಾಮ್ರ ಶಾಸನದಲ್ಲಿ ಚನ್ನಬಸವಣ್ಣನವರ ಹೆಸರು ಉಲ್ಲಿಖಿತವಾಗಿರುವುದು ಗಮನಾರ್ಹವಾಗಿದೆ.[೧]

ಅಖಂಡ ಜ್ಞಾನದ ಸಾಕಾರರೂಪವಾಗಿ ಮೈವೆತ್ತ ಚನ್ನಬಸವಣ್ಣನವರ ಮಹಿಮೆ ಯನ್ನು ಬಣ್ಣಿಸಲು ಬಯಲು ಬಾಯ್ದೆರೆಯಬೇಕಾಗುತ್ತದೆ, ಶಬ್ದ ನಿಃಶಬ್ದವಾಗಬೇಕಾಗು ತ್ತದೆ; ಮಾತು ಜ್ಯೋತಿರ್ಲಿಂಗವಾಗಬೇಕಾಗುತ್ತದೆ. ಆಗ ತಾನೆ ನಿರವಯ, ನಿರುಪಾಧಿಕ, ಪರಂಜ್ಯೋತಿಸ್ವರೂಪರಾದ ಚನ್ನಬಸವಣ್ಣನವರ ವ್ಯಕ್ತಿತ್ವದ ಮಹಿಮೆ ಗೋಚರವಾಗು ತ್ತದೆ. ಇದೀಗ ಘನಕ್ಕೆ ಘನವಾದ ಆ ವ್ಯಕ್ತಿತ್ವವನ್ನು ಬಣ್ಣಿಸಲು, ಅಣುವಿಗೆ ಅಣುವಾದ ಈ ಶಬ್ದ ನಾಚಿ ಮುಗ್ಧವಾಗುತ್ತದೆ. ಜಗತ್ತಿನ ತತ್ವಜ್ಞಾನಿಗಳಲ್ಲಿ. ಸಾಮಾಜಿಕ ಕ್ರಾಂತಿ ಕಾರರಲ್ಲಿ. ಶ್ರೇಷ್ಠ ಸಾಹಿತ್ಯನಿರ್ಮಾಪಕರಲ್ಲಿ ಅವರ ಸ್ಥಾನ ಮಿಗಿಲೆಂದು ಹೇಳಬಯಸು ತ್ತೇವೆ. ಅವರ ಮಹಿಮೆಯನ್ನು ಅನೇಕ ಶರಣರು ಕೊಂಡಾಡಿರುವರು. ಚನ್ನಬಸವಣ್ಣ

"Epigraphia Carnatica Vol. V. Part. II Page 461: "ಧರ್ಮಾಧರ್ಮಕ್ಕೆ ಒರೆ ಗಲ್ಲರಾದ ಶ್ರೀ. ಚನ್ನಬಸವೇಶ್ವರ ದೇವರ ಸಾಂಪ್ರದಾಯಕವಾದ . . ."

ಚಿತ್‌ಸ್ವರೂಪನೆಂದು ಹಲವರು ಹೇಳಿದರೆ, ಲಿಂಗಸ್ವರೂಪನೆಂದು ಮತ್ತೆ ಕೆಲವರು ಬಣ್ಣಿಸಿದರು. ವೀರಶೈವದ ಗುರು ಲಿಂಗ ಜಂಗಮ, ಇಷ್ಟ ಪ್ರಾಣ ಭಾವ, ಸ್ಥೂಲ ಸೂಕ್ಷ್ಮ ಕಾರಣ ಮುಂತಾದ ತ್ರಿವಿಧದ ಪರಿಭಾಷೆಯಲ್ಲಿ ಬಸವಣ್ಣ, ಚನ್ನಬಸವಣ್ಣ, ಪ್ರಭುದೇವ, ನವರ ಹೆಸರುಗಳನ್ನು ಉಲ್ಲೇಖಿಸುವುದುಂಟು. ಚನ್ನಬಸವಣ್ಣನವರು ಚಿದ್ರೂಪರಾಗಿ, ಲಿಂಗಸ್ವರೂಪರಾಗಿ ವೀರಶೈವರಿಗೆ ಮಂತ್ರಮೂರ್ತಿಗಳಾಗಿರುವರು. ಅವರ ಬಗೆಗೆ ಭಕ್ತಿ ಭಾವವನ್ನು ವ್ಯಕ್ತಪಡಿಸಿದ ಶರಣರು, ಅನೇಕ ವೀರಶೈವ ಕವಿಗಳು ಕಾವ್ಯಾರಂಭದಲ್ಲಿ ಚನ್ನಬಸವಣ್ಣನವರ ಹೆಸರನ್ನೆತ್ತದೆ ತಮ್ಮ ಕಾವ್ಯವನ್ನು ಆರಂಭಿಸುವಂತಿಲ್ಲ. ಅನೇಕ ಕಾವ್ಯಗಳಲ್ಲಿ ಚನ್ನಬಸವಣ್ಣನವರ ಚರಿತ್ರೆ ಬಿಡಿಯಾಗಿಯೋ ಇಡಿಯಾಗಿಯೋ ಬಂದಿರುವುದನ್ನು ಕಾಣುತ್ತೇವೆ. ಚನ್ನಬಸವ ಪುರಾಣವಂತೂ ಅವರ ದಿವ್ಯ ವ್ಯಕ್ತಿತ್ವವನ್ನು ಕಂಡರಿಸುದಕ್ಕಾಗಿ ಹುಟ್ಟಿದ ಮಹಾಕಾವ್ಯ. ಚನ್ನಬಸವಾಷ್ಟಕ, ಚನ್ನಬಸವರಗಳೆ, ಮುಂತಾದ ಅನೇಕ ಕೃತಿಗಳೂ ಹಾಡುಗಳೂ ಹುಟ್ಟಿ ಬೆಳೆದಿವೆ. ಜನಜೀವನದಲ್ಲಿ ಅವರು ಬೆರೆತಿರುವುದರಿಂದ ಅನೇಕ ಜಾನಪದ ಕೃತಿಗಳೂ ಚನ್ನಬಸವಣ್ಣನವರ ಬಗೆಗೆ ಮೈದಾಳಿವೆ. ಹೀಗೆ ಶರಣರೂ ಕವಿಗಳೂ ಚನ್ನಬಸವಣ್ಣನವರನ್ನು ವಿವಿಧಮುಖವಾಗಿ ಕೊಂಡಾಡಿರುವುದನ್ನು ಕೆಳಗೆ ಕಾಣಬಹುದು.

# ಶರಣವಾಣಿಯಲ್ಲಿ ಚನ್ನಬಸವಣ್ಣ

## ಪ್ರಭುದೇವರು

“ಕಿಱಿಯರಾದಡೇನು ಹಿರಿಯರಾದಡೇನು,
ಅಱಿವಿಂಗೆ ಹಿರಿದು ಕಿಱಿದುಂಟೆ?
ಆದಿ ಅನಾದಿಯಿಲ್ಲದಂದು, ಅಜಾಂಡ ಬ್ರಹ್ಮಾಂಡಕೋಟಿಗಳು
ಉದಯವಾಗದಂದು,
ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೇ ಮಹಾಜ್ಞಾನಿಯೆಂಬುದು
ಕಾಣಬಂದಿತ್ತು ಕಾಣಾ, ಚನ್ನಬಸವಣ್ಣ.”[೧]

“ಬೆಳಗುವ ಜ್ಯೋತಿಯ ತಿರುಳಿನಂತೆ ಹೊಳೆವ ಕಂಗಳಕಾಂತಿ
ಒಳಹೊಱಗೆನ್ನದೆ ಅಳವಟ್ಟ ಶಿವಯೋಗಿಯ ಕಂಡೆ ನೋಡಾ !
ನಿಜವುಂಡ ನಿರ್ಮಳದ ಘನವಕಂಡು ಬೆಱಗಾದೆನು;
ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣನಿಂದಲಾನು ಬದುಕಿದೆನು.”[೨]

“ಲೋಕ ಲೌಕಿಕವನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ
ಗುಹೇಶ್ವರನ ಶರಣ ಚನ್ನಬಸವಣ್ಣನ ಘನವನು,
ಬಸವಣ್ಣನ ಕೃಪೆಯಿಂದಲಾನಱಿದು ನಮೋ ನಮೋ ಎನುತಿರ್ದೆನು.”[೩]

“ಬಿಳಿಯ ಮುಗಿಲ ನಡುವಣ ಕರಿಯ ನಕ್ಷತ್ರದ ಮಱೆಯಲ್ಲಿ
ಉರಿಯಂಕುರ ಹುಟ್ಟಿ ಒಂದೆರಡೆಂಬಂತೆ ತೋಱುತ್ತದೆ.
ಹೊಸ್ತಿಲ ಜ್ಯೋತಿಯಂತೆ ಒಳಹೊಱಗೆ ಬೆಳಗುತ್ತಿದೆ.
“ಅದು ನೋಡಿದಡೆ ಘನ, ನೋಡದಿರ್ದಡೆ ಸಹಜ;
ಗುಹೇಶ್ವರ ಲಿಂಗದಲ್ಲಿ ಈ ಭೇದವ ಚನ್ನಬಸವಣ್ಣ ಬಲ್ಲ.”[೪]

“ಆಚಾರದಲ್ಲಿ ಅನುಭಾವಿ. ಪ್ರಸಾದದಲ್ಲಿ ಪರಿಣಾಮಿ;
ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣನೆಂಬ ಪ್ರಸಾದಿಗೆ
ನಮೋ ನಮೋ ಎನುತಿರ್ದೆನು.”[೫]

---

೧. **ಅವಚ.** ಪು. ೨೩೫—೧೦೬೫. ೨. **ಅವಚ.** ಪು. ೨೩೨—೧೦೫೦. ೩. ಲಿಂವಿಚಾ. ಪು. ೩.
೪. **ತಾಪ್ರ.** ೩೭. ಪು. ೧೫೭-೫೩. ೫. **ಚೆಸಾ.** ಪು. ೨೫೦.

"......ಲಿಂಗಜಂಗಮ ಪ್ರಸಾದದ ಮಹಾತ್ಮೆಗೆ
ಬಸವಣ್ಣನೇ ಆದಿಯಾದನೆಂಬುದನಱಿದ ಸ್ವಯಂಭುಜ್ಞಾನಿ
ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣನೊಬ್ಬನೇ."[೧]

"ಗುರುವಿಲ್ಲದ ಶಿಷ್ಯ, ಶಿಷ್ಯನಿಲ್ಲದ ಗುರು; ಇಂತೀ ಒಂದಕ್ಕೊಂದು ಇಲ್ಲದೆ
ಲಿಂಗದಲ್ಲಿ ಸಹಜದುದಯವಾದ ನಮ್ಮ ಚನ್ನಬಸವಣ್ಣ."[೨]

"......ಪ್ರಸಾದದ ಹಾದಿಯನೆಲ್ಲರಿಗೆ ತೋಱಿ,
ಮಹಾಪ್ರಸಾದದ ಬೆಳವಿಗೆಯ ಮಾಡಿದನು,
ಗುಹೇಶ್ವರನ ಶರಣ ಚನ್ನಬಸವಣ್ಣ."[೩]

"ಬಸವಣ್ಣ ಎಂಬಲ್ಲಿ ಎನ್ನ ತನು ಬಯಲಾಯಿತ್ತು;
ಚನ್ನಬಸವಣ್ಣ ಎಂಬಲ್ಲಿ ಎನ್ನ ಪ್ರಾಣ ಬಯಲಾಯಿತ್ತು."[೪]

"ಬಯಲ ಬಣ್ಣಕ್ಕೆ ತಂದು, ನೆಳಲ ಶೃಂಗಾರವ ಮಾಡಿದ
ಗುಹೇಶ್ವರನ ಶರಣ ಚನ್ನಬಸವಣ್ಣಂಗೆ ಶರಣೆನುತಿರ್ದೆನು."[೫]

"ಪಂಚೇಂದ್ರಿಯ ಗುಹ್ಯವ ತೊಡೆದು,
ರಸವ ಕಟ್ಟಬಲ್ಲ ಗುಹೇಶ್ವರನ ಶರಣ ಚನ್ನಬಸವಣ್ಣಂಗೆ
ನಮೋ ನಮೋ ಎನುತಿರ್ದೆನು."[೬]

"......ಅವಿರಳಜ್ಞಾನಿ ಚನ್ನಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎನುತಿರ್ದೆನು."[೭]

"ಗುಹೇಶ್ವರಲಿಂಗದಲ್ಲಿ, ನೀನು ಕಾಯವಿಡಿದು
ಕಲ್ಪಿತವ ಹೊದ್ದೆಯೆಂಬುದು,
ಕಾಣಬಂದಿತ್ತು ನೋಡಾ, ಚನ್ನಬಸವಣ್ಣಾ !."[೮]

"......ಗುಹೇಶ್ವರಲಿಂಗದಲ್ಲಿ ಸರ್ವಸಂದೇಹವ ಕಳೆದಿಪ್ಪ
ಚನ್ನಬಸವಣ್ಣಂಗೆ ನಮೋ ನಮೋ ಎಂಬೆ."[೯]

---

೧. **ಅವಚ.** ಪು. ೨೩೩, ೧೦೫೫. ೨. **ಶೂಸಂ.** ೧೯-೪೬. ೩. **ಅವಚ.** ಪು ೨೩೬, ೧೦೭೧.
೪. **ಅವಚ.** ಪು. ೨೦೨-೯೧೨. ೫. **ಅವಚ.** ಪು. ೧೮೨-೮೨೨. ೬. ಚೆಸಾ. ಪು. ೨೫೦-೬.
೭. ಚೆಸಾ. ಪು. ೨೫೦-೫. ೮. **ಅವಚ.** ಪು. ೨೩೩-೧೦೩೬. ೯. **ಅವಚ.** ಪು.೨೩೪-೧೦೬೦.

"ಆದಿಯಲಿಂಗವ ಸಾಧ್ಯವಮಾಡಿ ತೋಱಿದ
ಗುಹೇಶ್ವರನ ಶರಣ ಚನ್ನಬಸವಣ್ಣಂಗೆ,
ಶರಣೆಂದು ಬದುಕಿದೆನು ಕಾಣಾ, ಸಂಗನ ಬಸವಣ್ಣಾ !."[೧]

"ಗುಹೇಶ್ವರಲಿಂಗದಲ್ಲಿ ಸಹಜದ ಉದಯವಾದ
ನಮ್ಮ ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು."[೨]

"ಗುಹೇಶ್ವರಲಿಂಗದಲ್ಲಿ, ಭರಿತ ಬೋನದ ಅನು
ಚನ್ನಬಸವಣ್ಣಂಗಾಯಿತ್ತು."[೩]

"ಗುಹೇಶ್ವರಲಿಂಗದಲ್ಲಿ ನೀನೊಬ್ಬನೇ ಮಹಾಜ್ಞಾನಿಯೆಂಬುದು,
ಕಾಣಬಂದಿತ್ತು ಕಾಣಾ, ಚನ್ನಬಸವಣ್ಣಾ !."[೪]

"ಗುಹೇಶ್ವರಲಿಂಗದಲ್ಲಿ ಸರ್ವಸಂಸಾರವಿರಹಿತ ಚನ್ನಬಸವಣ್ಣಂಗೆ
ನಮೋ ನಮೋ ಎಂಬೆನು."[೫]

"ಗುಹೇಶ್ವರಲಿಂಗದಲ್ಲಿ ನಿನ್ನ ಆಚಾರಭಿಕ್ಷವನಿಕ್ಕಾ, ಚನ್ನಬಸವಣ್ಣಾ !."[೬]

"......ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣನಿಂದ ಸುಖಿಯಾದೆನು."[೭]

"ಗುಹೇಶ್ವರಲಿಂಗವು ಹಿಡಿವಡೆದ ಕಂಬ,
ಬಚ್ಚಬಯಲಾಯಿತ್ತು ನೋಡಾ, ಚನ್ನಬಸವಣ್ಣಾ."[೮]

"ಸರ್ವಜೀವ ಪರಿಪೂರ್ಣ ಕಳೆ, ಚನ್ನಬಸವಣ್ಣನಿಂದ ಎನಗಾಯಿತ್ತು."[೯]

"ಎನ್ನ ತನುವೇ ಚನ್ನಬಸವಣ್ಣನಯ್ಯಾ...... !"[೧೦]

---

೧. **ಅವಚ.** ಪ್ರ. ೨೪೮-೧೧೩೨. ೨. **ಅವಚ.** ಪ್ರ. ೨೪೮-೧೧೩೩, ೩, **ಅವಚ.** ಪ್ರ. ೨೪೮, ೧೧೩೦. ೪. **ಅವಚ.** ಪು. ೨೩೫-೧೦೬೫. ೫. **ಅವಚ.** ಪ್ರ. ೨೩೯-೧೦೬೨. ೬. **ಅವಚ.** ೨೩೩. ೧೦೫೬. ೭. **ಅವಚ.** ಪ್ರ. ೨೩೬-೧೦೭೦. ೮. **ತಾಪ್ರ.** ೮೨ ಪು. ೫೯-೨೯. ೯. **ಅವಚ.** ಪು. ೨೦೩-೯೧೬. ೧೦. **ಅವಚ.** ಪು. ೨೪೦-೧೦೯೧.

"ಚನ್ನಬಸವಣ್ಣನಿಂದ
ಗುಹೇಶ್ವರಲಿಂಗವೆಂಬುದು ಪ್ರಮಾಣಾಯಿತ್ತು."[೧]

"ಎನಗೊಮ್ಮೆ ಸಂಗನ ಬಸವಣ್ಣನ ಶ್ರೀಪಾದದ ಘನವ
ತಿಳುಹಿಕೊಡಾ, ಚನ್ನಬಸವಣ್ಣಾ !"[೨]

"ಗುಹೇಶ್ವರಲಿಂಗಕ್ಕೆ ಒಡಲಿಲ್ಲ ಎಂಬುದ ನಱುಪಿದೆಯಲ್ಲಾ,
ಚನ್ನಬಸವಣ್ಣಾ !"[೩]

"ಸ್ವಯಂಭು ಜ್ಞಾನಿ ಚನ್ನಬಸವಣ್ಣ."[೪]

**ಬಸವಣ್ಣ**

"ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಸಿಯು ನೋಡಾ !
ಸುಗಂಧಬಂಧಬಂಧುರದಂತೆ ಹುಟ್ಟುತ್ತಿದೆ ಪರಿಮಳ.
ಆದಿ ಅನಾದಿ ಇಲ್ಲದ ಮುನ್ನ ತನ್ನಂದವೆ ತಾನಾಗಿರ್ದಕಾರಣ,
ಮುಟ್ಟದೆ ತಟ್ಟದೆ ಗುರುಕಾರುಣ್ಯವ ಪಡೆದು, ಲಿಂಗಸ್ವಯವಾಗಿ,
ಎನಗೆ ಗತಿಪಥವ ತೋಱಿಸಬೇಕೆಂದು ಆಗಾದನು
ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣನು."[೫]

"ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯಾ ;
ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯಾ.
ಇದರ ಸಂಗಸುಖದನುಭವವನು ಕೂಡಲಸಂಗಮದೇವ ತಾನೇ ಬಲ್ಲ"[೬]

"ಎನ್ನ ಪೂರ್ವಾಶ್ರಯವನೆತ್ತಿ ತೋಱಿ, ತನ್ನತ್ತೆ ತೆಗೆದುಕೊಂಡನು,
ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣನು."[೭]

"ಸಮರತಿ ಸಮಸಂಧಾನದ ಸಂಗಸುಖವು
ನಿನ್ನಿಂದಲೆನಗೆ ಸಾಧ್ಯವಾಯಿತ್ತಲ್ಲದೆ,
ಎನಗೆ ತೋಱಿದವರಾರು ಹೇಳಾ, ಲಿಂಗೈಕ್ಯದ ಹೊಲಬ?"[೮]

---

೧. **ಅವಚ.** ಪು. ೨೬೫, ೧೨೧೧, ೨. **ಅವಚ.** ಪು. ೨೦೨, ೯೧೦. ೩. **ಅವಚ.** ಪು. ೨೬೫-೧೨೧೦. ೪. **ಶೂಸಂ.** ಪು. ೧೭೫, ೩೨. ೫. **ಚೆಸಾ.** ಪು. ೨೪೭-೧; ೬. **ಬಷವ.** ಪು. ೧೩೪-೫೧೭. ೭. ಚೆಸಾ. ಪು. ೨೪೭-೩, ೮. **ಶೂಸಂ.** ೮-೮೨.

"ಲಿಂಗವೆ ಗೂಡಾಗಿ, ಜಂಗಮವೆ ಸ್ವಾಯತವಾಗಿ,
ಪ್ರಸಾದವೆ ಪ್ರಾಣವಾಗಿ ಪರಿಣಾಮದಲ್ಲಿ ಇಪ್ಪ ......ಚನ್ನಬಸವಣ್ಣ."[೧]

"ಚನ್ನಬಸವಣ್ಣನೆಂಬ ಮಹಾಪ್ರಸಾದಿ
ಎನ್ನ ವಾಙ್ಮನಕ್ಕೆ ಗೋಚರನಾಗಿರ್ದುದ,
ನಾನೇನೆಂದುಪಮಿಸುವೆನಯ್ಯಾ."[೨]

"ಅಂಗದ ಮೇಲೆ ಲಿಂಗ ಆಯತವಾಗಿ
ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣನ
ಕರುಣದಿಂದಲಾನು ಬದುಕಿದೆನು."[೩]

"ಕೂಡಲಸಂಗಮದೇವಯ್ಯಾ ಚನ್ನಬಸವಣ್ಣನ ಕರುಣದಿಂದೆ
ಮಡಿವಾಳನೆಂಬ ಪರುಷ ಸಾಧ್ಯವಾಯಿತ್ತಯ್ಯಾ ಎನಗೆ."[೪]

"ಎನ್ನ ಕಾಯದ ಕರಸ್ಥಳದಲ್ಲಿ ಪ್ರಭುದೇವರ ಕಂಡೆನು,
ಎನ್ನ ಮನದ ಕರಸ್ಥಳದಲ್ಲಿ ಚನ್ನಬಸವಣ್ಣನ ಕಂಡೆನು."[೫]

"ಕೂಡಲಸಂಗಮದೇವರಲ್ಲಿ ಸಾವಧಾನ ಪ್ರಸಾದಿ ಚನ್ನಬಸವಣ್ಣನು."[೬]

"ಇನ್ನು ಮರ್ತ್ಯಲೋಕದೊಳಗೆ ಬಂದೆನಾದರೆ,
ಚನ್ನಬಸವಣ್ಣನ ಶ್ರೀಪಾದದಾಣೆ."[೭]

"ಚನ್ನಬಸವಣ್ಣಂಗೆ 'ನಮೋ ನಮಃ' ಎಂಬೆನು."[೮]

"ಮನ ಚನ್ನಬಸವಣ್ಣನಲ್ಲಿ ಸಿಲುಕಿತ್ತು."[೯]

"ಚನ್ನಬಸವಣ್ಣನೆನ್ನನಾಗು ಮಾಡಿ ಉಳುಹಿದನಾಗಿ,
ಆನು ಕೃತಾರ್ಥನಾದೆನು."[೧೦]

---

೧. ಶೂಸಂ. ೧೯-೪೮. ೨. **ಲಿಂಪವ.** ಭಾಗ ೩ ಪು. ೭೯; ೩. **ಬಹೆವ.** ಪು. ೬೬-೧೮೯; ೪. **ಬಹೆವ.** ಪು. ೬೮-೧೯೬; ೫. **ಬಹೆವ.** ಪು. ೫೭-೧೫೭. ೬. **ಬಹೆವ.** ಪು. ೬೬-೧೯೧. ೭. **ಬಹೆವ.** ಪು. ೪-೨. ೮. **ಬಹೆವ.** ಪು. ೨೦,-೬೦. ೯. **ಬಹೆವ.** ಪು, ೨೩೯-೯೯೧. ೧೦. **ಬಹೆವ.** ಪು. ೭೦-೨೦೪.

"ಪಂಚವಿಂಶತಿ ತತ್ತ್ವದಲ್ಲಿ ಪರಿಣಾಮಿ,
ಕೂಡಲಸಂಗಮದೇವರಲ್ಲಿ, ಚನ್ನಬಸವಣ್ಣನು."[೧]

"ಕೂಡಲಸಂಗನ ಸ್ವರೂಪೆಂದು, ನಿನ್ನ ಕಂಡಿಪ್ಪೆ ಕಾಣಾ,
ಚನ್ನಬಸವಣ್ಣಾ !"[೨]

"ಚನ್ನಬಸವಣ್ಣನ ಸನ್ನಿಧಿಯಿಂದಲಾನು ಬದುಕಿದೆನು."[೩]

"ಚನ್ನಬಸವಣ್ಣಾ, ಇಂದಿನಲ್ಲಿ
ಕೂಡಲಸಂಗಮದೇವರ ತೃಪ್ತಿಯ ತೆಱನ ನೀನು ತೋಱಿದೆಯಾಗಿ,
ನಾನು ಬದುಕಿದೆನು ಕಾಣಾ, ಚನ್ನಬಸವಣ್ಣಾ !"[೪]

"ಕೂಡಲಸಂಗಮದೇವಯ್ಯಾ,
ಚನ್ನಬಸವಣ್ಣನ ತೆತ್ತಿಗನಾದ ಬಳಿಕ, ನಾನು ನಿಮ್ಮಲ್ಲಿ ಕೂಡಿ, ಅರ್ಪಿಸಿ
ಶುದ್ಧನಪ್ಪೆನಯ್ಯಾ !"[೫]

"ಚನ್ನಬಸವಣ್ಣನ ಪಾದಕ್ಕೆ 'ನಮೋ ನಮಃ' ಎಂಬೆನು."[೬]

"ಎನಗೆ ನೀನು ಪರಮಾರಾಧ್ಯ ಕಾಣಾ, ಚನ್ನಬಸವಣ್ಣಾ !"[೭]

"ಗುರುವಿನ ಮುಖದಲ್ಲಿ ಬಂದ ಪ್ರಸಾದವಲ್ಲದೆ,
ಮತ್ತೇನನ್ನೂ ಮುಟ್ಟಲೀಯನು
ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣನು."[೮]

"ಇಂತಪ್ಪ ಭಕ್ತಿಯ ಪುಣ್ಯವು ಚನ್ನಬಸವಣ್ಣನಿಗುಂಟಾಗಿ,
ನಾನು ಬದುಕಿದೆನಯ್ಯಾ, ಕೂಡಲಸಂಗಮದೇವಾ."[೯]

"ತನ್ನತ್ತ ತೆಗೆದುಕೊಂಡನು,
ಕೂಡಲಸಂಗಮದೇವಯ್ಯಾ, ಚನ್ನಬಸವಣ್ಣನು."[೧೦]

---

೧. **ಬಹೆವ.** ಪು. ೭೩-೨೧೨ ೨. **ಬಹೆವ.** ಪು, ೭೪.-೨೧೯; ೩. **ಬಹೆವ.** ಪು. ೭೮-೨೩೨; ೪. **ಬಹೆವ.** ಪು. ೭೯–೨೩೬, ೫. **ಬಹೆವ.** ಪು. ೯೭-೨೮೯. ೬. **ಬಹೆವ.** ಪು. ೮೩-೨೫೦. ೭. **ಬಹೆವ.** ಪು. ೯೦-೨೬೮; ೮. **ಬಹೆವ.** ಪು. ೧೦೦-೩೦೧. ೯. **ಬಹೆವ.** ಪು. ೧೦೨-೩೦೫; ೧೦. **ಬಹೆವ.** ಪು. ೯೯–೨೯೭;

"ಪ್ರಸಾದದಲ್ಲಿ ಬ್ರಹ್ಮಚಾರಿಯಾದನು
ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣನು."[೧]

"ಕೂಡಲಸಂಗಮದೇವರು ಸಾಕ್ಷಿಯಾಗಿ
ನೀನು ನಮ್ಮ ಕೋಪಿಸಿದರೆ ಕೋಪಿಸು ಚನ್ನಬಸವಣ್ಣಾ !"[೨]

"ನಿಮ್ಮ ಚಮ್ಮಾವುಗೆಯ ಹೊತ್ತುಕೊಂಡು
ಕುಣಿದಾಡುವೆ ಕಾಣಾ, ಚನ್ನಬಸವಣ್ಣಾ."[೩]

"ಕೂಡಲಸಂಗಮದೇವರು 'ಎನ್ನನಿತ್ತ ಬಾ' ಎಂಬ
ಕಾಲವ ತಿಳುಹಾ, ಚನ್ನಬಸವಣ್ಣಾ."[೪]

"ಚನ್ನಬಸವಣ್ಣನ ಕರುಣದ ಕಂದನಾಗಿ
ಉಳಿದೆನು, ಕಾಣಾ ಮಡಿವಾಳಯ್ಯಾ."[೫]

"ಚನ್ನಬಸವಣ್ಣನಿಂದ ಎಂತಕ್ಕೆ ಬದುಕಿದೆನು."[೬]

"ಅನಾದಿಲಿಂಗಸ್ವರೂಪ ಚನ್ನಬಸವಣ್ಣನೆಂಬೆ, ನೋಡಾ
. . . . . . . . . . . . . . . . . . . . . . . . . . . .
"ಅನಾದಿ ನಿಃಕಾಮ್ಯ ಶೂನ್ಯ ಲಿಂಗಸ್ವರೂಪ ಚನ್ನಬಸವಣ್ಣನೆಂಬೆ."[೭]

"ಅನಾದಿ ಚರರೂಪು ಚನ್ನಬಸವಣ್ಣ."[೮]

"ಎನ್ನ ಪ್ರಾಣದ ಕರಸ್ಥಲದಲ್ಲಿ ಚನ್ನಬಸವಣ್ಣನ ಕಂಡೆನು."[೯]

"ನಿರ್ಲೇಪವಾದ ನಿಜಗುಣಿ......ಕಾಮಿಸದ ಕಲ್ಪಿಸದ......
ಬಯಸಲಿಲ್ಲದ ಪ್ರಸಾದಿ......ಚನ್ನಬಸವಣ್ಣನು."[೧೦]

"ಷಡುಸ್ಥಲದಲ್ಲಿ ಸ್ವಾಯತವಾದ ಚನ್ನಬಸವಣ್ಣ."[೧೧]

"ಸರ್ವಾವಧಾನಿ, ಸಮಯಪ್ರಸಾದಿ ಚನ್ನಬಸವಣ್ಣ."[೧೨]

---

೧. **ಬಹೆವ.** ಪು. ೧೦೩-೩೦೭ ೨. **ಬಹೆವ.** ಪು. ೧೦೩-೩೦೯. ೩. **ಬಹೆವ.** ಪು. ೧೦೬-೩೧೭; ೪. **ಬಹೆವ.** ಪು. ೧೨೫-೩೭೦. ೫. **ಬಹೆವ.** ೧೧೪-೩೪೪; ೬. **ಬಹೆವ.** ಪು. ೧೨೫-೩೭೧; ೭. ವಸಾಇ. ಉತ್ತರ ಪು. ೬೮-೨; ೮. ವಸಾಇ. ಉತ್ತರ ಪು. ೭೩-೧; ೯. **ಶೂಸಂ.** ೧೯. ಪು. ೪೧೯-೧೪೦. ೧೦. **ಶೂಸಂ.** ೧೯. ಪು. ೪೧೩-೧೧೫. ೧೧. **ಶೂಸಂ.** ೧೯ **ಪು.** ೪೧೩-೧೧೪. ೧೨. **ಶೂಸಂ.** ೧೯ ಪು. ೪೧೩. ೧೧೨.

## ಸಿದ್ಧರಾಮ ಶಿವಯೋಗಿ

"ಕ್ರಿಯೆ ಅದು ಚನ್ನಬಸವಣ್ಣನ ಎಡಪಾದ,
ಜ್ಞಾನವದು ಚನ್ನಬಸವಣ್ಣನ ಬಲಪಾದ,
ನಾನು ಅವರ ಚಮ್ಮಾವುಗೆ,
ನೀನು ಅವರ ಮನೆಯ ದಾಸನು ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನ."[೧]

"ಲಿಂಗಾರ್ಚನೆಯ ಮಾಡಿ ಜಂಗಮಪ್ರಸಾದವ ಕೊಂಡ ಬಳಿಕ
ಬಱಿಯ ಯೋಗಕ್ಕೆ ಒಡಂಬಡುವುದೆ ಅಱಿವು;
ಇಂತಪ್ಪ ಯೋಗವನತಿಗಳೆದು, ಶುದ್ಧ ಶಿವಯೋಗಿಯ
ಮಾಡಿದಾತ ಚನ್ನಬಸವಣ್ಣ.
ಚನ್ನಬಸವಣ್ಣನ ಕರುಣದಿಂದ ಅಭ್ಯಾಸಯೋಗವನತಿಗಳೆದು
ಶಿವಯೋಗದಲ್ಲಿ ನಿತ್ಯನಾಗಿ......ಷಡುಸ್ಥಲಕ್ಕಧಿಕಾರಿಯಾದೆ."[೨]

"ಎನ್ನ ಸುಜ್ಞಾನದ ಮಸ್ತಕದಲ್ಲಿ ಹಸ್ತವನಿರಿಸಿ,
ಮನಭಾವ ಕರಣೇಂದ್ರಿಯಂಗಳ ಸ್ವರೂಪೀಕರಿಸಿ, ದೃಷ್ಟಿಗೆ ತೋಱಿ,
ಕೈಯಲ್ಲಿ ಲಿಂಗವ ಕೊಟ್ಟ ಚನ್ನಬಸವಣ್ಣ."[೩]

"ಮೂಱಿಳಿದು ಮೂಱಿಳವಟ್ಟುದೇ ಭಕ್ತಸ್ಥಲ.........
ಕಪಿಲಸಿದ್ಧ ಮಲ್ಲಿಕಾರ್ಜುನ, ಇದರಱಿವ ಹೇಳಿಕೊಡಯ್ಯಾ,
ಎನ್ನ ಪ್ರಾಣಗುರು ಚನ್ನಬಸವಣ್ಣನಿಂದ"?[೪]

"ಆನಂದಸ್ಥಾನದಲ್ಲಿ ಅನಿಮಿಷಾಕ್ಷರದ ಸಂಯೋಗ.
ಅರ್ಪಣದ ಭೇದವ ಕಪಿಲಸಿದ್ಧಮಲ್ಲಿಕಾರ್ಜುನಯ್ಯನಲ್ಲಿ
ಚನ್ನಬಸವಣ್ಣ ಬಲ್ಲ."[೫]

"ನಿರ್ವಾಣ, ಲಿಂಗಾನುಭಾವಿ, ಲಿಂಗೈಕ್ಯ ಇದರ ಲಕ್ಷಣವ ಹೇಳಿ,
ನಿಮ್ಮ ಶರಣ ಚನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು."[೬]

---

೧. **ವಸಾ.** ೩ ಪು. ೪೮-೨೨೮.; ೨. ಚೆಸಾ. ಪು. ೨೪೫-೧. ೩. ಚೆಸಾ. ಪು. ೨೪೬-೨; ೪. ವಸಾ. ಪು. ೩೮-೧೫. ೫. **ಶೂಸಂ.** ೧೦ ಪು, ೨೩೨-೭೭. ೬. **ಶೂಸಂ.** ೧೦ ಪು. ೨೪೦-೧೦೫.

“ಶುದ್ಧವನಱಿದೆ ಚನ್ನಬಸವಣ್ಣಾ ನಿಮ್ಮಿಂದ......
ಚನ್ನಬಸವಣ್ಣ ಗುರುವಾಗಿ ಬಂದು,
ಎನ್ನ ಜನ್ಮಕರ್ಮವ ನಿವೃತ್ತಿಯ ಮಾಡಿದನಯ್ಯಾ.”[೧]

“ಅತಿಶಯವನತಿಗಳೆದು ನಿರತಿಶಯ ಸುಖದೊಳಗೆ
............ಶರಣ ಚನ್ನಬಸವಣ್ಣನ ನಿಲವನಱಿದು,
ಶರಣೆಂದು ಸುಖಿಯಾದೆನು.”[೨]

“ಚನ್ನಬಸವಣ್ಣ ತೋಱಿದ ಹಾದಿ ಸಫಲವಾಯಿತ್ತಾಗಿ
ನಾನು ಚನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು.”[೩]

“ಗುರುವಾದ ಲಿಂಗವೆ ಅಂಗವನೊಳಕೊಂಬ ಭೇದವನು
ಸಂಗನ ಬಸವಣ್ಣಾ, ಚನ್ನಬಸವಣ್ಣನಿಂದೆ ಕೃಪೆಮಾಡಿಸಿ
ಎನ್ನನುಳುಹು.”[೪]

“ಗುರುಲಿಂಗ ಬಸವಣ್ಣ, ಚರಲಿಂಗ ಬಸವಣ್ಣ
ಕರುಣಾಕರನು ಚನ್ನಬಸವಣ್ಣನು.”[೫]

“ಅನಾದಿ ಸಂಸಿದ್ಧನ ಆಗುಮಾಡಿ ಹೆಸರಿಟ್ಟು,
ಕರಸ್ಥಲಕ್ಕೆ ತಂದು ಕೊಟ್ಟ ಗುರು ಚನ್ನಬಸವಣ್ಣ.”[೬]

“ಗುರು ಮೊದಲಾದ ಪ್ರಸಾದ ಸರ್ವಕ್ಕೆ ಅನುಭಾವಿ ಚನ್ನಬಸವಣ್ಣ.”[೭]

“ಎನಗೆ ಶ್ರೀಗುರು ಚನ್ನಬಸವಸ್ವಾಮಿಗಳ ಪಾದೋದಕದಾಸೆ.”[೮]

“ನಾನು ಕರಣಾದಿಗಳ ಕೊಟ್ಟು ಚನ್ನಬಸವಣ್ಣನ ಪ್ರಸಾದವ ಪಡೆದು,
ಭವವಿರಹಿತನಾದೆನು ನೋಡಾ !”[೯]

“ಮಹೇಶಸ್ಥಲ ಚನ್ನಬಸವಣ್ಣಂಗಾಯಿತ್ತು.”[೧೦]

---

೧. **ಸಿಷವ.** ೧೩೧; ೨. ಲಿಂವಿಚಾ. ಪು. ೩೫೦. ೩. **ಶೂಸಂ.** ೧೧ ಪು. ೨೫೬-೫೪; ೪. ವಸಾ. ೩ ಪು. ೨೦೧-೫೩. ೫. ಲಿಂವಿಚಾ. ಪು. ೧೩೯. ೬. **ಶೂಸಂ.** ಪು. ೨೨೭-೫೨. ೭. **ಶೂಸಂ.** ಪು. ೨೪೦. ೧೦೭; ೮. ವಸಾ. ೩. ಉ. ಪು. ೪-೮. ೯. **ಸಿಷವ.** ೪೫; ೧೦. **ಸಿಷವ.** ೧೨.

"ಹೋದ ಜೀವಕ್ಕೆ ತನ್ನ ಕರುಣವೆಂಬ ಮರುಜವಣಿಯ ಹಿಂಡಿ,
ಎತ್ತಿದನು ಚನ್ನಬಸವಣ್ಣ."[೧]

"ಸರ್ವಕ್ಕೆ ಚೈತನ್ಯನಾದ, ನಮ್ಮ ಚನ್ನಬಸವಣ್ಣನೆಂಬ ಅಚ್ಚಪ್ರಸಾದಿ."[೨]

"ಎನ್ನ ಗುರು ಚನ್ನಬಸವ ನೋಡಾ."[೩]

"ಪ್ರಸಾದರೂಪು ಚನ್ನಬಸವಣ್ಣ"[೪]

"ಭೋಗಿಯಾದರೆ ನಮ್ಮ ಗುರು ಚನ್ನಬಸವಣ್ಣನಂತಾಗಬೇಕು."[೫]

"ಜ್ಞಾನಶಕ್ತಿ ಚನ್ನಬಸವಣ್ಣಂಗಾಯಿತ್ತು."[೬]

"ಎನ್ನ ಪ್ರಾಣಗುರು ಚನ್ನಬಸವಣ್ಣ."[೭]

"ಎನ್ನ ತನ್ನಂತೆ ಮಾಡಿದ ಗುರುವೆ ಚನ್ನಬಸವಣ್ಣ."[೮]

"ಗುರುರೂಪ ಚನ್ನಬಸವಣ್ಣ."[೯]

"ಗುರುಸಾಹಿತ್ಯ ಚನ್ನಬಸವಣ್ಣಂಗಾಯಿತ್ತು."[೧೦]

"ಮನದ ತಾಮಸ ಚನ್ನಬಸವಣ್ಣನಿಂದಲೇ ಕಳೆದೆನು."[೧೧]

"ಗುರು ಮೊದಲಾದ ಪ್ರಸಾದ ಸರ್ವಕ್ಕೆ ಅನುಭಾವಿ ಚನ್ನಬಸವಣ್ಣ."[೧೨]

"ಗುರುಸ್ತುತಿ ಬಸವಣ್ಣ, ಚನ್ನಬಸವಣ್ಣ, ಪ್ರಭು
ಮೊದಲಾಗಿ ಅಸಂಖ್ಯಾತರು."[೧೩]

"ಚನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು ಕಾಣಾ."[೧೪]

---

೧. **ಸಿಷವ.** ಪು. ೧೧೦-೧೭. ೨. ಚೆಸಾ ಪು. ೨೪೬. ೩. ವಸಾ೩. ಉ. ಪು. ೨೦೦–೧೩. ೪. **ಶೂಸಂ.** ೧೦ ಪು. ೨೪೦-೧೦೬, ೫. **ಸಿಷವ.** ೭೭. ೬. **ಸಿಷವ.** ೮೪; ೭. **ಸಿಷವ.** ೧೨೪. ೮. **ಸಿಷವ.** ೧೨೭; ೯. ಸಿಷವ. ೧೫೭; ೧೦. **ಸಿಷವ.** ೮೦೦; ೧೧. ವಸಾ. ಪು. ೩೩೫. ೧೨. **ಶೂಸಂ** ೧೦ ಪು. ೨೪೦-೧೦೭. ೧೩. **ಶೂಸಂ.** ೧೦ ವ. ೧೦೭; ೧೪. ವಸಾ ೩. ಪು. ೧೮೪-೧೦೫.

"ಮನವೊಲಿದು ಚನ್ನಬಸವಣ್ಣ ಲಿಂಗವಕೊಡದನ್ನಕ್ಕರ."[೧]

ಮಿಶ್ರಸ್ತೋತ್ರ ತ್ರಿವಿಧಿ ಪ್ರಕರಣದಲ್ಲಿ ಪದ್ಯಗಳು—
ೞ೨೧, ೨೨, ೨೩, ೨೪, ೨೫, ೨೬, ೨೭, ೨೮, ೨೯, ೩೦, ೩೧, ೩೨, ೩೩, ೩೪, ೩೫ರಿಂದ ೫೦ರ ವರೆಗೆ; ಮತ್ತು ೮೩ರಿಂದ ೯೨ರ ವರೆಗೆ. ೯೬ರಿಂದ ೯೮, ೧೦೪, ೧೦೫, ೧೦೭, ೧೦೮.

ಅಷ್ಟಾವರಣಸ್ತೋತ್ರ ತ್ರಿವಿಧಿ ಪ್ರಕರಣದಲ್ಲಿ—
೧೧೧, ೧೧೨, ೧೧೩, ೧೩೮.

## ಮಹಾದೇವಿಯಕ್ಕ

"ಅಯ್ಯಾ, ನಿನ್ನ ಷಟ್‌ಸ್ಥಾನದಲ್ಲಿ ನೆಲಸಿರ್ಪ
ಇಷ್ಟ ಮಹಾಲಿಂಗ ದೇವನ ತ್ರಿವಿಧ ಸ್ಥಾನದಲ್ಲಿ
ಬಸವಣ್ಣ, ಚನ್ನಬಸವಣ್ಣ, ಅಲ್ಲಮಪ್ರಭು ಎಂಬ
ತ್ರಿವಿಧ ನಾಮಸ್ವರೂಪವಾದ ಷೋಡಶಾಕ್ಷರಗಳೇ
ಷೋಡಶವರ್ಣವಾಗಿ ನೆಲಸಿರ್ಪರು ನೋಡಾ......"[೨]

"ಮಾಟಕೂಟವಾಯಿತ್ತಯ್ಯಾ ಬಸವಣ್ಣಂಗೆ,
ನೋಟಕೂಟವಾಯಿತ್ತಯ್ಯಾ ಅಲ್ಲಮಪ್ರಭುದೇವಂಗೆ.
ಭಾವಕೂಟವಾಯಿತ್ತಯ್ಯಾ ಅಜಗಣ್ಣಂಗೆ,
ಸ್ನೇಹಕೂಟವಾಯಿತ್ತಯ್ಯಾ ಸೊಡ್ಡಳಬಾಚರಸಂಗೆ,
ಇವರೆಲ್ಲರ ಕೂಟವಾಯಿತ್ತಯ್ಯಾ ಚನ್ನಬಸವಣ್ಣಂಗೆ..."[೩]

"ಮಾಟಕೂಟವೆಂಬುದಿಲ್ಲ ಬಸವಣ್ಣಂಗೆ,
ನೋಟಕೂಟವೆಂಬುದಿಲ್ಲ ಪ್ರಭುದೇವಂಗೆ,
ಭಾವಕೂಟವೆಂಬುದಿಲ್ಲ ಅಜಗಣ್ಣಂಗೆ,
ಸ್ನೇಹಕೂಟವೆಂಬುದಿಲ್ಲ ಬಾಚರಾಜಂಗೆ,
ಇವರೆಲ್ಲರ ಕೂಟವೆಂಬುದಿಲ್ಲ ಚನ್ನಬಸವಣ್ಣಂಗೆ."[೪]

"ಎನ್ನ ಪರಿಣಾಮ ಚನ್ನಬಸವಣ್ಣನಧರ್ಮ,
ಚನ್ನಮಲ್ಲಿಕಾರ್ಜುನದೇವರ ನೆನಹಿನಲ್ಲಿ
ನಿನ್ನ 'ಕರುಣದ ಶಿಶು' ನಾನು ಕಾಣಾ, ಚನ್ನಬಸವಣ್ಣಾ."[೫]

---

೧. ವಸಾ೩. ಪು. ೨೩೪-೩೯; ೨. **ಮದೇವ.** ಪು. ೩೫-೧೨೦, ೩. **ಮದೇವ.** ಪು. ೨೯-೧೧೧; ೪. **ಮದೇವ** ಪು. ೨೯-೧೧೨; ೫. **ಮದೇವ.** ಪು. ೨೫-೯೮.

"ಮಾಟವೆಂಬ ಕದಳಿ ಬಸವಣ್ಣಂಗೆ; ಭಾವವೆಂಬ ಕದಳಿ ಚನ್ನಬಸವಣ್ಣಂಗೆ."[೧]

"ಚನ್ನಬಸವಣ್ಣನ ಪಾದವ ಕಂಡೆನಾಗಿ, ಎನ್ನ ಪ್ರಾಣ ನಾಸ್ತಿಯಾಯಿತ್ತು."[೨]

"......ಚನ್ನಬಸವಣ್ಣನ ಜ್ಞಾನ......
ಇಂತಿವರ ಕರುಣಪ್ರಸಾದವೆನಗಾಯಿತ್ತು ಚನ್ನಮಲ್ಲಿಕಾರ್ಜುನ."[೩]

"ಚನ್ನಬಸವಣ್ಣನ ತೊತ್ತಿನ ಮಗಳಾದ ಕಾರಣ ಒಕ್ಕ ಪ್ರಸಾದವ ಕೊಟ್ಟನು."[೪]

"ಸಮ್ಯಜ್ಞಾನಿ ಚನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು
ಎನ್ನ ಭವ, ನಾಸ್ತಿಯಾಯಿತ್ತಯ್ಯಾ, ಪ್ರಭುವೇ."[೫]

## ಅಕ್ಕನಾಗಮ್ಮ

ಎನ್ನ ಭಾವದ ಬಳ್ಳಿಯ ಬೇರು ಹಱಿಯಿತ್ತಯ್ಯಾ,
ಸಂಗನ ಬಸವಣ್ಣನ ಒಕ್ಕುದ ಕೊಂಡೆನಾಗಿ.
ಎನ್ನ ಮನದ ಕಪಟ ಹಿಂಗಿತ್ತಯ್ಯಾ,
ಚನ್ನಬಸವಣ್ಣನ ಕರುಣವ ಪಡೆದೆನಾಗಿ.
ಎನ್ನಂತರಂಗದ ಸಂದು ಸಂಶಯ ತೊಲಗಿತ್ತಿಂದು,
ಬಸವಣ್ಣ ಪ್ರಿಯ ಚನ್ನಸಂಗಯ್ಯನಲ್ಲಿ
ಎನ್ನ ಪರಮಗುರು ಪ್ರಭುದೇವರ ಶ್ರೀಚರಣವ ಕಂಡೆನಾಗಿ."[೬]

ಎನ್ನ ತನು ಚನ್ನಬಸವಣ್ಣನ ಬಯಲ ಬೆಱಸಿತ್ತು.
ಎನ್ನ ಮನ ಸಂಗನ ಬಸವಣ್ಣನ ನಿಜಪದವ ಬೆಱಸಿತ್ತು.
ಎನ್ನ ಪ್ರಾಣ ಅಲ್ಲಮಪ್ರಭುದೇವರ ಅಱಿವ ಬೆಱಸಿತ್ತು.
ಇಂತೀ ಮೂವರು ಒಂದೊಂದ ಹಂಚಿಕೊಂಡ ಕಾರಣ,
ಎನಗೇನು ಇಲ್ಲದೆ, ಬಸವಣ್ಣ ಪ್ರಿಯ ಚನ್ನಸಂಗಯ್ಯನ ಹೃದಯಕಮಲದಲ್ಲಿ
ನಿಜನಿವಾಸಿಯಾಗಿರ್ದೆನು.[೭]

---

೧. **ತಾಪ್ರ.** ೮೨. ಪು. ೬೧A - ೮೮. ೨. **ಮದೇವ.** ಪು. ೨೯-೧೦೦; ೩. **ಮದೇವ.** ಪು. ೨೮-೯೭. ೪. **ಮದೇವ.** ಪು. ೨೯-೧೦೩. ೫. **ಮದೇವ.** ಪು. ೨೮-೯೬. ೬. **ತಾಪ್ರ** ೪೯. ಪು. ೬೫ A.-೯೭; **ಶೂಸಂ** ೧೯,-೧೪೪; **ತಾಪ್ರ.** ೧೧೫. ಪು. ೭೭-೯೭. **ಹಪ್ರ.** ೫೩೪.ಪು ೧೫-೯೭. ೭. **ತಾಪ್ರ.** ೧೧೫. ಪು. ೭೭-೯೮. **ಹಪ್ರ.** ೫೩೪. ಪು. ೧೫ A.-೯೮. **ತಾಪ್ರ.** ೪೯. ಪು ೬೫. A.-೯೮ **ಶೂಸಂ** ೨೦ ವ. ೭೪.

## ಆಯ್ದಕ್ಕಿ ಮಹಾದೇವಿಯಮ್ಮ

"ಬಸವಣ್ಣ ಚನ್ನಬಸವಣ್ಣ ಪ್ರಭುದೇವರು ಮೊದಲಾದ
......ಸಮೂಹ......ಸಂಪದಕ್ಕೆ
'ನೈವೇದ್ಯಕ್ಕೆ ವೇಳೆ' ಎಂದು ಹೇಳಿ ಬಾ..............
ಮಹಾಮನೆಯಲ್ಲಿ ಪದಾರ್ಥವಾಯಿತ್ತೆಂದು."[೧]

## ಮೋಳಿಗೆಯ ಮಹಾದೇವಿಯಮ್ಮ

"ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರು ಮುಂತಾದ
೭೭೦ ಅಮರ ಗಣಂಗಳ ಭಾವವಿದ್ದಂತೆ
ನಿಮ್ಮ (ಮೋಳಿಗೆಯ್ಯಗಳ) ಅಗಡವೇಕಯ್ಯಾ?"[೨]

"ಬಸವಣ್ಣ ಸಂಗಮಕ್ಕೆ, ಚನ್ನಬಸವಣ್ಣ ಉಳಿವೆಗೆ, ಪ್ರಭು ಕದಳಿಗೆ;
ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ತಮ್ಮ ಲಕ್ಷ್ಯಭಾವಕ್ಕೆ
ಮುಕ್ತಿಯನೇಱಿಹರು ನನಗೊಂದು ಬಟ್ಟೆಯ ಹೇಳಾ!"[೩]

## ಮೋಳಿಗೆಯ ಮಾರಯ್ಯ

"ಭಕ್ತಿಸೂತ್ರ ಬಸವಣ್ಣಂಗೆ, ಭಾವಸೂತ್ರ ಚನ್ನಬಸವಣ್ಣಂಗೆ;
ಜ್ಞಾನಸೂತ್ರ ಪ್ರಭುದೇವರಿಗೆ.
ಇಂತು ಸ್ಥೂಲ ತನು ಬಸವಣ್ಣಂಗೆ, ಸೂಕ್ಷ್ಮತನು ಚನ್ನಬಸವಣ್ಣಂಗೆ;
ಕಾರಣ ತನು ಪ್ರಭುದೇವರಿಗೆ.
ಕಾಯ ಬಸವಣ್ಣನಾಗಿ, ಜೀವ ಚನ್ನಬಸವಣ್ಣನಾಗಿ
ಉಭಯದಱಿವು ಪ್ರಭುದೇವರಾಗಿ
ಇಂತೀ ತ್ರಿವಿಧ ಪ್ರಸಾದ ಎನಗೆ ನಿಂದು, ಎನ್ನ ಜನ್ಮವಾಸನೆ ಬಿಡದಿದೆ ನೋಡಾ,
ಈ ವಾಸನೆ ನಿಃಕಳಂಕ ಮಲ್ಲಿಕಾರ್ಜುನಪ್ಪನಾಗಿಯಲ್ಲವೆ ಎನ್ನ ಭಾವ."[೪]

---

೧. ಶೂಸಂ. ೧೨ ಪ-೩೪. ೨. ಶೂಸಂ. ೧೩-೨೪; ೩. ಶೂಸಂ. ೧೩-೧೯.
೪. ತಾಪ್ರ. ೮೨. ಪು. ೧೧೫A-೧೬೮,

"ಉದಕಮಿಲ್ಲದಿರೆ, ಅಂಬುಧಿ ತಟಾಕಂಗಳೆಂಬ ನಾಮವುಂಟೆ?
ಬಣ್ಣನಾಸ್ತಿಯಾಗಿ ಬಂಗಾರವೆಂಬ ವಿಶೇಷ ಉಂಟೆ?,
ಗಂಧವಿಲ್ಲದಿರೆ ಚಂದನವೆಂಬ ಅಂಗವುಂಟೆ?
......ಶರಣತದರ್ಥವಾಗಿ ಐಕ್ಯನಾದೆ.
ಇಂತೀ ಷಡುಸ್ಥಲ ಮೂರ್ತಿಯಾಗಿ ಬಂದೆಯಲ್ಲಾ,
ಚನ್ನಬಸವಣ್ಣ..............ನಿಃಕಳಂಕ ಮಲ್ಲಿಕಾರ್ಜುನ."[೧]

"ಎನಗೆ ಬಲ್ಲತನವ ತೋಱಿದ ಎನ್ನ ವಲ್ಲಭ ನೀನೇ ಚನ್ನಬಸವಣ್ಣಾ."[೨]

"ಫಲಪದವಿರಹಿತ ಚನ್ನಬಸವಣ್ಣ."[೩]

"......ಬಸವರಾಜದೇವರು, ಚನ್ನಬಸವರಾಜದೇವರು,
ಸಿದ್ಧರಾಮಯ್ಯದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದರು."[೪]

## ಮಡಿವಳ ಮಾಚಿದೇವ

"ಜಂಗಮ ಪ್ರಾಣವೆಂಬುದು ನಿನಗೆ ಹುಸಿಯಾಯಿತ್ತಲ್ಲಾ ಸಂಗನ ಬಸವಣ್ಣಾ?
ನಿನಗೆ ಪ್ರಸಾದ ಪ್ರಸನ್ನವೆಂಬುದು ಸಂದೇಹವಾಯಿತ್ತಲ್ಲಾ ಬಸವಣ್ಣಾ?
ನಿನಗೆ ಕಾಯ, ಬಸವಣ್ಣ; ಜೀವ, ಚನ್ನಬಸವಣ್ಣ.
ಕೇತಯ್ಯಗಳ ಅಳಿವು, ಕಲಿದೇವಯ್ಯನ ಉಳಿವಾಯಿತ್ತು."[೫]

"ಎನ್ನಂಗದಾಚಾರದಲ್ಲಿ ಸಂಗನ ಬಸವಣ್ಣನ ಕಂಡೆನು,
ಎನ್ನ ಮನದ ಅಱಿವಿನಲ್ಲಿ ಚನ್ನಬಸವಣ್ಣನ ಕಂಡೆನು,
ಎನ್ನ ಭಾವದ ಕೊನೆಯ ಮೊನೆಯ ಮೇಲೆ
ಅಲ್ಲಮಪ್ರಭುದೇವರ ಕಂಡೆನು."[೬]

"ನೀನುಟ್ಟ ಬೀಳುಡಿಗೆಯ ಚನ್ನಬಸವಣ್ಣನ ಕೈಯಲ್ಲಿ
ನಿರಾಳವನೆನಗೆ ಕೊಡಿಸಾ, ಪ್ರಭುವೆ."[೭]

"ಬಸವಣ್ಣಂಗೆ ಚನ್ನಬಸವಣ್ಣನೆ ಶೃಂಗಾರ;
ಎನಗೆಯೂ ನಿನಗೆಯೂ (ಕಲಿದೇವ) ಚನ್ನಬಸವಣ್ಣನೇ ಶೃಂಗಾರ."[೮]

---

೧. ತಾಪ್ರ. ೮೨. ಪು. ೧೦೪-೨೩; ೨. ತಾಪ್ರ. ೮೨, ಪು. ೨೨೫ A. -೧೯. ೩. ಶೂಸಂ. ೧೩-೯; ೪. ಶೂಸಂ ೧೩-೧೭; ೫. ತಾಪ್ರ. ೮೨. ಪು. ೫೯ A. -೩೭; ೬. ಶೂಸಂ. ೯-೫೩; ೭. ಶೂಸಂ ೯-೫೧. ೮. ಶೂಸಂ. ೯-೪೯

"ನಾ ನಿಮ್ಮ ಶರಣ ಚನ್ನಬಸವಣ್ಣನ ನಿಲವನಱಿದು
ಶರಣೆಂದು ಸುಖಿಯಾದೆನು."[೧]

"ಎನ್ನ ಮನ ಬಸವಣ್ಣನು,
ಎನ್ನ ವಾಕು ಚನ್ನಬಸವಣ್ಣನು;
ಎನ್ನ ಕಾಯ ಪ್ರಭುದೇವರು."[೨]

"ಮಾಯಕ್ಕೆ ಹೊಱಗಾದ ನಿರ್ಮಾಯ ತಾನೆಂಬ ನುಡಿಗೆ ನಾಚಿ,
ನೀನೆಂಬ ನುಡಿಗೆ ಹೇಸಿ, ತಾನು ತಾನಾದ ಘನಮಹಿಮ;
ಕಾಯದಲ್ಲಿ ಕುರುಹಿಲ್ಲ, ಭಾವದಲ್ಲಿ ಭ್ರಮೆಯಿಲ್ಲ ಜ್ಞಾನ ತಾನೆಂಬ ಭೇದವಿಲ್ಲ;
ಸಾವಯನಲ್ಲ, ನಿರವಯನಲ್ಲ ನಿಮ್ಮ ಶರಣ ಚನ್ನಬಸವಣ್ಣನು."[೩]

**ನುಲಿಯ ಚಂದಯ್ಯ**

"ಎನ್ನ ಸತ್ಕ್ರಿಯೆ ಬಸವಣ್ಣನು,
ಎನ್ನ ಸುಜ್ಞಾನವೇ ಚನ್ನಬಸವಣ್ಣನು;
ಎರಡರ ಏಕೋಭಾವದ ಪ್ರಭೆಯೇ ನೀವು (ಪ್ರಭುದೇವರು)
ನಿಮ್ಮೆಲ್ಲರ ನಿಷ್ಠೆಯ ನಿಜವೆ ಮಡಿವಾಳಯ್ಯನು."[೪]

"ಎನ್ನಂಗದ ಸತ್ಕ್ರಿಯೆ ಬಸವಣ್ಣನು,
ಎನ್ನಲಿಂಗದ ಸತ್ಕ್ರಿಯೆ ಚನ್ನಬಸವಣ್ಣನು;
ಎನ್ನ ಅಱಿವಿನ ಸತ್ಕ್ರಿಯೆ ಪ್ರಭುವೇ ನೀವು.
ಎನ್ನ ದಾಸೋಹದ ನಿಷ್ಠೆಯೆ ಮಡಿವಾಳಯ್ಯನು.
... ... ... ...
ಎನ್ನಂಗ ಲಿಂಗಜ್ಞಾನ ದಾಸೋಹ–
ಇವು ಮುಂತಾದ ಸಮಸ್ತವೂ ನಿಮ್ಮ ಪುರಾತನರಾದ ಕಾರಣ,
ಚನ್ನಬಸವಣ್ಣನ ಕರುಣ ಇಂತು ಮಾಡಲಾಗಿ,
ನಾನು ನಿಮ್ಮ ಪಾದವ ಬೆರೆದು,
ಬೇರಿಲ್ಲದೆ ನಿಜವನೆಯ್ದಿದೆ ಚನ್ನಬಸವಣ್ಣಾ."[೫]

**ಹಡಪದ ರೇಚಣ್ಣ**

"......ಎನ್ನೊಡೆಯ ಚನ್ನಬಸವಣ್ಣ."[೬]

---

೧. ಬಿಡಿಗಿನ ವಚನಗಳು; ೨. ಶೂಸಂ. ೧೧-೪೭. ೩. ಶೂಸಂ. ೧೯-೧೩೩. ೪. ಶೂಸಂ. ೧೪-೪೪. ೫. ಶೂಸಂ. ೧೪-೪೯. ೬. ತಾಪ್ರ. ೮೨. ಪು. ೨೨೩-೮.

**ಸಕಳೇಶಮಾದರಸ**

“ಆವ ವರವನೊಲ್ಲೆನು,
ಚನ್ನಬಸವಣ್ಣನ ಶ್ರೀಪಾದದ ಹತ್ತೆ ಇಪ್ಪಂಥ ವರವ ಕೊಡು.”[೧]

**ಮರುಳಶಂಕರದೇವ**

“ಷಡುಸ್ಥಲ ಚಕ್ರವರ್ತಿಯಯ್ಯಾ ಚನ್ನಬಸವಣ್ಣನು.”[೨]

“ಎನ್ನ ನಿರ್ಮಳಾತ್ಮನ ಚೇತನನಯ್ಯಾ
ಷಡುಸ್ಥಲಬ್ರಹ್ಮಿ ಚನ್ನಬಸವಣ್ಣನು.”[೩]

**ಆದಯ್ಯ**

“ಬಸವಣ್ಣನ ಭಕ್ತಿಸ್ಥಲ ಚನ್ನಬಸವಣ್ಣನ
ಪ್ರಾಣಲಿಂಗಿಸ್ಥಲ.”[೪]

“ಬಸವಣ್ಣನೆನ್ನ ಅಂಗ ಚನ್ನಬಸವಣ್ಣನೆನ್ನ
ಕರಸ್ಥಲದಲಿಂಗ.”[೫]

**ಉರಿಲಿಂಗಪೆದ್ದಿ**

“ಪ್ರಸಾದದ ಸ್ಥಳಕುಳವನು
ನಿಮ್ಮ ಪ್ರಸಾದಿ ಚನ್ನಬಸವಣ್ಣಂಗೊಬ್ಬಂಗಲ್ಲದೆ,
ಮತ್ತಾರಿಗೆಯೂ ಅಱಿಯಬಾರದಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.”[೬]

**ಬಹುರೂಪಿ ಚೌಡಯ್ಯ**

“......ಚನ್ನಬಸವಣ್ಣ ಎನ್ನ ಕರಸ್ಥಲಕ್ಕೆ ಬಿಜಯಂಗೈದ ಕಾರಣ
ಎನಗೆ ಲಿಂಗವಾದ.”[೭]

“......ಚನ್ನಬಸವಣ್ಣನಿಂದ ಸಿದ್ಧಪ್ರಸಾದಿಯಾದೆ.”[೮]

---

೧. **ತಾಪ್ರ.** ೮೨. ಪು. ೨೨೩-೩೬. ೨. **ಶೂಸಂ.** ೬-೨೭. ೩. **ಶೂಸಂ.** ೬-೩೫.
೪. **ಆವ.** ಪು. ೧೬–೩೯. ೫. **ಆವ.** ಪು. ೧೪–೮೦. ೬. ವಸಾ೧. ಪು. ೭೨-೧೦.
೭. **ಶೂಸಂ.** ೧೯-೧೭೮. ೮. ಶೂಸಂ ೧೯-೧೭೯.

**ಕೆಂಭಾವಿ ಭೋಗಣ್ಣ**

"ನಿಜಗುರು ಭೋಗೇಶ್ವರನ ಶರಣ ಚನ್ನಬಸವಣ್ಣನ
ಕರುಣವುಳ್ಳವರಿಗಲ್ಲದೆ ಮಿಕ್ಕಿನ ಜಡಮತಿಗಳಿಗೆಂತು
ಸಾಧ್ಯವಪ್ಪುದು ಕೇಳಿರಣ್ಣ."[೧]

**ತೋಂಟದ ಸಿದ್ಧಲಿಂಗಶಿವಯೋಗಿ**

ಚನ್ನಬಸವಣ್ಣನೇ ಎನ್ನ ಅಂತರಂಗದ ಸುಜ್ಞಾನ ಪ್ರಾಣಲಿಂಗವೆಂದಱಿದು
ಪ್ರಾಣಲಿಂಗಿಯಾದೆನು ಕಾಣಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.''[೨]

**ಡಕ್ಕೆಯ ಬೊಮ್ಮಣ್ಣ**

"ಭಕ್ತಿಸ್ಥಲ ಬಸವಣ್ಣಂಗಾಯಿತ್ತು,
ಮಾಹೇಶ್ವರಸ್ಥಲ ಮಡಿವಾಳಂಗಾಯಿತ್ತು;
ಪ್ರಸಾದಿಸ್ಥಲ ಚನ್ನಬಸವಣ್ಣಂಗಾಯಿತ್ತು;
......ಕಾಲಾಂತಕ ಭೀಮೇಶ್ವರಲಿಂಗವೇ."[೩]

**ಉಗ್ಗಡಿಸುವ ಗಬ್ಬಿದೇವಯ್ಯ**

"ಭಕ್ತಿಸ್ಥಲಕ್ಕೆ ಒಬ್ಬನು, ಮಹೇಶ್ವರಸ್ಥಲಕ್ಕೆ ಇಬ್ಬರು
ಪ್ರಸಾದಿಸ್ಥಲಕ್ಕೆ ಆತನಳಿಯನಲ್ಲದಿಲ್ಲ............
ಬಸವಣ್ಣನರಿಕೆಯಾಗಿ ಉಗ್ಗಡಿಸುವ ಗಬ್ಬಿದೇವಯ್ಯ."[೪]

"ಎರಡನಱಿವಲ್ಲಿ ಭಂಡಾರಿ ಬಸವಣ್ಣ,
ಮೂಱನಱಿವಲ್ಲಿ ಚನ್ನಬಸವಣ್ಣ,
ಒಂದನಱಿವಲ್ಲಿ ಪ್ರಭುದೇವರು............,
ಕೂಡಲಸಂಗಮದೇವರಲ್ಲಿ ಬಸವಣ್ಣ."[೫]

**ಏಲೇಶ್ವರದ ಕೇತಯ್ಯ**

"ಬಸವೇಶ್ವರಂಗೆ ಸರ್ವಗುಣಶೀಲ,
ಚನ್ನಬಸವೇಶ್ವರಂಗೆ ದಿವ್ಯಜ್ಞಾನ ಗುಣಶೀಲ,
ಪ್ರಭುದೇವರಿಗೆ ಬಸವಣ್ಣ ಚನ್ನಬಸವಣ್ಣನ ಉಭಯ ಗುಣಶೀಲ;
......ಏಲೇಶ್ವರಲಿಂಗ."[೬]

---

೧. **ತಾಪ್ರ.** ೩೭. ಪು. ೧೬೨-೨೧. ೨. **ತೋಸಿಷ.** ವ, ೩೪೫. ೩. **ತಾಪ್ರ.** ೮೨. ಪು. ೪೩A-೨೮. ೪. **ತಾಪ್ರ.** ೮೨. ಪು. ೨೦೦-೩. ೫. **ತಾಪ್ರ.** ೮೨. ಪು. ೨೦೦-೪; **ತಾಪ್ರ.** ೩೭. ಪು. ೧೨೮-೩. ೬. **ತಾಪ್ರ.** ೮೨. ಪು. ೯೫-೧೯೧.

"ಎಂಬತ್ತು ಲಕ್ಷ ವ್ರತಶೀಲ, ಅಱುವತ್ತುನಾಲ್ಕು ನೇಮ,
ಅಱುವತ್ತಾಱು ವ್ರತಗಳಲ್ಲಿ ಇವ ಪ್ರಮಾಣಿಸಿ ನಾಮವಿಟ್ಟಿಹೆನೆಂದಡೆ,
ಎನಗಾಗದು ಚನ್ನಬಸವಣ್ಣನಲ್ಲದೆ;
ಆತ ಜ್ಞಾನಸೂತ್ರಧಾರಿ......ಚನ್ನಬಸವಣ್ಣ ಪ್ರಿಯ ಏಲೇಶ್ವರಲಿಂಗ."[೧]

**ಕನ್ನಡಿ ಕಾಯಕದ ಅಮುಗಿದೇವಯ್ಯಾ**

"ಆ ವ್ಯಾಧಿಗೆ ಬಲ್ಲವರ ಬಲ್ಲೆ
ಬೆನ್ನಿಗೆ ಬಸವಣ್ಣ ಕಾಲಿಗೆ ಚನ್ನಬಸವಣ್ಣ,
ಬಾಯಿಗೆ ಪ್ರಭುದೇವರು, ಬಸುಱಿಗೆ ನಿಜಗುಣ.
ಈ ಭೋಗವ ಬಲ್ಲವರಱಿವರು."[೨]

"ಕತ್ತಿಯ ಬಸವಣ್ಣ ಕೊಟ್ಟ, ಕತ್ತರಿಯ ಚನ್ನಬಸವಣ್ಣ ಕೊಟ್ಟ;
ಕಿತ್ತುಹಾಕುವ ಚಿಮ್ಮುಟ ಪ್ರಭುರಾಯ ಕೊಟ್ಟ."[೩]

"......ಚನ್ನಬಸವಣ್ಣನ ಕಾಲಿನ ವೈದ್ಯ."[೪]

"ಚನ್ನಬಸವಣ್ಣಂಗೆ ಭೃತ್ಯನಾಗಿ"[೫]

**ಬಾಹೂರ ಬೊಮ್ಮಣ್ಣ**

"ತನ್ನನಱಿದು ಇದಿರ ಕಾಬ ಜ್ಞಾನಭಕ್ತಿ
ಚನ್ನಬಸವಣ್ಣಗೆ ಸಾಧ್ಯವಾಯಿತ್ತು ಬ್ರಹ್ಮೇಶ್ವರಲಿಂಗ."[೬]

"ಗುರುಭಕ್ತಿಯುಂಟು, ಲಿಂಗಭಕ್ತಿಯುಂಟು,
ಜಂಗಮಭಕ್ತಿ ಮತ್ತೆ ತಾನುಂಟು;
ತನ್ನಱಿದು ಇದಿರ ಕಾಂಬ ಜ್ಞಾನಭಕ್ತಿ
ಚನ್ನಬಸವಣ್ಣಂಗೆ ಸಾಧ್ಯವಾಯಿತ್ತು ನೋಡಾ."[೭]

**ತುರುಗಾಹಿ ರಾಮಣ್ಣ**

"ಬಂದಿತ್ತು ದಿನ ಬಸವಣ್ಣ ಕಲ್ಲಿಗೆ,
ಚನ್ನಬಸವಣ್ಣ ಉಳುವೆಯಲ್ಲಿಗೆ."[೮]

---

೧. **ತಾಪ್ರ.** ೮೨. ಪು. ೯೫A. -೧೯೪. ೨. **ತಾಪ್ರ.** ೮೨. ಪು. ೨೧೯-೧೦. ೩. **ತಾಪ್ರ.** ೮೨. ಪು. ೨೧೯-೧೦. ೪. **ತಾಪ್ರ.** ೮೨. ಪು. ೨೧೯-೯. ೫. ವಚನಧರ್ಮಸಾರ. ಎಂ. ಆರ್. ಶ್ರೀ. ೬. **ತಾಪ್ರ.** ೮೨. ಪು. ೧೩೭A. -೩೪. ೭. **ಶಿಸಂವ.** ಭಾ. ೨-೩೨. ೮. **ತುರಾವ.** ಪು. ೧೦-೪೫.

**ಕಂಬದ ಮಾರಿ ತಂದೆ**

"ಸಾಲಕೊಡಬೇಕಾಗಿ ಹೋಹುದು,
ಆಱು ಕೊಡಬೇಕಾಗಿ ಬಾರದು;
ಮೂಱು ಕೂಳಿಗೆ ಸಿಕ್ಕದು ನೋಡಾ !
ಬಸವಣ್ಣನಂಗದಲ್ಲಿ ಹರಿದು,
ಚನ್ನಬಸವಣ್ಣನ ಹೃದಯದಲ್ಲಿ ಮೂಡಿ,
ಪ್ರಭುದೇವರ ಕರದಲ್ಲಿ ಸಿಕ್ಕಿದೆಯಲ್ಲಾ..."[೧]

**ಭರಿತಾರ್ಪಣದ ಚನ್ನಸಂಗಣ್ಣ**

"ಬಸವಣ್ಣ ಬೋನವಾಗಿ, ಚನ್ನಬಸವಣ್ಣ ಪದಾರ್ಥವಾಗಿ,
ಪ್ರಭುದೇವರು ಸಾಕುಭರಿತವೆಂದಲ್ಲಿ ಅರ್ಪಿತವಾಯಿತ್ತು."[೨]

**ಬೊಕ್ಕಸ ಚಿಕ್ಕಣ್ಣ**

"ಎಲ್ಲರ ಪರಿಯಲ್ಲ ಎನ್ನ ಊಳಿಗ:
ಬಸವಣ್ಣ ಚನ್ನಬಸವಣ್ಣ ಕೊಟ್ಟಕಾಯಕ ಸತ್ಕ್ರೀ......"[೩]

**ಗಣದಾಸಿ ವೀರಣ್ಣ**

"......ಷಟ್‌ಸ್ಥಲ ಆರಾರಿಗೆ ಸಾಧ್ಯವಾಯಿತ್ತೆಂದೊಡೆ;
ಭಕ್ತಸ್ಥಲ ಬಸವಣ್ಣಂಗಾಯಿತ್ತು,
ಮಹೇಶ್ವರಸ್ಥಲ ಮಡಿವಾಳಯ್ಯಂಗಾಯಿತ್ತು,
ಪ್ರಸಾದಿಸ್ಥಲ ಚನ್ನಬಸವಣ್ಣಂಗೆ ಸಾಧ್ಯವಾಯಿತ್ತು[೪]

**ಷಣ್ಮುಖಸ್ವಾಮಿಗಳು**

"ಪ್ರಸಾದಿಸ್ಥಲವ ಚನ್ನಬಸವಣ್ಣನಿಂಬುಗೊಂಡನಾಗಿ."[೫]

"ಪ್ರಾಣಲಿಂಗವಾಗಿ ಎನ್ನ ಸೂಕ್ಷ್ಮ ತನುವಿಗೆ
ಅರಸನಾಗಿರ್ಪನಯ್ಯಾ ಚನ್ನಬಸವಣ್ಣನು."[೬]

---

೧. **ತಾಪ್ರ.** ೩೭. ಪು. ೧೨೪ A-೩. ೨. **ತಾಪ್ರ.** ೮೨. ಪು. ೨೨೧, ೮. ೩. **ತಾಪ.** ೩೭. ಪು. ೧೨೩-೩. ೪. **ಗವೀವ.** ಪು. ೩-೪. ೫. **ವಶಾರ.** ಪು. ೨೧೪. ೬. **ವಶಾರ.** ಪು. ೩೦೪-೮೫.

# ಕವಿವಾಣಿಯಲ್ಲಿ ಚನ್ನಬಸವಣ್ಣ

**ಹರಿಹರದೇವ** (ಕ್ರಿ. ಶ. ಸು. ೧೨೦೦)

"ಕಾಳಿದಾಸನ ಕಣ್ಣಪನ ಚನ್ನಬಸವನಂ..."[೧]

**ಪಾಲ್ಕುರಿಕೆಯ ಸೋಮನಾಥ** (ಕ್ರಿ. ಶ. ಸು. ೧೨೦೦)

"ಬಸವಯ್ಯ ಪಡಿಹಾರಿ ಬಸವಯ್ಯ ಚನ್ನ-
ಬಸವಯ್ಯ ಅವಗಡದ ಬಸವಯ್ಯ......"[೨]

**ನೀಲಕಂಠನಾಗನಾಥಾಚಾರ್ಯ** (ಕ್ರಿ. ಶ. ಸು. ೧೩೦೦)

"ಶಿವತತ್ವಾಮೃತಾಸ್ವಾದಚೇತಸೇ ಯೋಗಿನೇ ನಮಃ
ಶ್ರೀಚನ್ನಬಸವೇಶಾಯ ಷಟ್‌ಸ್ಥಲಬ್ರಹ್ಮವಾದಿನೇ."[೩]

**ಭೀಮಕವಿ** (ಕ್ರಿ. ಶ. ಸು. ೧೩೬೯)

"ವಿಸ್ತರಿಸಲಾ ಬಸವ ಕರುಣಾ
ಹಸ್ತಸಂಭೂತಪ್ರಭಾಮಯ
ಶಸ್ತದೇಹಂ ಚನ್ನಬಸವಂ ಭಕ್ತಿರಂಜಿಸುವ
ಅಸ್ತಮಿತ ಲೌಕಿಕನು ಗುರುಭ
ಕ್ತಿಸ್ತವನಪಾತ್ರೋತ್ತಮಂ ಮಾ
ತೃಸ್ತನಸ್ತನ್ಯಾಹಿತಂ ನಿರ್ಧೂತ ಷಡ್ವರ್ಗಿ."[೪]

**ಚನ್ನಬಸವಶಿವಯೋಗಿ** (ಕ್ರಿ. ಶ. ಸು. ೧೪೧೩)

"ಶ್ರೀಮದವಿರಳ ಸಚ್ಚಿದಾನಂ-
ದಾಮಲಾತ್ಮನಖಂಡ ಪೂರ್ಣೋ-
ದ್ದಾಮ ಶಿವತತ್ವಾನುಭವಸಂಸಿದ್ಧ ಸರ್ವಜ್ಞ ॥
ನಾಮರೂಪಾತೀತ ಸಂಸಾ-
ರಾಮಯೌಷಧ ಮುಕ್ತಿಕಾಂತಾ
ಪ್ರೇಮ ಚನ್ನವೃಷೇಂದ್ರ ಘನಯೋಗೀಂದ್ರ ಮಾಂ ಪಾಹಿ"[೫]

---

೧. ಶಿಂರ. ಪು. ೧೨. ೨. **ಗಸನಾ.** ಪು. ೩೫. ಸಾ. ೩೫೪. ೩. ಶ್ರೀ ಮದ್ವೀರ ಮಾಹೇಶ್ವರಾಚಾರ ಸಂಗ್ರಹ. ಪ. ೨. ೪. **ಬಪು.** ಕಾಂ. ೨. ೬-೩೫. ೫. **ಕ್ಷೇಸುವಾ.** ೧-೧,

**ಲಕ್ಕಣದಂಡೇಶ** (ಕ್ರಿ. ಶ. ಸು. ೧೪೨೮)

"ಸುರಭಿಯಿಂ ಸುಧೆಯಮೃತದಿಂ ಸ್ವಾದು ಪುಷ್ಪದಿಂ
ಪರಿಮಳಂ ಚಿಂತಾಸುರತ್ನದಿಂ ಕಾಂತಿ ಸುರ
ತರುವಿನಿಂದಂ ಸುಫಲವಿಂದುವಿಂ ಚಂದ್ರಿಕೆಗಳುದಿಸುವಂದದಿ ಬಸವನ ॥
ಪರಮಸುಜ್ಞಾನದಿಂ ಮೂರ್ತಿವೆತ್ತಿಳೆಯ ಶಿವ
ಶರಣರಂತಃಕರಣಭವನಂಗಳೊಳಗೆ ವಿ
ಸ್ಫುರಿಸುವ ಮಹಾಜ್ಯೋತಿ ಚನ್ನಬಸವೇಶ್ವರನ ಚರಣಾಂಬುಜಕ್ಕೆ ಶರಣು."[೧]

**ಚಾಮರಸ** (ಕ್ರಿ. ಶ. ೧೪೩೦)

"ವೀರಶೈವಾಚಾರ ಮಾರ್ಗ ವಿ
ಚಾರದಭ್ಯಂತರದೊಳೀ ಪರಿ
ಯೋರಣೆಸಿ ಹರಕರ್ಮ ಭಕ್ತಿಜ್ಞಾನವಿಹುದೆಂದು
ಧಾರುಣಿಯೊಳಱಿವಂತೆ ಕರುಣಾ
ಕಾರನಾಗಿ ಷಡುಸ್ಥಳವನು
ದ್ಧಾರಿಸಿದ ಗುರು ಚನ್ನಬಸವಣ್ಣಂಗೆ ಶರಣಾರ್ಥಿ."[೨]

**ಕಲ್ಮಠದ ಪ್ರಭುದೇವ** (ಕ್ರಿ. ಶ. ಸು. ೧೪೩೦)

"ವೀರಶೈವ ಷಟ್‌ಸ್ಥಲಜ್ಞಾನಾಚಾರ್ಯರಪ್ಪ ಪ್ರಭುದೇವರು
ಬಸವಣ್ಣ, ಚನ್ನಬಸವಣ್ಣ, ಮಹಾದೇವಿಯಕ್ಕಗಳು
ಮುಖ್ಯವಾದ ಶಿವಾನುಭಾವಿಗಳು ಶಿವಸುಖವನನುಭವಿಸಿ ತೃಪ್ತಿವಡೆದ
ಸಂತುಷ್ಟಿ ನಿಮಿರ್ದು ವಾಙ್ಮನದಿಂದುಕ್ಕಿ ನುಡಿದ ನುಡಿಯೇ ಗುರುವಚನ."[೩]

**ಮುಗ್ಗಿಯ ಮಾಯಿದೇವ** (ಕ್ರಿ. ಶ. ಸು. ೧೪೩೦)

"ಬಸವಕುಮಾರ ಭಾಕ್ತಿಕಪುರಸ್ಸರ ಷಟ್ಸ್ಥಲಧೀರ ಚಿತ್ಸುಧಾ-
ರಸಭರಿತಾಂತರಂಗ ಸಕಲಾಕ್ಷಸಮರ್ಪಿತಲಿಂಗ ತತ್ಪ್ರಸಾ-
ದಸುಖವಿಶೇಷತೃಪ್ತ ಶಿವಯೋಗಪದೈಕಸಮಾಪ್ತ ನೀನೆ ರ-
ಕ್ಷಿಸು ಗಡ ಜೀಯ ಚನ್ನಬಸವಯ್ಯ ಕೃಪಾನಿಧಿಯೇ ಶಿವಾಧವಾ."[೪]

---

೧. ಶಿಚಿಂ. ೧-೭. ೨. ಪ್ರಲೀ. ೧-೩.
೩. ಲಿಂವಿಚಾ. ಸಾ. ೧೭. ೪. ಶತ್ರ. ಪು, ೫. ಪ. ೩.

**ಗುರುಬಸವಕವಿ** (ಕ್ರಿ. ಶ. ಸು. ೧೪೩೦)

"ಬಸವನಲ್ಲಮ ಚನ್ನ-
ಬಸವ ಮಡಿವಾಳ ಸಂ-
ತಸ ಸಿದ್ಧರಾಮ ಸಹಿತೆಲ್ಲಾದ್ಯರು ॥
ಒಸೆದು ನಿಮ್ಮಯ ಕರುಣ
ದೆಸಕದಿಂದೊಲಿದು ರ-
ಕ್ಷಿಸಬೇಹುದೆನ್ನ ನಿಮ್ಮಡಿಗನೆಂದು."[೧]

**ಬೊಮ್ಮರಸಕವಿ** (ಕ್ರಿ. ಶ. ಸು. ೧೪೫೦)

"ಕಲಿಕಾಮದೇವ ಶಂಕರದಾಸಿಮಯ್ಯ ನೋ-
ಹಿಲದೇವ ಕಣ್ಣಪ್ಪ ಮಾದೇವಿ ಮುಕ್ತಾಯಿ-
ಗಳು ಸಾಮವೇದಿಗಳು ಭೋಗಣ್ಣನಜಗಣ್ಣ ಚೇರಮಾಂಕನು ದೀಪದಾ ॥
ಕಲಿಯಾರು ಚನ್ನಬಸವನು ಸಿದ್ಧರಾಮ ಮಡಿ-
ವಳ ಮಾಚಿತಂದೆ ಮುಂತಾಗಿಹ ಪುರಾತನರು
ಸಲಹುಗೆನಗಮಳತರ ಮತಿಯ ಚಂದ್ರಪ್ರಭಾದ್ಯುತಿಯ-
ಶಿವಶರಣನುತಿಯಾ."[೨]

**ಗುಬ್ಬಿ ಮಲ್ಲಣ್ಣ** (ಕ್ರಿ. ಶ. ಸು. ೧೪೭೫)

"ನಿರುಪಮನಿರಂಗನೆನಿಪಲ್ಲಮಪ್ರಭುರಾಯ
ಹರಭಕ್ತರೇ ಸಂಗಮೇಶರೆಂದೆಂಬ ಬಸ-
ವರಸ ವಿಮಲಪ್ರಸಾದಾಂಗಿಯಹ ಚನ್ನಬಸವೇಶರಿವರಂಘ್ರಿಕಮಲ ॥
ಪರಷಟ್ಸ್ಥಲವಾದುವವ ನುತಿಸುವೆಂ ನುತಿಸಿ
ನಿರುತಷಟ್ಪದಿಯಾದುವಿವು ಕಮಲಜಾಂಡದೊಳ್
ಪರಿಕಲಿಸಿ ಪಸರಿಸುಗೆ ಚರಗುರುಶಿವಾರ್ಚಕರ ಮನಕುತ್ಸವಂ ಬೀಱುತೆ."[೩]

**ಸುರಂಗಕವಿ** (ಕ್ರಿ. ಶ. ಸು. ೧೫೦೦)

"ವರಭಕ್ತಿಸ್ಥಲ ಮುಖ್ಯ ಷಟ್‌ಸ್ಥಲ ಮಹಾ ಮಾರ್ಗಂಗಳಂ ವೀರಶೈ
ವರಹಸ್ಯಾಗಮ ಸಾರಭೂತ ಚರಲಿಂಗಾಚಾರ್ಯ ಮುಖ್ಯಂಗಳು
ದ್ಧರ ಮಾಹಾತ್ಮ್ಯಮನುರ್ವಿಯೊಳ್ ನಿಜವಚಸ್ಸಂತಾನದಿಂ ಪೇಳ್ದ ಮ
ದ್ಗುರು ನಾಥಂ ನಮಗೀಗೆ ಚನ್ನಬಸವಂ ವಿಜ್ಞಾನ ಸಂಪತ್ತಿಯಂ."[೪]

---

೧. ಮ. ವಿ. ಪು. ೪, ಪ್ರ. ೧. ಪ೨. ೨. **ಸೌಂಪು.** ೧-೧೦. ೩. **ಭಾಚಿಂರ.** ೧-೫.
೪. **ತ್ರಿಪುಚಾ.** ೧-೫.

**ಮುಪ್ಪಿನ ಷಡಕ್ಷರದೇವ** (ಕ್ರಿ. ಶ. ಸು. ೧೫೦೦)

"ಬಸವೇಶ್ವರನು ಚನ್ನ-
ಬಸವೇಶ್ವರನು ಕರುಣಿ
ದಸರಯ್ಯ ಮೋಳಿಗೆಯ ಮಾರಯ್ಯನ ॥
ಮಸಣಯ್ಯಗಳ ಮನೆಯ
ಕಸವ ಗುಡಿಸುವ ಮಹಾ
ಹೊಸ ಸೇವಕರು ನಮಗೆ ಸರಿಯದಾರು."[೧]

**ವೀರಕ್ತತೋಂಟದಾರ್ಯ** (ಕ್ರಿ. ಶ. ಸು. ೧೫೬೦)

"ಅನುಪಮ ಮಹಾಪ್ರಸಾದವೆ ಗಟ್ಟಿಗೊಂಡು ನೆರೆ
ತನುವ ತಳೆದಮಲ ಗುರುಲಿಂಗಜಂಗಮ ಭಕ್ತಿ-
ಯನುವನುರೆ ಬಸವೇಶ್ವರಂಗರುಪಿ ಸಲಹಿ ಕಲ್ಯಾಣಪಟ್ಟಣದೊಳಿರ್ಪ ॥
ಅನಘರೆನಿಸುವ ಶರಣ ಜನಕೆ ಷಟ್‌ಸ್ಥಲಮಾರ್ಗ
ವನೆ ಕರುಣದಿಂದೆ ಬೋಧಿಸಿ ನಿಲಿಸಿದಧಿಕ ಚಿ-
ದ್ಘನ ಪರಂಜ್ಯೋತಿ ಸ್ವರೂಪಂಗೆ ಚನ್ನಬಸವೇಶಂಗೆ ವಂದಿಸುವೆನು."[೨]

**ಮುರಿಗೆಯದೇಶಿಕೇಂದ್ರ** (ಕ್ರಿ. ಶ. ಸು. ೧೫೬೦)

"ಸ್ಮರಗುಣಚೈತ್ರ ಸಾಧುನುತಿಪಾತ್ರ ಸದಾಶಿವಪುತ್ರ ಸತ್ಯ ಸ-
ದ್ಗುರು ಚರಮಿತ್ರ ಶಂಭುಕುಲಗೋತ್ರ ಸುಭಕ್ತಜನಾತಪತ್ರ ಚಿ-
ದ್ವರ ನಿಜನೇತ್ರ ಭಾಸುರಚರಿತ್ರ ಭವಾಬ್ಧಿಬಹಿತ್ರಸಾರ ಸೌಂ
ದರ ಮನುಗಾತ್ರ ಚನ್ನಬಸವೇಶ ವಿಚಿತ್ರ ಪವಿತ್ರ ಪಾಲಿಸಾ."[೩]

**ವಿರೂಪಾಕ್ಷಪಂಡಿತ** (ಕ್ರಿ. ಶ. ಸು. ೧೫೮೪)

"ಸನ್ನುತ ಶಿವಪ್ರಸಾದವೆ ನಾಗಲಾಂಬಿಕೆಗೆ
ನನ್ನಿಯಿಂ ಶಿಶುವಾಗಿ ಜನಿಸಿ ಬಾಲ್ಯವನುಳಿದು
ಭಿನ್ನವಿಲ್ಲದೆ ಶಿವಗಣಕ್ಕೊಲಿದು ಸ್ಥಾವರಾದ್ಯನ್ಯಲಿಂಗದ ಭಜನೆಯ ॥
ಮುನ್ನಮೇ ಬಿಡಿಸಿ ಷಟ್ಸ್ಥಳ ಮಾರ್ಗಮಂ ತಿಳುಪಿ
ಚೆನ್ನಾಗಿ ಪ್ರಾಣಲಿಂಗದ ನೆಲೆಯನಱುಹಿಕೊ
ಟ್ಟುನ್ನತ ಸುಮುಕ್ತಿಯೊಳಗಿಂಬಿಟ್ಟ ಪರಮಗುರು ಚನ್ನಬಸವಂಗೆ ಶರಣು."[೪]

---

೧. **ಸುಸಾ.** ಪು ೩೪ ೧. ೨. ಸಿಪು. ೩. **ಹಕಾಪು.** ೩. ಪ್ರ. ೧-೧೦. ೪. **ಚೆಬಪು.** ಕಾಂ. ೧-೧೩.

**ಬಸವಲಿಂಗಕವಿ** (ಕ್ರಿ. ಶ. ಸು. ೧೫೬೦)

"ಬಸವಗುರುಲಿಂಗಪದಬಿಸಜಮದಭೃಂಗ ಕರು
ಣಸುಧಾತರಂಗ ಪರಿಲಸಿತ ಸದಪಾಂಗ ಗಣ
ವಿಸರ ಹೃದಯಂಗಮ ಸರಸಗುಣೋತ್ತುಂಗ ಶರಣಸದಾನತೋತ್ತಮಾಂಗ
ಕುಸುಮಯು ಭುಜಂಗಮಭಿಷಹೃದಯವಿಹಂಗಪಯ
ಮಿಸಮಾಂತರಂಗ ಸಾರಸವನಪತಂಗ ವಿರ
ತಸಮೂಹಸಂಗಸಮರಸರಸಿಕಪುಂಗವ ಜಯತು ಚನ್ನಬಸವೇಶ್ವರಾ."[೧]

**ಷಡಕ್ಷರದೇವ** (ಕ್ರಿ. ಶ. ಸು. ೧೬೫೪)

"ವೃಜಿನವ್ರಾತಮನೊಕ್ಕಲಿಕ್ಕಿಮದಮಾತಂಗಂಗಳಂ ಸೀಳ್ದು ತಾ
ಳ್ದು ಜಗದ್ವಿಶ್ರುತವರ್ತಿ ಕೀರ್ತಿಯನನಂಗೋದ್ರೇಕಮಂ ಮೆಟ್ಟಿ ಮು
ಟ್ಟಿ ಜಡಂ ಪೊರ್ದದ ಸಾಧುಬೋಧಮನಶೇಷತ್ಯಾಗಮಂ ಯೋಗಮಂ
ಸುಜನರ್ಗಾಗಿಪ ಭಿನ್ನ ಚನ್ನಬಸವೇಶಂ ಮಾಳ್ಕೆ ಸುಜ್ಞಾನಮಂ."[೨]

"ಮೋಹಧ್ವಾಂತದಿವಾಕರಂ ಪ್ರಬಲ ಮಾಯಾಭೀಕರಂ ಭವ್ಯ ಸಂ ॥
ದೋಹಸ್ತುತ್ಯಗುಣಾಕರಂ ಘನಕೃಪಾರತ್ನಾಕರಂ ದುರ್ಮತ ॥
ವ್ಯೂಹಾಂಭೋಜಸುಧಾಕರಂ ಪ್ರಣತವೃಂದಶ್ರೀಕರಂ ಮಾಳ್ಕಿವೀ ॥
ತಾಹಂಕಾರಸುಬೋಧ ಚನ್ನಬಸವಂ ಸುಜ್ಞಾನ ಸಂಪತ್ತಿಯಂ."[೩]

**ಚನ್ನಪ್ಪ ಕವಿ** (ಕ್ರಿ. ಶ. ಸು. ೧೩೫೦)

"ಶ್ರೀಗಿರಿಜಾವರಸುತನೆ ಶಿವಕುಮಾರನೆ
ಸಾಗರದೊಲು ಗಭೀರ ಸಕಲ ಗುಣಹಾರ
ಆಗಮಾ ವೇದಾರ್ಥ ಅಮೃತದ ಸಾರ
ಯೋಗಿಜನ ಹೃತ್ಕಮಲ ವೇದ್ಯ ತತ್ಪೂರ
ಭಕ್ತವತ್ಸಲ ಚನ್ನಬಸವ ದಂಡೇಶ."[೪]

**ಗುರುಸಿದ್ಧಕವಿ** (ಕ್ರಿ. ಶ. ಸು. ೧೭೫೦)

"ಎನ್ನ ರಕ್ಷಿಸು ಷಡುಸ್ಥಲದ ಸಂಪನ್ನನೆ
ಮನ್ನಿಸಿ ಮತಿಯ ಕೊಡೆನಗೆ
ಚನ್ನಬಸವ ಅಂಘ್ರಿಕಮಲಕೆರಗಿ ನಾನು
ಇನ್ನು ಪೇಳುವೆನು ಈ ಕೃತಿಯ."[೫]

---

೧. ಕೋಬಚಾ. ೧-೧೪. ೨. ರಾಶೇವಿ. ೧-೧೨. ೩. ವೃವಿ, ೧-೯. ೪. ಶಲೀ. ೨೨, ೧-೨-೩. ೫. ಮಾಸಾಂ. ೧-೧೨.

**ಚೆನ್ನಬಸವ ಕವಿ**

"ಶಿವಸುಪ್ರಸಾದವಾ ನಾಗಲಾಂಬೆಯ ಗರ್ಭ-
ಭವನದೊಳಗವಯುವವನಾಂತಿರಲ್ಕರ್ಣಾ ಜಪ
ನಿವಹದಿಂ ಕೇಳಿ ಬಿಜ್ಜಳನೃಪಂ ಬಂದಾಲಿಸಲ್ಕೊಳಗಿನಿಂದ ನುಡಿದು ॥
ಭುವನವರಿವಂತೆ ಸಾಧುವರೇಣ್ಯಸಂಭವಿಸಿ
ಶಿವದ್ವೈವಮೆಂದು ಸಿದ್ಧಾಂತಗೊಳಿಸಿದ ಗಣ
ಪ್ರವರ ಷಟ್ಸ್ಥಲವರ್ಯ ವೀರಶೈವಾಚಾರ್ಯ ಚನ್ನಬಸವೇಶ ಸಲಹು."[೧]

**ಶ್ರೀಘನಮಠ ಶಿವಯೋಗಿಗಳು** (ಕ್ರಿ. ಶ. ಸು. ೧೮೨೮)

"ಚನ್ನಬಸವೇಶ ಚಿದಮೃತಸಾಗರ
ಗಣಕುಶಲ ಶೇಖರ
ಪರಮಪ್ರಸಾದ ಸುಶರೀರವೆನಿಸಿದುರು-
ತರ ಷಟ್‌ಸ್ಥಲ ಗುರುವರ ನಿರುಪಮ ಶಿವ"[೨]

**ಬಸವಕವಿ** (ಕ್ರಿ. ಶ. ಸು. ೧೮೬೦)

"ಕಾಮಹರನಮಳ ಚಿದ್ರೂಪತತ್ತ್ವಾಲಾಪ
ರಾಮಣೀಯಕ ಸುಗುಣಭೂಪ ಪುಣ್ಯಾವೇಷ
ಸೋಮಧರ ಶರಣ ಹರ್ಷಾಬ್ಧಿವರ್ಧನಭೇನ ಪರಮಪುಣ್ಯ ಪ್ರಕಾಶ ॥
ಭೀಮದುರಿತಾಳಿ ಜೀಮೂತ ಝಂಝಾವಾತ
ರಾಮ ಷಟ್ಸ್ಥಲಲೋಲ ಪರಸಮಯ ಹರಶೀಲ
ಕಾಮಿತಾರ್ಥದ ಚನ್ನಬಸವೇಶನಡಿಗೆರಗಿ ನಿರ್ಮಿಸುವೆನೀಕಾವ್ಯಮಂ."[೩] ॥

---

೧. ಶಿಗಪು. ಪ೨. ೨. ಭಸುಸಾ. ಪು. ೪೩. ಪ. ೩೫. ೧. ಮಲಿಂಲೀ. ೧-೭.

# ತೋಂಟದ ಸಿದ್ಧಲಿಂಗ ಶಿವಯೋಗಿಗಳು

(ಚರಿತ್ರೆ, ತತ್ತ್ವ, ಸಾಹಿತ್ಯ ವಿವೇಚನೆ)

## ಸಂಕೇತಸೂಚನೆ

| | |
|---|---|
| M. A. R. | Mysore Archeological Report |
| ಪ್ರೌ. ಕಾ. | ಪ್ರೌಢರಾಯನ ಕಾವ್ಯ |
| ಚ. ಬ. ಪು. | ಚನ್ನಬಸವ ಪುರಾಣ |
| ನೂ. ವಿ. ಕಾ. | ನೂರೊಂದು ವಿರಕ್ತರ ಕಾವ್ಯ |
| ವೀ. ಮ. ಪು. | ವೀರಶೈವಾಮೃತ ಮಹಾಪುರಾಣ |
| ಸಿ. ಶಿ. | ಸಿದ್ಧಾಂತ ಶಿಖಾಮಣಿ |
| ತೋ. ಸಿ. ವ. | ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಗಳು |
| ಗ. ಸ. ನಾ. | ಗಣಸಹಸ್ರನಾಮಾವಳಿ |
| ಲಿಂ. ಲೀ. ವಿ. ಚಾ. | ಲಿಂಗಲೀಲಾವಿಲಾಸಚಾರಿತ್ರ |
| ವೀ. ರ. | ವೀರಶೈವ ರತ್ನ |
| ಬ. ಷ. ವ. | ಬಸವಣ್ಣನವರ ಷಟ್ಸ್ಥಲದ ವಚನಗಳು |
| ಕೆ. ನೃ. ವಿ. | ಕೆಳದಿನೃಪವಿಜಯ |
| ಶೂ. ಸಂ. | ಶೂನ್ಯಸಂಪಾದನೆ |
| E. C. | Epigraphia Carnatica |
| ಸಿ. ಸಾಂ. | ಸಿದ್ಧಲಿಂಗೇಶ್ವರ ಸಾಂಗತ್ಯ |
| ನಿ. ವ. ರ. | ನಿರಂಜನವಂಶ ರತ್ನಾಕರ |
| ಸಿ. ಮ. ಪು. | ಸಿದ್ಧೇಶ್ವರ ಮಹಾಪುರಾಣ |
| ನಿ. ಜ. ದ. | ನಿರಂಜನ ಜಂಗಮವಂಶದರ್ಪಣ |
| ವೀ. ತ. ಪ್ರ. | ವೀರಶೈವತತ್ತ್ವಪ್ರಕಾಶ |
| ವಿ. ಚಿಂ. | ವಿವೇಕ ಚಿಂತಾಮಣಿ |
| ಶಿ. ಸೂ. | ಶಿವಾನುಭವಸೂತ್ರ |
| ಚ. ಬ. ವ. | ಚನ್ನಬಸವಣ್ಣನವರ ವಚನಗಳು |

ದುರಿತತಮಃಪತಂಗನಮಳಾರ್ಥವಿವೇಚನಸತ್ತ್ರಸಂಗನೀ
ಶ್ವರಲಸದಂತರಂಗನಭವಾಗಮವಾರಿಜದಿವ್ಯಭೃಂಗನ
ಕ್ಷರವರಲಿಂಗಸಂಗನತಿಶಾಂತನಿರಸ್ತಜಡಾನುಷಂಗನೊ
ಲ್ದುರುತರ ಸಿದ್ಧಲಿಂಗಯತಿತುಂಗನೊಡರ್ಚುಗೆ ಸಜ್ಜನೇಷ್ಟಮಂ ॥

ಷಡಕ್ಷರದೇವ

# ಚಾರಿತ್ರಿಕ ವಿವೇಚನೆ

ಕನ್ನಡನಾಡು ಮತ್ತು ವೀರಶೈವ ಸಮಾಜಗಳ ಇತಿಹಾಸದಲ್ಲಿ ಕಲ್ಯಾಣದ ಶಿವ ಶರಣರು ಹಾಗೂ ವಿಜಯನಗರದ ವಿರಕ್ತರು ಎಸಗಿದ ಕಾರ್ಯ ಅಪ್ರತಿಮವಾದುದು. ಶಿವಶರಣರ ಪರಂಪರೆ ಬಸವಾದಿಪ್ರಮಥರಿಗಿಂತ ಪೂರ್ವದಲ್ಲಿಯೇ ಪ್ರಾರಂಭವಾಗಿದ್ದರೂ[೧] ಅನುಭವ ಮಂಟಪದ ದಿವ್ಯಾಗಾರದಲ್ಲಿ–ಬಸವಣ್ಣನವರ ಭಕ್ತಿಯ ಬೆಳಕಿನಲ್ಲಿ–ಶಿವಶರಣರು ಅಸಂಖ್ಯಾತರಾದರು; ವೀರಶೈವ ಧರ್ಮ, ತತ್ತ್ವ, ಸಮಾಜಗಳಲ್ಲಿ ನವ ನವೋನ್ಮೇಷಶಾಲಿನಿಯಾದ ಚೈತನ್ಯವುಂಟಾಗುವುದಕ್ಕೆ ಕಾರಣರಾದರು.

ಬಸವಾದಿ ಪ್ರಮಥರು ಕೈಕೊಂಡ ಈ ಕ್ರಾಂತಿ ಹರಿಹರಾದಿ ಕವಿವರೇಣ್ಯರಿಂದ ಮುಂದುವರಿಯಿತು; ಈ ಕ್ರಾಂತಿಗೆ ಕಾರಣರಾದವರು ಹರಿಹರ, ರಾಘವಾಂಕ ಮತ್ತು ಕೆರೆಯ ಪದ್ಮರಸ ಈ ಮೂವರೇ ಎಂದು ಇದುವರೆಗಣ ಸಾಹಿತ್ಯ ಚರಿತ್ರೆಯಿಂದ ವಿದಿತವಾಗಿದ್ದಿತು. ಆದರೆ, ನೀಲಕಂಠ ನಾಗನಾಥಾಚಾರ್ಯ ವಿರಚಿತ 'ಶ್ರೀಮದ್ವೀರ-ಮಾಹೇಶ್ವರಾಚಾರ ಸಂಗ್ರಹ' ಎಂಬ ಸಂಸ್ಕೃತ ಗ್ರಂಥವು ಈ ವಿಷಯದ ಮೇಲೆ ಹೆಚ್ಚಿನ ಬೆಳಕನ್ನು ಬೀರುವಂತೆ ತೋರುತ್ತದೆ. ಈ ಗ್ರಂಥದ ಆರಂಭದಲ್ಲಿ ಬರುವ ಪೂರ್ವಕವಿಸ್ತವನದೊಳಗಿನ ಹೆಸರುಗಳು ಹೀಗಿವೆ: ಬಸವಣ್ಣ, ಚೆನ್ನಬಸವಣ್ಣ, ಪ್ರಭು-ದೇವ, ಸಿದ್ಧರಾಮೇಶ, ಪಂಡಿತಾರಾಧ್ಯ, ಮಲ್ಲಯಾರ್ಯ, ಲಕ್ಷ್ಮೀದೇವ, ಪದ್ಮರಾಜ, ಪಾಲ್ಕುರಿಕೆ ಸೋಮನಾಥ, ಜ್ಯೋತಿರ್ನಾಥ, ನಾಗೇಶ. ಹರೀಶ್ವರ. ಇಲ್ಲಿ ಹರಿಹರನ ತರುವಾಯ ಬಂದ ಯಾವ ಕವಿಯ ಹೆಸರೂ ಉಕ್ತವಾಗಿರುವುದಿಲ್ಲ. ಇದರಿಂದ ಹರಿಹರನ ಕಾಲದ ಅನಂತರ ಅಲ್ಪಾವಧಿಯಲ್ಲಿಯೇ ಈ ನೀಲಕಂಠ ನಾಗನಾಥಾಚಾರ್ಯನು ಜೀವಿಸಿರಬೇಕೆಂದು ತೋರುತ್ತದೆ. ಕ್ರಿ. ಶ. ೧೩೬೯ರಲ್ಲಿ ಕಾವ್ಯವನ್ನು ರಚಿಸಿದ ಭೀಮ ಕವಿಯ ಹೆಸರನ್ನಾಗಲಿ, ಕ್ರಿ. ಶ. ೧೪೦೦ರಲ್ಲಿ ಕೃತಿಗೈದ ಪದ್ಮರಾಜ ಪುರಾಣದ ಕರ್ತೃ ಪದ್ಮಣಾಂಕನ ಹೆಸರನ್ನಾಗಲಿ ನೀಲಕಂಠನಾಗನಾಥಾಚಾರ್ಯನು ತನ್ನ ಕಾವ್ಯದಲ್ಲಿ ನೆನೆಯದಿರುವುದರಿಂದ ಈತನು ತತ್ಪೂರ್ವದಲ್ಲಿ ಬಾಳಿರುವ ಸಂಭವವಿದೆ. ಎಂದರೆ ಹರಿಹರ (ಕಿ. ಶ. ೧೨೨೦) ಹಾಗೂ ಭೀಮಕವಿ (ಕ್ರಿ. ಶ. ೧೩೬೯) ಇವರಿರ್ವರ ನಡುವಣ ಕಾಲಾವಧಿಯಲ್ಲಿಯೇ ನೀಲಕಂಠ ನಾಗನಾಥಾಚಾರ್ಯನು ಬಾಳಿದ್ದನೆಂದು ಇದರರ್ಥವಾಗುತ್ತದೆ. ಪದ್ಮರಾಜ ಪುರಾಣದಲ್ಲಿ ಕೆರೆಯ ಪದ್ಮರಸರು ತ್ರಿಭುವನ ತಾತನೊಡನೆ ವಾದ ಮಾಡಲು ಹೊರಟಾಗ ಅವರೊಡನೆ ರಾಘವಾಂಕ, ನಾಗನಾಥಾರ್ಯ. ಜಗದಾರಾಧ್ಯ

---

೧. ಬಸವಾದಿ ಪ್ರಮಥರ ಪೂರ್ವದ ಕೆಲವು ಜನ ವಚನಕಾರರನ್ನು ಅವರ ಅಂಕಿತಗಳೊಂದಿಗೆ ಹೀಗೆ ಉಲ್ಲೇಖಿಸಬಹುದು: ಮಾದಾರ ಚನ್ನಯ್ಯ (-ನಿಜಾತ್ಮ ರಾಮರಾಮ); ಕೊಂಡಗುಳಿ ಕೇಶಿರಾಜ (-ಸೋಮನಾಥ?); ಜಂಡಿಮರಸ (-ಸಿಮ್ಮಲಿಗೆಯ ಚನ್ನರಾಮ); ಕೆಂಭಾವಿ ಭೋಗಣ್ಣ (-ನಿಜಗುರು ಭೋಗಸಂಗ): ಶಂಕರ ದಾಸಿಮಯ್ಯ (-ನಿಜಗುರು ಶಂಕರದೇವ); ಸಕಲೇಶ ಮಾದರಸ (-ಸಕಲೇಶ್ವರ ದೇವ); ಮರೆಮಿಂಡಯ್ಯ (-ಘಟಮೂರ ರಾಮೇಶ್ವರಲಿಂಗ); ಡೋಹರ ಕಕ್ಕಯ್ಯ (-ಅಭಿನವ ಮಲ್ಲಿಕಾರ್ಜುನ). ದೇವರದಾಸಿಮಯ್ಯ (ರಾಮನಾಥ.)

ನಾಗಿ ದೇವ ಮೊದಲಾದವರು ಹೋಗಿದ್ದರೆಂದು ಉಕ್ತವಾಗಿದೆ.[೧] ಇದು ನಿಜವಿದ್ದರೆ ನಾಗನಾಥಾಚಾರ್ಯನು ಹರಿಹರ ರಾಘವಾಂಕರ ಸಮಕಾಲೀನನಾಗುತ್ತಾನೆ. ಈತನು ಉಲ್ಲೇಖಿಸಿರುವ ಕೆಲವು ಕವಿಗಳು ಮಹತ್ವದ ಗ್ರಂಥಗಳನ್ನು ರಚಿಸಿರುವಂತೆ ತಿಳಿದು ಬರುತ್ತದೆ. 'ವೀರಮಾಹೇಶ್ವರಾಚಾರ ಸಂಗ್ರಹ' ಗ್ರಂಥದ ಮೊದಲ ಸಂಧಿಯಲ್ಲಿ ಬರುವ ಪೂರ್ವಕವಿಸ್ತವನಪರ ಶ್ಲೋಕಗಳಲ್ಲಿ ಈ ಮಾತಿಗೆ ಸತ್ಯಾಂಶವನ್ನು ಕಂಡುಕೊಳ್ಳ ಬಹುದು. ಆ ಶ್ಲೋಕಗಳು ಇಂತಿವೆ:[೨]

ಪುರಾ ವ್ಯಾಹೃತವಾನ್ಯಸ್ತು ಶಿವಜ್ಞಾನಪ್ರದೀಪಿಕಾಂ ।
ಮಲ್ಲಯಾರ್ಯಗುರುಂ ನೌಮಿ ಮಲ್ಲಿಕಾರ್ಜುನವಲ್ಲಭಮ್ ॥

ವೇದಶಾಸ್ತ್ರಪುರಾಣೇಷು ಸಾರಮುದ್ಧೃತ್ಯಶಾಂಕರಂ ।
ಸಾರೋದ್ಧಾರಃ ಕೃತೋ ಯೇನ ಲಕ್ಷ್ಮೀದೇವಗುರುಂ ಭಜೇ ॥

ಶೈವರತ್ನಾಕರಂ ನಾಮ ಗ್ರಂಥಂ ಯಃ ಕೃತವಾನ್ಪುರಾ ।
ಜಗದ್ಧಿತಾರ್ಥಂ ಕೃಪಯಾ ಜ್ಯೋತಿರ್ನಾಥಂ ನಮಾಮಿ ತಮ್ ॥

ವ್ಯಾಕರೋದ್ಯಃ ಶಿವಜ್ಞಾನಸಮುಚ್ಚಯಮಕಲ್ಮಷಂ ।
ಜಗದಾರಾಧ್ಯನಾಗೇಶಗುರುಂ ತಂ ಸತತಂ ಭಜೇ ॥

ಯಃ ಪುರಾತನಚಾರಿತ್ರ್ಯಂ ಕೃತವಾನ್ ದೇಶಭಾಷಯಾ ।
ಪಂಪಾ ಹರೀಶ್ವರಂ ನೌಮಿ ಸಂಪಾದಿತ ಶಿವಾಸ್ಪದಮ್ ॥

ಇಲ್ಲಿ ಉಕ್ತರಾದ ಪೂರ್ವಕವಿಗಳು ತನಗೆ ಪೂಜ್ಯರೆಂಬುದನ್ನು ಕವಿ 'ಗುರು' ಎಂಬ ಪದದಿಂದ ವ್ಯಕ್ತಗೊಳಿಸಿದ್ದಾನೆ. ಇವರೊಳಗೆ ಮಲ್ಲಯಾರ್ಯ ಗುರು 'ಶಿವ ಜ್ಞಾನ ಪ್ರದೀಪಿಕಾ' ಎಂಬ ಗ್ರಂಥವನ್ನು ರಚಿಸಿರುವಂತೆ ವೇದ್ಯವಾಗುತ್ತದೆ. ಆದರೆ ಈ ಮಲ್ಲಯಾರ್ಯನು ಯಾರು? ಈತನ ಈ ಗ್ರಂಥ ಸಂಸ್ಕೃತ ಭಾಷೆಯಲ್ಲಿದೆಯೋ, ಕನ್ನಡ ದಲ್ಲಿದೆಯೋ? ಅದರ ವಿಷಯವೇನು? ವಿವೇಚನೆಯೆಂತು? ಎಂಬಿವೇ ಮೊದಲಾದ ವಿಷಯಗಳಿನ್ನೂ ಅಜ್ಞಾತವಾಗಿಯೇ ಉಳಿದಿವೆ. ಗ್ರಂಥದ ಶೀರ್ಷಿಕೆಯನ್ನು ನೋಡಿದರೆ, ಅದು ಸಂಸ್ಕೃತ ಗ್ರಂಥವೆಂಬಂತೆ ತೋರುತ್ತದೆ. ಅಲ್ಲದೆ ಹರೀಶ್ವರನ 'ಪುರಾತನ ಚಾರಿತ್ರ್ಯ' ಕೃತಿಯ ವಿಷಯದಲ್ಲಿ ಮಾತ್ರವೇ 'ದೇಶಭಾಷಯಾಂ' ಎಂದು ಸ್ಪಷ್ಟಗೊಳಿ ಸಿರುವುದರಿಂದ ಅದೊಂದನ್ನುಳಿದು ಇಲ್ಲಿ ಹೇಳಿದ ಇತರರ ಕೃತಿಗಳು ಸಂಸ್ಕೃತ ಭಾಷೆ ಯಲ್ಲಿರಬಹುದೆಂದು ಊಹಿಸಲು ಎಡೆಯಿದೆ. ಲಕ್ಷ್ಮೀದೇವನೆಂಬವನು ವೀರಶೈವ ಕವಿಯಾಗಿರಬೇಕು. ಇಲ್ಲದಿದ್ದರೆ ನೀಲಕಂಠ ನಾಗನಾಥಾಚಾರ್ಯನು ಆತನನ್ನು ಗುರು ಪದವಿತ್ತು ಭಜಿಸುವ ಗೋಜಿಗೆ ಹೋಗುತ್ತಿರಲಿಲ್ಲ. ಚಕ್ರಪಾಣಿ ರಂಗನಾಥನಂತೆ ಈ ಲಕ್ಷ್ಮೀದೇವನೂ ಪರಧರ್ಮದಿಂದ ವೀರಶೈವಕ್ಕೆ ಬಂದವನಾಗಿರಬೇಕು. ಆತನು ವೇದ ಶಾಸ್ತ್ರಪುರಾಣಗಳ ಸಾರವನ್ನು ಉದ್ಧರಿಸಿ 'ಸಾರೋದ್ಧಾರ' ಎಂಬ ಗ್ರಂಥವನ್ನು ರಚಿಸಿರು ವನಂತೆ. ಈ ಕವಿಯ ಹಾಗೂ ಅವನ ಕೃತಿಗಳ ಬಗೆಗೆ ಸಂಶೋಧನೆ ನಡೆಸುವುದು ತೀರ

---

೧. ಸಂ. ೯. ಪು. ೨೯, ೩೦.    ೨. ಸಂ. ೧.

ಅಗತ್ಯವಿದೆ. 'ಶೈವರತ್ನಾಕರ' ಎಂಬ ಗ್ರಂಥವನ್ನು ಜ್ಯೋತಿರ್ನಾಥ ಕವಿ ರಚಿಸಿದ್ದಾನೆ. ಜಗದಾರಾಧ್ಯ ನಾಗೇಶಗುರು[೧] 'ಶಿವಜ್ಞಾನ ಸಮುಚ್ಚಯ' ಎಂಬ ಗ್ರಂಥವನ್ನು ಬರೆದಿರುವನು. ಅದರ ಬಗೆಗೆ ಸಹ ಯಾವ ವಿಷಯವೂ ತಿಳಿದುಬಂದಿರುವುದಿಲ್ಲ.

ಈ ಸ್ತವನ ಶ್ಲೋಕಮಾಲಿಕೆಯಲ್ಲಿ ನಡುವೆ, ಕೆರೆಯ ಪದ್ಮರಸನು ರಚಿಸಿದ 'ಸಾನಂದ ಚರಿತ' ಎಂಬ ಗ್ರಂಥದ ಮಾತನ್ನು ನೀಲಕಂಠ ನಾಗನಾಥಾಚಾರ್ಯನು ಎತ್ತುತ್ತಾನೆ. 'ಸಾನಂದ ಚರಿತ'ವು ಸಂಸ್ಕೃತದಲ್ಲಿದೆಯೆಂದೂ ಅದನ್ನು ಕೆರೆಯ ಪದ್ಮರಸರ ಮಗ ಕುಮಾರ ಪದ್ಮರಸನು ಕನ್ನಡದಲ್ಲಿ ಷಟ್ಪದಿ ರೂಪದಲ್ಲಿ ಅನುವಾದಿಸಿರುವನೆಂದೂ ತಿಳಿದುಬಂದಿದೆ. ಕನ್ನಡ 'ಸಾನಂದ ಚರಿತೆ' ಉಪಲಬ್ಧವಿದೆ. ಆದರೆ ಸಂಸ್ಕೃತ 'ಸಾನಂದ ಚರಿತೆ' ದೊರೆತಂತೆ ಕಂಡುಬರುವುದಿಲ್ಲ. ಇದೇ ರೀತಿಯಾಗಿ ಪಾಲ್ಕುರಿಕೆ ಸೋಮನಾಥನ 'ಬಸವರಾಜೀಯ' ಎಂಬ ಗ್ರಂಥವನ್ನು ಉಲ್ಲೇಖಿಸುತ್ತಾನೆ. ಅದು ಪ್ರಸಿದ್ಧವಾದ ಸೋಮನಾಥ ಭಾಷ್ಯ. ಕೊನೆಯಲ್ಲಿ, ಹಂಪೆಯ ಮಹಾಕವಿ ಹರಿಹರನನ್ನು ಸ್ಮರಿಸಿ, ನಾಗನಾಥಾಚಾರ್ಯನು ಪೂರ್ವ ಕವಿಸ್ತವನವನ್ನು ಮುಗಿಸುತ್ತಾನೆ.

ಪದ್ಮರಾಜ ಪುರಾಣದಲ್ಲಿ ನೀಲಕಂಠನಾಗಾರ್ಯ, ಪಾಲ್ಕುರಿಕೆ ಸೋಮೇಶ, ಲಕ್ಷ್ಮೀಧರ, ಮಲ್ಲಿಕಾರ್ಜುನಾಚಾರ್ಯರನ್ನು ಹೀಗೆ ಸ್ತುತಿಸಲಾಗಿದೆ:

**ವೀರಮಾಹೇಶ್ವರಾಚಾರಸಂಗ್ರಹ ಶಾಸ್ತ್ರ**
**ಕಾರನೆನಿಸಿದ ನೀಲಕಂಠ ನಾಗಾರ್ಯಂಗೆ**
**ಸಾರತರ ಬಸವರಾಜೀಯಮಂ ನೆಗಳ್ದ ಪಾಲ್ಕುರಿಕೆ ಸೋಮೇಶ್ವರಂಗೆ**
**ಚಾರು ಸಾರೋದ್ಧಾರಮಂ ಪಡೆದ ಲಕ್ಷ್ಮೀಧ**
**ರಾರಾಧ್ಯಪತಿ ಗುರು ಶಿವಜ್ಞಾನದೀಪಿಕೆಯ**
**ನೋರಂತೆ ರಚಿಸಿದನುಪಮ ಮಲ್ಲಿಕಾರ್ಜುನಾಚಾರ್ಯಂಗೆ ವಂದಿಸಿದಪೆಂ[೨]**

ಈ ವಿವರಣೆಯಿಂದ, ಬಸವಾದಿಪ್ರಮಥರ ಅನಂತರ, ಹರಿಹರ–ರಾಘವಾಂಕ–ಕೆರೆಯ ಪದ್ಮರಸರಷ್ಟೇ ಅಲ್ಲದೆ, ಅವರ ಹಿಂದುಮುಂದಣ ಕಾಲಾವಕಾಶದಲ್ಲಿ ಅನೇಕ ಕವಿಗಳು ಮಹತ್ತ್ವದ ಗ್ರಂಥಗಳನ್ನು ಬರೆದು ವೀರಶೈವಕ್ಕೆ ಘನವಾದ ಸೇವೆ ಸಲ್ಲಿಸಿರುವರೆಂಬ ಮಾತು ಸ್ಪಷ್ಟವಾಗುವುದು. ಅಲ್ಲದೆ, ವೀರಶೈವ ಸಿದ್ಧಾಂತವನ್ನು ಸಂಸ್ಕೃತ ಭಾಷೆಯಲ್ಲಿ ವಿವರಿಸುವ ಹಾಗೂ ವೇದಾಗಮಗಳಲ್ಲಿ ಆ ತತ್ತ್ವಗಳ ಬೇರುಗಳನ್ನು ಕಂಡು ಹಿಡಿಯುವ ಪ್ರಯತ್ನಗಳು ಈ ಅವಧಿಯಲ್ಲಿ ನಡೆದಿರುವಂತೆ ತೋರುತ್ತದೆ.

ಇಷ್ಟು ಜನ ಕವಿಗಳಾದ ಮೇಲೆ ಭೀಮಕವಿ ಮತ್ತು ಪದ್ಮಣಾಂಕ ಕವಿಗಳು ಗೋಚರಿಸುತ್ತಾರೆ. ಭೀಮಕವಿಯ 'ಬಸವಪುರಾಣ' ಮತ್ತು ಪದ್ಮಣಾಂಕನ 'ಪದ್ಮರಾಜ

---

೧. ಈತನು ಕೆರೆಯಪದ್ಮರಸರು ತ್ರಿಭುವನ ತಾತನನ್ನು ವಾದದಲ್ಲಿ ಗೆದ್ದ ಸಭೆಯಲ್ಲಿ ಉಪಸ್ಥಿತನಾಗಿದ್ದು ಪದ್ಮರಸನ ಸ್ತುತಿಪರ ಪದ್ಯಗಳನ್ನು ರಚಿಸಿರುವಂತೆ ತಿಳಿದು ಬರುತ್ತದೆ. (ಕ. ಚ. ಭಾ. ೧. ಪು. ೨೮೧)

೨. ಸಂ. ೧. ಪು. ೧೨

ಪುರಾಣ'ಗಳು ವೀರಶೈವ ಪುರಾಣಪರಂಪರೆಯ ಆದಿಗ್ರಂಥಗಳಾಗಿ, ಆದರ್ಶ ಕೃತಿಗಳಾಗಿ ಜನಜೀವನದಲ್ಲಿ ಭಕ್ತಿಯ ಬೀಜಗಳನ್ನು ಬಿತ್ತಿದವು; ಅವರಿಗೆ ಮುಕ್ತಿಯ ಫಲಗಳನ್ನಿತ್ತವು.

ವಿಜಯನಗರ ಸಾಮ್ರಾಜ್ಯದ ಉದಯ ಕನ್ನಡನಾಡಿಗೂ ವೀರಶೈವಧರ್ಮಕ್ಕೂ ನೂತನ ಚೈತನ್ಯವನ್ನು ತಂದುಕೊಟ್ಟಿತು. ಈ ಸಾಮ್ರಾಜ್ಯವನ್ನು ಆಳಿದ ನಾಲ್ಕು ಅರಸು ಮನೆತನಗಳಲ್ಲಿ ಮೊದಲನೆಯದಾದ ಸಂಗಮವಂಶದ ದೊರೆಗಳು ಶೈವಧರ್ಮಾವಲಂಬಿಗಳಾಗಿದ್ದರು. ವಿಜಯನಗರ ಸಾಮ್ರಾಜ್ಯೋದಯಕ್ಕೆ ಶೈವಧರ್ಮದ ಗುರುಗಳಾದ ಕ್ರಿಯಾಶಕ್ತಿ ಪಂಡಿತಾಚಾರ್ಯರ ತಪಃಪ್ರಭಾವವು ಪ್ರೇರಕಶಕ್ತಿಯಾಗಿದೆ. ಶ್ರೀಶೈಲ, ಹೂಲಿ, ಬಳ್ಳಿಗಾವಿಗಳಂತೆ ಪಂಪಾಕ್ಷೇತ್ರವೂ ಶೈವಧರ್ಮದ ಸುಪ್ರಸಿದ್ಧ ಕೇಂದ್ರವಾಗಿರಬೇಕು. ವಿಜಯನಗರದ ಶಾಸನಗಳಲ್ಲಿ ಕ್ರಿಯಾಶಕ್ತಿ ಪಂಡಿತರಿಗೆ ರಾಯರು ಕಾಣಿಕೆಗಳನ್ನಿತ್ತು 'ರಾಜಗುರು' ಎಂದು ಗೌರವಿಸಿದರೆಂಬ ಉಲ್ಲೇಖಗಳುಂಟು.[೧] ಈ ಮನೆತನದ ಇಮ್ಮಡಿ ದೇವರಾಯನು ವೀರಶೈವ ಸಾಹಿತ್ಯದಲ್ಲಿ ಪ್ರೌಢದೇವರಾಯನೆಂದು ಹೆಸರಾಗಿದ್ದಾನೆ. ಆ ರಾಯನ ಉಲ್ಲೇಖ ವೀರಶೈವ ಸಾಹಿತ್ಯ ಕೃತಿಗಳಲ್ಲಿ ಮತ್ತೆ ಮತ್ತೆ ಗೋಚರಿಸುತ್ತದೆ. ಅದೃಶ್ಯನೆಂಬ ವೀರಶೈವಕವಿ (ಕ್ರಿ. ಶ. ೧೫೮೦) 'ಪ್ರೌಢರಾಯನ ಕಾವ್ಯ'ವನ್ನು ಬರೆದಿರುವನು. ಈ ದೊರೆಯ ಕಾಲವು (ಕ್ರಿ. ಶ. ೧೪೨೯–೪೭) ವೀರಶೈವದ ಇತಿಹಾಸದಲ್ಲಿ 'ನೂರೊಂದು ವಿರಕ್ತರ ಯುಗ'ವೆಂದು ಹೆಸರಾಗಿದೆ. ಈ ನೂರೊಂದು ವಿರಕ್ತರೆಂದರೆ ಯಾರು, ಅವರು ಹೆಸರುಗಳಾವುವು, ಅವರು ಗೆಯ್ದ ಕಾರ್ಯವಾವುದು ಎಂಬುದು ವಿಚಾರಾರ್ಹವಾಗಿದೆ.

ನೂರೊಂದು ವಿರಕ್ತರು ಎಂಬ ಪದಪ್ರಯೋಗವು ನಮಗೆ ತಿಳಿದಮಟ್ಟಿಗೆ ದೊರೆಯುವುದು ಮೂರು ಗ್ರಂಥಗಳಲ್ಲಿ:

| | | | |
|---|---|---|---|
| ೧. | ಪ್ರೌಢರಾಯನ ಕಾವ್ಯ[೨] | ಅದೃಶ್ಯಕವಿ | ಕ್ರಿ. ವ. ೧೫೮೦ |
| ೨. | ಚೆನ್ನಬಸವ ಪುರಾಣ[೩] | ವಿರೂಪಾಕ್ಷಪಂಡಿತ | ,, ೧೫೮೪ |
| ೩. | ನೂರೊಂದು ವಿರಕ್ತರ ಕಾವ್ಯ[೪] | ಮೋದಿಯ ರುದ್ರ | ,, ೧೭೩೬ |

ಈ ಮೂರು ಗ್ರಂಥಗಳಲ್ಲಿಯೂ ನೂರೊಂದು ವಿರಕ್ತರ ಹೆಸರುಗಳ ಬಗೆಗೆ ಐಕಮತ್ಯವಿಲ್ಲ. ಪ್ರೌಢರಾಯನ ಕಾವ್ಯದಲ್ಲಿ ನಾಲ್ಕು ಹೆಸರುಗಳು ಸಿಕ್ಕರೆ ಚೆನ್ನಬಸವ ಪುರಾಣದಲ್ಲಿ ಹದಿಮೂರು ಹೆಸರುಗಳು ಕಂಡುಬರುತ್ತವೆ. ಕೊನೆಯ ಮೂರನೆಯ ಗ್ರಂಥದಲ್ಲಿ ಮಾತ್ರ ೧೦೧ ವಿರಕ್ತರ ಹೆಸರುಗಳೂ ಅವರ ಪವಾಡಗಳೂ ಸ್ಪಷ್ಟವಾಗಿ ಉಲ್ಲಿಖಿತವಾಗಿವೆ. ಈ ಮೂರೂ ಗ್ರಂಥಗಳಲ್ಲಿ ಬರುವ ಹೆಸರುಗಳಲ್ಲಿರುವ ಭಿನ್ನತೆಯನ್ನು ಕುರಿತು ಇಲ್ಲಿ ವಿವೇಚಿಸುವುದು ಸೂಕ್ತವೆನಿಸಿದೆ:

---

೧. J. A. H. R. S. IX PP 33-42; M. A. R. for 1718 P. 51 for 1912 P. 47; 467 of 1929.

೨. ಪ್ರೌ. ಕಾವ್ಯ ೧-೪೨ ೩. ಸಂ. ೬೩ ೪. ಈ ಕಾವ್ಯವಿನ್ನೂ ಅಚ್ಚಾಗಿರುವುದಿಲ್ಲ.

ಪ್ರೌಢರಾಯನ ಕಾವ್ಯದಲ್ಲಿ:

> **ಹರರೂಪರಾದ ನೂರೊಂದು ಸುವಿರಕ್ತರುರೆ**
> **ಕರಸ್ಥಲದ ನಾಗಿದೇವನು ಕಲ್ಲು ಮಠದ ಪ್ರಭು-**
> **ವರನು ವೀರಣ್ಣೊಡೆಯರುಂ ಚಾಮರಸರಾದಿ ಶಿವಭಕ್ತತತಿಯು ನೆರೆದು[೧]**

ಎಂಬ ಉಲ್ಲೇಖವಿದೆ.

ಪ್ರೊ. ಎಸ್. ಎಸ್. ಭೂಸನೂರಮಠ. ಎಂ.ಎ. ಅವರು 'ಪ್ರೌಢರಾಯನ ಕಾವ್ಯ'ದ ಕಥಾಸಾರದಲ್ಲಿ ಈ ಪದ್ಯದ ಸಾರವನ್ನು ಉದ್ಧರಿಸುತ್ತ ಕಲ್ಲುಮಠದ ಪ್ರಭುದೇವ, ಚಾಮರಸ ಮೊದಲಾದವರು ನೂರೊಂದು ವಿರಕ್ತರಲ್ಲಿ ಪರಿಗಣಿತರಾದವರೆಂದು ಅರ್ಥೈಸಿದ್ದಾರೆ.[೨] ಆದರೆ, ಈ ಪದ್ಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಚಾಮರಸಾದಿ ಭಕ್ತರನ್ನು ನೂರೊಂದು ವಿರಕ್ತರ ಗುಂಪಿನಿಂದ ಬೇರೆ ಮಾಡಬೇಕಾಗುತ್ತದೆ. "ಕರಸ್ಥಲದ ನಾಗಿದೇವನು, ಕಲ್ಲುಮಠದ ಪ್ರಭುವರನು, ವೀರಣ್ಣೊಡೆಯರುಂ" ಎಂಬಲ್ಲಿರುವ ಸಮುಚ್ಚಯ ಸೂಚಕವಾದ 'ಉಮು' ವಿಧಿಯು ಪರಿಪೂರ್ಣವಾಗಿದೆ ಎಂದು ತಿಳಿಯುವುದು. ಅದರಿಂದ ಈ ವಾಕ್ಯವನ್ನು ಇಕ್ಕಡಿಯಾಗಿ ವಿಂಗಡಿಸಬೇಕಾಗುವುದು. ಎಂದರೆ, 'ಉಂ' ಎಂಬ ವಿಧಿಯಿಂದ ಮುಗಿವ ಸಮುಚ್ಚಯದ ಮೂವರನ್ನು (ನಾಗಿದೇವ–ಪ್ರಭುವರ–ವೀರಣ್ಣೊಡೆಯರನ್ನು) ನೂರೊಂದು ವಿರಕ್ತರೆಂದೂ ಚಾಮರಸಾದಿಗಳನ್ನು 'ಶಿವಭಕ್ತತತಿ' ಎಂದೂ ಅರ್ಥಮಾಡಬೇಕಾಗುತ್ತದೆ. ಇದರಿಂದ, ನೂರೊಂದು ವಿರಕ್ತರು ಜಂಗಮಸ್ಥಲದಲ್ಲಿ ನಿಂತವರೆಂದೂ ಚಾಮರಸಾದಿಗಳು ಭಕ್ತವರೇಣ್ಯರೆಂದೂ ವೇದ್ಯವಾಗುತ್ತದೆ. ಆದುದರಿಂದ ಅದೃಶ್ಯಕವಿಯ ಅಭಿಪ್ರಾಯದಂತೆ ಕರಸ್ಥಲದ ನಾಗಿದೇವ, ವೀರಣ್ಣೊಡೆಯ, ಕಲ್ಲುಮಠದ ಪ್ರಭುದೇವ ಇವರು ನೂರೊಂದು ವಿರಕ್ತರ ಪಙ್ಕ್ತಿಯಲ್ಲಿ ಸಮಾವಿಷ್ಟರಾಗುತ್ತಾರಲ್ಲದೆ ಚಾಮರಸ ಮೊದಲಾದ ಭಕ್ತರು ಅದರಲ್ಲಿ ಬರುವುದಿಲ್ಲ.

ಇನ್ನು ಚೆನ್ನಬಸವ ಪುರಾಣದ ವಿಚಾರ. ಆ ಕಾವ್ಯದಲ್ಲಿ ಕೆಳಗಿನ ಹೆಸರುಗಳು ಉದ್ಧೃತವಾಗಿವೆ[೩]:

೧. ಕರಸ್ಥಲದ ವೀರಣ್ಣೊಡೆಯ
೨. ಅಕ್ಕಸಾಲೆಯ ನಾಗ (ಕರಸ್ಥಲದ ನಾಗಿದೇವ)
೩. ಹೊನ್ನಯ್ಯ
೪. ಮಿಡಿಬಿಲ್ಲ ಶಾಂತದೇವ
೫. ಹೇಟೆಯ ಮರುಳ
೬. ತಗರಕಾಳೆಗದ ಪ್ರಭು
೭. ಬಾಲಲಿಂಗಣ್ಣ
೮. ಬತ್ತಲೇಶ್ವರ
೯. ಗುರುಬಸವ
೧೦. ನಿರ್ವಾಣಿ ಬೋಳೇಶ
೧೧. ಪರಪಟ್ಟೆ

---

೧. ಸಂ. ೧. ಪ. ೪೨. ೨. ಪು. ೫. ೩. ಚೆ. ಬ. ಪು. ಸಂ. ೭೩.

ಪ್ರೌಢರಾಯನ ಕಾವ್ಯದಲ್ಲಿ ನೂರೊಂದು ವಿರಕ್ತರೊಳಗೆ ಎಣಿಸಲಾದ ಕಲ್ಲು ಮಠದ ಪ್ರಭುದೇವರ ಹೆಸರು ಚೆನ್ನಬಸವ ಪುರಾಣದೊಳಗಿನ ತತ್ಸಂಬಂಧದ ನಾಮಾವಳಿಯಲ್ಲಿ ಕಂಡುಬರುವುದಿಲ್ಲ. 'ನೂರೊಂದು ವಿರಕ್ತರ ಕಾವ್ಯ' ದಲ್ಲಿಯೂ ಈತನನ್ನು ವಿರಕ್ತರಲ್ಲೊಬ್ಬನೆಂದು ಎಣಿಕೆಗೆ ತೆಗೆದುಕೊಂಡಿರುವುದಿಲ್ಲ. ಕಾರಣ ಕಲ್ಲುಮಠದ ಪ್ರಭುದೇವರನ್ನು ನೂರೊಂದು ವಿರಕ್ತರ ಮಾಲಿಕೆಯಲ್ಲಿ ಪರಿಗಣಿಸುವುದು ಕಠಕಷ್ಟ. ಈ ವಿವೇಚನೆಯಿಂದ ಚಾಮರಸ ಮತ್ತು ಕಲ್ಲುಮಠದ ಪ್ರಭುದೇವ ಇವರು ನೂರೊಂದು ವಿರಕ್ತರಲ್ಲಿ ಸಮಾವಿಷ್ಟರಾಗಿರಲಿಕ್ಕಿಲ್ಲವೆಂದು ಊಹಿಸಬಹುದು.

ಇನ್ನು ಕರಸ್ಥಲದ ವೀರಣ್ಣೊಡೆಯರ ವಿಚಾರ: ಮೇಲೆ ನಿರ್ದೇಶಿಸಿದ ಮೂರು ಕಾವ್ಯಗಳಲ್ಲಿಯೂ ಇವರ ಹೆಸರು ವಿರಕ್ತರೊಳಗೆ ಕಂಡುಬರುತ್ತದೆ. ಇಷ್ಟೇ ಅಲ್ಲ, 'ಚೆನ್ನಬಸವ ಪುರಾಣ' ಮತ್ತು 'ನೂರೊಂದು ವಿರಕ್ತರ ಕಾವ್ಯ'ಗಳಲ್ಲಿ ವೀರಣ್ಣೊಡೆಯರದೇ ಮುಖ್ಯ ಪಾತ್ರ. ಇವರು ಕರಸ್ಥಲದ ನಾಗಿದೇವರ ಗುರುಗಳು. ಹೀಗಿದ್ದರೂ ಇವರನ್ನು ನೂರೊಂದು ವಿರಕ್ತರೊಳಗೆ ಸೇರಿಸಬಹುದೇ ಎಂಬ ಸಂದೇಹ ತಲೆದೋರುತ್ತದೆ. ಅದಕ್ಕೆ ಕಾರಣ 'ನೂರೊಂದು ವಿರಕ್ತರ ಕಾವ್ಯ' ಮತ್ತು 'ಚೆನ್ನಬಸವ ಪುರಾಣ' ಗಳಲ್ಲಿ ದೊರೆಯುವ ಒಂದೆರಡು ಪದ್ಯಗಳ ಆಧಾರ—

ಚೆನ್ನಬಸವ ಪುರಾಣದಲ್ಲಿ,

> **" . . . . . . ಅತಿಮರುಳರಂದದೊಳಿಪ್ಪ ನೂರೊಂದು**
> **ವಿರತರ್[೧] . . . . . . . . . . . . . . . "**

ಎಂಬ ವರ್ಣನೆಯಿದೆ. ವಿರತರು ಎಂದರೆ ವಿರಕ್ತರು. ಅಲ್ಲಿ ಬರುವ, ಹಲವು ವಿರತರ ಚರಿತ್ರಗಳನ್ನೂ 'ನೂರೊಂದು ವಿರಕ್ತರ ಕಾವ್ಯ'ದೊಳಗಣ ಎಲ್ಲ ಚರಿತ್ರಗಳನ್ನೂ ಅವಲೋಕಿಸಿದಾಗ ಈ ವಿರತರು ಲೌಕಿಕದಲ್ಲಿ ಮರುಳರಂದದಿ ಇದ್ದಂತೆ ಭಾಸವಾಗುತ್ತದೆ. ತನಗೆ ಲೋಕ ಮರುಳಾಗಿಯೂ ಲೋಕಕ್ಕೆ ತಾನು ಮರುಳಾಗಿಯೂ ತೋರುವುದು ಶರಣರಿಗೆ ಸಹಜವಾದುದು. ಈ ದೃಷ್ಟಿಯಿಂದ ವಿಚಾರಮಾಡಿದರೆ, ಲೌಕಿಕ ವ್ಯವಹಾರಗಳನ್ನು ಚಾಚೂ ತಪ್ಪದೆ ಒಳ್ಳೆಯ ಎಚ್ಚರಿಕೆಯಿಂದ ನೆರವೇರಿಸುತ್ತಿದ್ದ ಕರಸ್ಥಲದ ವೀರಣ್ಣೊಡೆಯರನ್ನು ನೂರೊಂದು ವಿರಕ್ತರ ಸಾಲಿನಲ್ಲಿ ಕುಳ್ಳಿರಿಸಿರುವುದು ಸರಿಯಲ್ಲವೆಂದು ಎನಿಸುತ್ತದೆ. ಈ ವಿಚಾರವನ್ನು 'ನೂರೊಂದು ವಿರಕ್ತರ ಕಾವ್ಯ'ದ ಕರ್ತೃವಾದ ಮೋದಿಯ ರುದ್ರನೂ ಅನುಮೋದಿಸುತ್ತಾನೆ. ಆ ಕಾವ್ಯದಲ್ಲಿ ವೀರಣ್ಣೊಡೆಯ ಹಾಗೂ ಪ್ರೌಢದೇವರಾಯ ಇವರಲ್ಲಿ ನಡೆದ ಸಂಭಾಷಣೆ ಇಂತಿದೆ:

> **ನೂರೊಂದು ವಿರಕ್ತರು ತಮ್ಮ ಮಯ ಘನ-**
> **ಮೇರೆಯ ತೋರದೆ ನಿರ್ವಯಲಾದರಃ**
> **ಕಾರಣಪುರುಷರು ನೀವೆಮ್ಮಯ ಬಳಿವಿರ್ಪಿರೊ ಪೋಗುವಿರೊ ॥**

---

೧. ಸಂ. ೬೩. ಪ. ೩೭

ದಾರಿಯು ಪೇಳೆನೆ ದರಹಸಿತದಿ ಗುರು-
ವೀರಣ್ಣಯ್ಯನು ನುಡಿದನು ರಾಜಗೆ
ಕಾರಣಮೂರ್ತಿಯು ನಾಗೇಶನು ಕರೆದರೆ ನಾ ಪೋಗುವೆನು[1] ॥

"ನೂರೊಂದು ವಿರಕ್ತರೆಲ್ಲರೂ ಬಯಲಾಗಿ ಹೋದರು, ನೀವಾದರೂ ನಮ್ಮ ಬಳಿಯಲ್ಲಿ ಉಳಿಯುವಿರೋ ಇಲ್ಲವೋ?" ಎಂದು ಪ್ರೌಢದೇವರಾಯನು ವೀರಣ್ಣೊಡೆ-ಯರನ್ನು ಪ್ರಶ್ನಿಸುತ್ತಾನೆ. "ಗುರು ನಾಗೇಶನು ಕರೆದರೆ ನಾನು ಹೋಗುವೆ" ಎಂಬುದಾಗಿ ವೀರಣ್ಣೊಡೆಯರು ಉತ್ತರಿಸುತ್ತಾರೆ.

ಈ ಮಾತುಗಳಿಂದ ವೀರಣ್ಣೊಡೆಯರು ನೂರೊಂದು ವಿರಕ್ತರ ಗುಂಪಿನಿಂದ ಭಿನ್ನ ರೆಂದು ನಿಚ್ಚಳವಾಗಿ ವ್ಯಕ್ತವಾಗುತ್ತದೆ. ಒಟ್ಟಾರೆ 'ಪ್ರೌಢದೇವರಾಯನ ಕಾವ್ಯ'ದಲ್ಲಿ ಉಕ್ತರಾದ ಕರಸ್ಥಳದ ನಾಗಿದೇವ, ಕಲ್ಲಮಠದ ಪ್ರಭುದೇವ, ಕರಸ್ಥಲದ ವೀರಣ್ಣೊಡೆಯ, ಚಾಮರಸ ಈ ನಾಲ್ವರೊಳಗೆ ಕರಸ್ಥಲದ ನಾಗಿದೇವನ ಹೊರತಾಗಿ ಉಳಿದ ಮೂವರು ನೂರೊಂದು ವಿರಕ್ತರ ಗುಂಪಿನಿಂದ ಬೇರೆಯಾಗುತ್ತಾರೆ. ಕರಸ್ಥಲದ ನಾಗಿದೇವನು ನೂರೊಂದು ವಿರಕ್ತರೊಳಗಿನವನೆಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ನೂರೊಂದು ವಿರಕ್ತರಲ್ಲಿ ಅವರೇ ಆದಿ, ಅವರೇ ಅಗ್ರಗಣ್ಯರು.

'ಚೆನ್ನಬಸವ ಪುರಾಣ'ದಲ್ಲಿ ಉಕ್ತರಾದ ಹನ್ನೊಂದು ಜನ ವಿರಕ್ತರೊಳಗೆ ಕರ-ಸ್ಥಲದ ವೀರಣ್ಣೊಡೆಯರನ್ನು ಈಗ ಬಿಟ್ಟುಬಿಡಬೇಕಾಗುತ್ತದೆ. ಇನ್ನುಳಿದ ಹತ್ತು ಜನ ರೆಲ್ಲರೂ ನೂರೊಂದು ವಿರಕ್ತರ ಕಾವ್ಯದಲ್ಲಿ ಕಂಡುಬರುತ್ತಾರೆ. ಚೆನ್ನಬಸವ ಪುರಾಣ ಮತ್ತು ನೂರೊಂದು ವಿರಕ್ತರ ಕಾವ್ಯಗಳೊಳಗೆ ಈ ವಿರಕ್ತರ ವಿಷಯದಲ್ಲಿ ಹೆಚ್ಚಿನ ಸಾಮ್ಯವಿದ್ದಂತೆ ತೋರುತ್ತದೆ. ಚೆನ್ನಬಸವ ಪುರಾಣದಲ್ಲಿ ೧೦ ಜನ ವಿರಕ್ತರ ಹೆಸರು ಗಳನ್ನು ಹೇಳಿ, ಅವರ ಚರಿತ್ರೆಯನ್ನು ಅತಿ ಸಂಕ್ಷೇಪವಾಗಿ ವಿವರಿಸಿದ್ದರೆ, ನೂರೊಂದು ವಿರಕ್ತರ ಕಾವ್ಯದಲ್ಲಿ ಈ ೧೦ ಜನರನ್ನೊಳಗೊಂಡು ೧೦೧ ವಿರಕ್ತರೆಲ್ಲರ ಹೆಸರುಗಳನ್ನು ಹೇಳಿ, ಅವರಲ್ಲನೇಕರ ಚರಿತ್ರಗಳನ್ನು ಸ್ವಲ್ಪ ವಿಸ್ತಾರವಾಗಿಯೇ ವಿವರಿಸಲಾಗಿದೆ. ಇನ್ನುಳಿದವರ ಹೆಸರುಗಳನ್ನು ಮಾತ್ರ ನಿರ್ದೇಶಿಸಿಬಿಡಲಾಗಿದೆ. ಆ ಕಾವ್ಯೋಕ್ತ ವಿರಕ್ತರ ಹೆಸರುಗಳು ಇಂತಿವೆ:

೧. ಕರಸ್ಥಳದ ನಾಗಿದೇವ
೨. ಗುರುಬಸವ
೩. ಹೊನ್ನಿದೇವ
೪. ಹೇಟೆಯ ಮರುಳ
೫. ಟಗರ ಕಾಳಗದ ಪ್ರಭು
೬. ಬಾಲ ಲಿಂಗಣ್ಣ
೭. ಬತ್ತಲೇಶ
೮. ಮಿಡಿಬಿಲ್ಲ ಶಾಂತೇಶ
೯. ಆಯುಧ ಶಾಂತ
೧೦. ಕುದುರೆಯ ಶಾಂತ
೧೧. ಮಂಚದ ಶಾಂತ
೧೨. ಮದ್ದಳೆಯ ಶಾಂತ
೧೩. ಬುಡುಬುಡುಕೆಯ ಶಾಂತೇಶ
೧೪. ಡಂಗುರ ಶಾಂತ

---

೧. ನೂ. ವಿ. ಕಾ. ಸಂ. ೬. ಪ. ೧೨೧

೧೬. ಸಾಣಖಂಡೆಯ ಶಾಂತ
೧೭. ಮದ್ದಾನಿ ಶಾಂತ
೧೮. ಸಿಂಗಡಿಯ ಶಾಂತ
೧೯. ಚಕ್ರದ ಶಾಂತ
೨೦. ಬೊಂಬೆಕಟ್ಟಿ ಮೆರಸುವ ಶಾಂತ
೨೧. ಜಟ್ಟಿ ಶಾಂತ
೨೨. ವೀರ ಶಾಂತ
೨೩. ಡೊಂಬರ ಶಾಂತ
೨೪. ವರ್ಧೇಂದ್ರಿಯ ಶಾಂತ
೨೫. ಗುರುಬಸವೇಶ್ವರ
೨೬. ನಿಬ್ಬೆರಗಿನ ಮಹಾಶಾಂತ
೨೭. ಸರಕಿಲ ಶಾಂತೇಶ್ವರ
೨೮. ರುದ್ರಭೂಮಿಯ ಶಾಂತ
೨೯. ಬಣ್ಣಗದ್ದುಗೆಯ ಶಾಂತ
೩೦. ರುದ್ರಮೂರ್ತಿ ಶಾಂತ
೩೧. ಭದ್ರಕಾಳಿಯ ಶಾಂತ
೩೨. ಇದ್ದಲಿ ಶಾಂತೇಶ
೩೩. ಬಯಲ ಶಾಂತ
೩೪. ಮಡಿವಾಳ ಶಾಂತ
೩೫. ಹಿಡಿಗಡಲಿಯ ಶಾಂತ
೩೬. ನಿರಾದಿ ಶಾಂತ
೩೭. ಪೆಟಲಿನ ಶಾಂತ
೩೮. ಕಾಳಿ ಶಾಂತೇಶ
೩೯. ಗುಂಡ ಶಾಂತ
೪೦. ಚಂಡಿನಾಟದ ಶಾಂತ
೪೧. ನಂಬಿ ಶಾಂತ
೪೨. ಶಿಶುಗಳೊಡನೆ ಆಟವಾಡುವ ಶಾಂತಮೂರ್ತಿ
೪೩. ಬಿಸಿನೀರಿನ ಶಾಂತ
೪೪. ಚದುರ ಶಾಂತ
೪೫. ಬೇಟೆಯ ಶಾಂತ
೪೬. ಶಿವಮೂರ್ತಿಯ ರೂಪದ ಶಾಂತ
೪೭. ಸುವಿವೇಕಿ ಶಾಂತ
೪೮. ಮಜ್ಜನ ಶಾಂತೇಶ
೪೯. ವಿಭೂತಿಯ ಶಾಂತ
೫೦. ವಸುಗೆಗೆಲಸದ ಶಾಂತ
೫೧. ಜೂಜಿನ ಶಾಂತ
೫೨. ಕಿನ್ನರಿ ಶಾಂತ
೫೩. ......ಗದ ಶಾಂತೇಶ
೫೪. ಎಚ್ಚರನಿಯಮದ ಶಾಂತ
೫೫. ಗಿರಿಗಟಿಗಿಯ ಶಾಂತೇಶ
೫೬. ಕಸ್ತೂರಿ ತಿಲಕದ ಶಾಂತ
೫೭. ಇಂದ್ರಜಾಲದ ಶಾಂತ
೫೮. ಗಿಂಡಿಯ ಶಾಂತ
೫೯. ಚೆಂಡಿನಾಟದ ಶಾಂತ
೬೦. ಬೊಂಬೆಯ ಮಾಳ್ಪ ಶಾಂತ
೬೧. ನಿಧಾನದ ಶಾಂತ
೬೨. ಚಂಡವಿಕ್ರಮದ ಶಾಂತ
೬೩. ಚಂದ್ರವಂಕಿ ಶಾಂತ
೬೪. ತೃಣದ ಶಾಂತ
೬೫. ನಾಟ್ಯ ಶಾಂತ
೬೬. ಮಹೀಂದ್ರಜಾಲದ ಗುಣದ ಶಾಂತ
೬೭. ಕವಿ ಶಾಂತ
೬೮. ಗಾಂಗೇಯ ಶಾಂತ
೬೯. ಭಟ್ಟ ಶಾಂತ
೭೦. ಪಿಟ್ಟೆ ಶಾಂತೇಶ
೭೧. ಬೆಟ್ಟದಾಮೇಲಿರ್ಪ ಶಾಂತ
೭೨. ಘಟ್ಟಿಗೋಲಿನ ಶಾಂತಮೂರುತಿ
೭೩. ನಿಷ್ಠೆನಿಜವಂದ ಶಾಂತ
೭೪. ಶರಭ ಶಾಂತೇಶ
೭೫. ಉಗ್ಗಡಿಪ ಶಾಂತ
೭೬. ಅಟ್ಟಹೊಯ್ವಡಮಾಮಿ ಶಾಂತ
೭೭. ಕಟ್ಟುನಾಯಕ ಶಾಂತ
೭೮. ಮರವಿಕ್ರಯಿಂಪ ಶಾಂತ
೭೯. ಚಾಕಿ ಶಾಂತ
೮೦. ಬೊಗರಿಯ ಶಾಂತಲಿಂಗ

೮೧. ಶರ......ಶಾಂತ
೮೨. ......ದಿಯಲಿ ಇರುವ ಶಾಂತ
೮೩. ಸೂಜಿಯ ಪರಶಾಂತ
೮೪. ವಕ್ಕಲಿ......ವಸಿಸುವ ಗರುವಶಾಂತ
೮೫. ಕಲಸಿ ಶಾಂತ
೮೬. ಶಂಕರನ ಒಲುಮೆ ಶಾಂತ
೮೭. ನಿಂಬಿ ಶಾಂತ
೮೮. ಸೊಡ್ಡಿನ ಶಾಂತ
೮೯. ಚೆಲುವ ಶಾಂತೇಶ
೯೦. ಸಾಧನೆಯ ಶಾಂತ
೯೧. ವಡ್ಡ ಶಾಂತ
೯೨. ನಿರ್ವಂಚನೆಯ ಶಾಂತ
೯೩. ಜಂಗವಿಡಿದೊರೆವ ಶಾಂತ
೯೪. ಶೂಲದ ಶಾಂತಲಿಂಗ
೯೫. ಕಂಚಿನಾದ್ರಿಯ ಶಾಂತ
೯೬. ರತ್ನದ ಶಾಂತ
೯೭. ಕೋಲ ಶಾಂತ
೯೮. ಬಾಲಗಾಸಿಯಂ ಶಾಂತಮೂರುತಿ
೯೯. ಹಾಲ ಶಾಂತ
೧೦೦. ಗಾಣ ಶಾಂತ
೧೦೧. ಬಾಣಬತ್ತಿ ಶಾಂತಲಿಂಗ

ಈ ಕಾವ್ಯವು ಪರಿಷ್ಕೃತವಾಗಿ ಅಚ್ಚುಗೊಂಡಿಲ್ಲವಾದುದರಿಂದಲೂ ದೊರೆತ ಕೈಬರೆಹದ ಪ್ರತಿಯಲ್ಲಿ ಹಲವೆಡೆ ಸ್ಖಾಲಿತ್ಯಗಳಿರುವುದರಿಂದಲೂ ಕೆಲವೊಂದು ಹೆಸರುಗಳಿಗೆ ಸಂಬಂಧಿಸಿದ ವಿಶೇಷಣಗಳು ಸ್ವಲ್ಪ ಸಂದೇಹಾಸ್ಪದವಾಗಿವೆ. ಕಥೆಯ ಘಟನೆಗಳನ್ನು ಪರಿಗಣಿಸಿ, ಸಂದೇಹದೆಡೆಗಳಲ್ಲಿ ಊಹೆಯಿಂದ ವಿಶೇಷಣಗಳನ್ನು ನಿರ್ಧರಿಸಿಕೊಂಡಿದೆ. ಈ ಊಹೆಯನ್ನು ಸಾಕಷ್ಟು ಜೋಕೆ-ತೂಕಗಳಿಂದ ಮಾಡಿರುವುದರಿಂದ, ಕಾವ್ಯದ ಶುದ್ಧ ಹಸ್ತಪ್ರತಿ ದೊರಕಿ ಪರಿಷ್ಕೃತ ಗ್ರಂಥವು ಪ್ರಕಟವಾದಾಗ, ಒಂದೆರಡಂ ಕಡೆ ಅಲ್ಪ ಸ್ವಲ್ಪ ವ್ಯತ್ಯಾಸಗಳು ತಲೆದೋರಬಹುದೇ ವಿನಾ ಮೂಲ ಆಶಯಕ್ಕೆ ಯಾವ ಭಂಗವೂ ಬಾರದೆಂದು ನಮ್ಮ ಭಾವನೆ.

ಇಲ್ಲಿ ಸುಮಾರು ಹತ್ತು ಹೆಸರುಗಳನ್ನು ಬಿಟ್ಟರೆ, ಮಿಕ್ಕುವೆಲ್ಲ ಶಾಂತೇಶ, ಶಾಂತ-ಲಿಂಗ ಮತ್ತು ಶಾಂತ ಎಂಬುವೇ ಇವೆ. ಇಷ್ಟು ಜನರೆಲ್ಲರೂ ಒಂದೆಡೆ ಒಂದೇ ಹೆಸರಿನವರಿದ್ದರೆ? ಎಂಬೊಂದು ಪ್ರಶ್ನೆ ಸಹಜವಾಗಿ ತಲೆಯೆತ್ತುತ್ತದೆ. 'ಚೆನ್ನಬಸವ ಪುರಾಣ'ವು ಹತ್ತು ಹೆಸರುಗಳಿಗೆ ಇತ್ಯಾದಿ ಎಂದು ಹೇಳಿ ಮುಂದೆ ಸಾಗಿದರೆ, 'ನೂರೊಂದು ವಿರಕ್ತರ ಕಾವ್ಯ'ವು ಅವೆಲ್ಲ ಹೆಸರುಗಳನ್ನು ಪೂರಯಿಸುವ ಸಾಹಸ ಮಾಡಿದೆ. ಮೇಲೆ ನಿರ್ದೇಶಿಸಿದ ಬಹುಶಃ ಎಲ್ಲ ಹೆಸರುಗಳು ಶಾಂತ, ಶಾಂತಲಿಂಗ ಎಂಬುದಾಗಿಯೇ ಉಂಟು, ನಿಜ. ಆದರೆ ಮೂಲತಃ ಅವರೆಲ್ಲರ ಅಂಕಿತನಾಮಗಳೂ ಹಾಗೆಯೇ ಇದ್ದಿರಲಿಕ್ಕಿಲ್ಲ. ಅವರು ಪಡೆದ ಸ್ಥಿತಿಗನುಗುಣವಾಗಿ ಈ ಹೆಸರು ಅವರಿಗೆ ಬಂದಿರಬಹುದು, ಅವರೆಲ್ಲ ಹೊಂದಿದುದು ಶಾಂತ ಸ್ಥಿತಿಯೇ ಆಗಿದ್ದಿತು. ಆದುದರಿಂದ ಜನ ಅವರನ್ನು ಆ ಅಭಿಧಾನದಿಂದ ಕರೆದಿರಬೇಕು. ವ್ಯಕ್ತಿಶಃ ಒಬ್ಬೊಬ್ಬರನ್ನು ಗುರುತಿಸುವುದಕ್ಕಾಗಿ, ಅವರವರು ಲೋಕದಲ್ಲಿ ನಡೆಸಿದ ನಟನೆ, ಕೈಕೊಂಡ ಕಾಯಕ ಇತ್ಯಾದಿಗಳಿಗೆ ಅನುಸಾರವಾದ ವಿಶೇಷಣಗಳನ್ನು ಅವರವರ ಹೆಸರುಗಳಿಗೆ ಹೊಂದಿಸಲಾಗಿದೆ. ಇವೆಲ್ಲ ಹೆಸರುಗಳೂ ಕವಿ ಮೋದಿಯ ರುದ್ರನ ಸೃಷ್ಟಿಯವೇ ಎಂದು ಹೇಳಲಿಕ್ಕಾಗದು; ಅದು ಶರಣರ ನಡೆಗೆ ಪೊಲ್ಲ. ಚೆನ್ನ

ಬಸವ ಪುರಾಣದ ಕರ್ತೃವಿನಂತೆ ಈತನೂ ಇತ್ಯಾದಿ ಎಂದು ಹೇಳಿ ಮೌನ ತಳೆಯ ಬಹುದಾಗಿತ್ತಲ್ಲದೆ ಕಲ್ಪಿತ ನಾಮಗಳನ್ನು ಉಸಿರಿರಲಾರ. ಕಾವ್ಯಾರಂಭದಲ್ಲಿ ಕವಿಯೇ ಈ ಪ್ರಶ್ನೆಯನ್ನೆತ್ತಿದ್ದಾನೆ.

ಮೋದಿಯ ರುದ್ರನು 'ಪಂಚವೋದ್ಭವ' ಕಾವ್ಯವನ್ನು ರಚಿಸಿದ ಮೇಲೆ, ಅದನ್ನೋದಿ ಆನಂದಭರಿತರಾಗಿ ಷಟ್ಸ್ಥಲಜ್ಞಾನಕೋವಿದ ಮಳಿಯಸ್ವಾಮಿ ಎಂಬ ವಿರಕ್ತವರೇಣ್ಯರು,

" . . . ಕಂದ, ನೀ ಬಾರೆಲವೋ, ನಿನಗೊಂದು
ಒರೆವೆ ಬುದ್ಧಿಯು, ಕೇಳು: ಈ ಕಾವ್ಯ ರಚಿಸಿದೊಲ್
ಪರಮ ನೂರೊಂದು ವಿರಕ್ತಮಾಹೇಶ್ವರರ ಚರಿತ್ರ ವಿರಚಿಸೆಂದು ॥

ವರವಿತ್ತು ಪೇಳಲ್ಕೆ, ಆ ಮಹಾಪೂರ್ವಕಥೆ
ದೊರಕುವುದು ದುರ್ಲಭಂ, ನಾನೆಂತು ವಿರಚಿಸುವೆ
ಗುರುವೆ ಬಿನ್ನಹವೆಂದು ನುಡಿಯಲ್ಕೆ ಪೇಳಿದಂ ವರಪ್ರಸಾದದ ವಾಕ್ಯವ ॥

ಸಕಲಮತಶಾಸ್ತ್ರದೊಳು ಪಂಚವೋದ್ಭವಣೆಯುಂ
ಪ್ರಕಟತ . . . ಲದಿ ಕಾವ್ಯಮಂ ರಚಿಸಿದೈ
ಭಕುತ ನೀ ಪೂರ್ವಜನ್ಮಾಂತರದಿ ಗುರುಕೃಪೆಯ ಪಡೆದಿರಲು ಶಾಸ್ತ್ರಜ್ಞಾನ ॥

ವಿಕಸಿತವುಮಾಗಿಹುದು ವೀರಮಾಹೇಶ್ವರರ
ಪ್ರಕಟತೆಂದೆನಿಸಲು ಮೂಲಮಂ ದೊರಕುವುದು
ಶುಕ(ಸುಖ)ರೂಪದಿಂದೆ ಹೋಗೆಂದು ಬೆಸ . . . ಯೆ ಕೈಕೊ ನೀ ಕಾವ್ಯವ[1] ॥

ಎಂಬುದಾಗಿ ಕವಿಯ ಶಂಕೆಯನ್ನು ಬಿಡಿಸಿ 'ನೂರೊಂದು ವಿರಕ್ತರ ಕಾವ್ಯ'ವನ್ನು ರಚಿಸುವಂತೆ ಅಪ್ಪಣೆಕೊಡಿಸುತ್ತಾರೆ. ಇಲ್ಲಿಯ ಪ್ರಶ್ನೋತ್ತರದಲ್ಲಿ ವಿರಕ್ತರ ಬಗೆಗೆ ಚಾರಿತ್ರಿಕ ಸಾಮಗ್ರಿ ತನ್ನಲ್ಲಿಲ್ಲವೆಂದು ಮೋದಿಯ ರುದ್ರ ಕಳವಳ ಪಟ್ಟುದಕ್ಕೆ ಆ ಮಳಿಯ ಸ್ವಾಮಿಗಳು 'ದೃಢಸಂಕಲ್ಪದಿಂದ ಬರೆಯಲುಜ್ಜುಗಿಸು, ಅದಕ್ಕೆ ಬೇಕಾದ ಮೌಲ್ಯವು ತಾನೆ ದೊರೆಕೊಳ್ಳುವುದೆಂ'ದು ಹೇಳಿ ಅವನನ್ನು ಆಶೀರ್ವದಿಸಿ ಪ್ರೋತ್ಸಾಹಿಸುತ್ತಾರೆ. ಇಷ್ಟಾದ ಮೇಲೆ ಕವಿ ತನ್ನೀ ಕಾವ್ಯವನ್ನು ರಚಿಸಿರುವುದು. ಇದರಿಂದ ನೂರೋಂದು ವಿರಕ್ತರ ಹೆಸರುಗಳೂ ಅವರ ವಿಷಯವಾಗಿ ಹೇಳಿದ ಪವಾಡಗಳೂ ಕವಿಯ ಸ್ವಕಪೋಲ ಕಲ್ಪಿತಗಳಲ್ಲವೆಂದು ಸ್ಪಷ್ಟವಾಗುತ್ತದೆ. ಅವುಗಳಿಗೆ ಯಾವುದೋ ಒಂದು ಮೂಲದಿಂದ ಆಧಾರ ಸಿಕ್ಕಿರಲೇ ಬೇಕು.

ಏಕೋತ್ತರಶತ ವಿರಕ್ತರು ಇಂತಿಂತಹರು ಎಂಬ ಮಾತು ಅವರ ಕಾಲದಲ್ಲಿಯೇ ಖಚಿತವಾಗಿ ಹೋಗಿದ್ದರೆ ಈ ಸಂದೇಹದ ಸಮಸ್ಯೆಗಳೇ ಏಳುತ್ತಿರಲಿಲ್ಲ. ಇವರೆಲ್ಲರೂ ವಿಜಯನಗರದ ಪ್ರೌಢದೇವರಾಯನ ಸಮಕಾಲೀನರು (ಕ್ರಿ. ಶ. ೧೪೧೯–೪೬). ಈ ಕಾಲದಲ್ಲಿಯೇ ಕಾವ್ಯವನ್ನು ಬರೆದ ಲಕ್ಕಣ್ಣ ದಂಡೇಶನು ತನ್ನ 'ಶಿವತತ್ತ್ವ ಚಿಂತಾಮಣಿ' ಯಲ್ಲಿ 'ನೂರೊಂದು ವಿರಕ್ತರು' ಎಂಬ ಮಾತನ್ನಾಗಲಿ, ಅವರ ಹೆಸರನ್ನಾಗಲಿ ಉಲ್ಲೇ

---

೧. ನೂ. ವಿ. ಕಾ. ೧. ೨೩, ೨೪

ಖಿಸುವುದಿಲ್ಲ. ಪ್ರಮಥ ಗಣಂಗಳು, ರುದ್ರಗಣಂಗಳು ತೇರಸರು, ದಶಗಣಂಗಳು, ೬೩ ಪುರಾತನರು, ಷೋಡಶರು, ಅಸಂಖ್ಯಾತರು ಮತ್ತು ನೂತನ ಗಣಂಗಳು ಇವರೆಲ್ಲರ ಹೆಸರುಗಳನ್ನು ವಿಸ್ತಾರವಾಗಿ ವಿವರಿಸುತ್ತಾನೆ.[೧] ಕನ್ನಡ ನಾಡಿನಲ್ಲಿ ಮಾತ್ರವೇ ಅಲ್ಲ, ನೆರೆಹೊರೆಯ ಆಂಧ್ರ, ತಮಿಳು ಮೊದಲಾದ ದೇಶಗಳಲ್ಲಿ ಇದ್ದ ಸಕಲಗಣಂಗಳನ್ನು ಆತನು ವರ್ಣಿಸಿದ್ದಾನೆ. ಇಷ್ಟೆಲ್ಲ ಪರಿಶ್ರಮ ವಹಿಸಿದ ಕವಿ 'ನೂರೊಂದು ವಿರಕ್ತರು' ಎಂಬ ಪದ ಪ್ರಯೋಗ ಮಾಡಿ, ಅವರನ್ನು ನೂತನಗಣಂಗಳ ಮಧ್ಯದಲ್ಲಿ ಕುಳ್ಳಿರಿಸಬಹುದಾಗಿದ್ದಿತು. ನೂರೊಂದರಲ್ಲಿ ಒಂದು ಹೆಸರೂ ಅಲ್ಲಿ ಬಾರದಿರುವುದು ಅತ್ಯಂತ ಸೋಜಿಗದ ಮಾತು. ಇದರಂತೆಯೇ ಅದೇ ಕಾಲದಲ್ಲಿದ್ದ ಚಾಮರಸ, ಮಗ್ಗೆಯ ಮಾಯಿದೇವ, ಜಕ್ಕಣಾರ್ಯ, ಕಲ್ಮಠದ ಪ್ರಭುದೇವ ಇವರೇ ಮೊದಲಾದವರ ಕಾವ್ಯಕೃತಿಗಳಲ್ಲಿಯೂ ನೂರೊಂದು ವಿರಕ್ತರ ನಾಮ ನಿರ್ದೇಶವಾದಂತಿಲ್ಲ. ಇದರ ಮೇಲಿಂದ ಈ ನೂರೊಂದು ವಿರಕ್ತರ ಜೀವಿತ ಕಾಲಾವಧಿಯಲ್ಲಿ ಅವರ ಸಂಖ್ಯೆಯನ್ನು ನಿರ್ದಿಷ್ಟಪಡಿಸಿದಂತಿಲ್ಲ. ಅವರಲ್ಲಿ ಒಬ್ಬರೊಬ್ಬರ ಒಡನಾಟವಾದುದರ ಉಲ್ಲೇಖವೂ ಇಲ್ಲ. ೬೩ ಪುರಾತನರ ಚರಿತ್ರಗಳನ್ನು ಅವಲೋಕಿಸಿದರೆ ಈ ಮಾತಿನ ಅರ್ಥ ಸ್ಪಷ್ಟವಾಗುತ್ತದೆ. ೬೩ ಪುರಾತನರ ಹೆಸರುಗಳ ನಿರ್ಣಯ ಅವರೆಲ್ಲರ ಜೀವಿತ ಕಾಲಾವಧಿಯ ನಂತರ ಆದ ಹಾಗೆ, ಈ ನೂರೊಂದು ವಿರಕ್ತರ ಸಂಖ್ಯೆ ನಿರ್ಣಯವಾಗಿರಬೇಕು.

ವೀರಶೈವದಲ್ಲಿ ೧, ೩, ೫, ೮, ೩೬, ೬೩, ೨೧೬ ಇವೇ ಮೊದಲಾದ ಸಂಖ್ಯೆಗಳಿಗೆ ಹೆಚ್ಚಿನ ಪಾವಿತ್ರ್ಯವಿದೆ. '೧೦೧' ಎಂಬ ಸಂಖ್ಯೆ ವೀರಶೈವದ ಸ್ಥಲ ಕಟ್ಟುಗಳಬಂದು ವಿಭಜನಾ ಕ್ರಮವನ್ನು ಸೂಚಿಸುತ್ತದೆ. ಏಕೋತ್ತರ ಶತಸ್ಥಲ ಎಂಬ ಗ್ರಂಥದ ಹೆಸರೇ ಇದಕ್ಕೆ ಸಾಕ್ಷಿ. ಇನ್ನು ಅನೇಕ ಗ್ರಂಥಗಳಲ್ಲಿ ಅಂಗಸ್ಥಲ, ಲಿಂಗಸ್ಥಲಗಳನ್ನು ಸೇರಿಸಿ ಒಟ್ಟು ೧೦೧ ಸ್ಥಲಗಳನ್ನು ಹೇಳಲಾಗಿದೆ.[೨] ಇದನ್ನು ಗಣನೆಯಲ್ಲಿಟ್ಟುಕೊಂಡು, ಈ ವಿರಕ್ತರು ಲಿಂಗೈಕ್ಯರಾದ ನಂತರ ಅವರಲ್ಲಿ ೧೦೧ ಜನರನ್ನು ವಿಶೇಷಿಸಿ, ಹೆಸರಿಸಿ 'ನೂರೊಂದು ವಿರಕ್ತರು' ಎಂಬ ಪದಪ್ರಯೋಗವನ್ನು ರೂಢಿಗೊಳಿಸಿದಂತೆ ತೋರುತ್ತದೆ.

ವೀರಶೈವಾಮೃತ ಮಹಾಪುರಾಣವು ರಚಿತವಾದುದು ಕ್ರಿ. ಶ. ಸುಮಾರು ೧೫೧೩ರಲ್ಲಿ. ಆ ಕಾವ್ಯದಲ್ಲಿಯೂ ನೂತನ ಭಕ್ತರ ಚರಿತ್ರೆಯನ್ನು ತಿಳಿಸಲು ಒಂದು ಸಂಧಿ ಮೀಸಲಾಗಿದೆ.[೩] ಅದರಲ್ಲಿ,

> " . . . ಲಕ್ಕಣ್ಣ ದಣ್ಣಾಯಕರು ಶಿವತತ್ತ್ವ
> ಚಿಂತಾಮಣಿಯೊಳು ತತ್ಕಾಲ ನೂತನ ಭಕ್ತ
> ಸಂತತಿಯನೊರೆದುದಂ ಪೇಳ್ದೆನೈ . . ."[೪]

---

೧. ಶಿವತತ್ತ್ವಚಿಂತಾಮಣಿ, ಸಂಧಿ ೩೪ರಿಂದ ೩೮

೨. ಸಿದ್ಧಾಂತ ಶಿಖಾಮಣಿ; ತೋಂಟದ ಸಿದ್ಧೇಶ್ವರ ಪುರಾಣ.

೩. ಕಾಂಡ ೮, ಸಂಧಿ ೮.

೪. ವೀ. ಮ. ಪು. ಕಾಂಡ ೮, ಸಂಧಿ ೮, ಪದ್ಯ ೨೫.

ಎಂದು ಶಿವತತ್ತ್ವಚಿಂತಾಮಣಿಯೊಳಗೆ ಬಂದಿದ್ದ ತತ್ಕಾಲೀನ ಚರಿತ್ರಗಳನ್ನೊರೆದು,

> " . . . ಬಳಿಕೀ ವರ್ತಮಾನದೊಳಗವತರಿಸಿ
> ದಂತಕಾಂತಕನಿಷ್ಠ ನೂತನ ಶರಣನುತಿಗ-
> ಳಂ ತಿಳಿಪುವೆಂ ಭಕ್ತಿಯಿಂ ಕೇಳೆಂದರಾವೀರ ಹಲಗೆಯ ದೇವರು ॥"[೧]

ಎಂದು ಹೇಳಿ ಕೆಲವು ಗಣಂಗಳ ಚರಿತ್ರೆಯನ್ನು ಕೊಡುತ್ತಾನೆ. ಅಲ್ಲಿ ನೂರೊಂದು ವಿರಕ್ತರಿಗೆ ಸಂಬಂಧಿಸಿದ ಕೆಲವು ಕೆಳಗಿನ ಹೆಸರುಗಳು ಗೋಚರಿಸುತ್ತಿವೆ:

೧. ಕರಸ್ಥಲದ ನಾಗಿದೇವ
೨. ಕರಸ್ಥಳದ ವೀರೇಶ
೩. ಗುರುಬಸವೇಶ
೪. ಪಟ್ಟಪರಿ (ಪರಪಟ್ಟಿ?) ನಾಗಿದೇವ
೫. ಬಿಲ್ಲ ಮರುಳರು (ಮಿಡಿಬಿಲ್ಲ ಶಾಂತೇಶ?)
೬. ಬತ್ತಲೊಡೆಯರು

ವರ್ತಮಾನ ಗಣಂಗಳನ್ನು ಹೇಳಲು ಹೊರಟ ಮಲ್ಲಣಾರ್ಯರು (ವೀರಶೈವಾಮೃತ ಮಹಾಪುರಾಣದ ಕರ್ತೃ) ತಮ್ಮ ಸಮಕಾಲೀನರ ಹೆಸರುಗಳನ್ನು ಮಾತ್ರ ಹೇಳದೆ ತಮ್ಮ ಹಿರಿಯ ಸಮಕಾಲೀನರಾಗಿರಬಹುದಾದ ಕರಸ್ಥಲದ ನಾಗಿದೇವರೇ ಮೊದಲಾದ ಕೆಲವು ಜನ ವಿರಕ್ತರ ಹೆಸರುಗಳನ್ನು ಹೇಳುತ್ತಾರೆ. ಲಕ್ಕಣ್ಣದಂಡೇಶನು ಬಿಟ್ಟಲ್ಲಿಂದ ಹಿಡಿದು ಮುಂದಿನ ಶರಣರ ಚರಿತ್ರಗಳನ್ನು ಗುಬ್ಬಿ ಮಲ್ಲಣಾರ್ಯರು ಹೇಳಿದ್ದಾರೆ. ಆ ಎಲ್ಲರನ್ನೂ ಮಲ್ಲಣಾರ್ಯರು ವರ್ತಮಾನಕಾಲದ ಗಣಂಗಳೆಂದು ಪರಿಗಣಿಸಿದ್ದಾರೆ. ವೀರಶೈವಾಮೃತ ಮಹಾಪುರಾಣದಲ್ಲಿ ನೂರೊಂದು ವಿರಕ್ತರೊಳಗಿನ ಕೆಲವೊಂದು ಹೆಸರುಗಳು ಉಕ್ತವಾಗಿದ್ದರೂ 'ನೂರೊಂದು ವಿರಕ್ತರು' ಎಂಬ ಪದಕ್ಕೆ ಪ್ರಯೋಗ ಕಾಣದಿರುವುದೂ ತೇರಸರು, ಷೋಡಶರು, ಅರುವತ್ತುಮೂವರು ಇವರ ಒಂದೊಂದು ಗುಂಪನ್ನು ವಿಭಜಿಸಿದಂತೆ ನೂರೊಂದು ವಿರಕ್ತರ ವಿಶಿಷ್ಟ ಗುಂಪೊಂದನ್ನು ಕಲ್ಪಿಸಿ ಅದರ ವರ್ಗೀಕರಣ ಮಾಡದಿರುವುದೂ ಗಮನಾರ್ಹವಾಗಿದೆ. ಆದುದರಿಂದ ಮಲ್ಲಣಾರ್ಯರ ಕಾಲದಲ್ಲಿ (ಕ್ರಿ. ಶ. ೧೫೧೩), ಇನ್ನೂ ನೂರೊಂದು ವಿರಕ್ತರ ಗಣನೆ ಪೂರ್ತಿಯಾಗಿ ಖಚಿತವಾಗಿರಲಿಕ್ಕಿಲ್ಲವೆಂದು ಊಹಿಸಬೇಕಾಗುತ್ತದೆ. ಕ್ರಿ. ಶ. ೧೫೮೦ರಲ್ಲಿ ಹುಟ್ಟಿದ ಅದೃಶ್ಯ ಕವಿಯ 'ಪ್ರೌಢರಾಯನ ಕಾವ್ಯ'ದಲ್ಲಿಯೂ ಕ್ರಿ. ಶ. ೧೫೮೪ರಲ್ಲಿ ರಚಿತವಾದ ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'ದಲ್ಲಿಯೂ ಈ ಪದ ಪ್ರಯೋಗವು ಮೊದಲ ಬಾರಿ ಕಂಡುಬರುವುದರಿಂದ ಕ್ರಿ. ಶ. ೧೫೧೩–೧೫೮೦ರ ನಡುವಣ ಅವಧಿಯಲ್ಲಿ ನೂರೊಂದು ವಿರಕ್ತರ ಸಂಖ್ಯಾನಿರ್ಣಯವಾಗಿರಬೇಕೆಂದು ತೋರುತ್ತದೆ.

---

೧. ವೀ. ಮ. ಪು. ಕಾಂಡ ೮, ಸಂಧಿ ೮, ಪದ್ಯ ೨೫.

ಪ್ರೌಢದೇವರಾಯನ ಕಾಲದ ಸುವಿಖ್ಯಾತ ಕವಿಗಳೂ ವಚನಕಾರರೂ ಟೀಕಾ-ಕಾರರೂ ಆದ ಲಕ್ಕಣ್ಣದಂಡೇಶ, ಜಕ್ಕಣಾಚಾರ್ಯ, ಕಲ್ಮಠದ ಪ್ರಭುದೇವ, ಚಾಮರಸ, ಮಗ್ಗೆಯ ಮಾಯಿದೇವ ಪ್ರಭೃತಿಗಳು ನೂರೊಂದು ವಿರಕ್ತರ ಗುಂಪಿನಲ್ಲಿ ಸೇರ್ಪಡೆ ಹೊಂದಲಿಲ್ಲವೆಂಬುದು ನಿಜ. ಈ ಮಹಾನುಭಾವರು ನೂರೊಂದು ವಿರಕ್ತರಲ್ಲಿ ಸಮಾವಿಷ್ಟರಾಗುವರೆಂದು ಭಾವಿಸಿ, ಅವರು ನಮ್ಮ ಸಾಹಿತ್ಯದಲ್ಲಿ ಎಸಗಿದ ಸೇವೆಯನ್ನು ಮನಸದಂದು, ನೂರೊಂದು ವಿರಕ್ತರೆಂದರೆ ವೀರಶೈವದಲ್ಲಿ ಅದ್ವಿತೀಯವಾದ ಕಾರ್ಯ ವನ್ನು ಗೈದವರು ಎಂದು ಇದುವರೆಗೆ ತಿಳಿಯಲಾಗುತ್ತಿತ್ತು. ಇವರೇ ನೂರೊಂದು ವಿರಕ್ತರೊಳಗೆ ಪರಿಗಣಿತರಾಗದೆ ಹೋದರೆ ನೂರೊಂದು ವಿರಕ್ತರ ಮಹತ್ತ್ವವೇನು? ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಇಷ್ಟರಿಂದ ನೂರೊಂದು ವಿರಕ್ತರು ಸಾಮಾನ್ಯರೆಂದೇನೂ ಭಾವಿಸಲಾಗದು. ಅವರು, "......ಕಲ್ಯಾಣ ಮಂಡಲದ ಶಿವ ಭಕ್ತರ ಸಂತಾನವೆನಿಸಿ"ದವರು.[೧] ಕಲ್ಯಾಣದ ಶಿವಶರಣರ ಆದರ್ಶವನ್ನು ಜೀವಿಸಿದವರು; ಲಿಂಗಾಂಗ ಸಾಮರಸ್ಯವನ್ನು ಹೊಂದಿದವರು; ಜಂಗಮಸ್ಥಲವನ್ನೈದಿ, ಜೀವನದ ಅಸಾ-ರತೆಯನ್ನು ಕಂಡು, ಪರಮವೈರಾಗ್ಯಶೀಲರಾಗಿ ಪ್ರಭುವಿನ ಬೆಳಗನುಂಡು ಬೆಳಗಾದವರು. ಪ್ರಭುದೇವರು ೧೨ನೆಯ ಶತಮಾನದ ಕ್ರಾಂತಿಗೆ ಕೇಂದ್ರಶಕ್ತಿಯಾದಂತೆ ೧೫ನೆಯ ಶತಮಾನದ ಕ್ರಾಂತಿಗೆ 'ನೂರೊಂದು ವಿರಕ್ತರು' ಕಾರಣರಾಗಿರಬೇಕು. ಅವರ ತಪಃ ಪ್ರಭಾವ ಸಾಮಾನ್ಯವಾದುದಲ್ಲ. ಅವರಲ್ಲಿಯೂ ಕೆಲವರು ಸಾಹಿತ್ಯ ನಿರ್ಮಾತೃಗಳು ಇದ್ದಿರಬೇಕು. ಉದಾಹರಣೆಗೆ ಕರಸ್ಥಲದ ನಾಗಿದೇವರು ತ್ರಿವಿಧಿಗಳನ್ನು ರಚಿಸಿರುವರು. ಇದರಂತೆ ಇತರರೂ ಅನೇಕ ಕೃತಿಗಳನ್ನು ರಚಿಸಿರುವ ಸಂಭವವಿದೆ. ಕಾಲನ ದವಡೆಯಲ್ಲಿ ಅವು ಸಿಕ್ಕುಹೋಗಿರುವುದು ಸಾಧ್ಯವಾಗಿದೆ. ನಮ್ಮ ಜನತೆಗೆ ಇಂತಹ ಮಹಾನುಭಾವರು ರಚಿಸಿದ ಕೃತಿಗಳನ್ನೂ ಅವರ ನೈಜ ಇತಿಹಾಸವನ್ನೂ ಉಳಿಸಿಕೊಳ್ಳುವುದಕ್ಕಿಂತ ಅವರ ಅದ್ಭುತ ಪವಾಡಗಳನ್ನು ಬಣ್ಣಿಸಿ ಹೇಳುವುದರಲ್ಲಿಯೇ ವಿಶೇಷ ಆಸಕ್ತಿ. ತತ್ಪರಿಣಾಮ ವಾಗಿ 'ನೂರೊಂದು ವಿರಕ್ತ'ರ ನೈಜ ಚರಿತ್ರೆ, ಅವರ ಕಾವ್ಯಕೃತಿಗಳು ನಮಗೆ ಕಾಣ ದಾಗಿವೆ. ಅವರು ಲೋಕಕ್ಕೆ ಮರುಳರಂತೆ ತೋರಿದ ವಿಷಯ ಮಾತ್ರ ಸ್ಪಷ್ಟವಾಗಿ ತಿಳಿದುಬರುತ್ತದೆ. ಜಗದ ಕಣ್ಣಿಗೆ ಮರುಳರಂತಿದ್ದ ಮಹಾನುಭಾವರು ಅಸದೃಶವಾದ ಲೋಕೋದ್ಧಾರ ಕಾರ್ಯಗಳನ್ನು ಮಾಡಲಾರರೆಂದು ತಿಳಿಯಕೂಡದು. ರೇವಣ-ಸಿದ್ಧೇಶ್ವರರು 'ತನಗೆ ಲೋಕಂ ಮರುಳ್ ಲೋಕಕ್ಕೆ ತಾಂ ಮರುಳ್' ಎಂಬಂತೆ ಇದ್ದ ರೆಂದು ಹರಿಹರದೇವನು ವರ್ಣಿಸುತ್ತಾನೆ. ಆದರೆ ಆ ರೇವಣಸಿದ್ಧೇಶ್ವರರ ಪ್ರಭಾವ ಕಿರಿದೇ? ಅವರ ತಪಃಶಕ್ತಿ ಎಣಿಕೆಗೆ ಸಿಕ್ಕುವಂತಹುದೇ? ಚಾಲುಕ್ಯ, ಕಲಚುರ್ಯ, ಪಲ್ಲವ ಮೊದಲಾದ ಅರಸು ಮನೆತನಗಳು ರೇವಣಸಿದ್ಧೇಶ್ವರರ ಪ್ರಭಾವಕ್ಕೆ ಒಳಗಾಗಿ ಅವರಿಗೆ ತಲೆವಾಗಿದ್ದವು.

---

೧. ನೂ. ವಿ. ಕಾ. ೬-ಸು. ಪ. ೨೨.

**ಅರಸುವಿಚಾರ ಸಿರಿಯುಂ ಶೃಂಗಾರ ಸ್ಥಿರವಲ್ಲ, ಮಾನವಾ,**
**ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು, ನೋಡಾ!**
**ಒಬ್ಬ ಜಂಗಮದಭಿಮಾನದಿಂದ**
**ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು,**
**ಸಂದಿತ್ತು ಕೂಡಲಸಂಗಮದೇವಾ, ನಿಮ್ಮ ಕವಳಿಗೆಗೆ![೧]**

ಎಂಬ ವಚನದಲ್ಲಿ ಬಸವಣ್ಣನವರು ಉಲ್ಲೇಖಿಸಿದ 'ಒಬ್ಬ ಜಂಗಮ' ರೇವಣಸಿದ್ಧೇಶ್ವರ ರಾಗಿರಬಹುದೆಂದು ಊಹಿಸಬಹುದಾಗಿದೆ. ಚಾಳುಕ್ಯದೊರೆ ರೇವಣಸಿದ್ಧೇಶ್ವರನನ್ನು ಕೆಣಕಿ ಚಾಣಕ್ಯನನ್ನು ಕೆಣಕಿದ ನಂದರಂತೆ ಹಾಳಾಗಿರಬೇಕು. ಹೀಗೆಯೇ, ಮಂಗಳವಾಡದ ನೆರೆಯ ಮಾಸನೂರ ಹೊಳೆಯಲ್ಲಿ ಸುರಿಗೆಯನ್ನು ಹಾಕಿ ಬಿಜ್ಜಳನಿಗೆ ರೇವಣಸಿದ್ಧೇಶ್ವರರು ಖಡ್ಗವನ್ನು ದಯಪಾಲಿಸಿದ ಪವಾಡದ ಹಿನ್ನೆಲೆಯಲ್ಲಿ ಐತಿಹಾಸಿಕ ಸತ್ಯವಿರುವಂತೆ ತೋರುತ್ತದೆ. ಅದು ಏನಿದ್ದರೂ ಲೋಕಕ್ಕೆ ಮರುಳರಂತಿದ್ದ ರೇವಣಸಿದ್ಧೇಶ್ವರರು ಎಷ್ಟೊಂದು ಪ್ರಭಾವಶಾಲಿಯಾಗಿದ್ದರೆಂಬುದನ್ನು ವಿದಿತಪಡಿಸುವುದೇ ಪ್ರಸ್ತುತವಾದುದು. ಅವರು ಮಹಾ ಕರ್ತೃತ್ವಶಾಲಿಗಳೂ ಪರಮತಪಸ್ವಿಗಳೂ ಆಗಿದ್ದರೆಂಬುದನ್ನು ಮರೆಯುವಂತಿಲ್ಲ. ಇವರಂತೆಯೇ ಲೋಕದೃಷ್ಟಿಯಲ್ಲಿ ಹುಚ್ಚು ಹುಚ್ಚಾಗಿ ಕಾಣುತ್ತಿದ್ದ ಈ ವಿರಕ್ತರೂ ತಪೋನಿಧಿಗಳಾಗಿ, ಶಿವಯೋಗಿಗಳಾಗಿ, ಲಿಂಗಾಂಗಸಮರಸರಾಗಿ, ಕರ್ತೃತ್ವ ಶಾಲಿಗಳಾಗಿ ಆ ಕಾಲದಲ್ಲಿ ನಡೆದ ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ನವೋದಯಕ್ಕೆ ಪ್ರೇರಕರಾಗಿರಬೇಕು, ಕಾರಣಪುರುಷರಾಗಿರಬೇಕು.

ವಿರೂಪಾಕ್ಷ ಪಂಡಿತನು,

**ಸುರಪನ ನಿಮಿತ್ತದಿಂದಿಳೆಯೊಳಗೆ ನೂರೊಂದು**
**ವರಗಣೇಶ್ವರರುದಿಸಿ ಜಂಗಮಸ್ಥಲವಾಂತು**
**ಪರಮ ಷಟ್ಸ್ಥಲವನುದ್ಧರಿಸಿ ಬಳಿಕವರಿರದೆ ನಿರವಯುವನೈದಲೀಗ[೨]**

ಎಂದು ಹೇಳುತ್ತಾನೆ. ಆತನ ಅಭಿಮತದಂತೆ ನೂರೊಂದು ವಿರಕ್ತರು ಜಂಗಮಸ್ಥಲವನ್ನು ಹೊಂದಿ, ಷಟ್ಸ್ಥಲವನ್ನು ಉದ್ಧಾರಮಾಡಿದ ಮಹಾನುಭಾವರು. ಹಿಂದೆ ಬಸವಾದಿ ಪ್ರಮಥರ ಕಾಲದಲ್ಲಿ ಚೆನ್ನಬಸವಣ್ಣನವರು ಷಟ್ಸ್ಥಲವನ್ನು ಉದ್ಧರಿಸಿದ್ದರು.[೩] ಮುಂದೆ 'ಕಲ್ಯಾಣ ಮಂಡಲದ ಶಿವಭಕ್ತರ ಸಂತಾನವೆನಿಸಿದ' ಈ ನೂರೊಂದು ವಿರಕ್ತರು 'ಷಡುಸ್ಥಲವನುದ್ಧರಿಸಿರುವರು.' ಇದೇ ಅವರ ಘನತೆಗೆ ಸಾಕ್ಷಿ.

ನೂರೊಂದು ವಿರಕ್ತರು ಷಡುಸ್ಥಲವನ್ನುದ್ಧರಿಸಿದ ಅಲ್ಪಾವಧಿಯಲ್ಲಿಯೇ ಮತ್ತೆ ವೀರ ಶೈವದಲ್ಲಿ ಸ್ವಲ್ಪ ಶೈಥಿಲ್ಯವುಂಟಾದಂತೆ ತೋರುತ್ತದೆ. ಆಗ ಏಳುನೂರ ಒಂದು ಜನ ವಿರ ಕ್ತರು ಉದಯವಾಗಿ ಷಡುಸ್ಥಲವನ್ನುದ್ಧರಿಸಿದರೆಂದು ಚೆನ್ನಬಸವಪುರಾಣದಲ್ಲಿ ಹೇಳಿದೆ:

---

೧. ಬ. ಷ. ವ.

೨. ಚೆ. ಬ. ಪು. ಸಂ. ೬೮ ಪ. ೪೨

೩. ಹಡುಸ್ಥಲವನುದ್ಧಾರಿಸಿದ ಗುರು ಚೆನ್ನಸಂಗನಬಸವ ಶರಣಾರ್ಥಿ, ೧-೨.

ಸುರಪನ ನಿಮಿತ್ತದಿಂದಿಳೆಯೊಳಗೆ ನೂರೊಂದು
ವರಗಣೇಶ್ವರರುದಿಸಿ ಜಂಗಮಸ್ಥಲವಾಂತು
ಪರಮ ಷಟ್ಸ್ಥಲವನುದ್ಧರಿಸಿ ಬಳಿಕವರಿರದೆ ನಿರವಯುವನೈದಲೀಗ ॥

ಧರೆಯೊಳಗೆ ವೀರಶೈವಾಚಾರವಡಗಿತ್ತು
ಕರುಣದಿಂ ನೀವೆ ಚಿತ್ತೈಸಿ ಷಟ್ಸ್ಥಲವನು-
ದ್ಧರಿಸೆಂದು ನಾರದಂ ಬಿನ್ನವಿಸಲೀಶಂ ನಿರಂಜನಗಣೇಶನೊಡನೆ ॥

ವರಗಣೇಶ್ವರರನೇಳ್ನೂರ್ವರಂ ಕೂಡಿಕೊಂ-
ಡಿರದೆ ಭೂಮಿಯೊಳುದಿಸಿ ಜಂಗಮಸ್ಥಲವಾಂತು
ಪರಮ ಷಟ್ಸ್ಥಲವನುದ್ಧರಿಸೆಂದು ಕಳುಹಲು[೧]

ಏಳುನೂರು ವಿರತರು ಭೂಮಿಗೆ ಅವತರಿಸಿದರು.

ಏಳುನೂರು ವಿರತರಿಗೂ ಏಳುನೂರೆಪ್ಪತ್ತು ಅಮರಗಣಂಗಳಿಗೂ ಏನಾದರೂ ಸಂಬಂಧವಿರಬಹುದೇ ಎಂಬ ಸಂದೇಹ ಹಲವರಿಗೆ ತಲೆದೋರಬಹುದು. ಆದರೆ ವಸ್ತುಸ್ಥಿತಿಯನ್ನವಲೋಕಿಸಿದರೆ ಅವರಿಗೂ ಇವರಿಗೂ ಸಂಖ್ಯಾಸಾಮ್ಯದ ಹೊರತು ಐತಿಹಾಸಿಕವಾಗಿ ಬೇರೆ ಯಾವ ಸಂಬಂಧವೂ ಇರುವುದಿಲ್ಲ. ಏಳುನೂರೆಪ್ಪತ್ತು ಅಮರ ಗಣರಿದ್ದುದು ಬಸವಾದಿಪ್ರಮಥರ ಕಾಲದಲ್ಲಿ—ಎಂದು ಹಲವು ಗ್ರಂಥಗಳಿಂದ ತಿಳಿದು ಬರುತ್ತದೆ. ತೋಂಟದ ಸಿದ್ಧಲಿಂಗಶಿವಯೋಗಿಗಳು ತಮ್ಮೊಂದು ವಚನದಲ್ಲಿ "ಬಸವ ಚೆನ್ನಬಸವ ಪ್ರಭುದೇವರೇ ಮುಖ್ಯವಾದ ಏಳುನೂರು ಎಪ್ಪತ್ತು ಅಮರಗಣಂಗಳು ಎಲ್ಲರೂ............" ಎಂದು ನುಡಿದಿರುವರು.[೨] ಇದರಿಂದ ಏಳುನೂರೆಪ್ಪತ್ತು ಅಮರಗಣಂಗಳಲ್ಲಿ ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮುಖ್ಯರಾದವರೆಂದೂ ಅವರೆಲ್ಲರೂ ಬಸವಣ್ಣನವರ ಸಮಕಾಲೀನರೆಂದೂ ಅರ್ಥಮಾಡಬಹುದಾಗಿದೆ. ಶಿವ ಗಣಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆಯಲ್ಲಿ ಬರುವ ಒಂದು ಉದ್ಧರಣೆಯು ಈ ಮಾತಿಗೆ ಪುಷ್ಟಿಯನ್ನು ಕೊಡುತ್ತದೆ. "ಇಂತು ಬಸವರಾಜದೇವರು ಮಹಾ ಗಣಂಗಳ ಕಯ್ಯಲು ಬೀಳುಕೊಂಡು ತಮ್ಮ ಗೃಹೋಪಕರಣಂಗಳಂ ಲಿಂಗಜಂಗಮಕ್ಕೆ ಸೂಜಿ[೩]ಗೊಟ್ಟು ಏಳುನೂಱುಎಪ್ಪತ್ತು ಮಹಾಗಣಂಗಳಿಗೆ ನಿಜಪದಪ್ರಾಪ್ತಿಯಂ ನಿರೂಪಿಸಿ ಕಳುಹಿ......ಕಪ್ಪಡಿಸಂಗಮನಾಥನ ಶ್ರೀಪಾದ ಸಮಿಪಕ್ಕೆ ಬಿನ್ನಪಂಗೆಯ್ದ ಪ್ರಸ್ತಾವದ ವಚನ.[೩] ಇಲ್ಲಿ ಮಹಾದೇವಯ್ಯನವರು ಏಳುನೂರಾಎಪ್ಪತ್ತು ಮಹಾಗಣಂಗಳನ್ನು ಸಂಬೋಧಿಸಿರುವರು. ಪ್ರಾಯಶ: 'ಅಮರಗಣಂಗಳು' ಎನ್ನುವುದಕ್ಕೆ 'ಮಹಾ ಗಣಂಗಳು' ಎಂಬುದು ಪರ್ಯಾಯಪದವಾಗಿರಬೇಕು. ಇದೇ ನಿಜವಿದ್ದರೆ ಮೇಗಣ ಉದ್ಧರಣೆಯಿಂದ ಎರಡಂಶಗಳು ಸ್ಪಷ್ಟವಾಗುತ್ತವೆ.

---

೧. ಚೆ. ಬ. ಪು. ಸಂ. ೬೩. ಪ. ೪೩-೪೪.

೨. ತೋಂ. ಸಿ. ಶಿ. 'ಷಟ್ಸ್ಥಲಜ್ಞಾನಸಾರಾಮೃತದ ವಚನಗಳು'—ವಚನ ೬೦.

೩. ಶಿವಗಣಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆ, ೯೪೪ರ ಗದ್ಯ.

೧. ಏಳುನೂರಾಎಪ್ಪತ್ತು ಅಮರಗಣರೆಲ್ಲರೂ ಬಸವಣ್ಣನವರ ಸಮಕಾಲೀನರು.

೨. ಬಸವಣ್ಣನವರನ್ನು ಮಹಾದೇವಯ್ಯನವರು ಏಳುನೂರಾಎಪ್ಪತ್ತು ಅಮರ ಗಣಂಗಳಲ್ಲಿ ಎಣಿಸುವುದಿಲ್ಲ.

ಇದರರ್ಥ ಇಷ್ಟಿರಬಹುದು: ಬಸವಣ್ಣನವರೊಳಗೊಂಡು ಮುಖ್ಯರಾದ ಏಳು ನೂರಾಎಪ್ಪತ್ತು ಪ್ರಮಥರಿಗೆ 'ಏಳುನೂರಾಎಪ್ಪತ್ತು ಅಮರಗಣಂಗಳು' ಎಂಬ ಅಭಿಧಾನ ರೂಢವಾಗಿರಬೇಕು. ಅವರಲ್ಲಿ ಒಬ್ಬರು ಇನ್ನುಳಿದ ಅಮರಗಣಂಗಳನ್ನೆಲ್ಲ ಕುರಿತು ಹೇಳುವಾಗ ಅವರೆಲ್ಲರಿಗೆ ಸಾಮಾನ್ಯವಾಗಿ ರೂಢವಾದ ಏಳುನೂರಾಎಪ್ಪತ್ತು ಅಮರ ಗಣಂಗಳೆಂಬ ಅಭಿಧಾನವನ್ನೇ ಉಪಯೋಗಿಸುತ್ತಿರಬೇಕು. ಅದೊಂದು ಸಾಮುದಾಯಿಕ ನಾಮವಾಗಿರಬಹುದು. ಒಬ್ಬರೋ ಇಬ್ಬರೋ ನಾಲ್ಕು ಜನರೋ ಹೊರಗುಳಿದರೂ ಮಿಕ್ಕವರನ್ನು ಏಳುನೂರಾಎಪ್ಪತ್ತು ಅಮರಗಣಂಗಳು ಎಂಬ ಅಭಿಧಾನದಿಂದಲೇ ಕರೆಯುತ್ತಿರಬೇಕು. ಇದರಿಂದ ಏಳುನೂರಾಎಪ್ಪತ್ತು ಅಮರಗಣಂಗಳು ಬಸವಣ್ಣನವರ ಸಮಕಾಲೀನರಾಗಿದ್ದು ಅವರಲ್ಲಿ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರೇ ಮೊದ ಲಾದವರು ಮುಖ್ಯರಾಗಿದ್ದರೆಂದು ತಿಳಿದುಬರುತ್ತದೆ. ಆದರೆ ಪಾಲ್ಕುರಿಕೆಯ ಸೋಮ ನಾಥ ಮತ್ತು ಪಂಡಿತಾರಾಧ್ಯರು ರಚಿಸಿದ 'ಗಣ ಸಹಸ್ರನಾಮಾವಳಿ'ಯಲ್ಲಿ ಬಂದಿರುವ ಗಣಂಗಳ ವಿವರ ಹೀಗಿದೆ[೧]:

| | |
|---|---|
| ಪ್ರಮಥಗಣರು | ೪೬೫ |
| ರುದ್ರಗಣರು | ೧೭೧ |
| ಯೋಗಾಚಾರ್ಯರು | ೨೮ |
| ತ್ರಿಷಷ್ಟಿ ಪುರಾತನರು | ೬೩ |
| ಷೋಡಶಗಣರು | ೧೬ |
| ತೇರಸಗಣರು | ೧೩ |
| ದಶಗಣರು | ೧೦ |
| ಅಮರಗಣಂಗಳು | ೨೩೪ |
| ಒಟ್ಟು | ೧೦೦೦ |

ಪಾಲ್ಕುರಿಕೆಯ ಸೋಮನಾಥ (ಕ್ರಿ. ಶ. ೧೨೦೦) ಮತ್ತು ಪಂಡಿತಾರಾಧ್ಯರ ಕಾಲ ದಲ್ಲಿ ಅಮರಗಣಂಗಳ ಸಂಖ್ಯೆ ೨೩೪ ಎಂದಾಗಿದೆ. ಅವರಲ್ಲಿ ಮಡಿವಾಳ ಮಾಚಯ್ಯ, ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮೇಶ್ವರ, ಏಕಾಂತ ರಾಮಯ್ಯ ಇವರೇ ಮೊದ ಲಾದ ೧೨ನೆಯ ಶತಮಾನದ ಶರಣರಿರುವರಲ್ಲದೆ ತತ್ಪೂರ್ವದ ಕೆಲವು ಶರಣರ ಹೆಸರು ಗಳೂ ಅಡಕವಾಗಿವೆ. ದೇವರ ದಾಸಿಮಯ್ಯ, ಅನಿಮಿಷಯ್ಯ ಮೊದಲಾದವರ ಹೆಸರು ಗಳು ಇಲ್ಲಿ ಗಮನಾರ್ಹವಾಗಿವೆ. ಆದುದರಿಂದ ಅಮರಗಣಂಗಳು ಎಂಬ ಅಭಿಧಾನ

---

೧. ಗ. ಸ. ನಾ. ಪು. ೪೯.

ಬಸವಾದಿಪ್ರಮಥರ ಕಾಲದಲ್ಲಿ, ತದನಂತರ ಅಲ್ಪಾವಧಿಯಲ್ಲಿ (ಕ್ರಿ. ಶ. ೧೨೦೦) ರೂಢವಾಗಿದ್ದರೂ ಅವರ ಸಂಖ್ಯೆ ಆಗ ಏಳುನೂರಾಎಪ್ಪತ್ತು ಎಂದು ನಿರ್ದಿಷ್ಟವಾದಂತಿಲ್ಲ. ಸ್ವತಃ ಬಸವಣ್ಣನವರ ಹೆಸರೇ ಪಂಡಿತಾರಾಧ್ಯರೂ ಪಾಲ್ಕುರಿಕೆ ಸೋಮನಾಥರೂ ಕೊಡುವ ಅಮರಗಣಂಗಳ ಪಟ್ಟಿಯಲ್ಲಿ ಅಡಕವಾಗುವುದಿಲ್ಲ. ಮೊದಮೊದಲು ಬಿಟ್ಟವರ ಹೆಸರುಗಳನ್ನು ಮುಂದುಮುಂದಿನವರು ಸೇರಿಸುತ್ತ ಹೋಗಿ ಕೊನೆಗೆ ಅವರ ಸಂಖ್ಯೆಯನ್ನು ೭೭೦ಕ್ಕೆ ತಂದು ಮುಟ್ಟಿಸಿರಬೇಕು. ಆ ಕಾರ್ಯ ೧೫ನೆಯ ಶತಮಾನದ ಇತ್ತೀಚೆಗೆ ಪೂರ್ತಿಗೊಂಡಿರುವಂತೆ ತೋರುತ್ತದೆ. ಅಂತೆಯೇ ೧೫ನೆಯ ಶತಮಾನದ ಶಿವಗಣಪ್ರಸಾದಿ ಮಹಾದೇವಯ್ಯನವರೂ ತೋಂಟದ ಸಿದ್ಧಲಿಂಗ ಶಿವಯೋಗಿಗಳೂ ಏಳುನೂರಾಎಪ್ಪತ್ತು ಅಮರಗಣಂಗಳ ವಿಷಯವಾಗಿ ಖಚಿತವಾಗಿ ಮಾತನಾಡುತ್ತಾರೆ.

ಡಾ. ಪಿ. ಜಿ. ಹಳಕಟ್ಟಿಯವರು 'ಏಳುನೂರಾಎಪ್ಪತ್ತು ಅಮರಗಣಾಧೀಶ್ವರ ಚರಿತ್ರೆಗಳು' ಎಂಬ ಗ್ರಂಥದಲ್ಲಿ ಪಾಲ್ಕುರಿಕೆಯ ಸೋಮನಾಥರು ಹೇಳಿದ ೨೩೪ ಅಮರಗಣಂಗಳ ಚರಿತ್ರೆಗಳನ್ನು ಕೊಟ್ಟು ಇನ್ನುಳಿದ ೫೩೬ ಹೆಸರುಗಳನ್ನು ಪಂಡಿತಾರಾಧ್ಯರು, ಪಾಲ್ಕುರಿಕೆ ಸೋಮನಾಥರು ಕೊಡುವ ಪ್ರಮಥಗಣ, ರುದ್ರಗಣ, ಯೋಗಾಚಾರ್ಯ ಮೊದಲಾದ ಗುಂಪುಗಳಿಂದ ಆಯ್ದುಕೊಳ್ಳುತ್ತಾರೆ. ಹೀಗೆ ಆಯ್ದುಕೊಳ್ಳುವುದಕ್ಕೆ ಅವರಿಗೆ ಪ್ರಮಾಣಗಳೇನೋ ನಮಗೆ ತಿಳಿಯದು. ಅವರು ಹೆಸರು ಕೊಟ್ಟಿರುವವರನ್ನಷ್ಟೇ ಏಳುನೂರಾಎಪ್ಪತ್ತು ಅಮರಗಣಾಧೀಶ್ವರರೆಂದು ಏಕೆ ಕರೆಯಬೇಕೆಂಬುದೂ ಗೊತ್ತಾಗುವಂತಿಲ್ಲ. ಅದು ಏನಿದ್ದರೂ ಒಂದು ಮಾತು ಮಾತ್ರ ನಿಜವೆಂದು ತೋರುತ್ತದೆ. ಅವರೆಲ್ಲರೂ ಬಸವಣ್ಣನವರ ಸಮಕಾಲೀನರು. ಡಾ. ಹಳಕಟ್ಟಿಯವರು ಕೊಟ್ಟಿರುವ ಅನೇಕ ಹೆಸರುಗಳು ೭೭೦ ಅಮರಗಣಾಧೀಶ್ವರರಲ್ಲಿ ಪರಿಗಣಿತರಾಗಲಾರರೆಂದು ನಮ್ಮ ಸ್ಪಷ್ಟವಾದ ಅಭಿಪ್ರಾಯ. ಬಸವಣ್ಣನವರ (ಕ್ರಿ. ಶ. ೧೧೬೧) ಸಮಕಾಲೀನರಾದ ಏಳುನೂರಾಎಪ್ಪತ್ತು ಅಮರಗಣಂಗಳಿಗೂ ತೋಂಟದ ಸಿದ್ಧಲಿಂಗ ಶಿವಯೋಗಿಗಳ (ಕ್ರಿ. ಶ. ೧೪೮೦) ಶಿಷ್ಯರೆನಿಸಿದ ಏಳುನೂರು ವಿರಕ್ತರಿಗೂ ಐತಿಹಾಸಿಕವಾಗಿ ಯಾವ ಸಂಬಂಧವೂ ಇಲ್ಲವೆಂಬುದು ಮೇಲಣ ವಿವೇಚನೆಯಿಂದ ಸ್ಪಷ್ಟವಾಗುತ್ತದೆ.

ಹೀಗೆ, ಭೂಮಿಗವತರಿಸಿದ ಏಳುನೂರಾಒಂದು ಜನ ವಿರತರಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳೇ ಅಗ್ರಗಣ್ಯರು. ಮಿಕ್ಕ ಏಳುನೂರು ಜನರೆಲ್ಲ ಅವರ ಶಿಷ್ಯರಾಗಿ, ಅವರು ಕೈಕೊಂಡ ಕಾರ್ಯವನ್ನು ನೆರವೇರಿಸಲು ಹೆಣಗಿದಂತಿದೆ. ಈ ಏಳುನೂರು ಜನ ವಿರತರ ಹೆಸರೇನು ಎಂಬ ಪ್ರಶ್ನೆ ಹುಟ್ಟುವುದು ಸಹಜ. ನಮಗೆ ತಿಳಿದ ಮಟ್ಟಿಗೆ, ಕೆಲವು ಗ್ರಂಥಗಳಲ್ಲಿ ಇವರ ಉಲ್ಲೇಖನವೇನೋ ಬರುತ್ತದೆ. ಆದರೆ ಅವುಗಳಲ್ಲಿ ಯಾವುದರಲ್ಲಿಯೂ ಏಳುನೂರು ವಿರಕ್ತರ ಹೆಸರುಗಳ ಖಚಿತವಾದ ಪಟ್ಟಿ ದೊರೆಯುವುದಿಲ್ಲ. ಇದುವರೆಗೆ ಅಲ್ಲಿ ಇಲ್ಲಿ ಉಪಲಬ್ಧವಾಗಿದ್ದ ಹೆಸರುಗಳನ್ನು ಇಲ್ಲಿ ವಿವರಿಸಿದೆ:

## ಏಳುನೂರಾ ಒಂದು ವಿರಕ್ತರು

| | ಚೆ. ಬ. ಪುರಾಣ | ತೋ. ಸಿ. ಪುರಾಣ | ಎಡೆಯೂರ ಶಾಸನ | ಗುರುರಾಜ ಚಾರಿತ್ರ |
|---|---|---|---|---|
| ೧. | ತೋಂಟದ ಸಿದ್ಧಲಿಂಗ | ತೋಂಟದ ಸಿದ್ಧಲಿಂಗ | ತೋಂಟದ ಸಿದ್ಧಲಿಂಗ | ತೋಂಟದ ಸಿದ್ಧಲಿಂಗ |
| ೨. | ಸಪ್ಪೆಯಾರ್ಯ | ಸಪ್ಪೆಯ ಯತೀಶ | ಸಪ್ಪೆದೇವರು | ಸಪ್ಪೆಯಯ್ಯ |
| ೩. | ಬೋಳ ಬಸವೇಶ | ಬೋಳ ಬಸವೇಶ | ಬೋಳಬಸವರಾಜ ದೇವರಂ | ಬೋಳ ಬಸವೇಶ |
| ೪. | ಉಪ್ಪಿನ ಹಳ್ಳಿಯಾರ್ಯ | ಉಪ್ಪಿನ ಹಳ್ಳಿಯಯ್ಯ | ಉಪ್ಪಿನ ಹಳ್ಳಿಯ ಸ್ವಾಮಿ | |
| ೫. | ಗುಮ್ಮಳಾಪುರದ ವರಸಿದ್ಧಲಿಂಗೇಶ್ವರ | ಗುಮ್ಮಳಾಪುರ ಸಿದ್ಧಲಿಂಗೇಶ | ಗುಮ್ಮಳಾಪುರದ ಸಿದ್ಧಲಿಂಗ-ದೇವರು | |
| ೬. | ಪಟ್ಟಣದ ದೇವರು | ಪಟ್ಟಣದ ದೇವರು | ಪಟ್ಟಣದ ದೇವರು | |
| ೭. | ಶೀಲವಂತಾರ್ಯ | ಶೀಲವಂತೇಶ್ವರ | ಶೀಲವಂತ ದೇವರು | |
| ೮. | ಘನಲಿಂಗಿದೇವ | ಘನಲಿಂಗಿದೇವ | | |
| ೯. | ಸಿದ್ಧಮಲ್ಲೇಶ | ಸುತ್ತೂರ ಸಿದ್ಧಮಲ್ಲೇಶ | | |
| ೧೦. | ಬತ್ತಲೆಯ ದೇವ | ಬತ್ತಲೆಯ ದೇಶಿಕ | | |
| ೧೧. | ಬೆಡಗಿನ ಪರ್ವತೇಶ | ಹುಚ್ಚ ಪರ್ವತೇಶ | | |
| ೧೨. | ಕಂಕಣದ ದೇವ | ಕಂಕಣದ ದೇವರು | | |
| ೧೩. | ಸಂಪಗೆಯ ರಾಚವಟ್ಟ ದೇವರು | ರಾಚವೀಟಿಯ ದೇವರು | | |
| ೧೪. | ಚಂದ್ರಶೇಖರ | ಗುರುಚಂದ್ರಶೇಖರ | | |
| ೧೫. | ದೊಡ್ಡ ಸಿದ್ಧಲಿಂಗೇಶ್ವರ | ದೊಡ್ಡ ಸಿದ್ಧೇಶ | | |
| ೧೬. | ಸಿದ್ಧಲಿಂಗೇಶ್ವರ | | ಸಿದ್ಧದೇವ | ಸಿದ್ಧಲಿಂಗೇಶ |
| ೧೭. | ಮಳೆಯ ದೇವ | | | ಮಳೆಯ ಮಲ್ಲೇಶ |

| | ಚೆ. ಬ. ಪುರಾಣ | ತೋ. ಸಿ. ಪುರಾಣ | ಎಡೆಯೂರ ಶಾಸನ |
|---|---|---|---|
| ೧೮. | ಕೊಡಗಿಯ ಹಳ್ಳಿಯಾರ್ಯ | | ಕೊಡಗಿಯ ಹಳ್ಳಿದೇವರು |
| ೧೯. | ಕಂಬಳಾದೇವ | | |
| ೨೦. | ಸಿದ್ಧನಂಜೇಶ್ವರ | | |
| ೨೧. | ಚೆನ್ನದೇವ | | |
| ೨೨. | ಲಂಬಕರ್ಣದ ದೇವರು | | |
| ೨೩. | { ಎಡತೊರೆಯ ಪುರ<br>{ ಗುರುಸಿದ್ಧ ವೀರಣ್ಣೊಡೆಯರು | | |
| ೨೪. | ಚಿಕ್ಕಮಲ್ಲೇಶ | | |
| ೨೫. | ಮದ್ದೇಶ್ವರ | | |
| ೨೬. | ಸುರಗಿಯಾರ್ಯ | | |
| ೨೭. | ಶಾಂತಮಲ್ಲಿಕಾರ್ಜುನ | | |
| ೨೮. | ಜಗುನಿಯ ಮರುಳ ದೇವರು | | |
| ೨೯. | ಜೋಲಿಯ ಬಸವೇಶ್ವರ | | |
| ೩೦. | ರಾಜವಟ್ಟಿ | | |
| ೩೧. | ಕೋರಿಯ ಸಿದ್ಧಬಸವೇಶ್ವರ | | |
| ೩೨. | ಹಿರಣ್ಯಾರ್ಯ | | |
| ೩೩. | ಚೆನ್ನಮಲ್ಲೇಶ್ವರ | | |
| ೩೪. | | ನಂಜದೇಸಿಕೇಂದ್ರ | ನಂಜೇದೇವರು |
| ೩೫. | | ಗಟ್ಟಿಸಿದ್ಧಯ್ಯ | |
| ೩೬. | | | ರೇವಣಸಿದ್ಧ ದೇವರು |



## ಕಾಲವಿಚಾರ

ಮೇಲೆ ಉದ್ಧರಿಸಿದ ಚೆನ್ನಬಸವ ಪುರಾಣದ ಎರಡು ಪದ್ಯಗಳ (೬೩-೪೩, ೬೪) ಆಧಾರದಿಂದ ಪ್ರೌಢದೇವರಾಯನ ಆಳಿಕೆಯ (ಕ್ರಿ. ಶ. ೧೪೪೯–೪೭) ಅನಂತರ ಈ ಏಳುನೂರಾಒಂದು ವಿರತರ ಉದಯವಾಯಿತೆಂದು ತಿಳಿದುಬರುವುದು. ಅಲ್ಲದೆ,

> **ಎಲೆ ರಾಮು ಕೇಳ್ಬುದಾ ಪ್ರೌಢದೇವೇಂದ್ರನಿರು-**
> **ತಳಿವನವನಂಶದೆ ವಿರೂಪಾಕ್ಷರಾಯನಂ-**
> **ದಿಳೆಯುನಾಳುತ್ತುವಿರಲ್**[೧]

ಈ ಏಳುನೂರು ವಿರತರು ಬಾಳಿದರೆಂದು ಚೆನ್ನಬಸವ ಪುರಾಣದ ಈ ಪದ್ಯದ ಆಧಾರದಿಂದ ಊಹಿಸಬಹುದಾಗಿದೆ. ಕವಿಚರಿತೆಕಾರರೂ ಇದೇ ಅಭಿಪ್ರಾಯವನ್ನು ತಳೆದಿರುವರು. ಇಲ್ಲಿ ಉಕ್ತನಾಗಿರುವ ವಿರೂಪಾಕ್ಷರಾಯನ ಆಳಿಕೆ ಕ್ರಿ. ಶ. ೧೪೯೦ (?)ಕ್ಕೆ ಕೊನೆಗೊಂಡಿರುವುದು. ಈ ಮೇರೆಗೆ ಏಳುನೂರೊಂದು ವಿರತರ ಕಾಲ ಕ್ರಿ. ಶ. ೧೪೫೦–೧೪೯೦ರ ನಡುವೆ ಎಂದು ತಿಳಿಯಬಹುದು.

ತೋಂಟದ ಸಿದ್ಧಲಿಂಗಸ್ವಾಮಿಯ ಸನ್ನಿಧಾನಕ್ಕೆ ದತ್ತಿಯನ್ನು ಬಿಟ್ಟ ಶಾಸನಗಳು ಕೆಲವು ದೊರೆತಿವೆ.[೨] ಇವುಗಳಲ್ಲಿ ಮೊದಲನೆಯ ಶಾಸನವು[೩] ಸಿದ್ಧಲಿಂಗಶಿವಯೋಗಿಗಳ ಕಾಲನಿರ್ಣಯದ ದೃಷ್ಟಿಯಿಂದ ಬಹು ಮಹತ್ವವುಳ್ಳುದು. ಆ ಶಾಸನದ ಕಾಲ ಕ್ರಿ. ಶ. ೧೪೭೦ ಎಂದು ಊಹಿಸಲಾಗಿದೆ. ಅದರಲ್ಲಿ ಸಿದ್ಧಲಿಂಗಶಿವಯೋಗಿಗಳು ಸಮಾಧಿಯನ್ನು ಹೊಂದಿದ ವಿಷಯ ಪ್ರಸ್ತಾಪಿತವಾಗಿರುವುದರಿಂದ ಕ್ರಿ. ಶ. ೧೪೭೦ಕ್ಕಿಂತ ಹಿಂದೆಯೇ ಅವರು ಸಮಾಧಿಸ್ಥರಾಗಿರಬೇಕೆಂದು ತಿಳಿಯುವುದು. ಆದರೆ, ಸಿದ್ಧಲಿಂಗ ಶಿವಯೋಗಿಗಳ ಅವತಾರ ಸಮಾಪ್ತಿಯ ಕಾಲ ಹಾಗೂ ಈ ಶಾಸನ ಹುಟ್ಟಿದ ಕಾಲ ಇವುಗಳ ಮಧ್ಯಂತರವು ಅತ್ಯಲ್ಪವಾಗಿರಬೇಕೆಂದು ಆ ಶಾಸನದಿಂದಲೇ ಅರ್ಥಮಾಡಿಕೊಳ್ಳಲು ಬರುವಂತಿದೆ. ಇದಕ್ಕೆ ಪ್ರತಿಯಾಗಿ ಹೇರಂಬ ಕವಿಯ 'ಸಿದ್ಧಲಿಂಗಸಾಂಗತ್ಯ'ದಲ್ಲಿ[೪] ಮಠದ ಮುಂದೆ ಶಾಸನವನ್ನು ನಿಲಿಸಿ ಅಲ್ಪ ಕಾಲದಲ್ಲಿ ಅವರು ಇಹಲೋಕಯಾತ್ರೆಯನ್ನು ಮುಗಿಸಿದಂತೆ ಹೇಳಲಾಗಿದೆ. ಇದು ಅಸಂಭವವಾದರೂ ಅವರ ಸಮಾಧಿ ಹಾಗೂ ಶಾಸನದ ಪ್ರಸ್ಥಾಪನ—ಎರಡೂ ಘಟನೆಗಳು ಅತ್ಯಲ್ಪಾವಧಿಯಲ್ಲಿಯೇ ಜರುಗಿಹೋಗಿರಬೇಕೆಂದು ತಿಳಿಯಬಹುದಾಗಿದೆ. ಆದುದರಿಂದ ಶಿವಯೋಗಿಗಳು ಸಮಾಧಿಯನ್ನು ಹೊಂದಿದುದೂ ಅವರ ವಿಷಯಕವಾದ ಶಾಸನವನ್ನು ಕೆತ್ತಿದುದೂ ಕ್ರಿ. ಶ. ೧೪೭೦ ಒಂದೇ ವರುಷವೆಂದು ಇಟ್ಟುಕೊಳ್ಳಲು ಅಭ್ಯಂತರವಿಲ್ಲವೆಂದು ತೋರುತ್ತದೆ.

---

೧. ಚೆ. ಬ. ಪು. ೬೩-೩೯.

೨. Epigraphia Carnatica Vol. I.

೩. Epigraphia Carnatica Vol. I.

೪. ಸಂ.-೨೫-ಪ- ೮೩

ತೋಂಟದ ಸಿದ್ಧಲಿಂಗಶಿವಯೋಗಿಗಳು ಸಮಾಧಿಯನ್ನು ಹೊಂದಿದುದು ಎಡೆಯೂರಲ್ಲಿ ಕಟ್ಟಿಸಿದ ಮಠದಲ್ಲಿ ಎಂದು ಈ ಶಾಸನದಿಂದ ತಿಳಿದುಬರುತ್ತದೆ. ಆ ಮಠವು ಚೆನ್ನವೀರಪ್ಪ ಒಡೆಯುರ ಭಕ್ತಿ. ಅವರು ಎಂಟು ಜಡೆಯ ಚಿಟ್ಟಿಗದೇವರ ಮುಖಾಂತರ ಈ ಮಠವನ್ನು ಕಟ್ಟಿಸಿರುವರು. ಈ ಶಾಸನದ ಮೇರೆಗೆ ಚೆನ್ನವೀರಪ್ಪ ಒಡೆಯುರ ವಂಶಾವಳಿ ಹೀಗಿದೆ:

ತೋಂಟದ ಸಿದ್ಧಲಿಂಗೇಶ್ವರ ಸ್ವಾಮಿಯ ಪಾದಪದ್ಮಾರಾಧಕರು

ಚೆನ್ನರಾಯ ಒಡೆಯುರು
|
ಲಿಂಗಪ್ಪ ಒಡೆಯುರು
|
ಚೆನ್ನವೀರಪ್ಪ ಒಡೆಯುರು

ಚೆನ್ನರಾಯ ಒಡೆಯುರನ್ನು ತೋಂಟದ ಸಿದ್ಧಲಿಂಗೇಶ್ವರ ಸ್ವಾಮಿಯ ಪಾದಪದ್ಮಾರಾಧಕರೆಂದು ಈ ಶಾಸನದಲ್ಲಿ ಕರೆದಿರುವುದರಿಂದ ಅವರ ಕಾಲದಲ್ಲಿ ಸಿದ್ಧಲಿಂಗ ಶಿವಯೋಗಿಗಳು ಪೂಜನೀಯ ಸ್ಥಾನವನ್ನಲಂಕರಿಸಿ ಜೀವಿಸಿದ್ದರೆಂದು ಅರ್ಥವಾಗುತ್ತದೆ. ಮೂರನೆಯವರಾದ ಚೆನ್ನವೀರಪ್ಪ ಒಡೆಯುರು ಚಿಟ್ಟಿಗದೇವರಿಗೆ ತಮ್ಮ ಭಕ್ತಿಯನ್ನು ಸಲ್ಲಿಸಿ ಅವರಿಂದ ಎಡೆಯೂರೊಳಗೆ ಕಲ್ಲುಮಠವನ್ನು ಕಟ್ಟಿಸಿದ ಮೇಲೆ ಶಿವಯೋಗಿಗಳು ಆ ಮಠದಲ್ಲಿ ಶಿವಾಧೀನರಾಗಿರುವರು. ಆದುದರಿಂದ ಚೆನ್ನವೀರಪ್ಪ ಒಡೆಯುರ ಕಾಲದಲ್ಲಿಯೂ ಸಿದ್ಧಲಿಂಗಶಿವಯೋಗಿಗಳು ಜೀವಿಸಿದ್ದರೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಮೂರು ತಲೆಮಾರುಗಳ ಕಾಲಾವಧಿಯಲ್ಲಿ ಮಹಾತಪಸ್ವಿಗಳಾಗಿ ಬಾಳಿದ ತೋಂಟದ ಸಿದ್ಧಲಿಂಗಶಿವಯೋಗಿಗಳು, ೨೫ ವರುಷಗಳಂತೆ ಕನಿಷ್ಠ ೭೫ ವರುಷಗಳಾದರೂ ಜೀವಿಸಿದ್ದರೆಂದರೆ ತಪ್ಪಲ್ಲ. ಇದರಲ್ಲಿ ಶಿವಯೋಗಿಗಳ ಬಾಲ್ಯ ಹಾಗೂ ಸಾಧನೆಯ ಕಾಲವನ್ನು ಸೇರಿಸಲಾಗಿಲ್ಲ. ಅದನ್ನು ಗಣನೆಗೆ ತೆಗೆದುಕೊಂಡರೆ ತೋಂಟದ ಸಿದ್ಧಲಿಂಗಶಿವಯೋಗಿಗಳ ಆಯುರ್ಮಾನವು ೮೫–೯೦ ವರ್ಷಗಳೆಂದು ನಿಸ್ಸಂದೇಹವಾಗಿ ಹೇಳಬಹುದು. 'ನಿರಂಜನ ಜಂಗಮವಂಶದರ್ಪಣ' ಎಂಬ ಗ್ರಂಥದಲ್ಲಿ ಹೇಳಿದಂತೆ ಅವರು ಶತಾಯುಷಿಗಳಾಗಿರುವುದೂ ಅಸಂಭವವಲ್ಲ. ಆದರೆ, ಆ ಗ್ರಂಥದಲ್ಲಿ ಉಕ್ತವಾಗಿರುವ ಕಾಲಕ್ಕೂ ಇಲ್ಲಿ ನಾವು ನಿರ್ಣಯಿಸಿದ ಕಾಲಕ್ಕೂ ಅಂತರ ಕಂಡುಬರುತ್ತದೆ. ನಮ್ಮ ಲೆಕ್ಕದಂತೆ ತೋಂಟದ ಸಿದ್ಧಲಿಂಗಶಿವಯೋಗಿಗಳು ಕ್ರಿ. ಶ. ೧೪೦೦ರಲ್ಲಿ ಇಲ್ಲವೆ ಒಂದೆರಡು ದಶಕ ತತ್ಪೂರ್ವದಲ್ಲಿ ಭೂಮಿಗೆ ಅವತರಿಸಿರುವರು. 'ನಿರಂಜನ ಜಂಗಮವಂಶದರ್ಪಣ'ದಲ್ಲಿ ಅವರ ಜೀವಿತ ಕಾಲ ಕ್ರಿ. ಶ. ೧೨೫೧–೧೩೮೧ ಎಂದು ಕೊಡಲಾಗಿದೆ. ಇದಕ್ಕೆ ಆಧಾರಗಳೇನೋ ತಿಳಿಯವು. ಕವಿಚರಿತಕಾರರು ಇವರ ಕಾಲ ಕ್ರಿ. ಶ. ೧೪೭೦ ಎಂದು ಅಭಿಪ್ರಾಯ ಪಡುತ್ತಾರೆ.

## ಗುರುಪರಂಪರೆ

ತೋಂಟದ ಸಿದ್ಧಲಿಂಗಶಿವಯೋಗಿಗಳ ಗುರುಪರಂಪರೆ ಉಜ್ವಲವಾದುದು; ಸುದೀರ್ಘವಾದುದು. ಅವರು ತಮ್ಮದೊಂದು ವಚನದಲ್ಲಿ ಹೀಗೆ ಹೇಳಿರುವರು:

ಅನಾದಿ ಗಣೇಶ್ವರನ ಶಿಷ್ಯ ಆದಿಗಣೇಶ್ವರ, ಆದಿಗಣೇಶ್ವರನ ಶಿಷ್ಯ ನಿರ್ಮಾಯನೆಂಬ ಗಣೇಶ್ವರ, ನಿರ್ಮಾಯನೆಂಬ ಗಣೇಶ್ವರನ ಶಿಷ್ಯ ಜ್ಞಾನಾನಂದ ಗಣೇಶ್ವರ, ಜ್ಞಾನಾನಂದನೆಂಬ ಗಣೇಶ್ವರನ ಶಿಷ್ಯ ಆತ್ಮಗಣೇಶ್ವರ, ಆತ್ಮಗಣೇಶ್ವರನ ಶಿಷ್ಯ ಅಧ್ಯಾತ್ಮಗಣೇಶ್ವರ, ಅಧ್ಯಾತ್ಮಗಣೇಶ್ವರನ ಶಿಷ್ಯ ರುದ್ರನೆಂಬ ಗಣೇಶ್ವರ, ರುದ್ರನೆಂಬ ಗಣೇಶ್ವರನ ಶಿಷ್ಯ ಬಸವಪ್ರಭುದೇವರು, ಬಸವಪ್ರಭುದೇವರ ಶಿಷ್ಯ ಆದಿಲಿಂಗದೇವರು, ಆದಿಲಿಂಗದೇವರ ಶಿಷ್ಯ ಚೆನ್ನವೀರೇಶ್ವರದೇವರು, ಚೆನ್ನವೀರೇಶ್ವರದೇವರ ಶಿಷ್ಯ ಹರದನ ಹಳ್ಳಿಯ ಗೋಸಲದೇವರು, ಹರದನ ಹಳ್ಳಿಯ ಗೋಸಲದೇವರ ಶಿಷ್ಯ ಶಂಕರದೇವರು, ಶಂಕರದೇವರ ಶಿಷ್ಯ ದಿವ್ಯಲಿಂಗದೇವರು, ದಿವ್ಯಲಿಂಗದೇವರ ಶಿಷ್ಯರು ಚೆನ್ನಬಸವೇಶ್ವರದೇವರು, ಈ ಚೆನ್ನಬಸವೇಶ್ವರದೇವರ ಕರಕಮಲದಲ್ಲಿ ಉತ್ಪತ್ತಿಯಾದ ಶಿಶು ಸಿದ್ಧಲಿಂಗ ನಾನಯ್ಯ. ಹೀಂಗೆ ಅನಾದಿವಿಡಿದು ಬಂದ ಗುರು, ಅನಾದಿವಿಡಿದು ಬಂದ ಲಿಂಗ, ಅನಾದಿವಿಡಿದು ಬಂದ ಜಂಗಮ, ಅನಾದಿವಿಡಿದು ಬಂದ ಗುರುಶಿಷ್ಯಸಂಬಂಧ, ಅನಾದಿವಿಡಿದು ಬಂದ ಪಾದೋದಕಪ್ರಸಾದ, ಅನಾದಿವಿಡಿದು ಬಂದ ಭಕ್ತಿ ಜ್ಞಾನ ವೈರಾಗ್ಯ, ಅನಾದಿವಿಡಿದು ಬಂದ ಪ್ರಸಿದ್ಧವಾದ ವೀರಶೈವಾಚಾರ ಸಂಪತ್ತು, ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ.

ಈ ವಚನದನ್ವಯ ತೋಂಟದ ಸಿದ್ಧಲಿಂಗಶಿವಯೋಗಿಗಳ ಗುರುಪರಂಪರೆಯನ್ನು ಹೀಗೆ ರೇಖಿಸಬಹುದು:

ಅನಾದಿಗಣೇಶ್ವರ
|
ಆದಿಗಣೇಶ್ವರ
|
ನಿರ್ಮಾಯಗಣೇಶ್ವರ
|
ನಿರಂಜನಗಣೇಶ್ವರ
|
ಜ್ಞಾನಾನಂದಗಣೇಶ್ವರ
|
ಆತ್ಮಗಣೇಶ್ವರ
|

ಅಧ್ಯಾತ್ಮಗಣೇಶ್ವರ
|
ರುದ್ರಗಣೇಶ್ವರ
|
ಬಸವಪ್ರಭುದೇವರು
|
ಆದಿಲಿಂಗದೇವರು
|
ಚೆನ್ನವೀರೇಶ್ವರದೇವರು
|
ಹರದನಹಳ್ಳಿಯ ಗೋಸಲದೇವರು
|
ಶಂಕರದೇವರು
|
ದಿವ್ಯಲಿಂಗದೇವರು
|
ಚೆನ್ನಬಸವೇಶ್ವರದೇವರು
|
ತೋಂಟದ ಸಿದ್ಧಲಿಂಗಶಿವಯೋಗಿಗಳು

ವಿರಕ್ತ ತೋಂಟದಾರ್ಯ ವಿರಚಿತ ಶ್ರೀಸಿದ್ಧೇಶ್ವರ ಪುರಾಣ, ನಿರಂಜನವಂಶ ರತ್ನಾಕರ, ನಿರಂಜನಜಂಗಮವಂಶ ದರ್ಪಣಗಳಲ್ಲಿ ತೋಂಟದ ಸಿದ್ಧಲಿಂಗೇಶ್ವರರ ಗುರು ಪರಂಪರೆ ಮೇಲಿನಂತೆಯೇ ಉಕ್ತವಾಗಿದೆ. ಆದರೆ ನಿರಂಜನಜಂಗಮ ವಂಶದರ್ಪಣದಲ್ಲಿ ಮಾತ್ರ ನಿರ್ಮಾಯಗಣೇಶ್ವರರಾದ ಮೇಲೆ 'ಸ್ವಯಂ ಜ್ಯೋತಿರೂಪ'ರೆಂಬ ಗಣೇಶ್ವರರ ಹೆಸರು ಹೆಚ್ಚಿಗೆ ಬರುತ್ತದೆ. ವಚನದಲ್ಲಿ ಇದನ್ನು ಕಾಣದಿರುವುದರಿಂದ ಈ ಹೆಸರು ಅಲ್ಲಿ ಆಧಾರವಿಲ್ಲದೆ ತಪ್ಪಿ ಬಂದಿರುವಂತೆ ಕಂಡುಬರುತ್ತದೆ. ಈ ಗ್ರಂಥಗಳಲ್ಲಿ ಈ ಗುರುಪರಂಪರೆಯ ಆರಂಭದ ಬಗೆಗೆ ಒಂದು ಕಥೆ ಉಕ್ತವಾಗಿದೆ:—

ಮಧುರೆಗೆ ಹೋಗಿಬರುವ ಶೈವ ಬಣಂಜಿಗರು ಮಧ್ಯಮಾರ್ಗದಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿ ಹರದನಹಳ್ಳಿ (ವಾಣಿಜ್ಯಪುರಿ)ಯೆಂದು ಹೆಸರಿಟ್ಟು ಅಲ್ಲಿ ಅಮೃತೇಶ ಲಿಂಗವನ್ನು ಪ್ರತಿಷ್ಠಾಪಿಸಿದರು. ಈ ಲಿಂಗವೇ ಮುಂದೆ ದಿವ್ಯಲಿಂಗೇಶ್ವರವೆಂದು ಪ್ರಸಿದ್ಧ ವಾಯಿತು. ಆ ವ್ಯಾಪಾರಿಗಳು ಹರದನಹಳ್ಳಿಯಲ್ಲಿಯೇ ನೆಲಸಿ, ಅಮೃತೇಶ್ವರ (ದಿವ್ಯ) ಲಿಂಗದ ಸಮಯಾಚಾರಕ್ಕಾಗಿ ಮಠವನ್ನು ಕಟ್ಟಿಸಿ, ಅಲ್ಲಿ 'ಅನಾದಿಗಣೇಶ್ವರ'ನೆಂಬ ಚರಮೂರ್ತಿಯನ್ನು ನೆಲೆಗೊಳಿಸಿದರು. ಅಲ್ಲಿಂದಲೇ ತೋಂಟದ ಸಿದ್ಧಲಿಂಗಶಿವಯೋಗಿ

ಗಳ ಗುರುಪರಂಪರೆಯು ಆರಂಭವಾಗುತ್ತದೆ. ಈ ಗುರುಪರಂಪರೆಯೊಳಗಣ ಮೊದಲಿನ ಎಂಟು ಹೆಸರುಗಳನ್ನು ನೋಡಿದರೆ, ಸಕೃದ್ದರ್ಶನಕ್ಕೆ ಇದು ಬಸವಣ್ಣ ಮತ್ತು ಪ್ರಭುದೇವರು ತಮ್ಮ ಪೂರ್ವಭವಗಳನ್ನು ಹೇಳಿಕೊಳ್ಳುವಂತಿದೆ ಎಂದು ಭಾಸವಾಗಬಹುದು. ತೋಂಟದ ಸಿದ್ಧಲಿಂಗಶಿವಯೋಗಿಗಳಲ್ಲದೆ ಬೇರೆಯುವರು ಈ ಮಾತನ್ನು ಹೇಳಿದ್ದರೆ ಇಂತಹ ಊಹಾಪೋಹಕ್ಕೆ ಅವಕಾಶವಿದ್ದಿತು. ಆದರೆ ಸ್ವಯಂ ಅವರೇ ಅನಾದಿ ಹೇಳಿ, ಅವರ ಕರಕಮಲದಲ್ಲಿ ಉತ್ಪತ್ತಿಯಾದ ಶಿಶು ತಾವೆಂದು ಹೇಳಿಕೊಂಡಿರುವುದರಿಂದ ವ್ಯತಿರಿಕ್ತ ಊಹೆಗೆ ಅವಕಾಶವೇ ಇಲ್ಲ. ಸಿದ್ಧೇಶ್ವರ ಪುರಾಣದಲ್ಲಿ ಬರುವ ಕಥೆ ಈ ಗುರುಪರಂಪರೆಯ ವಾಸ್ತವತೆಯನ್ನು ಎತ್ತಿ ತೋರಿಸುತ್ತದೆ; ಸತ್ಯವೆಂದು ಸಾರಿ ಹೇಳುತ್ತದೆ. ಅಲ್ಲಿ ಯಾವ ಸಾಂಕೇತಿಕ ಅರ್ಥವೂ ಇರದೆ ೧೬ ತಲೆಮಾರಿನ ಗುರುಪರಂಪರೆಯ ನಿರೂಪಣವಿದೆ. ಈ ಮೊದಲಿನಂತೆ ತಲೆಗೆ ೨೫ ವರುಷಗಳೆಂದು ತಿಳಿದು ಲೆಕ್ಕಮಾಡಿದರೆ, ತೋಂಟದ ಸಿದ್ಧಲಿಂಗಶಿವಯೋಗಿಗಳಿಗಿಂತ ಸು. ೪೦೦ ವರುಷಗಳಷ್ಟು ಹಿಂದೆಯೇ ಇವರ ಗುರುಪರಂಪರೆ ಆರಂಭವಾಗಿರಬೇಕಷ್ಟೆ. ಹಿಂದೆ ವಿವೇಚಿಸಿದಂತೆ ಇವರು (ಕ್ರಿ. ಶ. ೧೪೦೦–೧೪೮೦) ಭುವಿಗೆ ಅವತರಿಸಿದ್ದರೆ ಇವರ ಪರಂಪರೆಯ ಆದಿಗುರು ಅನಾದಿ ಗಣೇಶ್ವರನು (ಕ್ರಿ. ಶ. ೧೦೦೦–೧೦೮೦)ರಲ್ಲಿ ಜೀವಿಸಿರಬೇಕು.

ಆ ಕಾಲದ ವೀರಶೈವದ ಇಲ್ಲವೆ ವೀರಶೈವಕ್ಕೆ ಪೂರ್ವಭಾವಿಯಾದ ಕಾಳಾಮುಖರ ಚರಿತ್ರೆಯನ್ನು ನೋಡಿದರೆ, ಸ್ಥಾವರಲಿಂಗವನ್ನು ಸ್ಥಾಪಿಸುವುದು, ಅಲ್ಲಿ ಗುಡಿಗಳನ್ನೂ ಮಠಗಳನ್ನೂ ಕಟ್ಟಿಸುವುದು, ಸಮಯಾಚಾರ್ಯರನ್ನು (ಸಾವಾಸಿಗಳನ್ನು) ನೆಲೆಗೊಳಿಸುವುದು ರೂಢವಾಗಿದ್ದಂತೆ ಕಂಡುಬರುವುದು. ಕ್ರಿ. ಶ. ೧೦೦೨ರಲ್ಲಿ ಕೆತ್ತಲ್ಪಟ್ಟ ಗದುಗಿನ ಒಂದು ಶಾಸನದಲ್ಲಿ "ಬೆಳ್ವಲ ನಾಡೊಳಗಣ ಅಗ್ರಹಾರ ಕರ್ದುಗಿನ ಸ್ವಯಂಭುದೇವರ ದೇಗುಲದ ಪೂಲಿಯ ಪಂಡಿತರ ವಿದ್ಯಾಶಿಷ್ಯರ್ ಕೋಪಿನ ವಖ್ಖಾಣ ಜೀಯರ ಶಿಷ್ಯರಪ್ಪ ವಖ್ಖಾಣಜೀಯರ್ಗೆ ಧಾರಾಪೂರ್ವಕಂ ವಿದ್ಯಾದಾನಮಾಗೆ" ದತ್ತಿಯನ್ನು ಬಿಟ್ಟ ಉಲ್ಲೇಖವಿದೆ. ಅದೇ ಊರ ಸ್ವಯಂಭೂ ತ್ರಿಕೂಟೇಶ್ವರ ದೇವಾಲಯಕ್ಕೆ ಸಂಬಂಧಪಟ್ಟ ಮಠದಲ್ಲಿ ಕ್ರಿಯಾಶಕ್ತಿ ಪಂಡಿತಾಚಾರ್ಯರೆಂಬ ಸಾವಾಸಿಗಳಿದ್ದರೆಂದೂ ಅವರ ಪಾದವನ್ನು ಕರ್ಚಿ ದತ್ತಿಯನ್ನು ಬಿಡಲಾಗಿದೆಯೆಂದೂ ಆ ದೇವಾಲಯದಲ್ಲಿರುವ ಕ್ರಿ. ಶ. ೧೧೦೨ರ ಶಾಸನದಿಂದ ತಿಳಿದುಬರುತ್ತದೆ.[೧] ಪುಲಿಗೆರೆಯ ಸೋಮನಾಥ ದೇವಾಲಯದಲ್ಲಿ ಸ್ಥಾನಾಚಾರ್ಯರಾದ ದೇವಸೋಮವೃತಿ, ಮಹೇಂದ್ರಸೋಮವೃತಿ, ಜ್ಞಾನಸೋಮವೃತಿ ಮೊದಲಾದವರಿದ್ದರೆಂದೂ ಅವರ ಕಾಲ್ಗರ್ಚಿ ದತ್ತಿಗಳನ್ನು ಬಿಡಲಾಗಿದೆಯೆಂದೂ ಲಕ್ಷ್ಮೇಶ್ವರದ ಶಾಸನಗಳಿಂದ ತಿಳಿದುಬರುತ್ತದೆ.[೨] ಇದರಿಂದ ಬಸವಣ್ಣನವರ ಪೂರ್ವದ ವೀರಶೈವ ಹಾಗೂ ಶೈವಧರ್ಮಗಳ ದೇವಾಲಯಗಳಲ್ಲಿ ಸಾವಾಸಿಗಳೂ ಸಮಯಾಚಾರಿಗಳೂ ಇರುತ್ತಿದ್ದರೆಂದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದರೆ ತೋಂಟದ

೧. Bombay Karnatak Inscriptions Vol. I Part Ins. No.

೨. Three Inscriptions of Puligere—Ep. Ins. Vol. XVI, pp. 48.

ಸಿದ್ಧಲಿಂಗ ಯತಿಗಳ ಗುರುಪರಂಪರೆಯ ಮೂಲಪುರುಷನು ಬಸವಣ್ಣನವರ ಪೂರ್ವದ ವೀರಶೈವಕ್ಕೆ ಸಂಬಂಧಪಟ್ಟವನೆಂದು ಅರ್ಥವಾಗುತ್ತದೆ. ಸಿದ್ಧಲಿಂಗ ಯತಿಗಳ ಜನನಕಾಲ ಕ್ರಿ. ಶ. ೧೪೦೦ ಎಂದು ಇಟ್ಟುಕೊಂಡರೆ, ಇವರಿಂದ ೧೬ ತಲೆಮಾರು ಹಿಂದಿನವರಾದ ಅನಾದಿ ಗಣನಾಥರು (ಕ್ರಿ. ಶ. ೧೪೦೦–೧೬ × ೨೫) ಕ್ರಿ. ಶ. ೧೦೦೦ರಲ್ಲಿ ಇದ್ದರೆಂದು ಊಹಿಸಬೇಕಾಗುತ್ತದೆ. ತೋಂಟದ ಸಿದ್ಧಲಿಂಗ ಯತಿಗಳು ಬಸವಾದಿ ಪ್ರಮಥರ ತತ್ತ್ವಗಳ ಸಾಕಾರಮೂರ್ತಿಯಂತಿದ್ದರೂ ಆ ಪ್ರಮಥರು ಎತ್ತಿಹಿಡಿದ ಷಟ್ಸ್ಥಲ, ಅಷ್ಟಾವರಣ ಮೊದಲಾದ ವೀರಶೈವ ತತ್ತ್ವಗಳೇ ಮಾನವರೂಪ ತಳೆದಂತಿದ್ದರೂ ಅವರ ಗುರು-ಪರಂಪರೆ ಬಸವಣ್ಣನವರಿಗಿಂತಲೂ ಒಂದು ಶತಮಾನದಷ್ಟು ಪುರಾತನವಾಗಿದೆ ಎಂಬುದು ಗಮನಾರ್ಹವಾಗಿದೆ. ಬಸವಾದಿ ಪ್ರಮಥರ ಪೂರ್ವದಲ್ಲಿ ವೀರಶೈವದ ಸ್ಥಿತಿಗತಿ ಹೇಗಿತ್ತೆಂಬುದನ್ನು ಅರಿತುಕೊಳ್ಳಲು ಹರದನಹಳ್ಳಿ, ಹೂಲಿ, ಪುಲಿಗೆರೆ, ಕೊಪಣನಗರ, ಸುತ್ತೂರು ಮೊದಲಾದ ಮಠಗಳಲ್ಲಿ ಕ್ರಿ. ಶ. ೧೦೦೦ದ ಸುಮಾರಿನಲ್ಲಿ ಪ್ರತಿಷ್ಠಾಪಿತವಾದ ದೇವಾಲಯಗಳ, ಅಲ್ಲಿ ನೆಲೆಗೊಳಿಸಲ್ಪಟ್ಟ ಸಮಯಾಚಾರ್ಯರ ಸಾವಾಸಿಗಳ ಚರಿತ್ರೆ ನಮಗೆ ಸಹಾಯಕವಾಗುತ್ತದೆ. ಅಲ್ಲಿಂದ ವೀರಶೈವ ಧರ್ಮವು ವಿಕಸನಹೊಂದುತ್ತ ತೋಂಟದ ಸಿದ್ಧಲಿಂಗ ಯತಿಗಳ ವ್ಯಕ್ತಿತ್ವದಲ್ಲಿ ಹೇಗೆ ಪರಿಪಕ್ವವಾಗಿ ಫಲಿಸಿತೆಂಬುದರ ಸಂಪೂರ್ಣ ಚಿತ್ರವನ್ನು ರೇಖಿಸಬಹುದಾಗಿದೆ. ಅಂತೂ ಹರದನ ಹಳ್ಳಿಯ ಅನಾದಿ ಗಣನಾಥ, ಪುಲಿಗೆರೆಯ ದೇವಸೋಮವ್ರತಿ, ಚಂದ್ರಗುಂಡದ ಶಿವಾಚಾರ್ಯ, ದೇವರ-ದಾಸಿಮಾರ್ಯ ಮೊದಲಾದವರ ಚರಿತ್ರಗಳಿಂದ ವೀರಶೈವದ ಪೂರ್ವೇತಿಹಾಸವನ್ನು ತಿಳಿಯಬಹುದಾಗಿದೆ.

ತೋಂಟದ ಸಿದ್ಧಲಿಂಗ ಯತಿಗಳು ಪ್ರಭುದೇವರ ಪರಂಪರೆಯ ವಿರಕ್ತರೆಂಬ ನಂಬಿಗೆ ರೂಢವಾಗಿದೆ. ನಿರಂಜನ 'ವಂಶರತ್ನಾಕರ' ಎಂಬ ಗ್ರಂಥದಲ್ಲಿ ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯನ್ನು ಪ್ರಭುದೇವರಿಂದಲೇ ಪ್ರಾರಂಭಿಸುತ್ತಾರೆ. ಮೇಲೆ ನಿರ್ದೇಶಿಸಿದ ಗುರುಪರಂಪರೆಗೆ "ನಿರಂಜನವಂಶರತ್ನಾಕರ"ವು ಪ್ರಭುದೇವರು, ಚೆನ್ನ-ಬಸವೇಶ್ವರ, ಸಿದ್ಧರಾಮೇಶ್ವರ ಎಂಬೀ ಮೂರು ಹೆಸರುಗಳನ್ನು ಜೋಡಿಸುತ್ತದೆ. ಆ ಗ್ರಂಥದನ್ವಯ ಅನಾದಿ ಗಣನಾಥರು ತೋಂಟದ ಸಿದ್ಧಲಿಂಗಶಿವಯೋಗಿಗಳ ಗುರು-ಪರಂಪರೆಯಲ್ಲಿ ನಾಲ್ಕನೆಯವರಾಗುತ್ತಾರೆ. ತೋಂಟದ ಸಿದ್ಧಲಿಂಗಶಿವಯೋಗಿಗಳ ಗುರುಪರಂಪರೆಯು ಪ್ರಭುದೇವರಿಂದಲೇ ಆರಂಭವಾಯಿತೆಂಬುದು 'ನಿರಂಜನವಂಶ-ರತ್ನಾಕರ'ದ ಅಭಿಮತ. ಪ್ರಭುದೇವರಿಂದ ಮೊದಲಾದ ಪರಂಪರೆ ಐತಿಹಾಸಿಕವಾಗಿ, ಅವಿಚ್ಛಿನ್ನವಾಗಿ ಅನಾದಿ ಗಣನಾಥರ ವರೆಗೆ ಬಂದು, ಅನಾದಿ ಗಣನಾಥರು ಸಿದ್ಧ-ರಾಮೇಶ್ವರದೇವರ ಕರಕಮಲಸಂಜಾತರಾಗಿದ್ದು, ಮುಂದೆ ಆ ಪರಂಪರೆ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವರೆಗೆ ಸಾಗಿಬಂದಿದ್ದರೆ, ಸಿದ್ಧಲಿಂಗಶಿವಯೋಗಿಗಳು ತಮ್ಮ ಆ ವಚನದಲ್ಲಿ ಗುರುಪರಂಪರೆಯನ್ನು ಅನಾದಿ ಗಣೇಶ್ವರನಿಂದ ಆರಂಭಿಸದೆ ನೇರವಾಗಿ ಪ್ರಭುದೇವರಿಂದಲೇ ಆರಂಭಿಸಬಹುದಾಗಿತ್ತು. ಗ್ರಂಥಕರ್ತರೇ ಹಾಗೆ ಮಾಡದಿರುವಾಗ

'ನಿರಂಜನವಂಶರತ್ನಾಕರ'ವು ಈ ಪರಂಪರೆಗೆ ಪ್ರಭುದೇವರ ಮೂಲವನ್ನು ಹೇಳಿರುವುದು ಆ ಗ್ರಂಥದ ಕರ್ತೃವಿನ ಊಹೆಯೆಂದೇ ತಿಳಿಯಬೇಕಾಗುತ್ತದೆ. ಆದರೆ 'ನಿರಂಜನ ಜಂಗಮ ವಂಶದರ್ಪಣ'ವು ಈ ವಿಷಯದಲ್ಲಿ ಖಚಿತವಾದ ಅಭಿಪ್ರಾಯವನ್ನು ಕೊಡುತ್ತದೆ. "ಅನಾದಿನಿರಂಜನ ಜಂಗಮವನ್ನು ಕುರಿತು ನೀನು ಚತುರ್ಯುಗಗಳಲ್ಲಿ ನಿರಂಜನ, ನಿರ್ಮಾಯ, ನಿಷ್ಕಲ, ಪ್ರಭು ನಾಮಗಳಿಂದ ಭೂಮಿಯನ್ನು ಸಲುಹಿದಿ, ಈಗ ಕರುಣದಿಂದ ಭೂಮಿಗೆ ಪೋಗಿ ಸಕಲ ಜನವನ್ನು ರಕ್ಷಿಸುವದು—ಎಂದು ಅಗಜಾರಮಣನು ಬಿನ್ನಪಂಗೈದನು. ಆ ನಿರಂಜನಜಂಗಮವು ಕರುಣದಿಂದಂಗೀಕರಿಸಿ ಭಕ್ತನ ಹೃದಯದಿಂದ ಪೊರಮಟ್ಟು ಎಂಟು ವರ್ಷದ ಶಿಶುರೂಪವನ್ನು ತಳೆದು ಭೂಮಿಗವತರಿಸಿದನು. ಭೂಮಿಯಲ್ಲಿ ಬಣಜಿಗರಿಂದ ನಿರ್ಮಿತವಾದ ವಾಣಿಜ್ಯಪುರವೆಂಬ ಪಟ್ಟಣದಲ್ಲಿರತಕ್ಕ ದಿವ್ಯಲಿಂಗೇಶನೆಂಬ ಲಿಂಗಮೂರ್ತಿಗೆ ಸಮಯಾಚಾರಕ್ಕೋಸ್ಕರ ಒಂದು ಮಠವನ್ನು ಕಟ್ಟಿಸಿ ಸದ್ಭಕ್ತರಾದ ಬಣಜಿಗರು ಅನಾದಿಗಣೇಶ್ವರನೆಂಬ ಚರಮೂರ್ತಿಯನ್ನು ನೆಲೆಗೊಳಿಸಿ ಪಾದೋದಕ ಪ್ರಸಾದವ ಸವಿಯುತಿರ್ಪರು. ಅನಾದಿಗಣನಾಥನಿಂದ ಆದಿಗಣನಾಥ, ಆತನಿಂದ ನಿರ್ಮಾಯ ಗಣವರ, ಆತನಿಂದ ಸ್ವಯಂಜ್ಯೋತಿರೂಪ, ಆತನಿಂದ ನಿರಂಜನಗಣನಾಥ, ಆತನಿಂದ ಜ್ಞಾನಾನಂದರು, ಆತನಿಂದ ಆತ್ಮಗಣನಾಥ, ಆತನಿಂದ ಅಧ್ಯಾತ್ಮಗಣನಾಥ, ಆತನಿಂದ ರುದ್ರದೇವರು, ಆತನಿಂದ ಬಸವಪ್ರಭುವೆಂಬ ಗಣವರ, ಆತನಿಂದ ಆದಿಲಿಂಗೇಶನು, ಆತನಿಂದ ಚೆನ್ನವೀರೇಶ್ವರನು, ಆತನಿಂದ ಗೋಸಯತೀಶ್ವರನು, ಆತನಿಂದ ಶಂಕರೇಶ್ವರನು, ಆತನಿಂದ ದಿವ್ಯಲಿಂಗೇಶನು, ಆತನ ಕರಕಮಲದಲ್ಲಿ ತೇಜೋಮೂರ್ತಿಯಾಗಿ ಶ್ರೀಗುರು ಚೆನ್ನಬಸವ ಮೂರ್ತಿಯು ಉದಯಿಸಿದನು. ಶಿಶುರೂಪದಿಂದ ಭೂಮಿಗವತರಿಸಿದ ನಿರಂಜನಜಂಗಮವು ಭೂಮಿಯ ಕ್ರಿಯಾಮಾರ್ಗಕ್ಕನುಸರಿಸಿ ವಾಣಿಜ್ಯಪುರದ ದಿವ್ಯಲಿಂಗಕ್ಕೆ ಕ್ರಿಯಾಮೂರ್ತಿಯಾದ ಶಿವಾನುಭವ ಚರವರ್ಯರಾದ ಚೆನ್ನಬಸವ ಸ್ವಾಮಿಗಳ ಸನ್ನಿಧಿಯ ಕರಕಮಲಸಂಜಾತರಾದರು.[೧]

ಈ ವಿವರಣೆಯಿಂದ ಕೆಳಗಣ ಅಂಶಗಳು ವಿದಿತವಾಗುತ್ತವೆ:

೧. ತೋಂಟದ ಸಿದ್ಧಲಿಂಗಯೋಗಿಗಳು ಅನಾದಿ ನಿರಂಜನಜಂಗಮದ ಅಪರಾವತಾರ. ಪ್ರಭುದೇವರೂ ಅದೇ ನಿರಂಜನ ಜಂಗಮ ಸ್ವರೂಪ. ಆದುದರಿಂದ ಪ್ರಭು ಮತ್ತು ಸಿದ್ಧಲಿಂಗಯೋಗಿಗಳು ಅನಾದಿ ನಿರಂಜನಜಂಗಮ ಸ್ವರೂಪಿಗಳು.

೨. ಅನಾದಿ ನಿರಂಜನ ಗಣೇಶ್ವರನು ಪ್ರಭುದೇವರಾಗಿ, ಮತ್ತೆ ಈ ಪ್ರಭುವಿನ ಅವತಾರವೇ ಭುವಿಯಲ್ಲಿ ಶಿಶುರೂಪ ಧಾರಣಮಾಡಿ ಬಂದಿದ್ದರೂ ಆತನಿಗೆ ಭೂಮಿಯ ಕ್ರಿಯಾಮಾರ್ಗಕ್ಕೆ ಒಬ್ಬ ಗುರು ಬೇಕೇ ಬೇಕಲ್ಲವೆ? ಅಂತಹ ಗುರುವೆ ಚೆನ್ನಬಸವೇಶ್ವರ.

---

೧. ನಿ. ಜ. ದ. ಪುಟ ೧೩.

ಆ ಗೋಸಲ ಚೆನ್ನಬಸವೇಶ್ವರರ ಗುರುಪರಂಪರೆ ಹರದನಹಳ್ಳಿಯ ಅನಾದಿ-ಗಣೇಶ್ವರನಿಂದ ಆರಂಭವಾಗುತ್ತದೆ. ಆದುದರಿಂದ ತೋಂಟದ ಸಿದ್ಧಲಿಂಗ ಶಿವಯೋಗಿ-ಗಳೂ ತಮ್ಮ ಗುರುಪರಂಪರೆಯನ್ನು ಅವರಿಂದ ಆರಂಭಿಸುತ್ತಾರೆ.

ಇದುವರೆಗಣ ವಿವೇಚನೆಯಿಂದ ಸಿದ್ಧಲಿಂಗ ಶಿವಯೋಗಿಗಳ ವಚನ, ಸಿದ್ಧೇಶ್ವರ ಪುರಾಣ, ನಿರಂಜನಜಂಗಮವಂಶದರ್ಪಣ ಮುಂತಾದ ಗ್ರಂಥಗಳಲ್ಲಿ ಉಕ್ತವಾಗಿರುವಂತೆ ತೋಂಟದ ಸಿದ್ಧಲಿಂಗಶಿವಯೋಗಿಗಳ ಭೂಲೋಕದ ಕ್ರಿಯಾಮಾರ್ಗದ ಗುರುಪರಂಪರೆ ಅನಾದಿಗಣೇಶ್ವರರಿಂದಲೇ ಆರಂಭವಾಗುತ್ತದೆ. ಅವರು ಪ್ರಭುದೇವರ ಅಪರಾವತಾರ ವೆಂಬುದು ಅವರಿರ್ವರು ಪಡೆದ ಜಂಗಮಸ್ಥಲದ ನಿಲವಿನ ದ್ಯೋತಕ.

ಈ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಗುರುಪರಂಪರೆಯ ವಿಷಯವಾಗಿ ನಿರಂಜನವಂಶರತ್ನಾಕರದಿಂದ ತಿಳಿದುಬರುವ ಸಂಗತಿಗಳನ್ನು ಕೆಳಗೆ ಸಂಗ್ರಹಿಸಲಾಗಿದೆ.

| | ಹೆಸರು: | ಸಂಚಾರ: | ಎಸಗಿದ ಕಾರ್ಯ: | ಸಮಾಧಿ: |
|---|---|---|---|---|
| ೧. | ಅನಾದಿಗಣನಾಥ | | ಜೈನವೈಷ್ಣವ ವಾದಿಗಳನ್ನು ಗೆದ್ದರು | ಕೊಂಕಣ ಸಮುದ್ರ ತೀರದ ಗೊಹೆ ಎಂಬ ಪಟ್ಟಣ |
| ೨. | ಆದಿಗಣೇಶ್ವರ | ಗುಹಾಪುರದಿಂದ ಶುಂಭುಲಿಂಗನ ಬೆಟ್ಟದ ವರೆಗೆ | ಷಟ್ಸ್ಥಲಜ್ಞಾನೋಪದೇಶ | ಶಂಭುಲಿಂಗನ ಬೆಟ್ಟದಲ್ಲಿಯ ಪ್ರಭು ಸ್ವಾಮಿ ಬೆಟ್ಟದಲ್ಲಿ |
| ೩. | ನಿರ್ಮಾಯಗಣೇಶ್ವರ | ಶಂಭುಲಿಂಗಬೆಟ್ಟ, ಮಲಯಾಳ, ಮಹದೇಶ್ವರಬೆಟ್ಟ | ಶೈವರನ್ನು ವೀರಶೈವರನ್ನಾಗಿ ಮಾಡಿದುದು | ಮಹದೇಶ್ವರ ಬೆಟ್ಟ |
| ೪. | ನಿರಂಜನ ಸ್ವಾಮಿಗಳು | ಪ್ರಭುಸ್ವಾಮಿಬೆಟ್ಟ, ಬಾಣಾಸುರ ಬೆಟ್ಟ, ನೆಲ್ಯಾಳಸೀಮೆ, ನೀಲಗಿರಿ, ಹಳೇಬೀಡು, ಕಲ್ಯಾಣ | ನೆಲ್ಯಾಳ ಸೀಮೆಯ ಅರಸನನ್ನು ವೀರಶೈವನನ್ನಾಗಿ ಮಾಡಿದರು. ಹಳೇಬೀಡಿನಲ್ಲಿ ವೀರಶೈವ ಕವಿಗಳಾದ ಹರಿಹರಾಚಾರ್ಯ, ರಾಘವಾಂಕಯ್ಯ, ಕೆರೆಯ ಪದ್ಮರಸ, ಸೋಸಲೆಯ ಭೈರವ ರಾಜ, ಒಕ್ಕಲೂರ ನುಲಿಯ ಕಲ್ಲಪ್ಪ—ಅವರಿಗೆ ದರ್ಶನವಿತ್ತು ಷಟ್ಸ್ಥಲ ಜ್ಞಾನೋಪದೇಶ ಮಾಡಿದರು | ಕಲ್ಯಾಣದ ತ್ರಿಪುರಾಂತಕ ಕೆರೆಯ ಸಮೀಪದ ರುದ್ರ ಮುನಿ ಸ್ವಾಮಿಗಳ ಮಠದಲ್ಲಿ. ಈ ಮಠವಿರುವ ಸ್ಥಳಕ್ಕೆ ಮರಿದೇವರಗುಡ್ಡ ಎನ್ನುವರು |

| | ಹೆಸರು: | ಸಂಚಾರ: | ಎಸಗಿದ ಕಾರ್ಯ: | ಸಮಾಧಿ: |
|---|---|---|---|---|
| ೫. | ಜ್ಞಾನಾನಂದಸ್ವಾಮಿ | ಕಲ್ಯಾಣ, ಶ್ರೀಶೈಲ | ಇವರ ಶಿಷ್ಯರಾದ ಕೋಲ ಶಾಂತಯ್ಯ, ಕುದುರೆ ಶಾಂತಯ್ಯ, ಪಂಚದ ಶಾಂತಯ್ಯಗಳು ಆಶೀರ್ವಾದ ಪಡೆದು ಪಂಪಾಕ್ಷೇತ್ರಕ್ಕೆ ಹೋದರು. ಶ್ರೀಗಳವರು ಕಲ್ಯಾಣದಲ್ಲಿ ಜೀರ್ಣವಾಗಿದ್ದ ಪ್ರಭುದೇವರ ಮಠವನ್ನು ಕಟ್ಟಿಸಿ, ಶೂನ್ಯಪೀಠವನ್ನು ಸ್ಥಾಪಿಸಿ, ಜಂಗಮಾರಾಧನೆ ದಾಸೋಹ ಮಾಡಿ ಪರವಾದಿಗಳನ್ನು ಗೆಲಿದರು | ಶ್ರೀಶೈಲ (ಇವರ ತೋರ ಗದ್ದುಗೆ ಇದ್ದ ಮಠಕ್ಕೆ ಪ್ರಭುದೇವರ ಮಠ ಎನ್ನುವರು) |
| ೬. | ಆತ್ಮಗಣವರ | | | |
| ೭. | ಅಧ್ಯಾತ್ಮಗಣನಾಥ | ಶ್ರೀಶೈಲ, ಚೋಳದೇಶ ಅರುಣಾಚಲ | ಚೋಳದೇಶದ ಜೈನರಿಗೆ ಲಿಂಗದೀಕ್ಷೆ. ಚಿದಂಬರ ಕ್ಷೇತ್ರದ ಭಕ್ತ-ಮಹೇಶ್ವರರಿಗೆ ಷಟ್ಸ್ಥಲ ಜ್ಞಾನೋಪದೇಶ | ಶ್ರೀಶೈಲದ ಕದಳೀವನ ತಿರುಣಾಮಲೆ (ಆ ಗವಿಗೆ ಕೆಂಗನಮ: ಶಿವಾಯರ ಗವಿ ಎನ್ನುವರು) |
| ೮. | ರುದ್ರಮುನಿಸ್ವಾಮಿ (ತಿಪ್ಪೆಯಲ್ಲಿ ಮಠ ಕಟ್ಟಿಸಿ ಯೋಗ ಸಮಾಧಿ ಮಾಡಿರುವುದರಿಂದ ತಿಪ್ಪೆ ರುದ್ರಸ್ವಾಮಿ) | ತಿರುಣಾಮಲೆ, ತೀರ್ಥಮಲೆ, ಪದಿನಾಡಸೀಮೆ, ಎಳಂದೂರು, ನಿಡುಗಲ್ಲು, ನಾಯಕನಹಟ್ಟಿ | ನಿಡುಗಲ್ಲಿನ ವಾಲ್ಮೀಕಿ ಕುಲದರಸನಿಗೆ ಉಪದೇಶ, ಪರಮತೀಯರ ಪರಾಭವ, ವೀರಶೈವೋಪದೇಶ | ನಾಯಕನಹಟ್ಟಿ |

| | ಹೆಸರು: | ಸಂಚಾರ: | ಎಸಗಿದ ಕಾರ್ಯ: | ಸಮಾಧಿ: |
|---|---|---|---|---|
| ೯. | ಬಸವಪ್ರಭುಸ್ವಾಮಿ (ನಿರ್ವಯಲಾಗುವಾಗ ಮಗಿಯ ಕುರುಹು ಇಟ್ಟು ದರಿಂದ ಮಗಿಪ್ರಭು) | ಕೆಳದಿದೇಶ, ಹಿರೇಸೂರು, ಕಿರೇ ಸೂರು, ಹುಕ್ಕೇರಿ ನಾಡು, ಹನ ಗಂಡಿ, ತೇರಿದಾಳ | ಹನಗಂಡಿಯ ಜೈನ ಅರಸನಿಗೆ ಲಿಂಗ ದೀಕ್ಷೆ. ಪರಮತೀಯರ ಪರಾಭವ, ವೀರಶೈವೋದ್ಧಾರ | ತೇರದಾಳ |
| ೧೦. | ಆದಿಲಿಂಗಸ್ವಾಮಿ | ಸೊಗಲ ಕ್ಷೇತ್ರ, ಮುರಗೋಡು, ಗೊಡಚಿ, ತೊರಗಲ್ಲು, ಕಲ್ಲೂರ ಬಳಿಯಲ್ಲಿರುವ ಗುಡ್ಡ | ವೀರಶೈವ ಪ್ರಚಾರ | ಕಲ್ಲೂರು |
| ೧೧. | ಚೆನ್ನವೀರಸ್ವಾಮಿ | ಮಲೆದೇಶ, ಸೊಗಲ, ಮುನಿಪಲ್ಲ | ಬಸವಪುರಾಣ ಪ್ರವಚನ | ಮುನಿಪಲ್ಲಿ |
| ೧೨. | ಗೋಸಲ ಸಿದ್ಧೇಶ್ವರ ಸಾಮಿ | ಹರದನಹಳ್ಳಿ, ಶಿವಗಂಗೆ, ತುಮುಕೂರು | ಹರದನಹಳ್ಳಿಯ ವಣಿಕರಿಂದ ಸನ್ಮಾನ. ೧೦೧ ವಿರಕ್ತರು ಇವರ ಕರಕಮಲ ಸಂಜಾತರು | ಸಿದ್ಧಗಂಗಾ ಬೆಟ್ಟ |
| ೧೩. | ಶಂಕರಾಚಾರ್ಯ ಸ್ವಾಮಿ | ಹರದನಹಳ್ಳಿ, ಪಂಪಾಕ್ಷೇತ್ರ, ಸಿದ್ಧಗಂಗಾ | ವಿಜಯನಗರದ ಪ್ರೌಢದೇವರಾಯ ನಿಗೂ ನೂರೊಂದು ವಿರಕ್ತರಿಗೂ ಷಟ್ಸ್ಥಲ ಜ್ಞಾನೋಪದೇಶ | ಪೆನುಗೊಂಡೆ ಸೀಮೆಯ ಕೊರಟ ಗೆರೆ ಸಮೀಪದ ಸಿದ್ಧರಬೆಟ್ಟ |
| ೧೪. | ದಿವ್ಯಲಿಂಗೇಶ್ವರ | ಹರದನಹಳ್ಳಿ, ತಲಕಾಡು, ಹರದನಹಳ್ಳಿ | ಪರಮತೀಯರ ಪರಾಜಯ | ಹರದನಹಳ್ಳಿ |
| ೧೫. | ಚೆನ್ನಬಸವ ರಾಜೇಂದ್ರ | ಹರದನಹಳ್ಳಿ, ಸಿದ್ಧಗಂಗಾಬೆಟ್ಟ, ಗುಬ್ಬಿ | ತೋಂಟದ ಸಿದ್ಧಲಿಂಗೇಶನಿಗೆ ನಿರಾಭಾರ–ವೀರಶೈವದೀಕ್ಷೆ ಇತ್ತರು. ಗುಬ್ಬಿಯ ಮಲ್ಲಣಾರ್ಯನಿಗೆ ಷಟ್ಸ್ಥಲ ಜ್ಞಾನೋಪದೇಶ | ಗುಬ್ಬಿ |

೧೬. ತೋಂಟದ ಸಿದ್ಧಲಿಂಗ ಶಿವಯೋಗಿಗಳು (ಇವರನ್ನು ಕುರಿತು ಮುಂದೆ ವಿಸ್ತಾರವಾಗಿ ವಿವರಿಸಲಾಗಿದೆ.)

ಈ ವಿವರಣೆಯಲ್ಲಿ ಗಮನಾರ್ಹವಾದ ಕೆಲವು ಅಂಶಗಳು ವ್ಯಕ್ತವಾಗಿವೆ;

೧. ಸಿದ್ಧಲಿಂಗೇಶ್ವರರ ಗುರುಪರಂಪರೆಯವರು ದಕ್ಷಿಣ ಭರತಖಂಡದ ಬಹು ಭಾಗದಲ್ಲಿ ಸಂಚರಿಸಿ ಅನೇಕ ರಾಜಮಹಾರಾಜರನ್ನೂ ಜೈನ, ಶೈವ, ವೈಷ್ಣವ ಮತಾನು-ಯಾಯಿಗಳನ್ನೂ ವೀರಶೈವಕ್ಕೆ ಪರಿವರ್ತಿಸಿರುವರು.

೨. ನಾಲ್ಕನೆಯವರಾದ ನಿರಂಜನ ಸ್ವಾಮಿಗಳು ಹಳೇಬೀಡಿಗೆ ಹೋಗಿ ವೀರ ಶೈವ ಕವಿಗಳಾದ ಹರಿಹರ, ರಾಘವಾಂಕಯ್ಯ, ಕೆರೆಯ ಪದ್ಮರಸ, ಸೋಸಲೆಯ ಭೈರವ ರಾಜ, ಒಕ್ಕಲೂರ ನುಲಿಯ ಕಲ್ಲಪ್ಪ (ಕಲ್ಲಪ?) ರನ್ನು ಕಂಡು ಅವರಿಗೆ ಷಟ್ಸ್ಥಲ ಜ್ಞಾನೋಪದೇಶವನ್ನು ಮಾಡಿರುವರು. ಇಲ್ಲಿ ಮತ್ತೆ ಎರಡು ಸಂಗತಿಗಳು ಮಹತ್ತ್ವ ವಾದುವು:

(ಅ) ಸೋಸಲೆಯ ಭೈರವರಾಜ, ಒಕ್ಕಲೂರ ನುಲಿಯ ಕಲ್ಲಪ ಎಂಬ ವೀರಶೈವ ಕವಿಗಳು ಹಳೇಬೀಡಿನಲ್ಲಿದ್ದು ಅವರು ಹರಿಹರ ರಾಘವಾಂಕರ ಸಮ ಕಾಲೀನರೆಂಬುದು; ಈ ವಿಷಯ ವಿಚಾರಿಸತಕ್ಕುದಾಗಿದೆ. ಈ ಹೆಸರಿನ ಕವಿಗಳು ಇದ್ದರೆ ಬರೆದ ಕೃತಿಗಳಾವುವು? ಅವರು ಹರಿಹರ ರಾಘವಾಂಕರ ಸಮಕಾಲೀನರಾಗಿರುವುದು ಸಾಧ್ಯವೆ? 'ನಿರಂಜನವಂಶ ರತ್ನಾಕರ'ದಲ್ಲಿ ಮಾತ್ರ ಈ ವಿಷಯ ಉಕ್ತವಾಗಿದೆ. ಈ ಗ್ರಂಥ ಇತ್ತೀಚಿನದಾದುದರಿಂದ ಇತರ ಆಧಾರಗಳು ದೊರೆಯುವ ವರೆಗೆ ಈ ಬಗೆಗೆ ನಿರ್ದಿಷ್ಟವಾಗಿ ಏನನ್ನು ಹೇಳಲೂ ಸಾಧ್ಯವಿಲ್ಲ.

(ಬ) ನಾಲ್ಕನೆಯವರಾದ ನಿರಂಜನ ಸ್ವಾಮಿಗಳು ಹರಿಹರ ರಾಘವಾಂಕರ ಸಮಕಾಲೀನರಾಗುತ್ತಾರೆ. ಗುರುಪರಂಪರೆಯ ಮೊದಲಿಗರಾದ ಅನಾದಿ ಗಣನಾಥರ ಕಾಲ ಕ್ರಿ. ಶ. ೧೦೮೦ರ ಸುಮಾರು ಎಂದು ನಾವು ಗ್ರಹಿಸಿ ದ್ದೇವೆ. ಅಲ್ಲಿಂದ ನಾಲ್ಕು ತಲೆಮಾರುಗಳು ಸಂದಬೇಕಾದರೆ ಒಂದು ನೂರು ವರುಷಗಳು ಸರಿಯುತ್ತವೆ. ಎಂದರೆ ನಿರಂಜನ ಸ್ವಾಮಿಗಳ ಕಾಲ ಕ್ರಿ. ಶ. ೧೧೮೦ ಎಂದಾಗುತ್ತದೆ. ಈ ಅವಧಿಯಲ್ಲಿ ಹರಿಹರ ರಾಘವಾಂಕರು ಜೀವಿಸಿದುದು ಸಂಭವನೀಯವಾಗಿದೆ.

೩. ತೋಂಟದ ಸಿದ್ಧಲಿಂಗ ಗುರುಪರಂಪರೆಯ ಆದಿಯ ಐವರಲ್ಲಿ ಮೊದಲಿ-ನಿಬ್ಬರು ಬಸವಣ್ಣನವರ ಪೂರ್ವದವರೆಂಬೂ ಮೂರನೆಯವರು ಅವರ ಸಮಕಾಲೀನ ರೆಂದೂ ನಾಲ್ಕು ಐದನೆಯವರು ಅವರಿಂದೀಚೆಯ ಹರಿಹರ ರಾಘವಾಂಕಾದಿಗಳ ಸಮ ಕಾಲೀನರೆಂದೂ ವಿದಿತವಾಗುತ್ತದೆ.

೪. ಒಂಬತ್ತನೆಯವರಾದ ಬಸವಪ್ರಭುಗಳು ಕರ್ನಾಟಕದ ಉತ್ತರ ಭಾಗದಲ್ಲಿ ವೀರಶೈವ ಧರ್ಮವನ್ನು ವಿಶೇಷವಾಗಿ ಪ್ರಚಾರಮಾಡಿರುವರು. ಅವರು ಹನಗುಂಡಿಯ ಜೈನ ಅರಸನಿಗೆ ವೀರಶೈವ ದೀಕ್ಷೆಯನ್ನಿತ್ತಿರುವರು. ಹುಕ್ಕೇರಿಯ ಭಾಗದಲ್ಲಿ ವೀರಶೈವ

ಧರ್ಮಪ್ರಸಾರವಾಗುವುದಕ್ಕೆ ಈ ಸ್ವಾಮಿಗಳ ಸಾನ್ನಿಧ್ಯ ಬಹುಮಟ್ಟಿಗೆ ಕಾರಣವಾಗಿದೆ. ಅಲ್ಲಿ ಇಂದಿಗೂ ಜೈನಮತೀಯರ ಸಂಖ್ಯೆ ಸಾಕಷ್ಟು ಗಣನೀಯವಾದ ಪ್ರಮಾಣದಲ್ಲಿರುವುದು, ಶ್ರೀಗಳವರು ಆ ಧರ್ಮದ ಕೆಲರನ್ನು ವೀರಶೈವಕ್ಕೆ ಪರಿವರ್ತಿಸಿದರೆಂಬುದರ ದ್ಯೋತಕವಾಗಿದೆ. ಈ ಬಸವಪ್ರಭು ಸ್ವಾಮಿಗಳು ಆ ಭಾಗದ ಕೆಲವು ಸಂಸ್ಥಾನಿಕರ ಮನೆತನಗಳಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಂತೆ ಕಾಣುತ್ತದೆ. ವಂಟಮುರಿ ಮುಂತಾದ ಸಂಸ್ಥಾನಗಳ ಒಡೆಯರಿಗೆ ತೇರದಾಳ ಪ್ರಭು ಸ್ವಾಮಿಗಳೇ ಕುಲದೈವತ. ತೇರದಾಳದಲ್ಲಿರುವ ಪ್ರಭುಸ್ವಾಮಿಗಳ ಗದ್ದುಗೆ ಇಂದಿಗೂ ಧಾರ್ಮಿಕದೃಷ್ಟಿಯಿಂದ ಅತ್ಯಂತ ಜಾಗ್ರತಸ್ಥಾನವಾಗಿದೆ.

೫. ಹನ್ನೆರಡನೆಯವರಾದ ಗೋಸಲ ಸಿದ್ಧೇಶ್ವರ ಸ್ವಾಮಿಗಳ ಕರಕಮಲ-ಸಂಜಾತರು ನೂರೊಂದು ವಿರತರೆಂದು ತಿಳಿದುಬರುತ್ತದೆ.

೬. ಹದಿಮೂರನೆಯವರಾದ ಶಂಕರಸ್ವಾಮಿಗಳು ಪ್ರೌಢದೇವರಾಯ ಹಾಗೂ ನೂರೊಂದು ವಿರಕ್ತರಿಗೆ ಷಟ್ಸ್ಥಲ ಉಪದೇಶ ಮಾಡಿರುವರು.

೭. ಹದಿನೈದನೆಯವರೂ ತೋಂಟದ ಸಿದ್ಧಲಿಂಗೇಶ್ವರರಿಗೆ ದೀಕ್ಷಾಗುರುಗಳೂ ಆದ ಗೋಸಲ ಚೆನ್ನಬಸವೇಶ್ವರ ಸ್ವಾಮಿಗಳು ಗುಬ್ಬಿಯ ಮಲ್ಲಣಾರ್ಯರಿಗೆ ಷಟ್ಸ್ಥಲ ಜ್ಞಾನೋಪದೇಶ ಮಾಡಿರುವರು. ಗುಬ್ಬಿಯ ಮಲ್ಲಣ್ಣನ (ಕ್ರಿ. ಶ. ೧೪೭೦) ಪ್ರಪೌತ್ರನಾದ ಶಾಂತೇಶನು ತನ್ನ ಸಿದ್ಧೇಶ್ವರ ಪುರಾಣದಲ್ಲಿ ಮಲ್ಲಣ್ಣನು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯನೆಂದು ಹೇಳಿರುವನು. ಆದುದರಿಂದ ಮಲ್ಲಣಾಚಾರ್ಯರೆಂದರೆ ವಾತುಲತಂತ್ರ ಟೀಕೆ ಮತ್ತು ಗಣಭಾಷಿತ ರತ್ನಮಾಲೆಗಳನ್ನು ರಚಿಸಿದ ಕವಿಯೆಂದು ಇಟ್ಟುಕೊಳ್ಳಬೇಕಲ್ಲದೆ ವೀರಶೈವಾಮೃತ ಪುರಾಣದ ಕರ್ತೃವೆಂದು ಗ್ರಹಿಸಲಾಗದು. 'ಕ್ಷೇತ್ರಜ್ಞಸುಮನೋವಾದ[೧]'ವೆಂಬ ಒಂದು ಗ್ರಂಥವನ್ನು ಷಟ್ಸ್ಥಲ ಸಾರ್ವಭೌಮ ಚೆನ್ನಬಸವ ಶಿವಯೋಗಿಗಳು ರಚಿಸಿರುವರೆಂದು ಆ ಗ್ರಂಥದಿಂದ ತಿಳಿದುಬರುತ್ತದೆ. ಅದರ ಕಾಲ ಕ್ರಿ. ಶ. ೧೩೫೩. ತೋಂಟದ ಸಿದ್ಧಲಿಂಗೇಶ್ವರ ಪೀಠಾಧಿಕಾರಿಗಳನ್ನು ಷಟ್ಸ್ಥಲ ಸಾರ್ವಭೌಮ, ಷಟ್ಸ್ಥಲ ಚಕ್ರವರ್ತಿ, ಜಗದ್ಗುರು ಎಂದು ಮುಂತಾಗಿ ಕರೆವುದುಂಟು. ಸಿದ್ಧಲಿಂಗೇಶ್ವರರ ಗುರುಗಳು ಗೋಸಲ ಚೆನ್ನಬಸವೇಶ್ವರರೆಂದೂ ಸ್ಪಷ್ಟವಿದೆ. ಇವರೇ ಕ್ಷೇತ್ರಜ್ಞಸುಮನೋವಾದದ ಕರ್ತೃಗಳೆಂದು ನಿರ್ಧರಿಸಬಹುದಾಗಿದೆ. ಇವರ ಕಾಲ ೧೩೫೩ ಎಂದಾದರೆ, ಕ್ರಿ. ಶ. ೧೪೦೦–೧೪೮೦ರ ವರೆಗಿದ್ದ ತೋಂಟದ ಸಿದ್ಧಲಿಂಗ ಶಿವಯೋಗಿಗಳಿಗೆ ಇವರು ದೀಕ್ಷಾಗುರುಗಳಾಗಿರುವುದು ಸಂಭವನೀಯವಾಗಿದೆ. ಕ್ಷೇತ್ರಜ್ಞ ಸುಮನೋವಾದದಲ್ಲಿ ಸರ್ವಶೂನ್ಯನಿರಾಲಂಬಸ್ಥಲ, ಶೂನ್ಯಲಿಂಗಸ್ಥಲ ಇವುಗಳಿಂದ ಸಿದ್ಧಾಂತನಿರೂಪಣೆ ಆರಂಭವಾಗುತ್ತದೆ. ಸಿದ್ಧೇಶ್ವರ ವಚನದಲ್ಲಿಯೂ ಈ ಕ್ರಮವೇ ಕಂಡುಬರುವುದರಿಂದ ಗುರುಶಿಷ್ಯರಿಬ್ಬರೂ ಈ ವಿಷಯದಲ್ಲಿ ಒಮ್ಮತದವರಾಗಿದ್ದರೆಂದು

೧. ಕ್ಷೇತ್ರಜ್ಞಸುಮನೋವಾದ: ಮುನ್ನುಡಿ ಪುಟ ೩೧.

ಕಂಡುಬರುತ್ತದೆ. ಈ ವಿವೇಚನೆಯಿಂದ ತೋಂಟದ ಸಿದ್ಧಲಿಂಗೇಶ್ವರ ಗುರುಪರಂಪರೆಯವರು ಐತಿಹಾಸಿಕ ವ್ಯಕ್ತಿಗಳೆಂದು ಸುಸ್ಪಷ್ಟವಾಗುತ್ತದೆ.

## ತೋಂಟದ ಸಿದ್ಧಲಿಂಗ ಶಿವಯೋಗಿಗಳ ಜೀವನಚರಿತ್ರೆ

ತೋಂಟದ ಸಿದ್ಧಲಿಂಗ ಶಿವಯೋಗಿಗಳ ಜೀವನಚರಿತ್ರೆಯನ್ನು ತಿಳಿದುಕೊಳ್ಳಲು ಸಹಾಯಕವಾಗುವ ಸಾಹಿತ್ಯದ ವಿವರ ಕೆಳಗಿನಂತಿದೆ:

| | ಗ್ರಂಥ: | ಕರ್ತೃ: | ಕಾಲ: |
|---|---|---|---|
| ೧. | ಸಿದ್ಧಲಿಂಗ ಶಿವಯೋಗೀಶ್ವರ ವಚನ | ವಿರಕ್ತ ತೋಂಟದಾರ್ಯ | ೧೫೬೦ |
| ೨. | ಶ್ರೀ ಸಿದ್ಧೇಶ್ವರ ಮಹಾಪುರಾಣ | ವಿರಕ್ತ ತೋಂಟದಾರ್ಯ | ೧೫೬೦ |
| ೩. | ಸಿದ್ಧಲಿಂಗೇಶ್ವರ ಸಾಂಗತ್ಯ | ಹೇರಂಬ[1] | ೧೬೦೦ |
| ೪. | ನಿರಂಜನವಂಶ ರತ್ನಾಕರ | | |
| ೫. | ಚೆನ್ನಬಸವ ಪುರಾಣ | ವಿರೂಪಾಕ್ಷ ಪಂಡಿತ | ೧೫೮೪ |
| ೬. | ಗುರುರಾಜ ಚಾರಿತ್ರ | ಸಿದ್ಧನಂಜೇಶ | ೧೬೫೦ |
| ೭. | ಸಿದ್ಧೇಶ್ವರ ಪುರಾಣ | ಶಾಂತೇಶಕವಿ | ೧೫೬೧ |
| ೮. | ಸಿದ್ಧೇಶ್ವರ ಮಹಾಪುರಾಣ | ವಿರಕ್ತ ತೋಂಟದಾರ್ಯರು | ೧೫೬೦ |
| ೯. | ತೋಂಟದಾರ್ಯರ ರಗಳೆ | | |
| ೧೦. | ನಿರಂಜನ ಜಂಗಮವಂಶದರ್ಪಣ | | |
| ೧೧. | ಎಡೆಯೂರ ಶಾಸನಗಳು | (E. C. Vol. I) | |
| ೧೨. | "ತೋಂಟದಾಸಿದ್ಧದೇಶಿಕನ ಭಾವರತ್ನಾಭರಣ"[2]—ಇತ್ಯಾದಿ. | | |

ಈ ಆಧಾರಸಾಹಿತ್ಯದಲ್ಲಿ ವಚನಗಳು ಮತ್ತು ಶಾಸನಗಳನ್ನು ಬಿಟ್ಟರೆ, ಮಿಕ್ಕ ಗ್ರಂಥಗಳು ಪುರಾಣಗಳೇ. ಈ ಪುರಾಣಗ್ರಂಥಗಳಲ್ಲಿ ಚೆನ್ನಬಸವ ಪುರಾಣ ಮತ್ತು ಗುರುರಾಜಚಾರಿತ್ರಗಳಲ್ಲಿ ಸಿದ್ಧಲಿಂಗಶಿವಯೋಗಿಗಳ ಚರಿತ್ರೆ ಸಂಕ್ಷೇಪವಾಗಿ ಬಂದರೆ, ಸಿದ್ಧಲಿಂಗ ಶಿವಯೋಗಿಗಳನ್ನೇ ಕುರಿತು ಬರೆದ ಮಿಕ್ಕ ಮೂರು ಪುರಾಣಗಳಲ್ಲಿ ಶಿವಯೋಗಿಗಳ ಜೀವನಕ್ಕೆ ಸಂಬಂಧಿಸಿದ ಐತಿಹಾಸಿಕ ಘಟನೆ, ಅವರ ವ್ಯಕ್ತಿತ್ವಕ್ಕಿಂತ ಅವರ ಬಗೆಗೆ ಹುಟ್ಟಿದ ಪವಾಡಗಳಿಗೇ ಹೆಚ್ಚಿನ ಪ್ರಾಶಸ್ತ್ಯವಿದೆ. ಆದುದರಿಂದ ಸಿದ್ಧಲಿಂಗ ಶಿವಯೋಗಿಗಳ ಸಮಗ್ರ ಜೀವನಚರಿತೆಯನ್ನು ರೂಪಿಸುವುದು ಕಠಿನ ಕಾರ್ಯವಾಗಿದೆ.

---

[1] ಈತನು ಬ್ರಾಹ್ಮಣಕವಿ. ಯಲಹಂಕವಂಶದ ಮುದ್ದುಕೃಷ್ಣೇಂದ್ರನಿಗಾಗಿ ಸಿದ್ಧಲಿಂಗೇಶ್ವರ ಸಾಂಗತ್ಯವನ್ನು ಭಕ್ತಿಯಿಂದ ರಚಿಸಿರುವನು.

[2] ಸಿದ್ಧನಂಜೇಶನು ಈ ಗ್ರಂಥವನ್ನು ಬರೆದ ಬಗ್ಗೆ ಉಲ್ಲೇಖವೊಂದು (ಗು. ಚಾ. ೧೬-೭೧ರಲ್ಲಿ) ಲಭಿಸುತ್ತದೆ. ಕೃತಿ ದೊರೆತಿಲ್ಲ.

ಮೇಗಣ ಗ್ರಂಥಗಳು ಹಾಗೂ ಶಾಸನಗಳ ಆಧಾರದಿಂದ ಅವರ ಜೀವನಚರಿತೆಯನ್ನು ಹೀಗೆ ರೇಖಿಸಬಹುದು.

## ಜನನ

ಸಾಮಾನ್ಯವಾಗಿ ವೀರಶೈವ ಶರಣರ ತಂದೆತಾಯಿಗಳ ಹೆಸರು ದೊರೆವುದೇ ದುರ್ಲಭ. ಶರಣರ ನೈಜ ಜೀವನ ಆರಂಭವಾಗುವುದು ಅವರಿಗೆ ದೀಕ್ಷೆಯಾದ ಮೇಲೆ; ಎಂದರೆ, ಪೂರ್ವಾಶ್ರಯ ನಿರಸನವಾದನಂತರ. ಕಾರಣ, ಶರಣರು ತಮ್ಮ ಜೀವನ ಚರಿತ್ರೆಯನ್ನು ಹೇಳುವ ಪ್ರಸಂಗಬಂದಲ್ಲಿ, ಇಲ್ಲವೆ ಬೇರೆಯವರು ಅವರ ಚರಿತ್ರೆಯನ್ನು ವಿವರಿಸುವುದಿದ್ದಲ್ಲಿ ಅವರ ಪೂರ್ವಾಶ್ರಯಕ್ಕೆ ಸಂಬಂಧಪಟ್ಟ ವಿಷಯಗಳನ್ನು ಹೇಳು ವುದಿಲ್ಲ. ಅವರ ಹೆತ್ತ ತಾಯಿತಂದೆಗಳು ಪೂರ್ವಾಶ್ರಯಕ್ಕೆ ಸಂಬಂಧಪಟ್ಟವರಾದುದ ರಿಂದ ಅವರ ಹೆಸರುಗಳನ್ನು ತಿಳಿಸುವ ಚರಿತ್ರೆಗಳು ವಿರಳ. ಅವರ ಗುರುಗಳ ಹೆಸರುಗಳು ಮಾತ್ರ ದೊರೆಯುತ್ತವೆ. ತನ್ನ ಕಾವ್ಯಗಳ ಆರಂಭದಲ್ಲಿ ಅನೇಕ ವಿಷಯಗಳನ್ನು ವಿವರಿಸಿದ ಷಡಕ್ಷರದೇವನು ಗುರುಪರಂಪರೆಯನ್ನು ವಿಶದವಾಗಿ ವರ್ಣಿಸಿರುವನಲ್ಲದೆ ತಂದೆತಾಯಿ ಗಳ ಮಾತನ್ನು ಆತನು ಎತ್ತುವುದೇ ಇಲ್ಲ. ಇದೇ ರೀತಿಯಾಗಿ ಚಾಮರಸ ಮೊದಲಾದ ಕವಿಗಳ ವಿಚಾರ. ಚಾಮರಸನು ತನ್ನ ಪ್ರಭುಲಿಂಗಲೀಲೆಯಲ್ಲಿ ತನ್ನ ಹೆಸರನ್ನು ಕೂಡ ಎಲ್ಲಿಯೂ ಹೇಳಿಕೊಂಡಿಲ್ಲ. ಇಷ್ಟು ವೈರಾಗ್ಯಸಂಪನ್ನರು ವೀರಶೈವ ಶರಣರು. ಈ ಸಾಮಾನ್ಯ ನಿಯಮಕ್ಕೆ ಅಪವಾದವಾಗಿಲ್ಲ ತೋಂಟದ ಸಿದ್ಧಲಿಂಗೇಶ್ವರರ ಚರಿತ್ರೆ.

ಸಿದ್ಧೇಶ್ವರ ಚರಿತ್ರೆಯನ್ನು ಬರೆದ ವೀರಶೈವ ಕವಿಗಳೆಲ್ಲರೂ ನಿರಂಜನ ಗಣೇಶ್ವರನು ೮ ವರುಷದ ಬಾಲಕನಾಗಿ ಗೋಸಲ ಚನ್ನಬಸವೇಶ್ವರದೇವರ ಸನ್ನಿಧಿಗೆ ಬಂದು ದೀಕ್ಷೆಯನ್ನು ಪಡೆದು ತೋಂಟದ ಸಿದ್ಧಲಿಂಗೇಶನೆಂಬ ಅಭಿಧಾನವನ್ನು ಹೊಂದಿದನೆಂದು ಹೇಳುವರು.

**ಕಾಮರಿಪು ತನ್ನ ಕೈಲಾಸದಿಂದಿಳಿದು ನೆಱೆ**
**ಭೂಮಿಗೆಯ್ತಂದೆಂಟು ಬರಿಸದ ಶಿಶುತ್ವಮಂ**
**ಪ್ರೇಮದಿಂದಳವಡಿಸಿಕೊಂಡು ತಳತಳಿಸಿ ಬೆಳಗುತ್ತ ಪುರವಂ ಪೊಕ್ಕನು**[೧] ॥

ಆ ನಿರಂಜನ ಜಂಗಮವು.........ಎಂಟು ವರ್ಷದ ಶಿಶುರೂಪವನ್ನು ತಳೆದು ಭೂಮಿಗವತರಿಸಿದನು.[೨]

ಈ ನಿರಂಜನ ಜಂಗಮವೆ ಎಂಟು ವರುಷದ ಶಿಶುರೂಪವಂ ತಾಳ್ದು......... ಬರುವ ಕಾಲದಿ.........ಅಂತರಿಕ್ಷದಿ ಜಯದುಂದುಭಿ ವಾದ್ಯಗಳಾದುವು.[೩]

---

[೧] ಸಿ. ಮ. ಪು. ಸಂ. ೨, ಪ. ೪.

[೨] ನಿ. ಜ. ದ. ಪು. ೧೩.

[೩] ನಿ. ವಂ. ರ. ಪು. ೩೬

ಪುರಾಣವನ್ನು ಬರೆಯ ಹೊರಟ ಕವಿಗಳೆಲ್ಲರೂ ತಮ್ಮ ಪುರಾಣನಾಯಕರ ಜನನದ ವಿಷಯವಾಗಿ ಅಲೌಕಿಕವಾದ ವಿಷಯಗಳನ್ನು ಹೇಳುವ ಸಂಪ್ರದಾಯ ಎಲ್ಲ ಮತಗಳಲ್ಲಿಯೂ ಉಂಟು. ವೀರಶೈವ ಕವಿಗಳೂ ತಮ್ಮ ಪುರಾಣನಾಯಕರು ಜನಿಸಿದೊಡನೆ ಕಣ್ದೆರೆಯದೆ, ಶಿವಲಿಂಗದರ್ಶನ ಶಿವಪ್ರಸಾದ ಸೇವನೆಯಾದೊಡನೆ ಕಣ್ದೆರೆದರೆಂದು ಹೇಳಿದುದುಂಟು.[೧] ಸಿದ್ಧೇಶ್ವರ ಪುರಾಣಕರ್ತರು ಕಥಾನಾಯಕನ ಜನನ ವೃತ್ತಾಂತವನ್ನೇ ಎತ್ತದೆ ಆತನು ಎಂಟು ವರ್ಷದ ಬಾಲಕನಾಗಿಯೇ ಭುವಿಗವತರಿಸಿರುವನೆಂದು ಹೇಳಿರುವರು. ಈ ಪುರಾಣಕರ್ತರು ವಾಸ್ತವತೆ, ಐತಿಹಾಸಿಕ ಘಟನೆಗಳಿಗಿಂತ ಭಕ್ತರ ಭಾವಿಕತೆಯ ಕಡೆಗೆ ಹೆಚ್ಚು ಲಕ್ಷ್ಯಗೊಡುತ್ತಿದ್ದಂತೆ ಕಾಣುತ್ತದೆ. ಐತಿಹಾಸಿಕ ದೃಷ್ಟಿಯಿಂದ ಸತ್ಯವಿರಲಿ, ಇಲ್ಲದಿರಲಿ ಭಕ್ತರ ನಂಬಿಗೆಯ ಆಧಾರದ ಮೇಲೆ ಇಂತಹ ಘಟನೆಗಳನ್ನು ಅವರು ವಿವರಿಸಿರುವರು. ಜನನದ ವಿಷಯವನ್ನೇ ಹೇಳಲಿಲ್ಲವೆಂದ ಮೇಲೆ ಅವರಿಗೆ ಜನನವಿತ್ತ ತಂದೆತಾಯಿಗಳ ಹೆಸರನ್ನು ಉಲ್ಲೇಖಿಸುವ ಪ್ರಸಂಗವೇ ಬಂದಿರುವುದಿಲ್ಲ. ಪೂರ್ವಾಶ್ರಯಕ್ಕೆ ಸಂಬಂಧಪಟ್ಟ ತಂದೆತಾಯಿ ಬಂಧುಬಳಗದವರು ಗುರುವಿನ ಕರಕಮಲ ಸಂಜಾತರಾದ ಈ ಶರಣರಿಗೆ ಆವ ದೃಷ್ಟಿಯಿಂದಲೂ ಸಂಬಂಧವಿಲ್ಲವೆಂಬುದನ್ನು ಈ ಕವಿಗಳು ಹೀಗೆ ತೋರಿಸಿಕೊಟ್ಟಿರುವರು. ಆದರೆ ವೀರಶೈವ ಸಂಪ್ರದಾಯಕ್ಕೆ ಸಂಬಂಧಪಡದ ಹೇರಂಬ ಕವಿಯು ಸಿದ್ಧಲಿಂಗೇಶ್ವರರ ತಂದೆ ತಾಯಿಗಳ ಹೆಸರುಗಳನ್ನೂ ಜನನವೃತ್ತಾಂತವನ್ನೂ ಹೀಗೆ ವಿವರಿಸುವನು: "ಹರದನ ಹಳ್ಳಿಯಲ್ಲಿ[೨] ಮಲ್ಲಿಕಾರ್ಜುನ ಮತ್ತು ಜ್ಞಾನಾಂಬೆ ಎಂಬ ದಂಪತಿಗಳಿದ್ದರು.[೩] ಮಕ್ಕಳಿಲ್ಲದುದರಿಂದ ಈ ದಂಪತಿಗಳು ಹರದನಹಳ್ಳಿಯ ಗೋಸಲ ಚನ್ನಬಸವೇಶ್ವರದೇವರ ಅಡಿದಾವರೆಗಳಲ್ಲಿ ತಮ್ಮ ಪ್ರಾರ್ಥನೆಯನ್ನು ನಿವೇದಿಸಿ ಅವರ ವರಪ್ರಸಾದದಿಂದ ಸಿದ್ಧಲಿಂಗೇಶ್ವರನೆಂಬ ಮಗನನ್ನು ಹಡೆದರು. ಮಗು ಬಾಲ್ಯದಲ್ಲಿ ಶಿವಧ್ಯಾನಾಸಕ್ತನಾಗಿ ಓದುಬರೆಹಗಳ ಕಡೆಗೆ ವಿಶೇಷ ಲಕ್ಷ್ಯ ಪೂರೈಸದಿದ್ದುದರಿಂದ ಉಪಾಧ್ಯಾಯರು ಆತನ ನಿಮಿತ್ತವಾಗಿ ಉಳಿದ ಮಕ್ಕಳು ಕೆಟ್ಟುಹೋಗುವರೆಂಬ ಭೀತಿಯಿಂದ ಅವನನ್ನು ತಂದು ತಂದೆತಾಯಿಗಳಿಗೆ ಒಪ್ಪಿಸಿದರು. ಮಗುವಿನ ಅಸದೃಶ ಶಕ್ತಿಯನ್ನು ಕಂಡು ಮಲ್ಲಿಕಾರ್ಜುನ ಜ್ಞಾನಾಂಬೆಯರು ಆತನನ್ನು ಗುರುಗಳಾದ ಗೋಸಲ ಚನ್ನಬಸವೇಶ್ವರರ ಸನ್ನಿಧಿಗೆ ಒಪ್ಪಿಸಿದರು."

ಈ ನಿರೂಪಣೆಯಲ್ಲಿ ಮುಖ್ಯವಾದ ಅಂಶಗಳೆಂದರೆ: ಸಿದ್ಧಲಿಂಗೇಶ್ವರರ ತಂದೆತಾಯಿಗಳ ಹೆಸರನ್ನು ಉಲ್ಲೇಖಿಸಿರುವುದು; ಆತನು ಹರದನಹಳ್ಳಿಯಲ್ಲಿ ಜನಿಸಿರುವುದು; ಗುರು ಗೋಸಲ ಚನ್ನಬಸವೇಶ್ವರರ ಸನ್ನಿಧಿಗೆಯ್ದಿರುವುದು. ವೀರಶೈವ ಕವಿಗಳು ಕೈಬಿಟ್ಟ ವಿಷಯವನ್ನು ಹೇರಂಬಕವಿ ಹೇಳಿ ನಮ್ಮ ಸಾಹಿತ್ಯಕ್ಕೆ ಮಹದುಪಕಾರ ಮಾಡಿದ್ದಾನೆ. ಹೇರಂಬಕವಿ ಕ್ರಿ. ಶ. ೧೫೬೦ರ ಸುಮಾರು ಜೀವಿಸಿರುವ ಸಂಭವವಿರುವುದರಿಂದ ಆತನಿಗೆ

---

[೧] ಬ. ಪ್ರ. ಸೋ. ಚಾ. ಸಿ. ಚಾ.

[೨] ಶಿ. ಸಾಂ. ಸಂ. ೩, ಪ. ೫೨. [೩] ಶಿ. ಸಾಂ. ಸಂ. ೪, ಪ. ೫.

ಸಿದ್ಧಲಿಂಗೇಶ್ವರರ ತಂದೆತಾಯಿಗಳ ವೃತ್ತಾಂತವು ಜನರ ಬಾಯಿಯಿಂದ ತಿಳಿದುಬಂದಿರುವ ಸಂಭವವಿದೆ. ವೀರಶೈವ ಕವಿಗಳಿಗೆ ಆ ವಿಷಯ ತಿಳಿದಿರಬಹುದಾಗಿದ್ದರೂ ಅವರು ತಮ್ಮ ಸಂಪ್ರದಾಯಕ್ಕನುಗುಣವಾಗಿ ಅದಕ್ಕೆ ಮಹತ್ವವನ್ನು ಕೊಟ್ಟಂತಿಲ್ಲ.

ತೋಂಟದ ಸಿದ್ಧಲಿಂಗಶಿವಯೋಗಿಗಳು ಗೋಸಲ ಚನ್ನಬಸವೇಶ್ವರರಿಂದ ದೀಕ್ಷೆಯನ್ನು ಪಡೆದು ಅನನ್ಯಭಕ್ತಿಯಿಂದ ಅವರ ಸೇವೆ ಮಾಡುವರು. ಆತನಲ್ಲಿರುವ ಅಸಾಧಾರಣವಾದ ಚಿತ್ಕಳೆಯನ್ನು ಗುರುತಿಸಿದ ಶ್ರೀಗುರು ಆತನಿಗೆ ತನ್ನ ಪಟ್ಟಾಧಿಕಾರವನ್ನು ವಹಿಸಿಕೊಡುವನು. ಶ್ರೀ ಸಿದ್ಧಲಿಂಗಶಿವಯೋಗಿಗಳು ಅನೇಕ ಚರಮೂರ್ತಿಗಳನ್ನು ಕೂಡಿಕೊಂಡು ದೇಶಸಂಚಾರಕ್ಕೆ ಹೊರಡುವರು. ಸೌರಾಷ್ಟ್ರ, ಶ್ರೀಶೈಲ, ಕೊಲ್ಲಿಪಾಕಿ, ಕೇದಾರ, ದ್ರಾಕ್ಷಾರಾಮ, ಗೋಕರ್ಣ, ಹಂಪೆ, ಶಿವಗಂಗೆ, ರಾಮೇಶ್ವರ, ಪೊನ್ನಾಂಬಲ, ಕಾಳಹಸ್ತಿ, ಕಂಚಿ, ಚಿದಂಬರ ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸಿ ಅರುಣಾಚಲಕ್ಕೆ ಐತರುವರು. ಅಲ್ಲಿಯ ಶಿವಾರ್ಚಕರಿಂದ ರತ್ನಹಾರದ ಕಾಣ್ಕೆಗಳನ್ನು ಸ್ವೀಕರಿಸುವರು. ಈ ಸಂಚಾರದಲ್ಲಿ ಶಿವಯೋಗಿಗಳು ಅನೇಕ ಪವಾಡಗಳನ್ನು ಮೆರೆಯುತ್ತ ಮೈಸೂರು ಪ್ರಾಂತದ ಸಿದ್ಧಗಂಗಾ ಕ್ಷೇತ್ರಕ್ಕೆ ಹೋಗುತ್ತಾರೆ. ಅಲ್ಲಿಂದ ಕಗ್ಗೆರೆಗೆ ಅಭಿಮುಖರಾಗಲು ಆ ಊರ ನಂಬೆಣ್ಣನೆಂಬ ಭಕ್ತ, ಗಿರಿಗೌಡನೆಂಬ ಆ ಊರ ಗೌಡ ಮೊದಲಾದವರು ಸಿದ್ಧಲಿಂಗಯತಿವರರನ್ನು ಆಗ್ರಹಪೂರ್ವಕವಾಗಿ ಕಗ್ಗೆರೆಗೆ ಕರೆದುಕೊಂಡುಹೋಗುವ ಸಮಯದಲ್ಲಿ, ಊರ ನೆರೆಯ ಉಪವನದಲ್ಲಿಯೇ ಒಂದು ಮಾಮರದ ಕೆಳಗೆ ಗದ್ದುಗೆಯನ್ನು ಹಾಕಿ ಅವರನ್ನು ಕುಳ್ಳಿರಿಸುವರು. ಅಷ್ಟರಲ್ಲಿ ಕೆಂಚ, ರೊಡ್ಡ ಎಂಬ ಶಬರರು[1] ಕಗ್ಗೆರೆಯ ಮೇಲೆ ಭೀಕರವಾದ ಧಾಳಿ ಮಾಡುವರು. ಜನರೆಲ್ಲ ಅಲ್ಲಿಂದ ಚದರಿಹೋಗಿ ನಿಡುಗಲ್ಲರಸರ ಸಹಾಯವನ್ನು ಪಡೆಯುವರು. ನಂಬೆಣ್ಣ ಮೊದಲಾದವರ ಭಕ್ತಿಯ ಔತಣವನ್ನು ಸ್ವೀಕರಿಸಿದ ಸಿದ್ಧಲಿಂಗಶಿವಯೋಗಿಗಳು ಆ ಮಾಮರದಡಿಯಲ್ಲಿಯೇ ಶಿವಯೋಗ ನಿದ್ರಾಮುದ್ರಿತರಾಗುವರು. ಹೀಗೆ ಆರು ತಿಂಗಳ ವರೆಗೆ ಶಿವಯೋಗಾನುಷ್ಠಾನದಲ್ಲಿರುತ್ತಿರಲು ಅವರ ದೇಹದ ಸುತ್ತು ಹುತ್ತು ಬೆಳೆಯಿತಂತೆ. ಆರು ತಿಂಗಳು ಕಳೆದ ಮೇಲೆ ಕಗ್ಗೆರೆಯ ಗೌಡರು ಶಬರಾಧಿನಾಥನ ನಂಬುಗೆ ಪಡೆದು ಪುನಃ ಕಗ್ಗೆರೆಯನ್ನು ಕಟ್ಟಿಸಿ ನಂಬೆಣ್ಣ ಮೊದಲಾದ ಭಕ್ತರನ್ನು ಅಲ್ಲಿಗೆ ಕರೆಸುವರು. ಭಕ್ತ ಜನರೆಲ್ಲರೂ ಅಲ್ಲಿಗೆ ಬಂದು ಹುತ್ತಿನಲ್ಲಿ ಕುಳಿತಿದ್ದ ಶಿವಯೋಗಿಗಳನ್ನು ಕಂಡು ಅವರಲ್ಲಿ ಪ್ರಾರ್ಥಿಸುವರು. ಅವರ ಭಕ್ತಿಯನ್ನು ಸ್ವೀಕರಿಸಬೇಕೆಂದು ಎಚ್ಚತ್ತು ಕಗ್ಗೆರೆಯನ್ನು ಪ್ರವೇಶಿಸುವರು.[3] ಆರು

---

[1] ವಾಲ್ಮೀಕಿ ಕುಲದರಸನಾದ ರತ್ನಗಿರಿಯ ದೊರೆಯು—ನಿ. ವ. ರತ್ನಾಕರ ಪು. ೪೬.

[2] ಸಿದ್ಧೇಶ್ವರ ಮಹಾಪುರಾಣ ಸಂ. ೯, ಪ. ೧—೩೫

[3] "............................ ಸಿದ್ಧೇಶನಾಮವನಾಂತು ಕಗ್ಗೆರೆಯ ತೋಂಟಕೈದಿ"
ಇರದೆ ನಂಬ್ಯಣ್ಣನೆಂಬಾತನತಿಭಕ್ತಿಯಿಂ ।
ಶರಣೆಂದು ಭಿಕ್ಷಕ್ಕೆ ಬಿನ್ನವಿಸಿಕೊಂಡೀಗ ।
ತಿರುಗಿಬಂದಾನೆ ಕರೆಕೊಂಡು ಪೋದಪೆನೆಂದು ಕಗ್ಗೆರೆಗೆ ಪೋಗಲಾಗ ॥

ತಿಂಗಳ ಮೇಲೆ ಕಗ್ಗೆರೆಯ ಜನರು ಮರಳಿ ಬಂದರೆಂದೂ ಅಲ್ಲಿಯ ವರೆಗೆ ಶಿವಯೋಗಿಗಳು ಹುತ್ತಿನಲ್ಲಿದ್ದರೆಂದೂ ಸಿದ್ಧೇಶ್ವರ ಪುರಾಣ (ಸಂ. ೯, ಪ, ೪೭), ನಿರಂಜನಜಂಗಮ ವಂಶದರ್ಪಣ (ಪು. ೧೪), ತೋಂಟದಾರ್ಯ ರಗಳೆ (ಪು. ೨)ಗಳು ಹೇಳಿದರೆ ನಿರಂಜನ ವಂಶರತ್ನಾಕರ (ಪು. ೫೦) ಮತ್ತು ಸಿದ್ಧಲಿಂಗೇಶ್ವರ ಸಾಂಗತ್ಯ (ಸಂ. ೨೪–೮೬)ಗಳಲ್ಲಿ ಈ ಅವಧಿ ೧೨ ವರುಷವೆಂದು ಉಕ್ತವಾಗಿದೆ. ಊರು ಬಿಟ್ಟು ಹೋಗಿ ೧೨ ವರುಷ ಬೇರೆ ಕಡೆಗಿದ್ದು ಪುನಃ ಮತ್ತೆ ಆ ಊರ ಜನರು ಅಲ್ಲಿಗೆ ಬಂದು ನೆಲಸಿದರೆಂದು ಹೇಳುವುದು ಅಷ್ಟೊಂದು ಸಮಂಜಸವೆಂದು ತೋರುವುದಿಲ್ಲ. ಇಷ್ಟು ದೀರ್ಘಕಾಲ ಬೇರೆ ಕಡೆಯಲ್ಲಿ ಬಾಳಿದವರು ಅಲ್ಲಿಯೇ ನೆಲೆಯೂರುವುದು ಹೆಚ್ಚು ಸ್ವಾಭಾವಿಕವಾಗಿದೆ. ಬೇಡರ ದಾಳಿ ಮುಗಿಡ ಮೇಲೆ ೪–೬ ತಿಂಗಳಲ್ಲಿ ಅವರು ಮರಳಿ ಬಂದಿರುವರೆಂಬುದು ಹೆಚ್ಚು ಸಮಂಜಸವಾದುದು.

ಭಕ್ತರ ಪ್ರಾರ್ಥನೆಯ ಮೇರೆಗೆ ಶಿವಯೋಗನಿದ್ರೆಯಿಂದೆಚ್ಚತ್ತ ಸಿದ್ಧಲಿಂಗಶಿವಯೋಗಿಗಳನ್ನು ಏಳುನೂರು ವಿರತರೇ ಮೊದಲಾದವರೊಡಗೂಡಿ ಕಗ್ಗೆರೆಯಲ್ಲಿ ಮೆರವಣಿಗೆ ಮಾಡಿಸುವರು.[೧] ಬಳಿಕ ಏಳುನೂರು ವಿರತರು ಹಾಗೂ ಮೂರು ಸಾವಿರ ಚರಮೂರ್ತಿಗಳೊಡನೆ ನಾಡಿನಲ್ಲಿ ಸಂಚರಿಸಿ ಶಿವಯೋಗೀಶ್ವರರು ಜನತೆಗೆ ತತ್ತ್ವೋಪದೇಶಮಾಡುವರು. ಜೈನ, ವೈಷ್ಣವ, ಶೈವ ಮೊದಲಾದ ಧರ್ಮದವರನ್ನು ವಾದದಲ್ಲಿ ಜಯಿಸಿ ವೀರಶೈವಮತ ಧರ್ಮತತ್ತ್ವಗಳಲ್ಲಿ ಅದ್ಭುತವಾದ ಕ್ರಾಂತಿಯನ್ನು ಉಂಟು ಮಾಡುವರು.

ಎಂಟು ಜಡೆಯ ಗೋತ್ರದ ಪಟ್ಟದ ಚಿಟ್ಟಿಗದೇವರೆಂಬವರು ಸಿದ್ಧಲಿಂಗಶಿವಯೋಗಿಗಳ ಶಿಷ್ಯರಲ್ಲೊಬ್ಬರು. ಈ ದೇವರ ಶಿಷ್ಯರಲ್ಲೊಬ್ಬರಾದ ಚೆನ್ನವೀರಪ್ಪ ಒಡೆಯರು, ಸಿದ್ಧಲಿಂಗೇಶ್ವರರ ಪಾದಪದ್ಮಾರಾಧಕರಾಗಿದ್ದು ಅವರಿಗೊಂದು ಮಠವನ್ನು ಕಟ್ಟಿಸಬೇಕೆಂದು ತಮ್ಮ ಭಕ್ತಿಯನ್ನು ಗುರು ಚಿಟ್ಟಿಗದೇವರಿಗೆ ಅರ್ಪಿಸುವರು. ಚಿಟ್ಟಿಗದೇವರು ಅವರ ಅಭಿಮತದಂತೆ ಎಡೆಯೂರಲ್ಲಿ ಸಿದ್ಧಲಿಂಗಶಿವಯೋಗಿಗಳಿಗಾಗಿ ಒಂದು ಕಲ್ಲುಮಠವನ್ನು ಕಟ್ಟಿಸುವರು. ಶಿವಯೋಗಿಗಳು ಬೋಳಬಸವೇಶ್ವರರಿಗೆ ತಮ್ಮ

---

[೧] ಕಗ್ಗೆರೆಯಲ್ಲಿ ತೋಂಟದ ಸಿದ್ಧಲಿಂಗಶಿವಯೋಗಿಗಳು ತಪವನಾಚರಿಸಿದ ಸ್ಥಲವನ್ನು ಜನರು ಇಂದಿಗೂ ತೋರಿಸುತ್ತಾರೆ.

---

ಜಗಳದಿಂದೂರೊಡೆದು ಪೋಗಿ ಕೆಲದಿವಸಕ್ಕೆ
ಮಗುಳೆ ಬರ್ಪನ್ನೆಗಂ ತೋಂಟದೊಳಗೇನುವಂ
ಬಗೆಯದೆ ಶಿವಧ್ಯಾನದಿಂದೆ ಪರವಶವನ್ನೈದಿರೆ ಗೆದಲೆ ಹುತ್ತವಿಕ್ಕೆ ॥
ಜಗವೆಲ್ಲವತಿಚೋದ್ಯದಿಂ ನೋಡಿ ಹುತ್ತವಂ
ಬಗಿದು ಕಂಡಾಗ ತೋಂಟದ ಸಿದ್ಧಲಿಂಗನೆಂ-
ದಗಣಿತ ಮಹಾಪುರುಷನೆಂದು ಪೂಜಿಸುವರೆಲೆ ರಮೇಶ ಕೇಳೆಂದನು ॥

—ಚೆ. ಬ. ಪು. ೬೩—೪೫

ನಿರಂಜನ ಪಟ್ಟವನ್ನು ಕಟ್ಟಿ, ಸಪ್ಪೆದೇವರು, ಉಪ್ಪಿನಹಳ್ಳಿಯ ಸ್ವಾಮಿ, ಗುಮ್ಮಳಾ-ಪುರದ ಸಿದ್ಧಲಿಂಗದೇವರು, ಶೀಲವಂತದೇವರು, ಬೋಳಬಸವಾರ್ಯರೇ ಮೊದಲಾದವರಿಗೆ ಮೋಕ್ಷಮಾರ್ಗವನ್ನರುಹಿ, ಎಡೆಯೂರ ಕಲ್ಲುಮಠದಲ್ಲಿ ನಿರ್ವಿಕಲ್ಪ ಸಮಾಧಿಯನ್ನು ಹೊಂದುವರು.[೧] ಎಡೆಯೂರು ಅಂದಿನಿಂದ ಸುಕ್ಷೇತ್ರವಾಗಿ ಲಕ್ಷೋಪಲಕ್ಷ ಭಕ್ತರ ಕಣ್ಮನಗಳನ್ನು ತನ್ನತ್ತ ವರುಷವರುಷ ಸೆಳೆದುಕೊಳ್ಳುತ್ತಲಿದೆ.

ಸಿದ್ಧಲಿಂಗಶಿವಯೋಗಿಗಳ ವಿಷಯವಾಗಿ ತಿಳಿದುಬರುವ ಐತಿಹಾಸಿಕ ಸಂಗತಿಗಳು ಇಷ್ಟು ಮಾತ್ರ. ಆದರೆ, ಮೇಲೆ ನಿರ್ದೇಶಿಸಿದ ಪುರಾಣಗಳಲ್ಲಿ ಸಿದ್ಧಲಿಂಗಶಿವಯೋಗಿಗಳ ಪವಾಡಗಳ ವಿಪುಲವಾದ ವರ್ಣನೆಯಿದೆ. ಆ ಪವಾಡಗಳಿಗೆ ಐತಿಹಾಸಿಕ ಮಹತ್ತ್ವವಿರದಿದ್ದರೂ ಜನತೆಯ ಮನದಲ್ಲಿ ಆ ಮಹಾನುಭಾವರ ಬಗೆಗಿದ್ದ ಅಸಾಧಾರಣ ಕಲ್ಪನೆಯನ್ನೂ, ಭಕ್ತಿಭಾವವನ್ನೂ ಅವು ವ್ಯಕ್ತಮಾಡುತ್ತವೆ. ಆದುದರಿಂದ ಆ ಮಹಿಮೆಗಳನ್ನಿಲ್ಲಿ ಸಂಗ್ರಹಿಸಲಾಗಿದೆ.

---

[೧] E. C. Vol. I., ಕುಣಿಗಲ್ ತಾಲೂಕ ೪೯ನೆಯ ಶಾಸನ.

## ಪುರಾಣ, ಸಾಂಗತ್ಯ ಮತ್ತು ರಗಳೆ

| ಪವಾಡಗಳು: | ಸ್ಥಳಗಳು: |
|---|---|
| ೧. ಮಹಾಬಳೇಶ್ವರಲಿಂಗದ ತಲೆಯಿಂದ ಜಲಪ್ರವಾಹ | ಮಹಾಬಳೇಶ್ವರ |
| ೨. ಹುತ್ತಿನಲ್ಲಿ ಯೋಗಸಮಾಧಿ | ಕಗ್ಗೆರೆ |
| ೩. ಸಹಸ್ರದಳದ ಬೆಟ್ಟದಾವರೆಯ ಶಿವಾರ್ಪಣೆ | ಚಿತ್ರಕಾಯಪುರ |
| ೪. ಶಿಲಾವೃಷಭನಿಗೆ ಪ್ರಸಾದ ತಿನಿಸಿದುದು | ಹೆಬ್ಬೂರು |
| ೫. ಭಸ್ಮಗಟ್ಟಿಯನ್ನು ಲಿಂಗಮಾಡಿ ವೈಷ್ಣವನಿಗೆ ಕೊಟ್ಟುದು | ತುಮಕೂರು |
| ೬. ಹುಟ್ಟುಗುರುಡನಿಗೆ ನೇತ್ರದಾನ | |
| ೭. ಒಂದು ಮಡಿಕೆ ಅನ್ನ ೫೦೦ ಜಂಗಮರಿಗೆ ಆಹಾರ | ದೇವರಾಯಪಟ್ಟಣ |
| ೮. ಮಾಯಿದೇವಿ ವಿಗ್ರಹದಿಂದ ಸೇವೆ | ಹೊಳಲಗುಂದ |
| ೯. ನಾಗಿಣಿ ನದಿ ದಾರಿಕೊಟ್ಟುದು | |
| ೧೦. ಸಿಡಿಲಿನಿಂದ ಪಾದಪೂಜೆ | ಎಡೆಯೂರು |

## ಪುರಾಣ ಮತ್ತು ರಗಳೆ

| | |
|---|---|
| ೧. ಕುಂಬಳೇಶ ಲಿಂಗದಿಂದ ಸನ್ಮಾನ | ಕುಂಬಳೇಶ್ವರ |
| ೨. ಜನಾರ್ದನಜೀಯ ವೈಷ್ಣವನನ್ನು ಗೆದ್ದುದು | ಉಳಿವೆ |
| ೩. ಜೈನರನ್ನು ಗೆದ್ದುದು | ಕಾರ್ಕಳ |
| ೪. ಮಲ್ಲಿನಾಥಲಿಂಗದಿಂದ ಸೇವೆ | ಗಾಳಿಪೂಜೆ ಬೆಟ್ಟ |
| ೫. ಪಾದಕಚ್ಚಿ ಮೃತವಾದ ಸರ್ಪಕ್ಕೆ ಜೀವದಾನ | |
| ೬. ಪಿಶಾಚಿಗಳಾದ ಗಂಧರ್ವರ ಶಾಪವಿಮೋಚನೆ | ಕಗ್ಗೆರೆ |

| ಪವಾಡಗಳು: | ಸ್ಥಳಗಳು: |
|---|---|
| ೭. ಅಕಾಲದಲ್ಲಿ ನೇರಲಹಣ್ಣು ಪಡೆದುದು | ಹೇರೂರು |
| ೮. ಶಬರ ಶಕಂರನಿಂದ ಸತ್ವಪರೀಕ್ಷೆ | ವ್ಯಾಘ್ರಪುರ |
| ೯. ಪಟ್ಟಣಕ್ಕೆ ವ್ಯಾಪಿಸಿದ ರೋಗಪರಿಹಾರ | ವ್ಯಾಘ್ರಪುರ |
| ೧೦. ಸಹಗಮನಕ್ಕೆ ಸಿದ್ಧಳಾದ ಸತಿಯು ಮಾಂಗಲ್ಯ ಭಾಗ್ಯ | ವ್ಯಾಘ್ರಪುರ |
| ೧೧. ಬೇಸಿಗೆಯಲ್ಲಿ ಕಬ್ಬಿನ ತೋಟಕ್ಕೆ ಜಲಸಮೃದ್ಧಿ | ಹೆಬ್ಬೂರು |
| ೧೨. ಕದ್ದ ಬದನೇಕಾಯಿ ಕುದಿಯದಿರುವುದು | ವೃಷಭಪುರ |
| ೧೩. ತಳಿಗೆ ಕೊಡದ ಭಕ್ತನ ತಳಿಗೆ ಮಾಯ | ವೃಷಭಪುರ |
| ೧೪. ತುಂಬಿ ಹೂವಿನ ಮಳೆ | ತುಮಕೂರಿನ ಹಲಗೆಸೆಟ್ಟಿಯ |
| ೧೫. ಸಿದ್ಧಲಿಂಗನ ಆಣೆಯಿಟ್ಟು ಬಾಲೆಯೊಬ್ಬಳು ತೇಲಿಹೋದ ಕೊಡವನ್ನು ಪಡೆದುದು | ತುಮಕೂರ [ಮನೆಯಲ್ಲಿ |
| ೧೬. ಸತ್ತ ಎಮ್ಮೆಗೆ ಜೀವದಾನ | |
| ೧೭. ಗಬ್ಬಿರಾಜನ ಸತ್ತ ಕುದುರೆಗೆ ಜೀವದಾನ | ಬುರುಡುಗುಂಪೆ |
| ೧೮. ಕಲ್ಲಿನಾಥಲಿಂಗ ಕದ ತೆರೆದು ಕರೆದುದು | ನಾಗಶರಧಿ |
| ೧೯. ಸರ್ಪಕ್ಕೆ ಜೀವದಾನ | ಎಡೆಯೂರು |
| ೨೦. ನಿಂದಿಸಿದ ಜೈನರ ಮನೆ ಅಗ್ನಿಗೆ ಆಹುತಿ | ಎಡೆಯೂರು |
| ೨೧. ಮೂಗುತಿ ಕದ್ದ ಸ್ತ್ರೀಯ ಕೈ ಆಕಾಶದಲ್ಲಿ ನಿಂತುದು | ವ್ಯಾಘ್ರಪುರ |
| ೨೨. ಬೆಕ್ಕಿನ ಮರಿಗಳಿಗೆ ಪ್ರಾಣದಾನ | ಎಡೆಯೂರು |

## ಪುರಾಣ ಮತ್ತು ಸಾಂಗತ್ಯ

| | |
|---|---|
| ೧. ನೀರಿನಿಂದ ದೀಪಾರಾಧನೆ | ಹರದನಹಳ್ಳಿ |
| ೨. ಅರುಣಾದ್ರೀಶಲಿಂಗದಿಂದ ಸನ್ಮಾನ | ಅರುಣಾದ್ರಿ |

| ಪವಾಡಗಳು: | ಸ್ಥಳಗಳು: |
| --- | --- |
| ೩. ತುರುಷ್ಕರಾಜನಿಗೆ ಜೀವದಾನ | |
| ೪. ಜೇಡಹುಳುವಾಗಿದ್ದ ಮುನಿಗಳ ಶಾಪವಿಮೋಚನೆ | |

**ಸಾಂಗತ್ಯ ಮತ್ತು ರಗಳೆ**

| | |
| --- | --- |
| ೧. ಶಿವನು ಸರ್ಪನಾಗಿ ಚೋರಭೀತಿ ಬಿಡಿಸಿದುದು | |
| ೨. ಹಾವು ಕಡಿದು ಸತ್ತ ಜಂಗಮನಿಗೆ ಜೀವದಾನ | ಹುಲಿಯೂರು |
| ೩. ನಿಂದಿಸಿದ ವೈಷ್ಣವನಿಗೆ ವಜ್ರದುಂಬಿಯ ಕಾಟ | |

**ಕೇವಲ ಪುರಾಣ**

| | |
| --- | --- |
| ೧. ತ್ರ್ಯಂಬಕೇಶ್ವರ ಲಿಂಗದೊಡನೆ ಸಂಭಾಷಣೆ | ತ್ರ್ಯಂಬಕೇಶ್ವರ |
| ೨. ಉತ್ತುಂಗಯೋಗಿಯ ಮದಭಂಗ | |
| ೩. ಲಿಂಗಣ್ಣೊಡೆಯ ನೀಡಿದ ವಿಷಪಾಕವನ್ನು ರುಚಿಮಾಡಿ ಉಂಡುದು | ಹೇರೂರು |
| ೪. ಎಳೆಗಾಯಿಯಲ್ಲಿ ನೀರು, ಕೊಬ್ಬರಿ ಮಾಯ | |
| ೫. ವೈಷ್ಣವರನ್ನು ಗೆದ್ದುದು | ಹೆಬ್ಬೂರು |
| ೬. ಪಾದೋದಕ ಚಲ್ಲಿದ ಚಕ್ಕನ ಲಿಂಗ ಅದೃಶ್ಯ | |
| ೭. ಭಕ್ತರಿಂದ ಕ್ಷೀರಾಭಿಷೇಕ | |
| ೮. ಸತ್ತ ಮಗುವಿಗೆ ಜೀವದಾನ | |
| ೯. ಸತ್ತ ಬೇಡ, ಮೊಲಗಳಿಗೆ ಜೀವದಾನ | ಶಿವಗಂಗೆ |

**ಕೇವಲ ರಗಳೆ**

| | |
| --- | --- |
| ೧. ಕಗ್ಗೆರೆಗುಂಟಾದ ಶಬರದಾಳಿ ನಿಂತುದು | |
| ೨. ಬೇಸಗೆಯಲ್ಲಿ ಜಲಸಮೃದ್ಧಿ | ಎಡೆಯೂರು |

| | ಪವಾಡಗಳು: | ಸ್ಥಳಗಳು: |
|---|---|---|
| ೩. | ಚೋರರಿಗೆ ನೇತ್ರದಾನ | ಮೊದೂರು |
| ೪. | ಒಲೆಯ ಮೇಲಣ ಒಡೆದ ಮಡಿಕೆ ನಾಮಜಪದಿಂದ ಒಂದಾದುದು | ಹೊನ್ನುಡಿಕೆ |
| ೫. | ದಾಸ ನೋಡಬಾರದೆಂದು ಮೊಗ ತಿರುಹಿ ಸ್ತಂಭವಿತ್ತುದು | ಚನ್ನಪಟ್ಟಣ |
| ೬. | ಪಾದೋದಕ ಪಾತ್ರೆಯೊಡೆದು ಲಿಂಗೋದ್ಭವ | ಕಲುಕುಣಿಕೆ |
| ೭. | ಬಾಳೆಗಿಡ ಆಣೆಯಿಡಲು ಫಲ ಹಂಚಿದುದು | ಹಟ್ಟಿ |
| ೮. | ನಿಂದಿಸಿದ ದಾಸನ ಹಲ್ಲು ಮುರಿದುದು | ಲಿಂಗಪುರ |
| ೯. | ಬಂಜೆಗೆ ಪುತ್ರದಾನ | |
| ೧೦. | ಮುಚ್ಚಿದ ಬಾಗಿಲು ತೆರೆದು ತಳಿಗೆ ಕೊಟ್ಟುದು | ವೃಷಭಪುರ |
| ೧೧. | ಮೊಸಲುಗೆಡಿಸಲು ಏಳುನೂರು ನಾರೀಕೇಳದ ಜಲ ಬತ್ತಿದುದು | |
| ೧೨. | ಮಲ್ಲಿಶೆಟ್ಟಿಗೆ ಲಿಂಗವಿತ್ತುದು | ವೃಷಭಪುರ |
| ೧೩. | ಭಕ್ತರು ಕೊಟ್ಟ ಆರು ಕೊಳಗ ಹಾಲು ಸೇವಿಸಿದುದು | |
| ೧೪. | ಶೇಷಕುಸುಮ ಕೊಡಲು ಲಿಂಗ ಬಯಲಾದುದು | ವೃಷಭಪುರ |
| ೧೫. | ಮಲ್ಲಿ ಎಂಬವಳ ಆರು ಕೊಳಗ ಅಕ್ಕಿ ಮಾಯವಾದುದು | |
| ೧೬. | ಮೊಸಲುಗೆಡಿಸಿದ ಬೆಲ್ಲ ಮಾಯವಾದುದು | |
| ೧೭. | ಮೊಸಲುಗೆಡಿಸಿದ ನೆಲ್ಲವರ ಮಾಯವಾದುದು | |
| ೧೮. | ಮೊಸಲುಗೆಡಿಸಿದ ಅವರೆ ಸುಟ್ಟುದು | |
| ೧೯. | ಪಾದಪೂಜೆಯಿಂದ ಸವುಳುನೀರು ಸಿಹಿಯಾದುದು | |
| ೨೦. | ಎರಡು ಹೂ ನೀಡಿದವಳಿಗೆ ಎರಡು ಮಕ್ಕಳ ದಾನ | |
| ೨೧. | ಜಪಮಾತ್ರದಿಂದ ಭಾರವಾದ ಕೊಡ ಹಗುರು | |

| | ಪವಾಡಗಳು: | ಸ್ಥಳಗಳು: |
|---|---|---|
| ೨೨. | ಓಡುವ ಹೋರಿ ಆಣೆ ಇಡಲು ನಿಂತುದು | |
| ೨೩. | ಒಂದೇ ರಾತ್ರಿ ಮೂರು ಊರಲ್ಲಿ ಕಾಣಿಸಿಕೊಂಡುದು | |
| ೨೪. | ಒಂದೇ ರಾತ್ರಿ ಎರಡು ಊರಲ್ಲಿ ಕಾಣಿಸಿಕೊಂಡುದು | ತುಮಕೂರು, ಕಣೆಯಕಲ್ಲು |
| ೨೫. | ಒಬ್ಬ ತಿಗುಳನಿಗೆ ತೂಬನ್ನು ಕೊಟ್ಟುದು | ದೇವರಾಯಪುರ |
| ೨೬. | ಅತಿವೃಷ್ಟಿ ನಿಲ್ಲಿಸಿದುದು | ದೇವರಾಯ ಪಟ್ಟಣ |
| ೨೭. | ಪರ್ವಶೆಟ್ಟಿ ಲಿಂಗಮ್ಮನಿಗೆ ಪ್ರಾಣದಾನ | ಮಂಗವಾಡ |
| ೨೮. | ಬಿಕ್ಷಾವೃತ್ತಿರಾಯನಿತ್ತ ಸ್ವರ್ಣಗಂತೆ, ರನ್ನ ಮಕುಟಗಳನ್ನು ಚರನಿಗೆ ಕೊಟ್ಟುದು | |
| ೨೯. | ಬತ್ತಿದ ಬಾವಿಗೆ ಜಲಪ್ರವಾಹ | |
| ೩೦. | ಸಿದ್ಧಲಿಂಗನ ಆಣೆಯಿಂದ ಎತ್ತು ಏಳು ದಿನ ಉಪವಾಸವಿದ್ದುದು | ಕೇತಶರಧಿ |
| ೩೧. | ನಾಮಜಪದಿಂದ ಮುರಿದ ರಥ ಮೊದಲಿನಂತಾದುದು | ಕೇತಶರಧಿ |
| ೩೨. | ತಿಗಳದೇಶಿಕನಿಗೆ ನೇತ್ರದಾನ | |
| ೩೩. | ಒಡ್ಡರು ನೀಡಿದ ಸರ್ಪನೈವೇದ್ಯ ಮಾಯ | ಕೋಡಿಪಳ್ಳಿ |
| ೩೪. | ಬಾವಿಯಲ್ಲಿ ಬಿದ್ದ ಕೊಡ ತಿರುಗಿ ಬಂದುದು | ಬೆಳ್ಳವೆ |
| ೩೫. | ಭವಿಯ ಆಗಮನದಿಂದ ಲಿಂಗ ಕದ ಮುಚ್ಚಿಕೊಂಡುದು | ಕಡ |
| ೩೬. | ಅನಾವೃಷ್ಟಿ ಕಾಲದಲ್ಲಿ ಮಳೆ ನೀಡಿದುದು | ವೇಪರಾಳಿ |
| ೩೭. | ಲಿಂಗರೂಪನಾಗಿ ನಿಂತುದು | ಉರುವಕೊಂಡ |
| ೩೮. | ಕುರುಬರ ಪರ್ವದ ಎಡೆ ಮಾಯ | ಬಿದಿರೆ |
| ೩೯. | ಉರಗವಪ್ಪ ಚಿಕ್ಕ ಬಸವನಿಗೆ ಪರಿಣಾಮವಾಗದಿರುವುದು | ಮುಗಳೂರು |

## ಕೇವಲ ಸಾಂಗತ್ಯ

| ಪವಾಡಗಳು: | ಸ್ಥಳಗಳು: |
|---|---|
| ೧. ಬಾಲಸಿದ್ಧಲಿಂಗನ ಪೂಜೆಯ ಪ್ರಸಾದ ಅಕ್ಷಯವಾದುದು | |
| ೨. ಬಾಲಸಿದ್ಧಲಿಂಗನಿಗೆ ಹಾವಿನ ಹಾಸಿಗೆಯಾದುದು | |
| ೩. ಬಾಲತೋಂಟದಾರ್ಯನ ಬಾಯಿಯಲ್ಲಿ ವಿಶ್ವದರ್ಶನ | |
| ೪. ಚಂದ್ರ ಕೈಗನ್ನಡಿಯಾದುದು | |
| ೫. ಅಡಿಗೆ ಮೊಸಲು ಮುರಿದ ಬಾಲತೋಂಟದಾರ್ಯನಿಗೆ ಮುನಿದ ಜಂಗಮರ ಲಿಂಗ ಮಾಯವಾದುದು | |
| ೬. ಅಡ್ಡಗಟ್ಟಿದ ಆನೆ ಭಕ್ತಿಗೆ ದಾರಿಕೊಟ್ಟುದು | |
| ೭. ಭೂತಗಳನ್ನು ಗೆದ್ದುದು | ಮಲಯಾಳ |
| ೮. ಮಹಾಕಳ್ಳನಿಗೆ ಸನ್ಮಾರ್ಗದರ್ಶನ | ಪರಶುರಾಮಕ್ಷೇತ್ರ |
| ೯. ಪಾದೋದಕ ಸೇವನೆಯಿಂದ ಪುತ್ರಸಂತಾನ | |
| ೧೦. ಒಣಶೂಲದ ಮರ ಚಿಗಿತುದು | |
| ೧೧. ಗಂಗಾದರ್ಶನ | ಕಾಶಿ |
| ೧೨. ವಿಶ್ವೇಶ್ವರನಿಂದ ಸೇವೆ | ಕಾಶಿ |
| ೧೩. ಹುಲಿಬಾಯಿಗೆ ಸಿಕ್ಕ ಗೊಲ್ಲನನ್ನು ಉಳಿಸಿದುದು | |
| ೧೪. ಗೊಲ್ಲನ ಮೇಲೆ ಬೀಳುವ ಸಿಡಿಲನ್ನು ಹಿಡಿದುದು | |
| ೧೫. ಪಾದೋದಕ ಗಂಗೋದಕಗಳ ತೂಕ | |
| ೧೬. ವಿರೂಪಾಕ್ಷ ಒಡೆಯರಿಗೆ ಬೋಧೆ | ಹಂಪೆ |
| ೧೭. ಕಣಿಯ ಕಲ್ಲೂರ ಅರಸಿಯ ತಪ್ಪಿನಿಂದ ಗೋವು ರಕ್ತಗರೆದುದು | |

| ಪವಾಡಗಳು: | ಸ್ಥಳಗಳು: |
|---|---|
| ೧೮. ಬೀಳುವ ಕೊಡ ನಾಮೋಚ್ಚಾರದಿಂದ ಅಂತರಿಕ್ಷದಲ್ಲಿ ನಿಂತುದು | |
| ೧೯. ಪವಾಡ ನಿಂದಿಸಿದ ದುರುಳರಾಜನ ಬಾಯಿ ಬರೆಯಾದುದು | |
| ೨೦. ವಿಷರೋಗದ ವೀರಣಾರ್ಯನಿಗೆ ಆರೋಗ್ಯಭಾಗ್ಯ | |
| ೨೧. ದ್ರಾವಿಡ ಭಾಷಿಕನಿಗೆ ಕನ್ನಡ ನುಡಿಸಿದುದು | |
| ೨೨. ಬಸವನಿಗೆ ಬಂಗಾರ ಬಟ್ಟಲ ಸಹಿತ ಹಾಲು ಕುಡಿಸಿದುದು | ಕಲ್ಯಾಣ |
| ೨೩. ಗಲಪಾಡಿಯ ಮುದಿಭೂಪನಿಗೆ ಅಷ್ಟೈಶ್ವರ್ಯವಿತ್ತುದು | |
| ೨೪. ಕಲ್ಲಿನಿಂದ ನೀರು ಬರಿಸಿದುದು | ಹುಲಿಯೂರು |
| ೨೫. ಚೆನ್ನವೀರದೇವರಿಗೆ ಪುತ್ರಸಂತಾನ | |

ಈ ಪವಾಡಗಳು ನಡೆದಿರುವ ಸ್ಥಳಗಳಿಗೆ ಸಿದ್ಧಲಿಂಗಶಿವಯೋಗಿಗಳು ಸಂಚರಿಸಿರುವುದರ ಕುರುಹಾಗಿ ಅನೇಕ ಕಡೆಗೆ ಅವರ ಮಠಗಳು ಇಂದಿಗೂ ಗೋಚರವಾಗುತ್ತವೆ. ಅವರು ಜನತೆಯ ಭಕ್ತಿ ಗೌರವಗಳಿಗೆ ಪಾತ್ರರಾಗಿದ್ದರೆಂಬುದಕ್ಕೆ ಅವ ಸಂಶಯವೂ ಇಲ್ಲ. ಪವಾಡಗಳ ಸಂದರ್ಭದಲ್ಲಿ ಉಕ್ತವಾದ ಗೋಣಿಖೇಡ, ಉಳಿವೆ, ಕಾರ್ಕಳ, ಗಾಳಿಪೂಜೆ ಬೆಟ್ಟ, ಕಾಶಿ, ಗಯೆ, ಪ್ರಯಾಗ, ಕೊಲ್ಲಿಪಾಕಿ, ಶ್ರೀಶೈಲ, ಕಗ್ಗೆರೆ, ಎಡೆಯೂರು, ಹೊಳಲುಗುಂದ, ವ್ಯಾಘ್ರಪುರ (ಹುಲಿಯೂರು), ಮೇದೂರು, ಹೆಬ್ಬೂರು, ಹೇರೂರು, ಚೆನ್ನಪಟ್ಟಣ, ಲಿಂಗಪುರ, ವೃಷಭಪುರ, ತುಮಕೂರು ಮೊದಲಾದ ಅನೇಕ ಕಡೆಗಳಲ್ಲಿ ತೋಂಟದ ಸಿದ್ಧಲಿಂಗೇಶ್ವರರ ಕುರುಹುಗಳೂ ಮಠಗಳೂ ಇಂದಿಗೂ ಕಾಣಬರುತ್ತವೆ. ಅವರ ಕಾರ್ಯಕ್ಷೇತ್ರ ಎಷ್ಟು ವಿಸ್ತೀರ್ಣವಾಗಿತ್ತೆಂಬುದರ ಸ್ಥೂಲ ಕಲ್ಪನೆ ಇಲ್ಲಿ ನಮಗಾಗಬಹುದು.

## ಪೀಠಪರಂಪರೆ

ತೋಂಟದ ಸಿದ್ಧಲಿಂಗಯತಿಗಳ ತರುವಾಯ ಅವರ ಪೀಠಪರಂಪರೆ ಇಂದಿನವರೆಗೂ ನಡೆದು ಬಂದಿರುವುದೊಂದು ವಿಶೇಷ. ಆ ಪೀಠಪರಂಪರೆಯಲ್ಲಿ ಅನೇಕ ಜನ ಮಹಾಯೋಗಿಗಳು ಬೆಳಗಿರುವರು. ಅವರು ಜನಜೀವನವನ್ನೂ ಧರ್ಮ ಸಾಹಿತ್ಯಗಳನ್ನೂ ನಾಡುನುಡಿಗಳನ್ನೂ ಹಸನಾಗಿರಿಸಿರುವರು. ತೋಂಟದ ಸಿದ್ಧಲಿಂಗೇಶ್ವರರ ಬಗೆಗೆ ಚಾರಿತ್ರಿಕ ವಿವೇಚನೆಯನ್ನು ಮಾಡುವ ಸಂದರ್ಭದಲ್ಲಿ ಅವರ ಪೀಠಪರಂಪರೆಯನ್ನು ಪ್ರಸ್ತಾಪಿಸದೆ ಗತ್ಯಂತರವಿಲ್ಲ. ನಿರಂಜನವಂಶ ರತ್ನಾಕರ ಮತ್ತು ನಿರಂಜನ ಜಂಗಮವಂಶ ದರ್ಪಣಗಳೆರಡೂ ತೋಂಟದ ಸಿದ್ಧಲಿಂಗ ಶಿವಯೋಗಿಗಳ ನಂತರದ ಪೀಠಪರಂಪರೆಯನ್ನು ಉಲ್ಲೇಖಿಸುತ್ತವೆ, ವಿವರಿಸುತ್ತವೆ. ಮೊದಲು ಆ ಗ್ರಂಥಗಳನ್ವಯ ತೋಂಟದ ಸಿದ್ಧಲಿಂಗೇಶ್ವರರ ಪೀಠವನ್ನೇರಿದ ಮಹಾಸ್ವಾಮಿಗಳ ಹೆಸರುಗಳನ್ನು ಕೆಳಗಿನಂತೆ ವಿವರಿಸಬಹುದು:

## ನಿರಂಜನವಂಶ ರತ್ನಾಕರ

| | ಹೆಸರು: | ಸಂಚಾರ: | ಎಸಗಿದ ಕಾರ್ಯ: | ಸಮಾಧಿ: |
|---|---|---|---|---|
| ೧. | ಬೋಳಬಸವೇಶ | ಎಡೆಯೂರು, ಮದಗಿರಿ | ಉಳಿದ ೭೦೦ ವಿರಕ್ತರಿಗೆ ಮತ್ತು ೩೦೦೦ ಚರಮೂರ್ತಿಗಳಿಗೆ ಅಧಿಪತಿಯಾದರು; ೯೬ ವರ್ಷ ಬಾಳಿದರು. | ಮದಗಿರಿ (ಗದ್ದುಗೆ) |
| ೨. | ಸಿದ್ಧವೀರೇಶ್ವರಸ್ವಾಮಿ (ಗುಡ್ಡದ ಸಿದ್ಧವೀರಸ್ವಾಮಿ) | ಗುಮ್ಮಳಾಪುರ | ೧೨೦೦೦ ಜನರಿಗೆ ಲಿಂಗದೀಕ್ಷೆ. ೯೮ ವರ್ಷ ಬಾಳಿದರು. | ಗುಮ್ಮಳಾಪುರ (ಗದ್ದುಗೆ) |
| ೩. | ಗುರುಸಿದ್ಧ ದೇಶಿಕೇಂದ್ರ ಸ್ವಾಮಿ (ಗೂಳುರು ಗುರು ಸಿದ್ಧಸ್ವಾಮಿ) | ಗುಮ್ಮಳಾಪುರ–ಗೂಳೂರು | ಪಾಲ್ಕುರಿಕೆ ಸೋಮಣಾರಾಧ್ಯರು ಪಾಲಿಸುತ್ತಿದ್ದ ೬೬ ಶೀಲಗಳನ್ನು ಪಾಲಿಸುತ್ತ ವೀರಶೈವೋದ್ಧಾರ. | ಗೂಳೂರು (ಗದ್ದುಗೆ) |
| ೪. | ಗಗನದಾರ್ಯ | ಗೂಳೂರು, ಮಾಗಡಿ, ಭೈರನ ದುರ್ಗ | ಮಾಗಡಿ ಅರಸನಿಗೆ ಲಿಂಗದೀಕ್ಷೆ, ಅಲ್ಲಿ ೬೬ ವಿರಕ್ತಮಠ ಸ್ಥಾಪನೆ. ೯೯ ವರ್ಷ ಬಾಳಿದರು. | ಭೈರನದುರ್ಗ |
| ೫. | ಸಿದ್ಧವೀರಸ್ವಾಮಿ (ಕಟ್ಟಿಗೆ ಪಳ್ಳಿ ಸಿದ್ಧವೀರಸ್ವಾಮಿ) | ಮಾಗಡಿ, ಹಾನಗಲ್ಲು ಪ್ರಾಂತದ ತಿಳವಳ್ಳಿ | ಸಂಪಾದನೆಯ ಸಿದ್ಧವೀರಪ್ಪನು ಪರಮತೀಯರನ್ನೊಡಗೊಂಡು ವಾದಕ್ಕೆ ಬರಲು ಮೈಸೂರರಸರ ಸಮ್ಮುಖದಲ್ಲಿ ಗೆದ್ದರು. ಸೋತ ಸಿದ್ಧವೀರಪ್ಪನವರು ಹೊಸ ಶಿಷ್ಯ | ತಿಳವಳ್ಳಿ |

| ಹೆಸರು: | ಸಂಚಾರ: | ಎಸಗಿದ ಕಾರ್ಯ: | ಸಮಾಧಿ: |
|---|---|---|---|
| | | ಸಂಪ್ರದಾಯವನ್ನು ಮುಂದುವರಿಸಿದರು. ಈ ಕಾಲದಲ್ಲಿ ಇವರಿಂದಲೇ ಸಂಪಾದನೆಯ ಸಮಯವೆಂಬ ಭೇದವುಂಟಾಯಿತು. ೯೦ ವರುಷ ಬಾಳಿದರು. | |
| ೬. ನೊಡ ಸಿದ್ಧಲಿಂಗ ದೇಶಿಕೇಂದ್ರ | ಕಲ್ಯಾಣ, ದಿಲ್ಲಿ, ಹೈದರಾಬಾದ, ಸ್ವಾದಿಸೀಮೆಯ ಇಸಳೂರು (ಗ್ರಂಥ ನಿಂತಿದೆ) | ದಿಲ್ಲಿಪಾಚ್ಛಾನಿಂದ ಸನ್ಮಾನ, "ಜಂಗಮಜಿತಾ ಪಕೀರು ಮುರಿಗಾಸಿದ್ಧಲಿಂಗ ಪಾಚ್ಛಾ" ಎಂಬ ಬಿರುದು ಧಾರಣೆ; ಹೈದರಾಬಾದು ನವಾಬನಿಂದ ಸನ್ಮಾನ, ೧೧ ಚರಂತಿಗೆ ಪಟ್ಟಾ ದಯಪಾಲಿಸಿದರು. ಪ್ರಭುಲಿಂಗಲೀಲೆ ಪ್ರವಚನ. | ಇಳಸೂರು |
| ೭. ಕುಮಾರ ದೇಶಿಕೇಂದ್ರ | (ಗ್ರಂಥ ನಿಂತಿದೆ) | — | — |

## ನಿರಂಜನಜಂಗಮ ವಂಶದರ್ಪಣ

| ವಿರಕ್ತರು: | ಸಂಚಾರ: | ಎಸಗಿದ ಕಾರ್ಯ: | ಕಾಲ: |
|---|---|---|---|
| ೧. ಬೋಳಬಸವಾರ್ಯರು | | ವೀರಶೈವ ಮತಗ್ರಂಥಗಳನ್ನು ಬರೆದರು. ಪರಮತವನ್ನು ಖಂಡಿಸಿ | ಕ್ರಿ. ಶ. ೧೪೫ರಿಂದ ೧೪೭೧ರ ವರೆಗೆ |

| ವಿರಕ್ತರು: | ಸಂಚಾರ: | ಎಸಗಿದ ಕಾರ್ಯ: | ಕಾಲ: |
|---|---|---|---|
| | | ವೀರಶೈವ ಧರ್ಮವನ್ನು ಸ್ಥಿರಗೊಳಿಸಿದರು. | |
| ೨. ಗೂಳೂರು ಸಿದ್ಧವೀರಸ್ವಾಮಿ | | ಅನೇಕ ಮತಗ್ರಂಥಗಳನ್ನು ಬರೆದರು. | ಕ್ರಿ. ಶ. ೧೪೭೧ರಿಂದ ೧೪೮೭ರ ವರೆಗೆ |
| ೩. ಉದ್ಧಾನಾರ್ಯ | | ಪರಿಹರದೇವ ಮೊದಲಾದ ೩೦೦೦ ವಿರಕ್ತರಿಗೆ ವೀರಶೈವ ಮಾರ್ಗವನ್ನು ಬೋಧಿಸಿದರು. (ತ್ರಿಣಾಮಲೆಯಲ್ಲಿರುವ ಅರುಣಾಚಲೇಶ್ವರನ ಆಲಯದಲ್ಲಿ) ಕೆಲವು ಮತ ಗ್ರಂಥಗಳನ್ನು ಬರೆದರು. ಪರಮತವನ್ನು ಖಂಡಿಸಿ ಸ್ವಮತೋದ್ಧಾರ ಮಾಡಿದರು. | ಕ್ರಿ. ಶ. ೧೪೮೭ರಿಂದ ೧೫೦೭ರ ವರೆಗೆ |
| ೪. ಹರಿಹರಸ್ವಾಮಿ | | ಹಿರೇಹಡಗಲಿ ಗ್ರಾಮದ ಅರಣ್ಯದಲ್ಲಿ ಕೆಲವು ವರ್ಷ ಯೋಗ-ಸಮಾಧಿಯಲ್ಲಿದ್ದರು. ಪರಮತ ಖಂಡನೆ, ಸ್ವಮತೋದ್ಧಾರ. | ಕ್ರಿ. ಶ. ೧೫೦೭ರಿಂದ ೧೫೩೦ರ ವರೆಗೆ |
| ೫. ಭಿಕ್ಷುಕದ ಬಸವಲಿಂಗಾರ್ಯ | | ಕೆಲವು ಮತ ಗ್ರಂಥಗಳನ್ನು ಬರೆದರು. ಕಡೆಗೆ ಕಟಿಗಿಹಳ್ಳಿ ರಾಚೋ | ಕ್ರಿ. ಶ. ೧೫೩೦ರಿಂದ ೧೫೬೦ರ ವರೆಗೆ |

| ವಿರಕ್ತರು: | ಸಂಚಾರ: | ಎಸಗಿದ ಕಾರ್ಯ: | ಕಾಲ: |
| --- | --- | --- | --- |
| | | ಟಿಸ್ವಾಮಿಗಳಿಗೆ ಶಿವಾನುಭವ ಶಾಸ್ತ್ರವನ್ನು ಸಂಪಾದನಂಗೈದು ನೂರೊಂದು ಸ್ಥಲಕಟ್ಟಿನ ವಿವರ ವನ್ನು ಚೆನ್ನಾಗಿ ತಿಳಿಪಿದರು. ಇವ ರನ್ನು ಸಿದ್ಧಲಿಂಗನ ಅಪರಾವ-ತಾರವೆಂದು ವಿರಕ್ತರು ಕೊಂಡಾ ಡಿದರು. | |
| ೬. ರಾಚೋಟಿ ಸ್ವಾಮಿಗಳು (ಕಟಿಗಿಹಳ್ಳಿ) | ಮಲೆನಾಡಸೀಮೆಯ ಕೂಡ್ಲಿ, ಗದುಗು, ತಿಳವಳ್ಳಿ | ರಾಜಾಧಿರಾಜರಿಂದ ಜಹಗೀರು ಪಡೆದರು. ಇವರಿಗೆ ಸಂಬಂಧ ಪಟ್ಟ ಸನದುಸೂತ್ರಗಳು ಈಗ ಹಾಲಿ ಸಂಸ್ಥಾನದಲ್ಲಿವೆ. ಶಿಷ್ಯ ಮಹಾಂತಸ್ವಾಮಿಗಳೊಡನೆ ಕ್ರತು ಪುರಿಗೆ ಬಂದು ಮಾನ್ವಿಮಠವಾಸಿ ಗಳಾಗಿ ಮಾನ್ವಿ ಅನ್ನದಾನಪ್ಪ ನೆಂಬ ಭಕ್ತನಿಂದ ಸೇವೆ ಪಡೆದರು. ಗದುಗು ಪೀಠಕ್ಕೆ ಕರಿಬಸವದೇವ ರನ್ನು ನಿಯಮಿಸಿದರು. | ಕ್ರಿ. ಶ. ೧೫೬೭ರಿಂದ ೧೬೧೦ರ ವರೆಗೆ |

| | ವಿರಕ್ತರು: | ಸಂಚಾರ: | ಎಸಗಿದ ಕಾರ್ಯ: | ಕಾಲ: |
|---|---|---|---|---|
| ೭. | ಕೌದಿ ಮಹಾಂತ ಸ್ವಾಮಿಗಳು (ಬಾಚೇಗೊಂಡನಹಳ್ಳಿ) | ಅನ್ನಗಿರಿ, ಮಲೆನಾಡಿನ ಶಿಕಾರಿಪುರ, ಹಂಪೆ, ಬಾಚೇಗೊಂಡನಹಳ್ಳಿ | ಯಕ್ಷ್ಮರೋಗಿಯಾದ ಧನಿಕನ ಉದ್ಧಾರ. ಕೋರಿಶೆಟ್ಟಿ ಕರೆದು ಕೊಂಡು ಬಂದ ಅರ್ಧನಾರಿ (ತೋಟಪ್ಪ) ಎಂಬ ಬಾಲ ಗಣ ಮೂರ್ತಿಯನ್ನು ಪರಿಗ್ರಹಿಸಿ ಪರಂಪರೆಯ ಶಿಷ್ಯನನ್ನಾಗಿ ಮಾಡಿದುದು. | ಕ್ರಿ. ಶ. ೧೬೧೦ರಿಂದ ೧೬೭೫ರ ವರೆಗೆ |
| ೮. | ಅರ್ಧನಾರೀಶ್ವರಸ್ವಾಮಿ | ಡಂಬಳ, ಕೆಳದಿ, ಡಂಬಳ, ಕೆಳದಿ, ಇಸೂರು, ಡಂಬಳ | ಏಳುನೂರು ವಿರಕ್ತರಿಗೆ ಚರಂತಿಗಿ ಕೊಡಲು ಅವರು ಮೈಸೂರು, ಉರುವುಕೊಂಡೆ ಸೊಂಡೂರು ಮೊದಲಾದ ಕಡೆಗಳಲ್ಲಿ ಮಠಗಳನ್ನು ಸ್ಥಾಪಿಸಿಕೊಂಡಿದ್ದರು. ಭಕ್ತ ಕೋರಿಸೆಟ್ಟಿಯು ಅನ್ನದಾನಿ ಅಭಿಧಾನದಿಂದ ಮೃಡಗಿರಿಗೆ ಬಂದನು. ಡಂಬಳದ ಸಂಸ್ಥಾನಿಕನೂ ಶೈವ ಬ್ರಾಹ್ಮಣನೂ ಆದ ಶೀನಪ್ಪಯ್ಯ ಬಹಾದ್ದೂರನ ಕ್ಷಯ ನಿವಾರಣೆ. ಕೆಳದಿಯ ಸೋಮಶೇಖರ | ಕ್ರಿ. ಶ. ೧೬೭೫ರಿಂದ ೧೭೨೫ರ ವರೆಗೆ |

| ವಿರಕ್ತರು: | ಸಂಚಾರ: | ಎಸಗಿದ ಕಾರ್ಯ: | ಕಾಲ: |
|---|---|---|---|
| | | ರಾಜನು ಜಹಗೀರು ಕೊಟ್ಟು ತನ್ನ ದೇಶದಿಂದ ಪರದೇಶಕ್ಕೆ ಹೋಗುವ ಸರಕುಗಳ ಸುಂಕವನ್ನು ಸನ್ನಿಧಿಗೆ ಸಲ್ಲಿಸಿದನು. ಆತನ ಮಗನಾದ ವೀರಭದ್ರನಾಯಕನ ಪತ್ನಿ ಮಲ್ಲಾಂಬಿಕೆಗೆ ಬಸವಪ್ಪನಾಯಕನು ಜನಿಸಲಿಕ್ಕೆ ವಿಭೂತಿಘಟ್ಟಿ ಕೊಟ್ಟರು. ಸನ್ನಿಧಿಯ ರಥೋತ್ಸವಕ್ಕಾಗಿ ಶೀನಪ್ಪದೊರೆಯು ೧೦೨೦ ವರಹಗಳನ್ನು ಇತ್ತನು. ನಂದಾದೀಪಕ್ಕಾಗಿ ತೊರೆನೀರ-ಲಗಿ ಗ್ರಾಮ ಬಿಟ್ಟನು. ಹರಪನಹಳ್ಳಿಯ ದೊರೆ ಸೋಮಶೇಖರನು ಅಂಕಲಿ, ಮುದ್ದಾಪುರ, ನೀಲಗುಂದ ಮುಂತಾದ ೫ ಗ್ರಾಮಗಳನ್ನು ಅರ್ಪಿಸಿದನು. | |
| ೯. ಈಸೂರ ನಂದೀಶ್ವರಸ್ವಾಮಿ (ಅಣ್ಣಿಗೇರಿ) | ಕೆಳದಿ, ಈಸೂರು, ಅಣ್ಣಿಗೇರಿ, ಮಜ್ಜಿಗೆಗುಡ್ಡ | ಕೆಳದಿಯ ಬೂದಿಬಸವಪ್ಪ ದೊರೆಯಿಂದ ಸನ್ಮಾನ. ಅಣ್ಣಿಗೇರಿಯ | ಕ್ರಿ. ಶ. ೧೭೨೫ರಿಂದ ೧೭೭೦ರ ವರೆಗೆ |

| | ವಿರಕ್ತರು: | ಸಂಚಾರ: | ಎಸಗಿದ ಕಾರ್ಯ: | ಕಾಲ: |
|---|---|---|---|---|
| | | | ನಾಗಪ್ಪಯ್ಯ ದೇಶಪಾಂಡೆಯಿಂದ ಜಹಾಗೀರು ಸ್ವೀಕಾರ; ಮರಿ ತೋಂಟದಾರ್ಯರಿಂದ ವೀರ ಶೈವಾನಂದ ಚಂದ್ರಿಕೆ, ಮೌನಪ್ಪ ಪಂಡಿತನಿಂದ ವೀರಶೈವಾಚಾರ ಕೌಸ್ತುಭ ಈ ಕಾಲದಲ್ಲಿ ರಚಿತ ವಾದುವು. ಸನ್ನಿಧಿಯಿಂದ ರಾಜ ವೈಭವದ ಆಶೀರ್ವಾದ ಪಡೆದ ರಾಚೋಟಿ ಮರಿಗಳಿಗೆ ಬೂದಿ ಬಸವಪ್ಪನಾಯಕನು ತನ್ನ ಸರ್ವ ರಾಜ್ಯ ಸಮರ್ಪಿಸಿದನು. ರಾ-ಚೋಟಿಸ್ವಾಮಿಗಳು ಕೆಲ ದಿನ ವಾಳಿ ಕೆಳದಿ ವಂಶಜನೊಬ್ಬನನ್ನು ಆ ರಾಜ್ಯಕ್ಕೆ ದತ್ತಕ ಮಾಡಿದರು. ದತ್ತಪುತ್ರನು ವೈರಿಗಳಿಗೆ ಸೋತು ಬಂದು ನರಗುಂದದಲ್ಲಿ ನೆಲಸಿದನು. | |
| ೧೦. | ಉಗ್ಗದ ತೋಂಟದಾರ್ಯ | ಹಂಪೆ, ಡಂಬಳ, ಅಣ್ಣಿಗೆರೆ | ಸದಾಶಿವ ಸ್ವಾಮಿಗಳಿಗೆ ಶಿವಾನುಭವ ಶಾಸ್ತ್ರದ ಸಂಪಾದನೆ ಮಾಡಿ ಕೊಟ್ಟರು. | ಕ್ರಿ. ಶ. ೧೭೭೦ರಿಂದ ೧೭೭೬ರ ವರೆಗೆ |

| | ವಿರಕ್ತರು: | ಸಂಚಾರ: | ಎಸಗಿದ ಕಾರ್ಯ: | ಕಾಲ: |
|---|---|---|---|---|
| ೧೧. | ಸದಾಶಿವ ದೇಶಿಕೇಂದ್ರ ಸ್ವಾಮಿಂಗಳು | ಡಂಬಳ, ಕೊಪ್ಪಳ | ಬಳ್ಳಾರಿಯ ಗವಿಸಿದ್ಧಪ್ಪನನ್ನು ಉದ್ಧರಿಸಿದರು. ಕಾಲಜ್ಞಾನ ನುಡಿದರು. | ಕ್ರಿ. ಶ. ೧೭೭೬ರಿಂದ ೧೮೧೧ರ ವರೆಗೆ |
| ೧೨. | ಮಹಾಂತಸ್ವಾಮಿಂಗಳು | ಡಂಬಳ, ಹಂಪಸಾಗರ | ಹರಪನಹಳ್ಳಿಯ ದೊರೆ ಪುಟ್ಟ ಸ್ವಾಮಿಗೆ ವಂಶನಷ್ಟವಾಗಲು ಶಾಪ. | ಕ್ರಿ. ಶ. ೧೮೧೧ರಿಂದ ೧೮೪೧ರ ವರೆಗೆ |
| ೧೩. | ತೋಂಟದ ಮಹಾಸ್ವಾಮಿಗಳು | | ಲೌಕಿಕ ಪಾರಮಾರ್ಥಿಕಗಳ ಸವ್ಯಸಾಚಿ. | ಕ್ರಿ. ಶ. ೧೮೪೧ರಿಂದ ೧೮೮೧ರ ವರೆಗೆ |
| ೧೪. | ಮೃತ್ಯುಂಜಯಸ್ವಾಮಿಂಗಳು | | ದುಷ್ಟರ ನಿಗ್ರಹ, ಶಿಷ್ಟರ ಪರಿಪಾಲನದಿಂದ 'ಮೃತ್ಯುಂಜಯ' ಹೆಸರನ್ನು ಸಾರ್ಥಕಮಾಡಿಕೊಂಡಿದ್ದರು. | ಕ್ರಿ. ಶ. ೧೮೮೧ರಿಂದ ೧೮೮೪ರ ವರೆಗೆ |
| ೧೫. | ಸಿದ್ಧೇಶ್ವರ ಸ್ವಾಮಿಂಗಳು | | | ಕ್ರಿ. ಶ. ೧೮೮೪ರಿಂದ ೧೯೨೨ರ ವರೆಗೆ |

ನಿರಂಜನವಂಶರತ್ನಾಕರ ಮತ್ತು ನಿರಂಜನಜಂಗಮ ವಂಶದರ್ಪಣ ಇವೆರಡು ಗ್ರಂಥಗಳು ತೋಂಟದ ಸಿದ್ಧಲಿಂಗಶಿವಯೋಗಿಗಳ ತರುವಾಯದ ಪೀಠಪರಂಪರೆಯು ನ್ನೊರೆಯುವಲ್ಲಿ ಭಿನ್ನಾಭಿಪ್ರಾಯವನ್ನು ತಳೆದಿವೆಯೆಂಬುದು ಮೇಲಿನ ನಿರೂಪಣೆ ಯಿಂದ ಸ್ಪಷ್ಟವಾಗುತ್ತದೆ. ಬೋಳಬಸವೇಶ್ವರ, ಸಿದ್ಧವೀರಣಾರ್ಯ ಇವರಿಬ್ಬರ ನಂತರ ಪೀಠವನ್ನೇರಿದ ಸ್ವಾಮಿಗಳ ಹೆಸರುಗಳೆಲ್ಲ ಎರಡೂ ಗ್ರಂಥಗಳಲ್ಲಿ ಭಿನ್ನವಾಗಿಯೇ ಇವೆ. ಸಿದ್ಧವೀರಣಾರ್ಯರ ಬಗೆಗೆ ಸಹ ಸಂದೇಹ ಉಂಟಾಗುವಂತಿದೆ. ರತ್ನಾಕರದಲ್ಲಿ ಬೋಳಬಸವೇಶ್ವರರ ತರುವಾಯ ಗುಮ್ಮಳಾಪುರ ಸಿದ್ಧವೀರೇಶಸ್ವಾಮಿಗಳು ಪಟ್ಟಕ್ಕೆ ಬರುತ್ತಾರೆ. ಆ ಮೇಲೆ ಗೂಳೂರು ಸಿದ್ಧವೀರಸ್ವಾಮಿಗಳು ಆ ಪಟ್ಟವನ್ನೇರುತ್ತಾರೆ. ದರ್ಪಣವಾದರೋ ಗುಮ್ಮಳಾಪುರ ಸಿದ್ಧವೀರೇಶಸ್ವಾಮಿಗಳ ಹೆಸರನ್ನೇ ಎತ್ತುವುದಿಲ್ಲ. ಬೋಳಬಸವಾರ್ಯರ ನಂತರ ಗೂಳೂರು ಸಿದ್ಧವೀರಸ್ವಾಮಿಗಳೇ ಪಟ್ಟಕ್ಕೆ ಬಂದರೆಂದು ಆ ಗ್ರಂಥದ ಅಭಿಪ್ರಾಯ. ಈ ಸಂದೇಹ ಬೋಳಬಸವಾರ್ಯರ ನಂತರ ಬಂದ ಶಿಷ್ಯ ಪರಂಪರೆಯವರು ತಮ್ಮ ಗುರುಪರಂಪರೆಯನ್ನು ಉಲ್ಲೇಖಿಸುವಲ್ಲಿ ತಲೆದೋರುತ್ತದೆ.[೧] ಕೆಲವರು ಬೋಳಬಸವಾರ್ಯರ ನಂತರ ಗುಮ್ಮಳಾಪುರದ ಸಿದ್ಧವೀರೇಶಸ್ವಾಮಿಗಳ ಹೆಸರನ್ನು ಹೇಳಿದರೆ ಮತ್ತೆ ಕೆಲವರು, ಗೂಳೂರು ಸಿದ್ಧವೀರಣಾರ್ಯರ ಹೆಸರನ್ನು ಉಲ್ಲೇಖಿಸುತ್ತಾರೆ. ಗೂಳೂರು ಹಾಗೂ ಗುಮ್ಮಳಾಪುರದ ಸಿದ್ಧವೀರಣಾರ್ಯ ರಿರ್ವರೂ ಬೋಳಬಸವೇಶ್ವರರ ಶಿಷ್ಯರೆಂದು ಅವರವರ ಶೂನ್ಯಸಂಪಾದನೆಗಳಿಂದ ವಿದಿತ ವಾಗುತ್ತದೆ.[೨] ಮುಂದೆ ಉಂಟಾದ ಪೀಠಪರಂಪರೆಯ ಸಂದೇಹಕ್ಕೆ ಇದು ಕೆಲಮಟ್ಟಿಗೆ ಕಾರಣವಾಗಿರಬಹುದು. ಆದರೆ ವಸ್ತುಸ್ಥಿತಿ ಹೀಗಿರುವ ಸಂಭವವಿದೆ. ಗುಮ್ಮಳಾಪುರ, ಗೂಳೂರು ಸಿದ್ಧವೀರಣಾರ್ಯರಿರ್ವರೂ ಬೋಳಬಸವೇಶ್ವರನ ಶಿಷ್ಯರಾದರೂ, ಗುಮ್ಮ-ಳಾಪುರದವರು ಹಿರಿಯರಾಗಿರಬೇಕು. ಆಧ್ಯಾತ್ಮಿಕ ದೃಷ್ಟಿಯಿಂದಲೂ ಶೂನ್ಯಸಂಪಾದ ನೆಯ ವಿರಚನೆಯ ದೃಷ್ಟಿಯಿಂದಲೂ ಗೂಳೂರವರಿಗೆ ಮಾರ್ಗದರ್ಶಕರಾಗಿರಬೇಕು. ಇವಕ್ಕೆ ಗೂಳೂರು ಸಿದ್ಧವೀರಣಾರ್ಯರ ಶೂನ್ಯಸಂಪಾದನೆಗೆ ಗುಮ್ಮಳಾಪುರದವರ ಕೃತಿಯೆ ಮಾತೃಕೆಯಾಗಿರುವುದೂ ನಿರಂಜನ ವಂಶರತ್ನಾಕರವು ಗುಮ್ಮಳಾಪುರ ಸಿದ್ಧ ವೀರಣಾರ್ಯರು ಗೂಳೂರು ಸಿದ್ಧವೀರಣಾರ್ಯರಿಗೆ ತಮ್ಮ ಪಟ್ಟವನ್ನು ಕೊಟ್ಟರೆಂದು ಹೇಳಿರುವುದೂ ಆಧಾರವಾಗಿವೆ. ಆದುದರಿಂದ ಬೋಳಬಸವೇಶ್ವರರ ತರುವಾಯ, ಗುಮ್ಮಳಾಪುರದ ಸಿದ್ಧಲಿಂಗದೇವರು, ಅವರ ತರುವಾಯ ಗೂಳೂರು ಸಿದ್ಧವೀರಣಾ ರ್ಯರು ಪೀಠಕ್ಕೆ ಬಂದಿರುವುದು ಶುದ್ಧ ಇತಿಹಾಸವೆಂದು ತೋರುತ್ತದೆ. ಹಾಗಾದರೆ ಗೂಳೂರು ಸಿದ್ಧವೀರಣಾರ್ಯರು ತಮ್ಮ ಶೂನ್ಯಸಂಪಾದನೆಯಲ್ಲಿ ಗುಮ್ಮಳಾಪುರದ ಸಿದ್ಧವೀರ (ಲಿಂಗ) ಸ್ವಾಮಿಗಳು ತಮ್ಮ ಗುರುಗಳೆಂದು ಏಕೆ ಸಂಬೋಧನೆ ಮಾಡಲಿಲ್ಲ ವೆಂದು ಪ್ರಶ್ನೆ ಏಳಬಹುದು. ಅದಕ್ಕೆ ಉತ್ತರ ಇಷ್ಟು: ಗೂಳೂರು ಸಿದ್ಧವೀರಣಾರ್ಯರು ನಿರಂಜನ ಪೀಠವನ್ನೇರುವ ಪೂರ್ವದಲ್ಲಿಯೇ ತಮ್ಮ ಶೂನ್ಯಸಂಪಾದನೆಯನ್ನು ರಚಿಸಿರ

---

[೧] ಈ ವಿವರಣೆ ಮುಂದೆ ಬಂದಿದೆ. [೨] ಶೂ. ಸಂ. ಸಮಾಪ್ತಿವಾಕ್ಯ.

ಬೇಕು. ಪೀಠಕ್ಕೆ ಏರಿದ ಮೇಲೆ ಬರೆದಿದ್ದರೆ ತಮ್ಮ ಗ್ರಂಥವನ್ನು "ಶ್ರೀಮದ್ ಬೋಧಾ ಗುರು, ನಮಃ ಶಿವಾಯ ದೇವರ ದಿವ್ಯಪದಕಮಲ"ಕ್ಕೆ ಅರ್ಪಿಸುತ್ತಿರಲಿಲ್ಲ. ಸಿದ್ಧಲಿಂಗ ಶಿವಯೋಗಿಗಳ ಪಾದಕ್ಕೋ ತಮಗೆ ನೇರವಾಗಿ ಪಟ್ಟವನ್ನು ಕೊಟ್ಟ ಗುರುವಿನ ಪಾದಕ್ಕೋ ಆ ಗ್ರಂಥವನ್ನರ್ಪಿಸುತ್ತಿದ್ದರು.

ಗೂಳೂರು ಸಿದ್ಧವೀರಣಾರ್ಯರ ನಂತರ ಗಗನದಾರ್ಯ (ಕಟ್ಟಿಗೆಹಳ್ಳಿ) ಸಿದ್ಧ ವೀರಸ್ವಾಮಿ, (ನೊಡ) ಸಿದ್ಧಲಿಂಗ ದೇಶಿಕೇಂದ್ರ ಮತ್ತು ಕುಮಾರ ದೇಶಿಕೇಂದ್ರ ಇವರು ಕ್ರಮವಾಗಿ ನಿರಂಜನ ಪೀಠವನ್ನೇರಿದರೆಂದು ನಿರಂಜನ ವಂಶರತ್ನಾಕರವು ಹೇಳುತ್ತದೆ ಕುಮಾರ ದೇಶಿಕೇಂದ್ರರ ಹೆಸರನ್ನು ಮಾತ್ರ ಉಲ್ಲೇಖಿಸಿ, ಅವರ ವಿಷಯವಾಗಿ ಬೇರೆ ಏನನ್ನೂ ಹೇಳದೆ ಆ ಗ್ರಂಥ ಅರ್ಧಕ್ಕೇ ನಿಂತುಬಿಡುತ್ತದೆ.

ಇನ್ನು ನಿರಂಜನ ಜಂಗಮವಂಶದರ್ಪಣವಾದರೋ ಗೂಳೂರು ಸಿದ್ಧವೀರ-ಣಾರ್ಯರ ನಂತರ ಪೀಠವನ್ನೇರಿದ ಉದ್ದನಾರ್ಯಾದಿಯಾಗಿ ಸಿದ್ಧೇಶ್ವರ ಸ್ವಾಮಿಗಳ ಪರ್ಯಂತರ ಹದಿಮೂರು ಜನ ಮಹಾಸ್ವಾಮಿಗಳ ವಿವರವನ್ನು ಕೊಡುತ್ತದೆ. ಇಲ್ಲಿ ಉಕ್ತವಾಗುವ ಹೆಸರುಗಳಿಗೂ ರತ್ನಾಕರದಲ್ಲಿ ಬಂದ ಹೆಸರುಗಳಿಗೂ ಯಾವ ಸಂಬಂಧವಿಲ್ಲವೆಂಬುದನ್ನು ಹಿಂದೆ ಹೇಳಲಾಗಿದೆ. ಪ್ರಾಯಶಃ ಒಂದು ಪೀಠದ ಎರಡು ಶಾಖೆಗಳೊಡೆದು ಎರಡೂ ನಿರಂಜನ ಪೀಠಗಳೆಂಬ ಕಲ್ಪನೆಯಿಂದ ಮುಂದುವರೆದಿರ ಬೇಕು. ಒಂದು ಅಂದರೆ ದರ್ಪಣವು ಹೇಳುವ ಶಾಖೆಯು ಗದಗು, ಡಂಬಳ ಮೊದಲಾದ ಕಡೆಗಳಲ್ಲಿ ಈಗ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ ಪೀಠವೆಂದು ಪ್ರಸಿದ್ಧವಾಗಿರು ವುದು. ಎರಡನೆಯದು ರತ್ನಾಕರವು ವಿವರಿಸುವಂತೆ ಮುರಿಗೆ ದೇಶಿಕೇಂದ್ರರು ಪಟ್ಟ ವನ್ನೇರಿದ ಈಗಿನ ಚಿತ್ರಕಲ್‌ದುರ್ಗದ ಚಿನ್ಮೂಲಾದ್ರಿ ಬೃಹನ್ಮಠದ ಶಾಖೆಯೆಂದು ತೋರುತ್ತದೆ. ಇವೆರಡಕ್ಕೂ ತೋಂಟದ ಸಿದ್ಧಲಿಂಗ ಯತಿಗಳೇ ಮೂಲಸ್ಥವೆಂದು ಹೇಳಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಈಗಿನ ಚಿತ್ರದುರ್ಗದ ಈ ಶಾಖೆಗೆ ಸಂಬಂಧ ಪಟ್ಟ ಕಥೆಯೊಂದು ರತ್ನಾಕರದಲ್ಲಿ ಬಂದಿದೆ. ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಗಳು ತಮ್ಮ ಶಿಷ್ಯರಲ್ಲಿ ಹಿರಿಯರಾದ ಒಬ್ಬ ಮೂರ್ತಿಗಳಿಗೆ ತಮ್ಮ ಗುರುಗಳಾದ ಸಿದ್ಧಲಿಂಗ ಯತೀ-ಶ್ವರರ ನಾಮವನ್ನಿಟ್ಟು ನೊಡ ಸಿದ್ಧಲಿಂಗದೇಶಿಕೇಂದ್ರನೆಂದು ಕರೆದು, ಅವರಿಗೆ ತಮ್ಮ ಚರಂತಿಗೆ ಪಟ್ಟವನ್ನು ದಯಪಾಲಿಸಿದರು. ನೊಡ ಸಿದ್ಧಲಿಂಗದೇಶಿಕೇಂದ್ರರೊಡನೆಯೆ ಇಮ್ಮಡಿ ಮುರುಗೇಂದ್ರ ದೇಶಿಕರೆಂಬವರೊಬ್ಬರಿದ್ದರು. ಗುರುಗಳಾದ ಸಿದ್ಧವೀರ ಸ್ವಾಮಿಗಳ ಅಪ್ಪಣೆಯ ಮೇರೆಗೆ ಇವರಿಬ್ಬರು ದಿಲ್ಲಿಯ ವರೆಗೆ ಸಂಚರಿಸಿ ಅಲ್ಲಿ ಚೆನ್ನ ಬಸವಣ್ಣನವರು ಕಳುಹಿಸಿದ್ದ ಪ್ರಭುದೇವರ ಸುವರ್ಣದ ಪೀಠ, ಪ್ರಣವಶಿಖಾ ಮತ್ತು ಶೈಲ ಇವನ್ನು ಮರಳಿ ಪಡೆದುಕೊಂಡು ಬಂದರು. ಪಟ್ಟಾಧಿಕಾರಿಗಳಾಗಿದ್ದ ನೊಡ ಸಿದ್ಧ ಸಿದ್ಧಲಿಂಗದೇಶಿಕೇಂದ್ರ ಸ್ವಾಮಿಗಳು ತಮ್ಮ ಪಟ್ಟವನ್ನು ಕುಮಾರದೇಶಿಕೇಂದ್ರ ಸ್ವಾಮಿ ಗಳಿಗೆ ಕೊಟ್ಟರು. ಆಗ ಭಕ್ತಜನರು ಇಮ್ಮಡಿ ಮುರುಗೇಂದ್ರದೇಶಿಕ ಸ್ವಾಮಿಗಳು ಕಾರಣತ್ವಕ್ಕೆ ಗುರುಗಳು, ಕುಮಾರ ದೇಶಿಕೇಂದ್ರ ಸ್ವಾಮಿಗಳು ಕಾರ್ಯತ್ವಕ್ಕೆ ಗುರುಗಳು

ಎಂದು ಹೇಳಿ ಇಬ್ಬರನ್ನೂ ಸಿಂಹಾಸನಾರೂಢರನ್ನಾಗಿ ಮಾಡಿಸಿದರು. ಮೇಲೆ ನಿರ್ದೇಶಿಸಿದ ಚಿತ್ರದುರ್ಗದ ಶಾಖೆಗೆ ಸ್ವತಂತ್ರ ಅಸ್ತಿತ್ವ ಇಲ್ಲಿಂದ ಬಂದಿರಬಹುದೇ? ನಿರಂಜನ ವಂಶರತ್ನಾಕರದಲ್ಲಿ ಉಕ್ತವಾದ ಬೋಳಬಸವೇಶ್ವರರಿಂದ ಈಚಿನ ಏಳುಜನ ಮಹಾಸ್ವಾಮಿಗಳವರ ವಿವರಣೆಯಲ್ಲಿ ಮೇಲೆ ನಿರ್ದೇಶಿಸಿದ ಮಹತ್ವದ ಘಟನೆಯೊಂದನ್ನು ಬಿಟ್ಟರೆ ಬೇರೆ ಐತಿಹಾಸಿಕ ಮಹತ್ವದ ಸಂಗತಿಗಳು ಉಕ್ತವಾದಂತಿಲ್ಲ. ಆದುದರಿಂದ ಆ ಗ್ರಂಥದ ವಿವರಣೆಯನ್ನು ಇಲ್ಲಿಗೆ ನಿಲ್ಲಿಸಿದ್ದೇವೆ.

ತೋಂಟದ ಸಿದ್ಧಲಿಂಗ ಶಿವಯೋಗಿಗಳ ನಂತರದ ಪೀಠಪರಂಪರೆಯನ್ನು ವಿವರಿಸುವಲ್ಲಿ ನಿರಂಜನಜಂಗಮವಂಶದರ್ಪಣವು ಸಮಗ್ರವೂ ಹೆಚ್ಚು ಸಮ್ಮತವಾದುದೂ ಆಗಿದೆ. ಆ ಗ್ರಂಥವು ತೋಂಟದಾರ್ಯರಿಂದ ಆರಂಭಿಸಿ ಹದಿನೈದನೆಯ ಸಿದ್ಧೇಶ್ವರ ಸ್ವಾಮಿಗಳ ವರೆಗಿನ ಚರಿತ್ರೆಯನ್ನು ಪೂರ್ತಿಯಾಗಿ ಕೊಡುತ್ತದೆ. ಅಲ್ಲದೆ ಆಯಾ ಮಹಾಸ್ವಾಮಿಗಳು ಪೀಠವನ್ನೇರಿದ ಕಾಲಾವಧಿಯನ್ನೂ ಅವರ ತೋರಗದ್ದುಗೆ ಇರುವ ಸ್ಥಳಗಳನ್ನೂ ವಿವರಿಸುತ್ತದೆ. ಅಲ್ಲಿ ಉಕ್ತವಾಗಿರುವ ಡಂಬಳ, ಗದುಗು, ಅಣ್ಣಿಗೇರಿ ಮೊದಲಾದ ಸ್ಥಳಗಳಲ್ಲಿ ತೋಂಟದಾರ್ಯ ಪರಂಪರೆಯ ಮಠಗಳು ಇಂದಿಗೂ ಶೋಭಾಯಮಾನವಾಗಿವೆ. ಈ ಗ್ರಂಥವು ಹೆಚ್ಚಿನ ಐತಿಹಾಸಿಕ ಸಂಗತಿಗಳನ್ನು ಕೊಡುತ್ತದೆಂಬುದಕ್ಕೆ ಒಂದೆರಡು ನಿದರ್ಶನಗಳನ್ನೀಯಬಹುದು.

ಬೋಳಬಸವಾರ್ಯರು ತೋಂಟದಾರ್ಯರ ಪ್ರಶಿಷ್ಯರಾಗಿ ಅವರ ಅನುಗ್ರಹಕ್ಕೆ ಪಾತ್ರರಾಗಿ ಅವರಿಂದಲೇ ನಿರಂಜನ ಪಟ್ಟಾಧಿಕಾರವನ್ನು ಪಡೆದರು. ಅವರು ವೀರಶೈವ ಮತಗ್ರಂಥಗಳನ್ನು ಬರೆದುದು ಪ್ರಸಿದ್ಧವಾಗಿದೆ. ಈ ವಿಷಯವನ್ನು ದರ್ಪಣವು ಉಲ್ಲೇಖಿಸುತ್ತದೆ. ರತ್ನಾಕರವು ಈ ಬಗೆಗೆ ಏನನ್ನೂ ಹೇಳುವುದಿಲ್ಲ. ಇದರಂತೆ ಗೂಳೂರು ಸಿದ್ಧವೀರಸ್ವಾಮಿಗಳು ಮತಗ್ರಂಥಗಳನ್ನು ಬರೆದ ವಿಷಯವನ್ನು ದರ್ಪಣವು ಸ್ಪಷ್ಟಪಡಿಸಿದರೆ ರತ್ನಾಕರವು ಆ ಉಲ್ಲೇಖವನ್ನೇ ಎತ್ತುವುದಿಲ್ಲ. ಶೂನ್ಯಸಂಪಾದನೆಯ ಹೆಸರನ್ನೆತ್ತದಿರುವುದು ಎರಡು ಗ್ರಂಥಗಳಲ್ಲಿಯೂ ದೊಡ್ಡ ಕೊರತೆಯಾದರೆ ಮತಗ್ರಂಥಗಳನ್ನು ಬರೆದರೆಂದು ಹೇಳಿ, ದರ್ಪಣವು ಆ ಕಡೆಗೆ ಸೂಚನೆಯನ್ನೀಯುವಂತಿದೆ.

ಹೀಗೆ ಇನ್ನೂ ಅನೇಕ ಮಹತ್ವದ ಐತಿಹಾಸಿಕ ಸಂಗತಿಗಳು ಈ ಗ್ರಂಥದಿಂದ ತಿಳಿದುಬರುತ್ತವೆ. ಬೋಳಬಸವಾರ್ಯರಿಂದ ಆರನೆಯವರಾದ ಕಟ್ಟಿಗೆಹಳ್ಳಿ ರಾಚೋಟಿ ಸ್ವಾಮಿಗಳು ಮಹಾತಪಸ್ವಿಗಳೂ ಪ್ರಭಾವಶಾಲಿಗಳೂ ಆಗಿದ್ದಂತೆ ತೋರುತ್ತದೆ. ಇವರು ರಾಜಮಹಾರಾಜರಿಂದ ಮನ್ನಣೆ, ಜಹಗೀರುಗಳನ್ನು ಪಡೆದ ಉಲ್ಲೇಖಗಳು ಇಂದಿಗೂ ಗದುಗಿನ ಸಂಸ್ಥಾನ ಮಠದ ಅಧೀನದಲ್ಲಿವೆ. ಇವರೇ ತಮ್ಮ ಶಿಷ್ಯರಾದ ಮಹಾಂತಸ್ವಾಮಿಗಳೊಡನೆ ಗದುಗಿಗೆ ದಯಮಾಡಿಸಿದರು. ಅಲ್ಲಿ ಮಹಾಸ್ವಾಮಠದಲ್ಲಿ ಕೆಲಕಾಲ ನಿಂತು ಪೀಠವನ್ನು ಸ್ಥಾಪಿಸಿ ಅದಕ್ಕೆ ಕರಿಬಸವದೇವರನ್ನು ನೇಮಿಸಿದರು. ಮಹಾಸ್ವಾಮಠವು ಇಂದಿಗೂ ಗದುಗಿನಲ್ಲಿ ಕಂಡುಬರುತ್ತದೆ. ಗದುಗುಪೀಠವು ತೋಂಟದಾರ್ಯರ ಉಜ್ವಲವಾದ ಪರಂಪರೆಯನ್ನು ಮುಂದುವರಿಸಿಕೊಂಡು ಬಂದುದರಲ್ಲಿ ಅಗ್ರಸ್ಥಾನವನ್ನು ಪಡೆಯುತ್ತದೆ.

ರಾಚೋಟಿಸ್ವಾಮಿಗಳ ನಂತರ ಪಟ್ಟಕ್ಕೆ ಬಂದ ಕೌದಿ ಮಹಾಂತ ಸ್ವಾಮಿಗಳು ಅಣ್ಣಿಗೇರಿಯಲ್ಲಿ ಕೆಲಕಾಲ ವಾಸಿಸಿ ಅಲ್ಲಿ ಪೀಠದ ಕುರುಹುಗಳನ್ನು ನೆಲೆಗೊಳಿಸಿದರು. ಆ ಕುರುಹುಗಳು ಇಂದಿಗೂ ಗೋಚರವಾಗುತ್ತವೆ. ಈ ಪರಂಪರೆಯಲ್ಲಿ ಅತ್ಯಂತ ತಪೋನಿಷ್ಠರೂ ಪ್ರಭಾವಮೂರ್ತಿಗಳೂ ಆದ ಮಹಾಸ್ವಾಮಿಗಳೆಂದರೆ ಅರ್ಧನಾರೀಶ್ವರ ಸ್ವಾಮಿಗಳು. ಇವರು ಡಂಬಳ, ಕೆಳದಿ ಮೊದಲಾದ ಕಡೆಗಳಲ್ಲಿ ಸಂಚರಿಸಿ ಚಿರಸ್ಥಾಯಿಯಾದ ಪ್ರಭಾವಮುದ್ರೆಯನ್ನು ಬೀರಿರುವರು. ಡಂಬಳದಲ್ಲಿ ಜಗದ್ಗುರು ತೋಂಟದಾರ್ಯರ ಸಂಸ್ಥಾನಮಠವು ಈ ಮಹಾಸ್ವಾಮಿಗಳ ಕಾಲದಲ್ಲಿಯೇ ಸಂಸ್ಥಾಪಿತವಾಯಿತು. ಇಂದಿಗೂ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದುಗು ಮತ್ತು ಡಂಬಳ ಅವೆರಡೂ ಮಠಗಳಿಗೆ ಸಂಯುಕ್ತಾಭಿಧಾನವುಂಟು. ಈ ಮಹಾಸ್ವಾಮಿಗಳ ಆಳಿಕೆಯಲ್ಲಿ ನಡೆದ ಮಹತ್ವದ ಒಂದೆರಡು ಐತಿಹಾಸಿಕ ಘಟನೆಗಳನ್ನು ಇಲ್ಲಿ ವಿವರಿಸುವುದು ಪ್ರಸ್ತುತವೆನಿಸಿದೆ.

೧. ಡಂಬಳ ಸಂಸ್ಥಾನಿಕನಾದ ಶೈವಬ್ರಾಹ್ಮಣ ಶೀನಪ್ಪಯ್ಯನು ಶ್ರೀಗಳವರ ಅನುಗ್ರಹಕ್ಕೆ ಪಾತ್ರನಾಗಿ ಅವರ ಮಠಕ್ಕೆ ದತ್ತಿದಾನಗಳನ್ನು ಬಿಟ್ಟುಕೊಟ್ಟಿರುವನು. ಅವು ಇಂದಿಗೂ ನಡೆದುಕೊಂಡು ಬಂದಿವೆ.

೨. ಕೆಳದಿಯ ಸುಪ್ರಸಿದ್ಧ ರಾಜಮನೆತನದ ಮೇಲೆ ಅರ್ಧನಾರೀಶ್ವರ ಸ್ವಾಮಿಗಳ ಕೃಪೆಯಾದುದು ಎರಡನೆಯ ಮಹತ್ವದ ಸಂಗತಿ. ಕೆಳದಿಯ ಸೋಮಶೇಖರ ರಾಜನು ಜಹಗೀರು ಕೊಟ್ಟು, ಪರದೇಶಕ್ಕೆ ಹೋಗುವ ಸರಕುಗಳ ಮೇಲಿನ ಸುಂಕವು ಸನ್ನಿಧಿಗೆ ಸಲ್ಲುವಂತೆ ಭಕ್ತಿಯ ಕಾಣಿಕೆಯನ್ನಿತ್ತನು.

೩. ಆತನ ಮಗನಾದ ವೀರಭದ್ರನಾಯಕನ ಪತ್ನಿ ಮಲ್ಲಾಂಬಿಕೆಗೆ ಪುತ್ರರತ್ನವು ಜನಿಸುವಂತೆ ಈ ಶ್ರೀಗಳವರು ವಿಭೂತಿಗಟ್ಟಿ ಕೊಟ್ಟರಂತೆ. ಅವರ ಆಶೀರ್ವಾದದಿಂದ ಜನಿಸಿದಾತನೇ ಬಸವಪ್ಪನಾಯಕ. ಅವನಿಗೆ ಬೂದಿ ಬಸವಪ್ಪನೆಂದು ಅಭಿಧಾನ ಈ ಕಾರಣದಿಂದಲೇ ಬಂದಿತೆಂದು ತೋರುತ್ತದೆ. ಸೋಮಶೇಖರರಾಜ, ವೀರಭದ್ರನಾಯಕ, ಬಸವಪ್ಪನಾಯಕ ಇವರು ಆಳಿದ ಕಾಲ ಅನುಕ್ರಮವಾಗಿ (ಕ್ರಿ. ಶ. ೧೭೧೫–೧೭೪೦, ಕ್ರಿ. ಶ. ೧೭೪೦–೧೭೫೫). ಆದುದರಿಂದ ಡಂಬಳ ಸಂಸ್ಥಾನ ಮಠವು ಈ ಅವಧಿಯಲ್ಲಿ ಪ್ರಾರಂಭವಾಗಿರಬೇಕು.

ಅರ್ಧನಾರೀಶ್ವರಸ್ವಾಮಿಗಳ ತರುವಾಯ ಬಂದ ಈಸೂರು ನಂದೀಶ್ವರ ಸ್ವಾಮಿಗಳು ಕೆಳದಿಯ ಬಸವಪ್ಪನಾಯಕ, ಅಣ್ಣಿಗೇರಿಯ ನಾಗಪ್ಪ ದೇಶಪಾಂಡೆ ಇವರಿಂದ ಸನ್ಮಾನ, ದತ್ತಿಗಳನ್ನು ಪಡೆದಿರುವರು. ಅಣ್ಣಿಗೇರಿ ದೇಶಪಾಂಡೆಯವರು ಜೈನಮತಾವಲಂಬಿಗಳಾದರೂ ಇಂದಿಗೂ ತೋಂಟದಾರ್ಯ ಮಠಕ್ಕೆ ನಡೆದುಕೊಳ್ಳುವುದು ವಾಸ್ತವ ಇತಿಹಾಸವಾಗಿದೆ.

ಡಂಬಳ, ಅಣ್ಣಿಗೇರಿ, ಗದಗು ಈ ಮೂರು ಸ್ಥಳಗಳು ತೋಂಟದಾರ್ಯ ಕೇಂದ್ರಗಳಾಗಿ ಕ್ರಮೇಣ ಪರಿವರ್ತನ ಹೊಂದುತ್ತವೆ. ವಿಶೇಷತಃ ಗದಗು ಮತ್ತು ಡಂಬಳಗಳಲ್ಲಿ ಇಂದಿಗೂ ಆ ಪರಂಪರೆ ಮುಂದುವರಿದು ಬಂದುದರ ಕುರುಹಾಗಿ ಅಲ್ಲಿಯ ಜಗದ್ಗುರುಗಳು ಶೋಭಾಯಮಾನರಾಗಿದ್ದಾರೆ.

ನಿರಂಜನ ಜಂಗಮವಂಶದರ್ಪಣವು ಸಿದ್ಧೇಶ್ವರ ಸ್ವಾಮಿಗಳ ಚರಿತ್ರೆಯ ವರೆಗೆ ಬಂದು ನಿಂತಿದೆ. ಇದಕ್ಕೆ ಕಾರಣ ಗ್ರಂಥಕರ್ತರು ಆ ಸ್ವಾಮಿಗಳ ಸಮಕಾಲೀನರು. ಆ ಮೇಲೆ ಇರ್ವರು ಮಹಾಸ್ವಾಮಿಗಳು ಜಗದ್ಗುರು ಪೀಠವನ್ನೇರಿರುವರು. ಅದರ ವಿವರ ಹೀಗೆ—

(೧) ಗುರುಬಸವಸ್ವಾಮಿಗಳು
(೨) ಶಿವಕುಮಾರಸ್ವಾಮಿಗಳು

ಈ ಮಹಾಸ್ವಾಮಿಗಳು ಸಂಸ್ಕೃತ ಪಾಠಶಾಲೆ, ಉಚಿತ ಪ್ರಸಾದನಿಲಯಗಳನ್ನು ಸ್ಥಾಪಿಸಿದುದಲ್ಲದೆ ಲಕ್ಷಾಂತರ ರೂಪಾಯಿ ದಾನವಾಗಿತ್ತು ಗದುಗಿನಲ್ಲಿ ಶ್ರೀ ಜಗದ್ಗುರು ತೋಂಟದಾರ್ಯ ಆರ್ಟ್ಸ್ ಆ್ಯಂಡ ಸೈನ್ಸ ಕಾಲೇಜ ಸ್ಥಾಪನೆಗೆ ಕಾರಣರಾದರು.

ಕೆಳದಿಯ ಸೋಮಶೇಖರರಾಜ ಮತ್ತು ಬಸವಪ್ಪನಾಯಕ ಇವರು ರಾಜ್ಯಭಾರ ಮಾಡಿದ ಕಾಲ ಅನುಕ್ರಮವಾಗಿ ಈ ಹಿಂದೆ ಹೇಳಿರುವ ಹಾಗೆ ಕ್ರಿ. ಶ. ೧೭೧೪–೧೭೪೦, ಕ್ರಿ. ಶ. ೧೭೪೦–೧೭೫೫ರ ವರೆಗೆ. ಈ ಅವಧಿಯಲ್ಲಿ ತೋಂಟದಾರ್ಯ ಪೀಠದ ಅರ್ಧನಾರೀಶ್ವರ ಸ್ವಾಮಿಗಳು ಮತ್ತು ಈಸೂರು ನಂದೀಶ್ವರ ಸ್ವಾಮಿಗಳು ಜೀವಿಸಿರುವರು. ಈ ಮಹಾಸ್ವಾಮಿಗಳಿಗೆ ಮೇಲಿನ ರಾಜದ್ವಯರು ಸನ್ಮಾನವಿತ್ತ ವಿಷಯವನ್ನು ದರ್ಪಣ ಉಲ್ಲೇಖಿಸುತ್ತದೆಯೆಂದು ಮೇಲೆ ವಿವರಿಸಲಾಗಿದೆ. ಕೆಳದಿ ನೃಪವಿಜಯವು ಬಸವಪ್ಪ ನಾಯಕರು ತೋಂಟದಾರ್ಯ ಪೀಠದ ಡಂಬಳದ ಸಂಸ್ಥಾನಮಠಕ್ಕೆ ದಾನದತ್ತಿಗಳನ್ನಿತ್ತ ವಿಷಯವನ್ನು ವಿವರಿಸುತ್ತದೆ.

**ವರವೇಣುಪುರದ ಮಧ್ಯದ ।**
**ವರ ಬಾಳೆಯ ಕೊಪ್ಪದೆಡೆಯ ಪಶ್ಚಿಮದೆಸೆಯೊಳ್ ।**
**ಸುರುಚಿರಮಠಮಂ ಭೂಮೀ ।**
**ಶ್ವರಮಣಿ ಬಸವಾವನೀಶ್ವರಂ ಕಟ್ಟಿಸಿದಂ ॥**

ಇಂತು ಮಠಮಂ ನಿರ್ಮಾಣಂಗೆಯ್ಸಿ ಆ ಸ್ಥಳಕ್ಕೆ ಭದ್ರರಾಜ ಪುರವೆಂದು ನಾಮಾಂಕಿತಂಗೆಯ್ದು ಭೂರಿಭೂಸ್ವಾಸ್ತಿಯಂ ಕಲ್ಪಿಸಿ ದುರ್ಮತಿ ಸಂವತ್ಸರದ ಕಾರ್ತಿಕ ಮಾಸದೊಳ್ ಡಂಬಳದ ಸಿದ್ಧೇಶ್ವರ ದೇವರ ಗದ್ದುಗೆ ತೋಂಟದ ಸ್ವಾಮಿಗಳ್ಗೆ ಶಿವಾರ್ಪಿತಮಾಗೆ ಧಾರೆಯನೆರೆದು ಶಾಶ್ವತಮಾದ ಧರ್ಮಕೀರ್ತಿಯಂ ಸಂಪಾದಿಸಿದಂ.[೧]

ಬಸವಪ್ಪನಾಯಕನು ವೇಣುಪುರದಲ್ಲಿ ಮಠವನ್ನು ಕಟ್ಟಿಸಿ ಡಂಬಳದ ತೋಂಟದ ಸಿದ್ಧೇಶ್ವರ ಸ್ವಾಮಿಗಳಿಗೆ ಧಾರೆ ಎರೆದಿರುವನೆಂದು ಮೇಲಿನ ಉದ್ಧರಣೆಯ ಮಥಿತಾರ್ಥ.

---

[೧] ಕೆ. ನೃ. ವಿ. ಪು. ೧೧-೧೭

ಇದಲ್ಲದೆ ಮಂತ್ರರಾಜಪುರ, ಡಂಬಳಗಳಲ್ಲಿ ಸಿದ್ಧೇಶ್ವರ ರಥೋತ್ಸವ ನಡೆಯುವಂತೆ ಕಟ್ಟಳೆಯನ್ನಿತ್ತನು. ಈ ಉದ್ಧರಣೆಗಳಿಂದ ಡಂಬಳದ ತೋಂಟದಾರ್ಯರ ಪೀಠದ ಬಗೆಗೆ ಕೆಳದಿಯ ಬಸವಪ್ಪ ನಾಯಕರು ಪ್ರಕಟಪಡಿಸಿದ ಭಕ್ತಿಭಾವವು ಸ್ಪಷ್ಟವಾಗಿ ತೋರುತ್ತದೆ. ನಿರಂಜನವಂಶ ದರ್ಪಣದಲ್ಲಿ ಈ ಸಂಗತಿಗಳು ತೋರದಿದ್ದರೂ ಅರ್ಧನಾರೀಶ್ವರ ಸ್ವಾಮಿಗಳು ಹಾಗೂ ಈಸೂರ ನಂದೀಶ್ವರ ಸ್ವಾಮಿಗಳು ಸೋಮಶೇಖರನಾಯಕ ಮತ್ತು ಬಸವಪ್ಪನಾಯಕರ ಕಾಲಾವಧಿಯಲ್ಲಿ ಜೀವಿಸಿದ್ದರೆಂದೂ ಅವರಿಗೆ ಈ ನಾಯಕರು ಭಕ್ತಿಯ ಕಾಣಿಕೆಗಳನ್ನರ್ಪಿಸಿರುವರೆಂದೂ ತಿಳಿಯಪಡಿಸುತ್ತದೆ. ದರ್ಪಣದಲ್ಲಿ ಈ ಸ್ವಾಮಿಗಳ ವಿಷಯವಾಗಿ ಬರುವ ಕಾಲಾವಧಿಯು ಕೆಳದಿನೃಪವಿಜಯದಲ್ಲಿ ಬರುವ ಕಾಲಾವಧಿಗೆ ಸರಿಹೋಗುವಂತಿದೆ.

ಈ ವಿವೇಚನೆಯಲ್ಲಿ ಗದುಗು ಮತ್ತು ಡಂಬಳಗಳು ತೋಂಟದಾರ್ಯ ಪರಂಪರೆಯ ಪೀಠದ ಎರಡು ಕಣ್ಣುಗಳಿದ್ದಂತಿವೆ. ಅವುಗಳಲ್ಲಿ ಗದುಗಿನ ಪೀಠವು ಕಟ್ಟಿಗೆಹಳ್ಳಿ ರಾಚೋಟಿ ಸ್ವಾಮಿಗಳ ಕಾಲದಿಂದ (ಕ್ರಿ. ಶ. ೧೫೬೦–೧೬೧೦) ಅಂದರೆ ಕನಿಷ್ಠ ಹದಿನೇಳನೆಯ ಶತಮಾನದ ಆರಂಭಕಾಲದಿಂದ ಅಸ್ತಿತ್ವದಲ್ಲಿ ಇದೆಯೆಂದು ತಿಳಿದುಬರುತ್ತದೆ. ಡಂಬಳದ ಪೀಠವು ಅರ್ಧನಾರೀಶ್ವರ ಸ್ವಾಮಿಗಳ ಕಾಲದಲ್ಲಿ (ಕ್ರಿ. ಶ. ೧೬೭೫–೧೭೭೫) ಪ್ರಾರಂಭವಾದಂತೆ ಊಹಿಸಬಹುದಾಗಿದೆ. ಗದುಗಿನ ಪೀಠವನ್ನು ಮೊದಲು ಅಲಂಕರಿಸಿದವರು ಕರಿಬಸವ ಸ್ವಾಮಿಗಳೆಂದು ತೋರುತ್ತದೆ. ಮೃತ್ಯುಂಜಯ ಸ್ವಾಮಿಗಳಿಂದ (ಕ್ರಿ. ಶ. ೧೮೮೧) ಮುಂದೆ ಬಂದ ಸ್ವಾಮಿಗಳೆಲ್ಲ ಗದುಗಿನ ಪೀಠವನ್ನೇರಿದವರೇ.

## ಶಿಷ್ಯವೃಂದ

ತೋಂಟದ ಸಿದ್ಧಲಿಂಗಯತಿಗಳು ಅತ್ಯಂತ ಮಹಿಮಾಶಾಲಿಗಳಾಗಿದ್ದರೆಂದು ಇದುವರೆಗಿನ ವಿವೇಚನೆಯಿಂದ ವಿದಿತವಾಗುತ್ತದೆ. ಪ್ರಭುದೇವರ ಅಪರಾವತಾರವೆನಿಸಿದ ಶ್ರೀಸಿದ್ಧಲಿಂಗ ಶಿವಯೋಗಿಗಳ ಶಿಷ್ಯಪರಂಪರೆ ನಾಡಿನ ತುಂಬ ಚೆಲ್ಲವರೆದಿರುವುದು ಸ್ವಾಭಾವಿಕ. ಎಡೆಯೂರು ಒಳ್ಳೆಯ ಜಾಗ್ರತ ಸ್ಥಾನವೆಂದು ಪರಿಗಣಿತವಾಗಿದೆ. ಲಕ್ಷೋಪಲಕ್ಷ ಜನರು ಸಿದ್ಧಲಿಂಗ ಶಿವಯೋಗಿಗಳ ಸಮಾಧಿಯನ್ನು ಸಂದರ್ಶಿಸಿ ತಮ್ಮ ಭಕ್ತಿಯ ಕಾಣಿಕೆಗಳನ್ನು ಸಮರ್ಪಿಸಿ ವರುಷವರುಷ ಪುನೀತರಾಗುತ್ತಿರುವುದು ಸರ್ವಶ್ರುತವಿದೆ. ಆದರೆ ಪ್ರಸ್ತುತದಲ್ಲಿ ಮಹತ್ವವಿರುವುದು ಈ ಪ್ರಶ್ನೆಯಲ್ಲ. ಕನ್ನಡ ಸಂಸ್ಕೃತ ವಾಙ್ಮಯಗಳಲ್ಲಿ ಚಿರಂತನ ಸೇವೆಯನ್ನು ಮಾಡಿದ ಅನೇಕ ಜನ ಕವಿಗಳೂ ಶರಣರೂ ತಮ್ಮ ಗುರುಪರಂಪರೆಯನ್ನು ತೋಂಟದ ಸಿದ್ಧಲಿಂಗ ಯತಿಗಳಿಂದ ಆರಂಭಿಸಿ ಅವರ ದಿವ್ಯ ಶ್ರೀಪಾದಕ್ಕೆ ನಮಸ್ಕರಿಸಿ ಕಾವ್ಯಗಳನ್ನು ರಚಿಸಿರುವರು. ಇಂತಹ ಸಾಹಿತ್ಯ ಶರಣರು, ಪರಮ ತಪಸ್ವಿಗಳು ತೋಂಟದ ಸಿದ್ಧಲಿಂಗೇಶ್ವರ ಶಿಷ್ಯಪರಂಪರೆಯಲ್ಲಿ ಆಳವಟ್ಟಿರುವುದು ಅಪೂರ್ವ ಮತ್ತು ವಿಶೇಷವೆಂದೇ ಹೇಳಬೇಕು. ಅಂತಹ ಶಿಷ್ಯವೃಂದದಲ್ಲಿ ಕೆಲವರನ್ನು ಇಲ್ಲಿ ಉಲ್ಲೇಖಿಸಿದರೆ ಅಪ್ರಸ್ತುತವೆನಿಸಲಾರದು.

೧. ತೋಂಟದ ಸಿದ್ಧಲಿಂಗ ಶಿವಯೋಗಿಗಳು
ಶಿಷ್ಯ
|
ಗುಬ್ಬಿಯ ಮಲ್ಲಣ್ಣ (ಕ್ರಿ. ಶ. ೧೪೭೫)
|
ಮಂಗ
ಗುರುಭಕ್ತ
|
ಮಂಗ
ಗುಬ್ಬಿಯ ಮಲ್ಲಣಾರ್ಯ
|
ಶಾಂತೇಶ

೨. ತೋಂಟದ ಸಿದ್ಧಲಿಂಗ ಶಿವಯೋಗಿಗಳು
|
ಬೋಳಬಸವ
|
ಹರತಾಳ ಚೆನ್ನಂಜೆ ದೇವರು
|
ಎಳಮಲೆಯ ಗುರುಶಾಂತದೇವ
|
ಸಂಪಾದನೆಯ ಸಿದ್ಧವೀರಣಾರ್ಯ
|
ಸಂಪಾದನೆಯ ಬೋಳ ಬಸವದೇವರು
|
ಸಂಪಾದನೆಯ ಗುರುಲಿಂಗದೇವ

---

೧ ಶಾಂತೇಶನ ಸಿದ್ಧೇಶ್ವರ ಪುರಾಣದಿಂದ ಈ ವಿಷಯ ವಿದಿತವಾಗುತ್ತದೆ.

೨ ಸಂಪಾದನೆಯ ಗುರುಲಿಂಗದೇವರ "ಶೀಲವಂತಯ್ಯನ ತ್ರಿವಿಧಿಯ ವ್ಯಾಖ್ಯಾನ"ದಿಂದ ಉದ್ಧೃತವಾದುದು.

೩. ತೋಂಟದ ಸಿದ್ಧಲಿಂಗ ಶಿವಯೋಗಿಗಳು

|

ಬೋಳ ಬಸವ

|

ಗೂಳೂರ ಸಿದ್ಧಲಿಂಗಯ್ಯ

|

ಗುಮ್ಮಳಾಪುರದ ಸಿದ್ಧವೀರಯ್ಯ

|

ಗಗನದಯ್ಯ

|

ಕಟ್ಟಿಗೆಹಳ್ಳಿ ಸಿದ್ಧಲಿಂಗ

|

ಮುರಿಗೆಯ ಶಾಂತವೀರೇಶ

|

ಮುರಿಗೆಯ ಗುರುಸಿದ್ಧೇಶ್ವರ

|

ಸೋಮಶೇಖರ ಶಿವಯೋಗಿ

೪. ತೋಂಟದ ಸಿದ್ಧಲಿಂಗ ಶಿವಯೋಗಿಗಳು

|

ಬೋಳ ಬಸವ

|

ಚೆನ್ನಾಚಾರ್ಯ

|

ಮಲಯ ಗುರುಶಾಂತೇಶ

|

ಸಂಪಾದನೆಯ ಸಿದ್ಧವೀರೇಶ

|

ಚೆನ್ನಮಲ್ಲಿಕಾರ್ಜುನದೇವ

|

ಸಂಪಾದನೆಯ ಪರ್ವತೇಶ

|

ವಿರಕ್ತ ತೋಂಟದಾರ್ಯ

---

೩ ಸೋಮಶೇಖರ ಶಿವಯೋಗಿಯ ತೋಂಟದ "ಸಿದ್ಧಲಿಂಗನ ಷಟ್‌ಸ್ಥಲ ಜ್ಞಾನಸಾರಾಮೃತದ ಟೀಕೆ"ಯಿಂದ.

೪ ಸಂಪಾದನೆಯ ಪರ್ವತೇಶನ ಚತುರಾಸ್ಯ ಪುರಾಣ ಮತ್ತು ವಿರಕ್ತ ತೋಂಟದಾರ್ಯರ "ಪಾಲ್ಕುರಿಕೆ ಸೋಮನಾಥ ಪುರಾಣ"ಗಳ ಆಧಾರದಿಂದ.

೫. ತೋಂಟದ ಸಿದ್ಧಲಿಂಗ
|
ಬೋಳಬಸವ
|
ಕಟ್ಟಿಗೆಹಳ್ಳಿ ಸಿದ್ಧವೀರದೇವ
|
ಮುರಿಗೆಯ ಶಾಂತವೀರ
|
ಮಹಾಂತಸ್ವಾಮಿ — ಕೆಂಪ ನಂಜಯ್ಯ
|
ಇಮ್ಮಡಿ ಮುರಿಗೆ ಸ್ವಾಮಿ

೬. ತೋಂಟದ ಸಿದ್ಧಲಿಂಗ ಶಿವಯೋಗಿಗಳು
|
ಅರ್ಧನಾರೀಶ್ವರ ಸ್ವಾಮಿಗಳು
|
ಮರಿತೋಂಟದಾರ್ಯರು

೫ ಮಹಾಂತಸ್ವಾಮಿ ವಿರಚಿತ ನಾಂದ್ಯದಿಂದ.

೬ ಮರಿತೋಂಟದಾರ್ಯರ "ವೀರಶೈವಾನಂದ ಚಂದ್ರಿಕೆ"ಯಿಂದ.

೭. ತೋಂಟದ ಸಿದ್ಧಲಿಂಗ ಶಿವಯೋಗಿಗಳು
|
ತೋಂಟದ ಭೂಪಾಲ
|
ಮಂಗ
ಇಮ್ಮಡಿ ತೋಂಟದಯ್ಯ

೭ ಇಮ್ಮಡಿ ತೋಂಟದಯ್ಯನ ವಜ್ರಬಾಹು ಚರಿತೆಯಿಂದ.

೮. ತೋಂಟದ ಸಿದ್ಧಲಿಂಗೇಶ್ವರ
|
ಸ್ವತಂತ್ರ ಸಿದ್ಧಲಿಂಗೇಶ್ವರ

೯. ತೋಂಟದ ಸಿದ್ಧಲಿಂಗ
|
ಸಾನಂದ ಶಿವಯೋಗಿ

೧೦. ತೋಂಟದ ಸಿದ್ಧಲಿಂಗ
|
ಗುಬ್ಬಿಯ ಮಲ್ಲಣ್ಣ
|
ಮಲ್ಲಿಕಾರ್ಜುನ ಕವಿ

೧೧. ತೋಂಟದ ಸಿದ್ಧಲಿಂಗ
|
ಬೋಳ ಬಸವ
|
ಆನಂದ ಬಸವಲಿಂಗ ಶಿವಯೋಗಿ

೧೨. ತೋಂಟದ ಸಿದ್ಧಲಿಂಗ ಶಿವಯೋಗಿಗಳು
|
ಶಾಂತಮಲ್ಲ

---

೮ ಕವಿಚರಿತೆಯ ಆಧಾರದಿಂದ.

೯ ಸಾನಂದ ಶಿವಯೋಗಿಯ "ವೀರಮಾಹೇಶ್ವರಾಚಾರ ಸಾರೋದ್ಧಾರ"ದ ಟೀಕೆಯಿಂದ.

೧೦ ಮಲ್ಲಿಕಾರ್ಜುನ ಕವಿಯ "ಶ್ವೇತನ ಸಾಂಗತ್ಯ"ದಿಂದ.

೧೧ ಆನಂದ ಬಸವಲಿಂಗ ಶಿವಯೋಗಿಯ "ಮಾಚಿದೇವ ಮನೋವಿಲಾಸ"ದ ಆಧಾರದಿಂದ.

೧೨. ತೋಂಟದ ಸಿದ್ಧಲಿಂಗ
|
ಗೂಳೂರ ಸಿದ್ಧವೀರ
|
ಹರೀಶ್ವರ

೧೩. ತೋಂಟದ ಸಿದ್ಧಲಿಂಗ
|
ಮುರಿಗಾಚಾರ್ಯ
|
ಚೆನ್ನವೃಷಭೇಂದ್ರ
|
ಸಿದ್ಧಲಿಂಗ ಶಿವಯೋಗಿ

---

೧೨. ಹರೀಶ್ವರನ ಪ್ರಭುದೇವರ ಪುರಾಣದ ಆಧಾರದಿಂದ.

೧೩. ಸಿದ್ಧಲಿಂಗ ಶಿವಯೋಗಿಯ "ಭೈರವೇಶ್ವರ ಪುರಾಣ"ದ ಆಧಾರದಿಂದ.

ಹೀಗೆ ಕನ್ನಡ ಸಂಸ್ಕೃತ ಸಾರಸ್ವತ ಪ್ರಪಂಚದಲ್ಲಿ ಶಿವಯೋಗಿ ತೋಂಟದಾರ್ಯರು ಹೊತ್ತಿಸಿದ ನಂದಾದೀಪ ಚಿರಂತನವಾಗಿ ಮಿನುಗುತ್ತಲಿದೆ. ಅವರ ಅಸಂಖ್ಯಾತವಾದ ಶಿಷ್ಯಪರಂಪರೆಯಲ್ಲಿ ಕೆಲವರ ಹೆಸರುಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ. ತೋಂಟದಾರ್ಯರು ದಿವ್ಯಶಕ್ತಿಯಾಗಿದ್ದರೆಂಬುದಕ್ಕೆ ಇದೊಂದು ನಿದರ್ಶನ ಸಾಕು. ಪ್ರಾಯಶಃ ಸಾರಸ್ವತಪ್ರಪಂಚದಲ್ಲಿ ಇಂತಹ ಉಜ್ವಲವಾದ ಶಿಷ್ಯಪರಂಪರೆಯನ್ನು ಪಡೆದ ಸಾಹಿತ್ಯ ಗುರು ಬೇರೊಬ್ಬರಿರಲಿಕ್ಕಿಲ್ಲವೆನಿಸುತ್ತದೆ.

# ತತ್ವವಿವೇಚನೆ

## ಹಿನ್ನೆಲೆ

ಭರತಖಂಡವು ದರ್ಶನಗಳ ನೆಲೆವೀಡೆಂದು ನೆಗಳ್ತೆವೆತ್ತಿದೆ. ಈ ಜನತೆಗೆ ಭೌತಿಕ ಆಸಕ್ತಿಗಿಂತಲೂ ಪಾರಮಾರ್ಥಿಕ ಜಿಜ್ಞಾಸೆ ಹೆಚ್ಚು. ವೇದಮಂತ್ರಗಳು 'ವಸು' ವೈಭವವನ್ನು ವಿಪುಲವಾಗಿ ಎತ್ತಿ ಹಿಡಿದುವು; ಭೌತಿಕ ಜೀವನದ ಸಾರವನ್ನು ಸಾರಿದವು. ಆದರೂ ಧರ್ಮ, ಕಾಮ, ಮೋಕ್ಷಗಳೇ ವೇದಕಾಲೀನ ಭಾರತೀಯರ ಸಮಗ್ರಜೀವನದ ಪುರುಷಾರ್ಥಗಳೆಂದು ನಿರ್ಣೀತವಾದುವು. ಋಗ್ವೇದದ ನಾಸದೀಯಸೂಕ್ತ ಇದಕ್ಕೆ ನಿದರ್ಶನ. ಆ ಸೂಕ್ತವು ಮುಂದೆ ಬಂದ ಅನೇಕ ಸಿದ್ಧಾಂತಸೆಲೆಗಳಿಗೆ ನೆಲೆಯಾಯಿತು. ತತ್ಪೂರ್ವದಲ್ಲಿಯೂ ತತ್ವಾನ್ವೇಷಣೆ ಈ ನಾಡಿನಲ್ಲಿ ಪ್ರಾದುರ್ಭವಿಸಿರಬೇಕೆಂದು ಮೊಹೆಂಜೋದಾರೋ, ಹರಪ್ಪಾ ಅವಶೇಷಗಳನ್ನು ಅವಲೋಕಿಸಿದವರ ಅಭಿಮತ. ಅಂದರೆ ಭಾರತೀಯ ತತ್ವಮೀಮಾಂಸೆಗೆ ಸುಮಾರು ೫೦೦೦ ವರ್ಷಗಳ ಹಳಮೆಯನ್ನು ಹೇಳಬಹುದು.[೧]

ಉಪನಿಷತ್ತುಗಳು ತತ್ವಜಿಜ್ಞಾಸೆಯ ಮಹಾಮೇರುಕೃತಿಗಳು. ಇವು ಪರಬ್ರಹ್ಮದ ಅಸ್ತಿತ್ವವನ್ನು ಆಧರಿಸಿದ ಅನೇಕ ಆಸ್ತಿಕ ಸಿದ್ಧಾಂತಗಳಿಗೆ ಆಧಾರ ಗ್ರಂಥಗಳು. ಒಂದೆಡೆ ಆಸ್ತಿಕ ಪಂಥಗಳ ಆಧಿಕ್ಯವಿದ್ದರೆ ಇನ್ನೊಂದೆಡೆ ನಾಸ್ತಿಕ ಪಂಥಗಳೂ ತಲೆದೋರಿದುವು.

ನಾಸ್ತಿಕ ಪಂಥಗಳೆನಿಸಿದ ಚಾರ್ವಾಕ, ಜೈನ, ಬೌದ್ಧದರ್ಶನಗಳು ವೇದಪ್ರಮಾಣವನ್ನು ಒಪ್ಪಿಕೊಳ್ಳಲಿಲ್ಲ. ಸಾಂಖ್ಯ, ಯೋಗ, ಪೂರ್ವಮೀಮಾಂಸೆ, ಉತ್ತರಮೀಮಾಂಸೆಗಳು ವೇದಪ್ರಮಾಣಗಳ ಮೇಲೆಯೇ ನಿಂತವು. ಇವನ್ನು ವೇದಾರ್ಥ ವಿಚಾರ ಶಾಸ್ತ್ರವೆಂದೇ ಕರೆಯುತ್ತಾರೆ. ಇದರಂತೆ ನ್ಯಾಯ, ವೈಶೇಷಿಕಗಳೆರಡೂ ಜೊತೆಜೊತೆಯಾಗಿಯೇ ಹೋಗುತ್ತವೆ. ನ್ಯಾಯ ಪ್ರಮಾಣಶಾಸ್ತ್ರವಾದರೆ, ವೈಶೇಷಿಕ ಪ್ರಮೇಯಶಾಸ್ತ್ರ. ಬೌದ್ಧಧರ್ಮದ ಪ್ರಭಾವವು ಭರತಖಂಡವನ್ನೆಲ್ಲ ವ್ಯಾಪಿಸಿರಲು ಶಂಕರಾದ್ವೈತವು ಪ್ರಾದುರ್ಭವಿಸಿತು. ಶಂಕರಾಚಾರ್ಯರು ಈ ಅದ್ವೈತಪಂಥದ ಪ್ರತಿಷ್ಠಾಪನಾಚಾರ್ಯರು. ಅಲ್ಲಿ ಬ್ರಹ್ಮಸತ್ಯ ಜಗತ್ತು ಮಿಥ್ಯ. ಅಭ್ಯಾಸದಿಂದ ಈ ಜಗತ್ತು ಬ್ರಹ್ಮನಲ್ಲಿ ಕಲ್ಪಿತವಾಗಿ ತೋರುತ್ತದೆ. ನಿಜಜ್ಞಾನಕ್ಕೆ ಗೋಚರವಾಗುವುದು ಪರಬ್ರಹ್ಮವೊಂದೇ. ಈ ಕೇವಲಾದ್ವೈತಕ್ಕೆ ಪ್ರತಿಯಾಗಿ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವು ಅವತರಿಸಿತು. ಚಿತ್, ಅಚಿತ್ ಮತ್ತು ಚಿದಚಿತ್ ತತ್ವಗಳನ್ನೊಪ್ಪಿಕೊಂಡ ಈ ಸಿದ್ಧಾಂತವು ಅದ್ವೈತವನ್ನು

---

[೧] ಮೊಹೆಂಜೋದಾರೋ ಹರಪ್ಪಾ ಸಂಸ್ಕೃತಿಯ ಕಾಲ ಕ್ರಿ. ಶ. ಪೂ. ೩೦೦೦ ವರ್ಷ. Vide "Mohenjodaro and Indus Valley Civilization" Preface Page VII—Sir Johan Marshall.

ಎತ್ತಿ ಹಿಡಿಯಿತು. ಆದರೆ ಅದು ವಿಶಿಷ್ಟಾದ್ವೈತ. ಮುಂದೆ ಕೇವಲಾದ್ವೈತ, ವಿಶಿಷ್ಟಾದ್ವೈತಗಳಿಗೆ ಪ್ರತಿಸ್ಪರ್ಧಿಯಾಗಿ ಮಧ್ವಾಚಾರ್ಯರ ದ್ವೈತದರ್ಶನ ಎದ್ದುನಿಂತಿತು. ಇಲ್ಲಿ ಜೀವಜೀವರಲ್ಲಿ, ಜಡಜಡಗಳಲ್ಲಿ, ಜೀವಪರಮಾತ್ಮರಲ್ಲಿ, ಜೀವಜಡರಲ್ಲಿ, ಜಡ ಪರಮಾತ್ಮರಲ್ಲಿ ಭೇದವನ್ನು ಕಲ್ಪಿಸಿದರು. ಜೀವಾತ್ಮನು ಪರಮಾತ್ಮನಲ್ಲಿ ಬೆರಸದೆ ಅವನ ಸನ್ನಿಧಿಯಲ್ಲಿ ನಿಂತು ಸಾಲೋಕ್ಯ, ಸಾರೂಪ್ಯ, ಸಾಯುಜ್ಯ ಮುಂತಾದ ಪದವಿಗಳನ್ನು ಪಡೆಯುತ್ತಾನೆ.

ಹೀಗೆ ಭರತಖಂಡದಲ್ಲಿ ಅನೇಕ ದರ್ಶನಗಳು ತಲೆದೋರಿದುವು. ಇಂದಿಗೂ ತಲೆದೋರುತ್ತಲಿವೆ. ಆದರೆ ಈ ದರ್ಶನಗಳನ್ನು ಕುರಿತು ವಿವೇಚನೆಮಾಡಿದವರು, ಅವುಗಳ ಸಂಗ್ರಹಮಾಡಿದವರು, ಎಲ್ಲ ದರ್ಶನಗಳನ್ನೂ ಉಲ್ಲೇಖಮಾಡದಿರುವುದೊಂದು ಸೋಜಿಗದ ಸಂಗತಿಯಾಗಿದೆ. ಸಾಮಾನ್ಯವಾಗಿ ಷಡ್ದರ್ಶನಗಳು ಎಂಬ ಪದ ಮೇಲಿಂದ ಮೇಲೆ ನಮ್ಮ ಶಾಸ್ತ್ರಗ್ರಂಥಗಳಲ್ಲಿ ಕೇಳಬರುತ್ತದೆ. ಈ ಷಡ್ದರ್ಶನಗಳಲ್ಲಿ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸೆ, ಉತ್ತರ ಮೀಮಾಂಸೆಗಳು ಅಡಕವಾಗುತ್ತವೆ. ಮಿಕ್ಕ ದರ್ಶನಗಳನ್ನು ಬಿಟ್ಟು ಈ ದರ್ಶನಗಳ ವರ್ಗಕ್ಕೆ ಏಕೆ ಮಹತ್ವ ಬಂದಿತೆಂಬುದು ವಿಚಾರಾರ್ಹವಾಗಿದೆ. ಆದರೆ ಷಡ್ದರ್ಶನಗಳಲ್ಲದೆ ಮಿಕ್ಕ ದರ್ಶನಗಳೂ ಈ ನಾಡಿನಲ್ಲಿ ಇದ್ದುವೆಂಬುದಕ್ಕೆ ಮೇಗಣ ವಿವರಣೆಯೇ ಸಾಕ್ಷಿ. ಷಡ್ದರ್ಶನಗಳ ಮಾಲಿಕೆಯಲ್ಲಿ, ಸರ್ವದರ್ಶನಗಳ ಸಂಗ್ರಹದಲ್ಲಿ, ಸ್ವಸಿದ್ಧಾಂತ ಪ್ರತಿಷ್ಠಾಪನೆಗಾಗಿ ಮಾಡುವ ಪರಮತಗಳ ಖಂಡನೆಯಲ್ಲಿ, ಹಲವು ದರ್ಶನಗಳ ನಾಮನಿರ್ದೇಶನವಾಗದಿದ್ದಲ್ಲಿ ಅಂಥ ದರ್ಶನಗಳೇ ಅಸ್ತಿತ್ವದಲ್ಲಿರಲಿಲ್ಲವೆಂದೂ, ಅವು ಮುಖ್ಯವಾದವುಗಳಲ್ಲವೆಂದೂ ತಿಳಿಯತಕ್ಕುದಲ್ಲ. ಷಡ್ದರ್ಶನಗಳಲ್ಲಿ, ಜೈನ, ಬೌದ್ಧದರ್ಶನಗಳು ಅಡಕವಾಗದಿದ್ದರೆ ಅವುಗಳ ಮಹತಿ ಕಡಿಮೆಯೆಂದು ಹೇಳಬೇಕೆ? ಇದರಂತೆ ಶೈವದರ್ಶನವು ಈ ದರ್ಶನಗಳ ಮಾಲಿಕೆಯಲ್ಲಿ ಅಂತರ್ಗತವಾಗದಿದ್ದರೆ ಅದರ ಬೆಲೆಯೇನೂ ಕಡಿಮೆಯಲ್ಲ. ಇವೆಲ್ಲ ದರ್ಶನಗಳಿಗಿಂತಲೂ ಶೈವದರ್ಶನವು ವ್ಯಾಪ್ತಿ ತತ್ವನಿರೂಪಣೆಗಳ ದೃಷ್ಟಿಯಲ್ಲಿ ಅತ್ಯಂತ ಪುರಾತನವೂ ವ್ಯಾಪಕವೂ ಆಳವೂ ಸಶಾಸ್ತ್ರೀಯವೂ ಆಗಿದೆಯೆಂದು ಹೇಳಬಹುದು. ಮೇಲೆ ನಿರ್ದೇಶಿಸಿದ ಮೊಹೆಂಜೋದಾರೋ ಹರಪ್ಪಾ ಸಂಸ್ಕೃತಿಯು ಈ ಶೈವದರ್ಶನಕ್ಕೆ ಸಂಬಂಧಪಟ್ಟುದೆಂದು ಸಂಶೋಧಕರ ಅಭಿಮತವಿದೆ. ಪ್ರಸ್ತುತ ವೀರಶೈವ ಸಿದ್ಧಾಂತವು ಈ ಶೈವಮಹಾವೃಕ್ಷದ ಸುಮಧುರಫಲ.

## ಶೈವ ದರ್ಶನಗಳು

### ಶೈವಧರ್ಮ

ಶೈವಧರ್ಮವು ಜಗತ್ತಿನ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದು. ಆ ಧರ್ಮದ ಅಧಿದೇವತೆ ಶಿವ. ಶಿವ ಮತ್ತು ರುದ್ರ ಎಂಬಿವು ಅರ್ಥವಿಶೇಷದಲ್ಲಿ ವ್ಯತ್ಯಾಸವಿದ್ದರೂ ಕಾಲಾಂತರದಲ್ಲಿ ಪರ್ಯಾಯ ಪದಗಳಾಗಿ ಪರಿಣಮಿಸಿವೆ. ರುದ್ರ ಎಂಬುದು ಅತ್ಯಂತ

ಭೀಕರಸ್ವರೂಪವನ್ನು ಅಭಿವ್ಯಕ್ತಗೊಳಿಸಿದರೆ[೧] ಶಿವ ಎಂಬುದು ಮಂಗಲಾರ್ಥವನ್ನು[೨] ಸೂಚಿಸುತ್ತದೆ. ಋಗ್ವೇದದಲ್ಲಿ ಹಲವೆಡೆ ರುದ್ರನ ವರ್ಣನೆ ಬರುವುದೊಂದು ವಿಶೇಷ. ಹಾಗೆ ಬಂದಲ್ಲೆಲ್ಲ ಹೆಚ್ಚಾಗಿ ಆತನ ಭೀಕರಸ್ವರೂಪವೇ ವ್ಯಕ್ತವಾಗುತ್ತದೆ. ಆದರೆ ಒಂದೆರಡು ಕಡೆ[೩] ಆತನನ್ನು ಮಂಗಲಪ್ರದನಾದ ಶಿವನೆಂದೂ ಕರೆಯಲಾಗಿದೆ. ಆರಂಭ ದಲ್ಲಿ ಎರಡು ಭಿನ್ನಭಿನ್ನ ಸ್ವರೂಪಗಳನ್ನು ವ್ಯಕ್ತಗೊಳಿಸುತ್ತಿದ್ದ ಈ ಪದಗಳು ಕ್ರಮೇಣ ಸಮಾನಾರ್ಥಕ ಪದಗಳಾಗಿ ಶೈವಧರ್ಮದ ಆರಾಧ್ಯದೇವತೆಯ ಸಂಕೇತಗಳಾದುವು. ಆದುದರಿಂದ ಶೈವಧರ್ಮದ ಪ್ರಾಚೀನತೆಯನ್ನು ಉಲ್ಲೇಖಿಸುವವರು ಅದರ ಬೇರು ಗಳನ್ನು ಋಗ್ವೇದದಲ್ಲಿಯೇ ಕಾಣಬೇಕಾಗುತ್ತದೆ. ಋಗ್ವೇದದ ಕಾಲದ ಬಗೆಗೆ ಭಿನ್ನಾಭಿ ಪ್ರಾಯಗಳಿದ್ದರೂ ಅದು ಕ್ರಿ. ಶ. ಪೂ. ಎರಡು ಸಾವಿರ ವರ್ಷಗಳಷ್ಟಾದರೂ ಪ್ರಾಚೀನ ವಾಗಬಹುದೆಂದು ಊಹಿಸಲು ಅವಕಾಶವಿದೆ.[೪]

ಮೊಹೆಂಜೋದಾರೋ ಹರಪ್ಪಾ ಸಂಸ್ಕೃತಿಯ ಅವಶೇಷಗಳು ಕ್ರಿ. ಶ. ಪೂ. ಸುಮಾರು ಮೂರುಸಾವಿರ ವರುಷಗಳಷ್ಟಾದರೂ ಪ್ರಾಚೀನವೆಂದು ಸಂಶೋಧಕರ ಮತ[೫]. ಅಲ್ಲಿ ಶಿವ, ಸ್ತಂಭಾಕಾರದ ಲಿಂಗ ಮೊದಲಾದ ಕುರುಹುಗಳು ಕಂಡುಬರುವುದ ರಿಂದ ಶೈವಧರ್ಮವು ಆ ಕಾಲದಲ್ಲಿ ರೂಢವಾಗಿರಬಹುದೆಂದು ತಿಳಿಯಲವಕಾಶವಿದೆ. ಇದು ನಿಜವಿದ್ದರೆ ಶೈವಧರ್ಮವು ವೇದಕಾಲಕ್ಕಿಂತಲೂ ಪ್ರಾಚೀನವೆಂದರ್ಥವಾಗುತ್ತದೆ.

ಶೈವಧರ್ಮಕ್ಕೆ ಪ್ರಮಾಣಗ್ರಂಥಗಳು ಶಿವಾಗಮಗಳು. ಅವು ಕಾಮಿಕಾದಿ ವಾತುಲ ಪರ್ಯಂತ ೨೮ ಎಂದು ಪ್ರಸಿದ್ಧವಾಗಿವೆ.[೬] ಕಂಚಿ ಕೈಲಾಸನಾಥ ದೇವಾಲಯದ ಒಂದು

---

[೧] ಋಗ್ವೇದ ೧. ೧೧೪. ೧. ೨, ೪, ೫, ೮, ೧೦.

[೨] He is conceived as a positively benevolent deity when he confers wealth and welfare. Origin and Early History of Saivism in South India, Page 1.

[೩] ಋಗ್ವೇದ ೧. ೧೧೪. ೧ ಮತ್ತು ೪.

[೪] ಋಗ್ವೇದಕಾಲ: ಕ್ರಿ. ಪೂ. ೧೨೦೦–ಮ್ಯಾಕ್ಸಮುಲರ್, ಕ್ರಿ. ಪೂ. ೨೪೦೦–ಹ್ಯಾಂಗ, ಕ್ರಿ.ಪೂ. ೪೦೦೦ ಟಿಳಕ, ಕ್ರಿ. ಪೂ. ೩-೪ ಸಾವಿರ ವರ್ಷ-ಹಂಟರ್.

[೫] Sir John Marshall: Mohengodaro and Indus Valley Civilization Preface P. VII, Prananath; Script of Valley P. 25.

[೬] ಇವುಗಳಿಗೆ ಶೈವಸಿದ್ಧಾಂತ ಸಂಹಿತೆಗಳೆಂಬ ಹೆಸರೂ ಉಂಟು. ಕಾರಣಾಗಮ ಸುಪ್ರಭೇದಾಗಮ ಗಳಲ್ಲಿ ೨೮ ಆಗಮಗಳು ಹೀಗೆ ಉಕ್ತವಾಗಿವೆ; ಕಾಮಿಕ; ಯೋಗಜ, ಆಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮಾನ್. ಸುಪ್ರಭೇದ. ವಿಜಯ. ನಿಶ್ವಾಸ, ಸ್ವಯಂಭು, ಅನಲ, ವೀರ, ರೌರವ, ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಲಲಿತ, ಪ್ರೋದ್ಗೀತ, ಸಿದ್ಧ, ಸಂತಾನ, ಸರ್ವೋಕ್ತ, ಪಾರಮೇಶ್ವರ, ಕಿರಣ, ವಾತುಲ.

'ಕಾಮಿಕ ಯೋಗಜಂ'—ಶಿವತತ್ವ ರತ್ನಾಕರ. ಕಲ್ಲೋಲ ೧ ತರಂಗಿಣಿ ೧ ಬಸವಪ್ಪನಾಯಕ. "ಅಷ್ಟವಿಂಶತ್ಯಾಗಮಾಃ"—ಅನಾದಿ ವೀರಶೈವ ಸಾರಸಂಗ್ರಹ; ಪುಟ ೧೩ ಸಂಪಾದನೆಯ ಸಿದ್ಧವೀರಾರ್ಯ (೧೭ನೆಯ ಶತಮಾನ).

ಶಾಸನದಲ್ಲಿ ಈ ೨೮ ಶಿವಾಗಮಗಳ ಉಲ್ಲೇಖವಿದೆ. ಪಲ್ಲವ ಅರಸನಾದ ರಾಜಸಿಂಹ ವರ್ಮನು ಆಗಮೋಕ್ತ ಶೈವಮತಾನುಯಾಯಿಯಾಗಿದ್ದನಂತೆ.[೧] ಕಾಳಿದಾಸ, ಭಾರವಿ ಕವಿಗಳ ಕಾವ್ಯಗಳಲ್ಲಿ ಆಗಮಂಗಳ ಉಲ್ಲೇಖ ದೊರೆಯುತ್ತದೆ.[೨] ಶ್ರುತಿಗಳು ವೈದಿಕ ಮತ್ತು ತಾಂತ್ರಿಕವೆಂದು ಎರಡು ಬಗೆಯಾಗಿವೆಯೆಂಬ ಅಭಿಪ್ರಾಯವನ್ನು ಹಾರೀತ ಋಷಿಯ ಉಲ್ಲೇಖದ ಆಧಾರದ ಮೇಲೆ ಮನುಸ್ಮೃತಿಗೆ ವ್ಯಾಖ್ಯಾನ ಬರೆದ ಕುಲ್ಲೂಕನು ಹೇಳುತ್ತಾನೆ.[೩] ಹಾರೀತನ ಉಲ್ಲೇಖವನ್ನು ಯಾಜ್ಞವಲ್ಕ್ಯರು (ಕ್ರಿ. ಶ. ೨–೩ ಶತಮಾನ) ಮಾಡುತ್ತಾರೆ. ಆದುದರಿಂದ ಕ್ರಿಸ್ತಶಕಾರಂಭ ಕಾಲಕ್ಕೆ ಆಗಮಗಳು ಪ್ರಸಿದ್ಧವಾಗಿದ್ದುವೆಂದು ಈ ವಿವೇಚನೆಯಿಂದ ವಿದಿತವಾಗುತ್ತದೆ.

ಶಿವಾಗಮಗಳು ಹಿಂದೂ ಧರ್ಮದ ತಾತ್ವಿಕಯುಗಕ್ಕೆ ಸಂಬಂಧಪಟ್ಟುವು. ಈ ಯುಗವು ಪುರಾಣಯುಗಕ್ಕಿಂತ ಪೂರ್ವವಾದುದೆಂಬುದರಲ್ಲಿ ಆವ ಸಂದೇಹವೂ ಇಲ್ಲ. ಪ್ರಸಿದ್ಧವಾದ ಸ್ಕಾಂದಾದಿ ಪುರಾಣಗಳಲ್ಲಿ ಶಿವಾಗಮಂಗಳ ಉಲ್ಲೇಖ ವಿಪುಲವಾಗಿ ದೊರೆಯುತ್ತದೆ.[೪] ಅಲ್ಲದೆ ಆಗಮಗಳಂತೆ ಪುರಾಣಗಳೂ ಶಿವಪಾರ್ವತಿ, ಶಿವನಂದಿ, ಶಿವ-ಷಣ್ಮುಖಾದಿಗಳ ಸಂಭಾಷಣಾರೂಪದಲ್ಲಿಯೇ ರಚಿತವಾಗಿವೆ.

---

[೧] ಕಾಂಚೀಪುರದ ರಾಜೇಶ್ವರ ದೇವಾಲಯದ ಶಾಸನ.

[೨] ರಘುವಂಶ ಸರ್ಗ ೧೦. ಪ. ೨೬. ಕಿರಾತಾರ್ಜುನೀಯ ಸರ್ಗ ೫, ಶ್ಲೋಕ ೨೨. ಕಾಲಿದಾಸನ ಕಾಲವು ಕ್ರಿ.ಶ. ೧ನೆಯ ಶತಮಾನದಿಂದ ಕ್ರಿ.ಶ. ೪ನೆಯ ಶತಮಾನದ ಅವಧಿಯಲ್ಲಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

[೩] Virashaiva Philosophy or the Shaivagamas, P. 7.

[೪] ಸದಾಶಿವಸ್ಯವದನೈಃ ಸದ್ಯೋಜಾತಾದಿ ಸಂಜ್ಞಕೈಃ—ಸ್ಕಾಂದ ಅರುಣಾಚಲ ಮಹಾತ್ಮ್ಯಖಂಡ. ಆಗಮಾಃ ಪಂಚಭಿಃ ಪ್ರೋಕ್ತಾ ಅಷ್ಟಾವಿಂಶತಿ ಕೋಟಯಃ—ಅಧ್ಯಾಯ, ೧೧.

---

"ವಾತುಲಾಂತಾಃ ಕಾಮಿಕಾದ್ಯಾಃ"—ಲಿಂಗಧಾರಣ ಚಂದ್ರಿಕಾ ಪು. ೭೧ ನಂದಿಕೇಶ್ವರ ಶಿವಾಚಾರ್ಯರು.

"ತತ್ರಶೈವಾಗಮಭೇದಾನ್"—ವೇದಾಂತಸಾರ ವೀರಶೈವಚಿಂತಾಮಣಿ ಪು. ೫೯. ನಿಟ್ಟೂರ ನಂಜಣಾಚಾರ್ಯರು.

"ಶ್ರುತ್ಯಂತತ್ವಾದಾಗಮಾನಾಂ"—ವೀರಶೈವಾನಂದ ಚಂದ್ರಿಕಾ ಪು. ೪೦೪. ಮರಿತೋಂಟದಾರ್ಯರು ಕ್ರಿ. ಶ. ೧೬೫೬.

"ಶಿವನಿಶ್ವಾಸಶ್ರುತಿಭ್ಯಸ್ತು ಶಿವಾಗಮಾಃ"—ಕ್ರಿಯಾಸಾರ; ಉಪೋದ್ಘಾತ, ನೀಲಕಂಠ ಶಿವಾಚಾರ್ಯರು (೧೪ನೆಯ ಶತಮಾನ)

ಶ್ರೀಮದ್ವೇದಾಗಮೋಪನಿಷತ್"—ವೀರಶೈವಾಚಾರ ಪ್ರದೀಪಿಕಾ, ಗುರುದೇವ (೧೩೫೦).

"ಶ್ರುತಿ ಸ್ಮೃತಿ ಶಿವಾಗಮಾನ್"—ವೀರಮಾಹೇಶ್ವರಾಚಾರ ಪ್ರದೀಪಿಕಾ ನಾಗನಾಥಾರ್ಯ (೧೩ನೆಯ ಶತಮಾನ).

"ಆಲೋಕ್ಯ ಶೈವ ತಂತ್ರಾಣಿ ಕಾಮಿಕಾದ್ಯಾನಿಸಾದರಂ"—ಸಿದ್ಧಾಂತಶಿಖಾಮಣಿ–ಶಿವಯೋಗಿ ಶಿವಾಚಾರ್ಯ (ಕ್ರಿ. ಶ. ೧೨೫೦).

"ಕಾಮಿಕಂ ಯೋಗಜಂ......" ಶೈವರತ್ನಾಕರ ಪು. ೭. ಜ್ಯೋತಿರ್ನಾಥ.

ಕೆಲವು ಪುರಾಣಗಳ ಕಾಲವನ್ನು ಪಾಶ್ಚಾತ್ಯ ಪಂಡಿತರು ಕ್ರಿ. ಶ. ೧೧ನೆಯ ಶತಮಾನದ ವರೆಗೆ ತಂದರೂ ಅಮರಕೋಶದಲ್ಲಿ (ಕ್ರಿ. ಪೂ. ೧ನೆಯ ಶತಕ) ಪುರಾಣದ ವ್ಯಾಖ್ಯೆ ಬಂದಿರುವುದರಿಂದ ಕ್ರಿ. ಶ. ಪೂರ್ವದಲ್ಲಿ ಕೆಲವಾದರೂ ಪುರಾಣಗಳು ರಚಿತವಾಗಿರಬೇಕೆಂದು ನಿರ್ಣಯಿಸಬೇಕಾಗಿದೆ. ಅಂತಹ ಪುರಾಣಗಳಲ್ಲಿ ಪ್ರಸಿದ್ಧವಾದ ಸ್ಕಾಂದ, ಶಿವಪುರಾಣಗಳು ಅಂತರ್ಗತವಾಗಬಹುದಾದುದರಿಂದ ಆ ಪುರಾಣಗಳಲ್ಲಿ ಉದ್ಧೃತವಾದ ಶಿವಾಗಮಗಳು ಕ್ರಿಸ್ತಪೂರ್ವ ಯುಗಕ್ಕೆ ಸೇರುವುದರಲ್ಲಿ ಯಾವ ಸಂದೇಹವೂ ಇಲ್ಲ.

ಆಗಮಗಳ ಕರ್ತೃ ಅರಿವರ್ (ಸತ್ಯದರ್ಶಿಗಳ್) ಎಂದು ನಚ್ಚಿನಾರ್ಕಿನಿಯರೆಂಬ ತಮಿಳು ಭಾಷ್ಯಕಾರರು ಹೇಳಿರುವರು. ಈ ಅರಿವರ್ ಅವರ ವಿಶದವಾದ ಉಲ್ಲೇಖ ತೊಲ್ಕಾಪ್ಪಿಯಂ (ಕ್ರಿ. ಪೂ. ೧ನೆಯ ಶತಮಾನ) ಎಂಬ ತಮಿಳು ವ್ಯಾಕರಣ ಗ್ರಂಥದಲ್ಲಿದೆ. ಶಿವಾಗಮಗಳು ಕ್ರಿಸ್ತಪೂರ್ವ ಯುಗದಲ್ಲಿ ರಚಿತವಾಗಿರಬಹುದೆಂಬುದಕ್ಕೆ ಇದೂ ಒಂದು ಆಧಾರವಾಗಬಲ್ಲುದು[1].

ಭಗವದ್ಗೀತೆ ಮತ್ತು ಶಿವಾಗಮಗಳಲ್ಲಿ ಹಲವೆಡೆ ಅಕ್ಷರಶಃ ಒಂದೇ ಬಗೆಯ ಶ್ಲೋಕಗಳು ಕಂಡುಬರುತ್ತವೆ.[2] ಅಭಿಪ್ರಾಯದಲ್ಲಿ, ವಿಷಯದಲ್ಲಿ, ಭಾಷೆಯಲ್ಲಿ ಅಷ್ಟೊಂದು ತೀಕ್ಷ್ಣವಾದ ಸಾಮ್ಯ ಅಲ್ಲಿ ಕಂಡುಬರುತ್ತದೆ. ಇಷ್ಟೇ ಅಲ್ಲದೆ ಆಗಮ ಸಿದ್ಧಾಂತವನ್ನೇ ಗೀತೆಯು ವಿಚಾರಸರಣಿ ರೂಪಿತವಾದುದನ್ನು ಹಲವೆಡೆ ಕಾಣ

---

[1] ಶಿವಜ್ಞಾನಾನಿ ದಿವ್ಯಾನಿ ಕಾಮಿಕಾದ್ಯಾನಿ ಭೂಸುರಾಃ—ಸ್ಕಾಂದ ಪುರಾಣ ಅಗಸ್ತ್ಯಸಂಹಿತಾ.
ಕಾಮಿಕಾದಿ ಸಮಾಖ್ಯಾಭಿಃ ಸಿದ್ಧಃ ಸಿದ್ಧಾಂತ ಸಂಜ್ಞಿತಃ—
ವಾಯುವ್ಯ ಸಂಹಿತಾ. ಪೂರ್ವಭಾಗ ಅಧ್ಯಾಯ ೨೮.
ಶೈವಾಗಮೋಕ್ತ ಯತ್ ಜ್ಞಾನಂ ತಪತ್ರಜ್ಞಾನಮುಚ್ಯತೇ—
ವಾಯುವ್ಯ ಸಂಹಿತಾ ಉತ್ತರ ಭಾಗ ಅ. ೮.
ಶೈವಾಗಮಾಶ್ಚ ಯೇ ಚಾನ್ಯೇ ಕಾಮಿಕಾದ್ಯಾಶ್ಚತುರ್ವಿಧಾಃ
ಶೈವಾಗಮೋದಿತೋ ಧರ್ಮಃ ಪವಿತ್ರಃ ಕಾಮಿಕಾದಿ ಪ್ರಭೇದನ
ಆಗಮಾ ಬಹವೋ ಭವನ್—ಸ್ಕಾಂದಪುರಾಣ ಕೇದಾರಖಂಡ ಅಧ್ಯಾಯ ೭.
ಕಾಮಿಕಾದಿ ಪ್ರಭೇದೇನ ಯಥಾಭೇದ್ಯೋ ಮಹೇಶ್ವರಃ—ಸೂತಸಂಹಿತಾ
ಶ್ರೀಕಂಠೇನ ಶಿವೇನೋಕ್ತಾಃ ಶಿವಾಯೈ ಚ ಶಿವಾಗಮಾಃ ವಾಯುವ್ಯ ಸಂಹಿತಾ ಉತ್ತರಭಾಗ ಅ.೮.
ಕೂರ್ಮಪುರಾಣ ಅ. ೨೫ ಶ್ಲೋಕ ೪೬—೪೮.

[2]

| ಭಗವದ್ಗೀತೆ | | ಪಾರಮೇಶ್ವರಾಗಮ | |
|---|---|---|---|
| ಅಧ್ಯಾಯ | ೨—೨೦ | ಪಟಲ | ೨೧—೫೭ |
| ,, | ೨—೪೯ | ,, | ೧೨—೬ |
| ,, | ೨—೬೨, ೬೩ | ,, | ೬—೫೧, ೫೨, ೫೩. |
| ,, | ೪—೩೫ | ,, | ೬—೫೯ |
| ,, | ೪—೩೬ | ,, | ೯—೮೧ |
| ,, | ೫—೨೩ | ,, | ೯—೫೫ |

ಬಹುದು.[೧] ಇಲ್ಲಿ ಗೀತೆಯ ಪ್ರಭಾವ ಆಗಮಗಳ ಮೇಲೆ ಆಗಿದೆಯೆನ್ನುವುದಕ್ಕಿಂತಲೂ ಗೀತೆ ಸರ್ವೋಪನಿಷದೆಂಬ ಗೋವಿನ ಹಾಲಾದಂತೆ ಸರ್ವಾಗಮಗಳ ಸಾರವೂ ಆಗಿದೆ ಯೆಂದು ಹೇಳುವುದು ಹೆಚ್ಚು ಸೂಕ್ತವೆಂದು ತೋರುತ್ತದೆ. ಏಕೆಂದರೆ ಶಿವಾಗಮಗಳು ಒಂದು ನಿಶ್ಚಿತ ಸಿದ್ಧಾಂತವನ್ನು, ತತ್ವವನ್ನು, ಧರ್ಮವನ್ನು ಬೋಧಿಸುತ್ತಿದ್ದವು. ಗೀತೆಯ ಉದ್ದೇಶವಾದರೋ ತನ್ನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಎಲ್ಲ ಸಿದ್ಧಾಂತಗಳನ್ನು ಸಮನ್ವಯಗೊಳಿಸುವುದಾಗಿದ್ದಿತು. ಅಂತೆಯೇ ಕರ್ಮಯೋಗದ ಸಂದರ್ಭದಲ್ಲಿ "ಯೋಗಃ ಕರ್ಮಸು ಕೌಶಲಂ" ಎಂದೂ ಜ್ಞಾನಯೋಗಕ್ಕೆ ಬಂದಾಗ "ನಹಿಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" ಎಂದೂ ಭಕ್ತಿಯೋಗದ ಮಾತೆತ್ತುವಲ್ಲಿ "ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿಹ ವಿದ್ಯತೇ" ಎಂದೂ ಕೊನೆಗೆ ಸಮನ್ವಯಮಾರ್ಗಕ್ಕೆ ಶಿಖರ ವಿಡುವಂತೆ 'ಯೇ ಯಥಾ ಮಾಂ ಪ್ರಪದ್ಯಂತೇ ತಾಂ ತಥೈವ ಭಜಾಮ್ಯಹಂ' ಎಂದೂ ಗೀತೆ ಸಾರುತ್ತದೆ. ಇದರಂತೆ ತತ್ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಶಿವಾಗಮಗಳ ಸಾರವನ್ನು ಭಗವದ್ಗೀತೆ ತನ್ನಲ್ಲಿ ಅಳವಡಿಸಿಕೊಂಡಿದ್ದರೆ ಅದು ಸೋಜಿಗವೇನಲ್ಲ. ಆದುದರಿಂದ ೨೮ ಶಿವಾಗಮಗಳು ಭಗವದ್ಗೀತೆಯ ಪೂರ್ವದಲ್ಲಿ ಅಂದರೆ ಉಪನಿಷತ್ ಕಾಲಕ್ಕೆ ಸರಿದೊರೆಯಾಗುತ್ತವೆಂದು ಊಹಿಸಿದರೆ ತಪ್ಪಾಗದು. ತದನಂತರವೂ ಅನೇಕ ಆಗಮ ಗಳು ಜನಿಸಿವೆ. ಅದು ನಮಗೆ ಪ್ರಸ್ತುತವಲ್ಲ. ಇದರಿಂದ ಶೈವಧರ್ಮವು ವೇದೋಪ ನಿಷತ್ತುಗಳ ಕಾಲದಲ್ಲಿ ಅಸ್ತಿತ್ವದಲ್ಲಿದ್ದಿತೆಂದೂ ವೈದಿಕಧರ್ಮದ ಮೇಲೆ ತನ್ನ ಪ್ರಭಾವ ವನ್ನು ಬೀರಿ, ಅಲ್ಲಿಂದ ತಾನೂ ಸ್ಫೂರ್ತಿಯನ್ನು ಪಡೆದು ಬೆಳೆದು ಬಂದಿತೆಂದೂ ಕಂಡು

---

| [೧] ಭಗವದ್ಗೀತೆ | | ಶಿವಾಗಮಗಳು | |
|---|---|---|---|
| ಅಧ್ಯಾಯ | ೨—೪೫ | ಸೂಕ್ಷ್ಮಾಗಮ | ೬—೨೫ |
| ,, | ೨—೪೭ | ,, | ೬—೪೪ |
| ,, | ೩—೧೭ | ,, | ೬—೪೩ |
| ,, | ೩—೨೭—೩೦ | ಪಾರಮೇಶ್ವರಾಗಮ | ೬—೬೫ |
| ,, | ೪—೨ | ಕಾಮಿಕಾಗಮ ಶಿವಾರ್ಚನಾಪಟಲ. | |

---

| ಭಗವದ್ಗೀತೆ | | ಪಾರಮೇಶ್ವರಾಗಮ | |
|---|---|---|---|
| ಅಧ್ಯಾಯ | ೫—೨೬ | ಪಟಲ | ೧೦—೬೬ |
| ,, | ೬—೯ | ,, | ೧೯—೬೨, ೬೩ |
| ,, | ೬—೧೧ | ,, | ೨೦—೨೦ |
| ,, | ೬—೩೭ | ,, | ೮—೪ |
| ,, | ೬—೪೪, ೪೫ | ,, | ೮—೮೭ |
| ,, | ೬—೪೬ | ,, | ೮—೮೮ |
| ,, | ೬—೪೦, ೪೩ | ,, | ೮—೮೨ |
| ,, | ೧೩—೧೦ | ,, | ೨೨—೯೮ |
| ,, | ೨೬—೨೩, ೨೪ | ,, | ೭—೧೦೪ |
| ,, | ೧೮—೬೬ | ,, | ೧೦—೮೩ |

ಬರುತ್ತದೆ. ಅಂತೆಯೇ ನಿಜಗುಣಶಿವಯೋಗಿಗಳು ವಿವೇಕಚಿಂತಾಮಣಿಯಲ್ಲಿ ಶುದ್ಧ ವೈದಿಕ, ತಾಂತ್ರಿಕ ವೈದಿಕ, ಶುದ್ಧ ತಾಂತ್ರಿಕ, ವೈದಿಕ ತಾಂತ್ರಿಕವೆಂದು ನಾಲ್ಕು ಬಗೆಯ ಗ್ರಂಥಗಳನ್ನು ವಿವರಿಸುವರು. ವೇದ ಮತ್ತು ಆಗಮ (ತಂತ್ರ) ಇವುಗಳ ಪರಸ್ಪರ ಪ್ರಭಾವಮುದ್ರೆಯಿಂದಲೇ ಇಂತಹ ವಿಭಜನೆಯುಂಟಾಗಿರಲು ಸಾಕು.

ಶೈವಧರ್ಮವು ಪ್ರಾಚೀನತೆಯ ದೃಷ್ಟಿಯಿಂದ ವೇದೋಪನಿಷತ್ತುಗಳಷ್ಟು ಪುರಾತನತೆಯನ್ನು ಪಡೆದಂತೆ ವ್ಯಾಪ್ತಿಯ ದೃಷ್ಟಿಯಿಂದಲೂ ಅಷ್ಟೇ ವೈಶಾಲ್ಯವನ್ನು ಪಡೆದಿದೆ. ಶೈವರು ಶಿವನನ್ನು ಲಿಂಗರೂಪದಲ್ಲಿ ಆರಾಧಿಸುವರು. ಇಂಥ ಶಿವಲಿಂಗಗಳ ಅಸ್ತಿತ್ವ ಭರತಖಂಡದಲ್ಲಷ್ಟೇ ಅಲ್ಲದೆ ಮಿಕ್ಕ ಖಂಡಗಳಲ್ಲಿಯೂ ಕಂಡುಬರುತ್ತದೆ. ಕೆಂಬೋಡಿಯಾ,[1] ಚಂಪಾ, ಇಂಡೋನೇಶಿಯಾ, ಚೀನ ಮತ್ತು ಜಪಾನ ಮೊದಲಾದ ಪೌರಸ್ತ್ಯ ದೇಶಗಳಲ್ಲಿ ಲಿಂಗಪೂಜೆಯು ಕ್ರಿ. ಶ. ಪೂ. ೫೫೦೦ಕ್ಕಿಂತಲೂ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದಿತೆಂದು ತಿಳಿದುಬಂದಿದೆ. ಅಲ್ಲದೆ ಪಶ್ಚಿಮದತ್ತ ಹೊರಳಿದರೆ ಮಧ್ಯ ಏಶಿಯಾ ಪರ್ವತಗಳ ಆಚೆಗೂ ಈಚೆಗೂ ಲಿಂಗಪೂಜೆಯು ಪ್ರಚಲಿತವಿದ್ದುದಾಗಿ ತಿಳಿದುಬರುತ್ತದೆ. ಅರಬಸ್ಥಾನದಲ್ಲಿ ಮಹಮ್ಮದಪೈಗಂಬರರಿಗಿಂತ ಪೂರ್ವದಲ್ಲಿ 'ಲಾತ್' ಎಂಬ ದೇವರ ಪೂಜೆಯು ಲಿಂಗರೂಪದಲ್ಲಿ ನಡೆಯುತ್ತಿತ್ತಂತೆ. ಇಂದಿಗೂ ಮಕ್ಕಾಯಾತ್ರೆಗೆ ಹೋದ ಯಾತ್ರಿಕರು ಅದನ್ನು ಹಸ್ತಗಳಿಂದ ಮುಟ್ಟಿ ನಮಸ್ಕರಿಸಿ ಮುದ್ದಿಸಿ ಮುಂದೆ ಪೈಗಂಬರರ ಜನ್ಮಸ್ಥಳದ ದರ್ಶನವನ್ನು ಮಾಡಿಕೊಳ್ಳಬೇಕಾಗುತ್ತಿದೆಯಂತೆ. ವಿಗ್ರಹಪೂಜೆಯ ವಿರೋಧಕರಾದ ಮಹಮ್ಮದೀಯರಲ್ಲಿ ಇಂಥ ಸಂಪ್ರದಾಯಗಳು ರೂಢಿಗೊಂಡಿರುವುದು ಪುರಾತನ ಕಾಲದ ಲಿಂಗಪೂಜೆಯ ಅವಶೇಷವೆಂದು ಊಹಿಸಬಹುದಾಗಿದೆ. ಇದನ್ನು ಮಕ್ಕೇಶ್ವರ ಲಿಂಗವೆಂದು ಕರೆಯುವರು. ಫ್ರಾನ್ಸದ ಅನೇಕ ಮುಖ್ಯಸ್ಥಳಗಳಲ್ಲಿ ಶಿವಲಿಂಗಗಳು ಕಂಡುಬರುತ್ತವೆ. ರೋಮ್ ಮತ್ತು ಯುನಾನ್ ಈ ಉಭಯ ರಾಷ್ಟ್ರಗಳಲ್ಲಿ ಪ್ರೀಯೇಪಸ್ ಮತ್ತು ಫಲ್ಲೂಸ್ ಎಂಬ ಹೆಸರಿನಿಂದ ಲಿಂಗಪೂಜೆಯು ಪ್ರಚಾರದಲ್ಲಿತ್ತು. ಅಮೇರಿಕೆಯ ಮಹಾದ್ವೀಪದಲ್ಲಿ ಪೂರ್ವನಿವಾಸಿಗಳು ಲಿಂಗಾರಾಧಕರಾಗಿದ್ದರಂತೆ.[2] ಇದರಿಂದ ಲಿಂಗಪೂಜೆಯು ಒಂದು ಕಾಲದಲ್ಲಿ ವಿಶ್ವದ ಬಹುಭಾಗವನ್ನು ವ್ಯಾಪಿಸಿತ್ತೆಂದು ವಿದಿತವಾಗುತ್ತದೆ. ಶೈವಧರ್ಮದ ವ್ಯಾಪ್ತಿಗೆ ಇದಕ್ಕಿಂತಲೂ ಹೆಚ್ಚಿನ ವಿವರಣೆ ಅವಶ್ಯವಿಲ್ಲೆನಿಸುತ್ತದೆ.

ಇಷ್ಟೊಂದು ಪುರಾತನತೆಯನ್ನೂ ವ್ಯಾಪ್ತಿಯನ್ನೂ ಪಡೆದ ಶೈವಧರ್ಮವು ಅಂದಿನಿಂದ ಇಂದಿನ ವರೆಗೆ ಒಂದೇ ರೂಪದಲ್ಲಿ ಬೆಳೆದುಬಂದಿರುವುದು ಸಾಧ್ಯವಿಲ್ಲ. ಅದರಲ್ಲಿ ಅನೇಕ ಅವಾಂತರ ಪ್ರಭೇದಗಳು ಕಾಲಕಾಲಕ್ಕೆ ತಲೆದೋರುತ್ತ ಬಂದಿವೆ. ಸೂಕ್ಷ್ಮ,ವೀರ ಮೊದಲಾದ ಆಗಮಗಳಲ್ಲಿ ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ. ಅವಾಂತರಶೈವ, ಪ್ರವರಶೈವ. ಅಂತ್ಯಶೈವ—ಹೀಗೆ ಶೈವದ ಏಳು ಪ್ರಭೇದ

[1] ಕೆಂಬೋಡಿಯಾದ ಶಾಸನದಲ್ಲಿ ಈ ಉಲ್ಲೇಖವಿದೆ.

[2] ವೀ. ತ. ಪ್ರ. ಪುಟ ೨೦೫.

ಗಳನ್ನು ಉಲ್ಲೇಖಿಸಲಾಗಿದೆ.[೧] ಸಾಮಾನ್ಯವಾಗಿ ಶೈವದಲ್ಲಿ ಏಳು ಪ್ರಭೇದಗಳನ್ನು ಅನೇಕ ಆಗಮಗಳು ಹೇಳುತ್ತಿದ್ದರೂ ಹಲವೆಡೆ ಅವುಗಳ ನಾಮನಿರ್ದೇಶ ಮಾಡುವಲ್ಲಿ ಸ್ವಲ್ಪ ಅಂತರ ಕಂಡುಬರುತ್ತದೆ. ಮೇಲೆ ನಿರ್ದೇಶಿಸಿದ ಏಳು ಪ್ರಭೇದಗಳಲ್ಲಿ ಮೊದಲಿನ ನಾಲ್ಕನ್ನು ಹೇಳಿ ಇನ್ನುಳಿದ ಅವಾಂತರಶೈವ, ಪ್ರವರಶೈವ, ಅಂತ್ಯಶೈವಗಳಿಗೆ ಪ್ರತಿಯಾಗಿ ಕೆಲವು ಕಡೆ ಯೋಗಶೈವ, ಜ್ಞಾನಶೈವ, ವೀರಶೈವಗಳ ಉಲ್ಲೇಖ ದೊರೆಯುತ್ತದೆ.[೨] ಇವು ಮೂರು ಆ ಮೂರಕ್ಕೆ ಪರ್ಯಾಯ ಪದಗಳೇನೂ ಅಲ್ಲ. ಏಕೆಂದರೆ 'ಅನ್ಯೇಷಾ-ಮಂತ್ಯ ಜಾತೀನಾಮಂತ್ಯಶೈವಂ ವಿಧೀಯತೇ' ಎಂದು ಸೂಕ್ಷ್ಮಾಗಮದಲ್ಲಿ ಅಂತ್ಯ ಶೈವದ ವ್ಯಾಖ್ಯೆಯನ್ನು ಮಾಡಲಾಗಿದೆ. ಇದು ವೀರಶೈವಕ್ಕೆ ಎಳ್ಳಷ್ಟೂ ಹೊಂದಲಾರ ದೆಂದು ಬೇರೆ ಹೇಳಲೇಕೆ? ನಿಜಗುಣಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತರಶೈವವೆಂಬ ಸಪ್ತಶೈವಗಳನ್ನೇ[೩] ಹೇಳುವರು. ಆದರೆ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಆದಿಶೈವ, ಮಹಾಶೈವ, ಅನುಶೈವ, ಅಂತರಶೈವ, ಅಂತ್ಯಶೈವ, ಪ್ರವರಶೈವ ಎಂದು ಆರು ಪ್ರಭೇದಗಳನ್ನು ಹೇಳಿರುವರು.[೪] ಅನಾದಿಶೈವವನ್ನು ಹೇಳದೆ ಅದರ ಸ್ಥಳದಲ್ಲಿ ವೀರಶೈವವನ್ನು ಹೆಸರಿಸಿ ಅದು ಮೂರು ತೆರನಾಗಿದ್ದುದನ್ನು ವಿವರಿಸುವರು. ಆದುದರಿಂದ ಅನಾದಿಶೈವವೆಂಬುದು ವೀರಶೈವದ ಪರ್ಯಾಯ ನಾಮ ವೆಂದು ಊಹಿಸಬಹುದಾಗಿದೆ. ಆದರೆ ಶ್ರೀ ಸಿದ್ಧರಾಮಪ್ಪ ಪಾವಟೆಯವರು ಅನಾದಿ ಶೈವ, ವೀರಶೈವ ಎರಡನ್ನು ಸಪ್ತಶೈವಗಳ ಪಟ್ಟಿಯಲ್ಲಿ ಸೇರಿಸಿರುವುದು[೫] ಮೇಗಣ ಊಹೆಗೆ ವಿರುದ್ಧವಾಗಿ ನಿಲ್ಲುತ್ತದೆ. ಇದಲ್ಲದೆ ವಿವೇಕ ಚಿಂತಾಮಣಿಯಲ್ಲಿ ಅನಾದಿಶೈವ ವೆಂದರೆ ಶಿವನೆಂದೂ ವಾಖ್ಯಾನಿಸಿರುವದರಿಂದ ನಮ್ಮ ಊಹೆಗೆ ಅವಕಾಶವಿಲ್ಲವೆಂದು ಸ್ಪಷ್ಟವಾಗುತ್ತದೆ. ಆದರೆ ವೀರಶೈವವು ಶೈವಮಹಾವೃಕ್ಷದ ಸುಮಧುರ ಫಲವೆಂಬುದ ರಲ್ಲಿ ಯಾವ ಸಂದೇಹವೂ ಇಲ್ಲ.[೬]

ಶೈವ ಪ್ರಭೇದಗಳ ನಾಮನಿರ್ದೇಶನ ಇಷ್ಟಕ್ಕೆ ಮಾತ್ರ ನಿಲ್ಲುವುದಿಲ್ಲ. ಇದಲ್ಲದೆ ಕಾಪಾಲಿಕ ಮೊದಲಾದ ಇನ್ನೂ ಅನೇಕ ಶೈವ ಪ್ರಭೇದಗಳ ಹೆಸರುಗಳು ಅಲ್ಲಲ್ಲಿ ಗೋಚರ ವಾಗುತ್ತವೆ.

---

[೧] ಸೂಕ್ಷ್ಮಾಗಮ ಪಟಲ ೭–ಶ್ಲೋಕ ೮–೧೬.

[೨] Virashaiva Philosophy of the Shaivagamas Preface—S. D. Pavathe.

[೩] ವಿ. ಚಿಂ. ೨. ಪು. ೬೩.

[೪] ಷಟ್-ಸ್ಥಲ ಜ್ಞಾನ ಸಾರಾಮೃತದ ವಚನಗಳು ಪು. ೫.

[೫] Virashaiva Philosophy of the Śaivagamas Preface, P. 1.

[೬] ಸಿ. ಶಿ. ೧—೨೪—೩೨

ಸಿದ್ಧಾಂತಾಖ್ಯೆ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ
ನಿರ್ದಿಷ್ಟಮುತ್ತರೇಭಾಗೇ ವೀರಶೈವಮತಂ ಪರಂ ॥

ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತ್ಯಶೈವ ಎಂಬೀ ಷಡ್ವಿಧ ಶೈವಗಳನ್ನು ಚಾತುರ್ವರ್ಣಗಳಲ್ಲಿ ವಿಭಜಿಸಿರುವುದು ಆಗಮಗಳಿಂದ ತಿಳಿದುಬರುತ್ತದೆ.[೧]

ಆದಿಶೈವಾಸ್ತು ವಿಜ್ಞೇಯಾಃ ಕೌಶಿಕಾದ್ಯಾ ನಗಾತ್ಮಜೇ
ಕೌಶಿಕಃ ಕಾಶ್ಯಪಶ್ಚೈವ ಭರದ್ವಾಜಾತ್ರಿಗೌತಮಾಃ
ಆದಾವೇತಿ ಮಹಾದೇವಿ ಪಂಚವಕ್ತ್ರೇಷು ದೀಕ್ಷಿತಾಃ
ತದ್ವಂಶಾನಾಂ ಪುನರ್ದೀಕ್ಷಾ ನಾಸ್ತಿ ಸಾ ಚೇತ್ತು ತತ್ಫಲಂ
ಕಿಂತೂಪನಯನಾತ್ ಪೂರ್ವಂ ಮಂಡಲೇ ಪೂಜ್ಯ ಶಂಕರಂ
ಪಿತ್ರಾದಿಭಿಶ್ಚೋಪದೇಶ್ಯಾ ಮಮ ಮಂತ್ರಾದಿಕಾಃ ಕ್ರಿಯಾಃ
ದತ್ವಾತು ಭಸ್ಮತಾಂಬೂಲಂ ಮದ್ಭಕ್ತಾನಾಂಚ ಭೋಜನಂ
ದಕ್ಷಿಣಾಂ ಚ ತತೋದದ್ಯಾತ್ ವಿತ್ತಶಾಠ್ಯಂ ನ ಕಾರಯೇತ್
ಏತೇ ಶಿವದ್ವಿಜಾಃ ಪ್ರೋಕ್ತಾ ಲೋಕಪೂಜ್ಯಾ ಯಥಾಹ್ಯಯಂ
ಏಭಿರೇವ ಪ್ರಕರ್ತವ್ಯಂ ಯಜನಂ ಸ್ವಪರಾರ್ಥಕಂ
ಶೈವದೀಕ್ಷೋಕ್ತಮಾರ್ಗೇಣ ದೀಕ್ಷಿತಾ ಬ್ರಾಹ್ಮಣಾಃ ಶಿವೇ

ಕೌಶಿಕ, ಕಾಶ್ಯಪ, ಭರದ್ವಾಜ, ಅತ್ರಿ, ಗೌತಮ ಈ ಋಷಿವಂಶಜರು ದ್ವಿಜರೆಂದೂ ಅವರು ಆದಿಶೈವರೆಂದೂ ಇದರಿಂದ ವಿದಿತವಾಗುತ್ತದೆ. ಹೀಗೆಯೇ ಮಹಾಶೈವರು ಕ್ಷತ್ರಿಯರೆಂತಲೂ, ಅನುಶೈವರು ವೈಶ್ಯರೆಂತಲೂ ಅವಾಂತರಶೈವರು ದೀಕ್ಷಿತರಾದರೂ ಶೂದ್ರರೆಂತಲೂ, ಕುಂಬಾರ ಮೊದಲಾದವರು ಪ್ರವರಶೈವರೆಂತಲೂ, ಉಳಿದ ಅಂತ್ಯ ಜಾತಿಯವರು ಅಂತ್ಯಶೈವರೆಂತಲೂ ಸೂಕ್ಷ್ಮಾಗಮವು ಹೇಳುತ್ತಿದೆ. ಇದೇ ಅಭಿಪ್ರಾಯವು ವಿವೇಕ ಚಿಂತಾಮಣಿಯಲ್ಲಿ ಹೀಗೆ ವ್ಯಕ್ತವಾಗಿದೆ. ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತರಶೈವವೆಂಬಿವೇ ಸಪ್ತ ಶೈವಂಗಳಲ್ಲಿ ಶಿವನೇ ಅನಾದಿಶೈವನು; ಶಿವನ ಪಂಚವಕ್ತ್ರದಿಂ ದೀಕ್ಷಿತರಾದ ಕೌಶಿಕಾದಿ ಋಷೀಶ್ವರರೇ ಆದಿಶೈವರು. ಆ ಋಷಿವಂಶಜರಾಗಿ ದೀಕ್ಷಿತರಾದ ದ್ವಿಜರೇ ಮಹಾಶೈವರು, ಶಿವಸಂಸ್ಕಾರಿಗಳಾದ ಕ್ಷತ್ರಿಯರೇ ಅನುಶೈವರು. ಶಿವದೀಕ್ಷಾಸಂಪನ್ನರಾದ ವೈಶ್ಯರೇ ಅವಾಂತರಶೈವರು. ಶಿವದೀಕ್ಷಾಯುಕ್ತರಾದ ಶೂದ್ರಾಂಬಷ್ಟ ಕುಲಾಲಾದಿಗಳೇ ಪ್ರವರಶೈವರು. ದೀಕ್ಷತ್ವದಿಂದುಳಿದ ಜಾತಿಗಳೇ ಅಂತರಶೈವರೆನಿಸಿಕೊಳ್ಳುವರು.[೨] ಈ ಹೇಳಿಕೆಯಿಂದ ಅನಾದಿ ಶೈವವನ್ನು ಬಿಟ್ಟು ಉಳಿದ ಆರು ಶೈವಗಳು ಜಾತಿನಿಷ್ಠವೆಂಬುದು ಸ್ಪಷ್ಟವಾಗುತ್ತದೆ. ಇದೇ ಮಾತನ್ನು ಸೂಕ್ಷ್ಮಾಗಮವು—

'ಏವಂ ಪ್ರೋಕ್ತಾಃ ಶೈವಭೇದಾ ಜಾತ್ಯನುಕ್ರಮಶೋ ಮಯಾ[೩]'

---

[೧] ಸೂಕ್ಷ್ಮಾಗಮ ಪಟಲ ೭:೮—೧೬

[೨] ವಿ. ಚಿಂ. ಪ್ರಕರಣ ೨. ಪು. ೬೩.

[೩] ಸೂಕ್ಷ್ಮಾಗಮ ಪಟಲ ೭. ಶ್ಲೋ. ೧೬.

ಎಂಬ ಉಕ್ತಿಯಿಂದ ಸಮರ್ಥಿಸುತ್ತಿದೆ. ಈ ಆರು ಶೈವಗಳು ವರ್ಣಾಶ್ರಮ ಧರ್ಮವನ್ನು ಅವಲಂಬಿಸಿರುವವೆಂದೂ ವೀರಶೈವವು ವರ್ಣಾತೀತವಾದುದೆಂದೂ ಇದರಿಂದ ವ್ಯಕ್ತ ವಾಗುತ್ತದೆ. ಅಂತೆಯೇ ಶಿವಾಗಮಗಳು ವೀರಶೈವ ಮತೋಕ್ತಲಿಂಗಧಾರಣೆಯನ್ನು ಮಾಡುವಲ್ಲಿ ಕೆಳಗಿನಂತೆ ಪರೀಕ್ಷಿಸಬೇಕೆಂಬ ನಿಯಮವನ್ನು ವಿಧಿಸುತ್ತಿವೆ.

**ಬ್ರಾಹ್ಮಣಂ ತ್ರೀಣಿವರ್ಷಾಣಿ ಕ್ಷತ್ರಿಯಂ ವರ್ಷ ಷಟ್ಸು ಚ**
**ವೈಶ್ಯಂ ತು ನವವರ್ಷಾಲ್ಲಿ ಶೂದ್ರಂ ದ್ವಾದಶವರ್ಷಾಣಿ**

ಬ್ರಾಹ್ಮಣರನ್ನು ಮೂರು ವರುಷ, ಕ್ಷತ್ರಿಯರನ್ನು ಆರು ವರುಷ, ವೈಶ್ಯರನ್ನು ಒಂಬತ್ತು ವರುಷ, ಶೂದ್ರರನ್ನು ಹನ್ನೆರಡು ವರುಷ ಪರೀಕ್ಷಿಸಿ ವೀರಶೈವೋಕ್ತ ಲಿಂಗಧಾರಣೆಯನ್ನು ಮಾಡಬೇಕೆಂಬುದು ಆಗಮಗಳ ಅಭಿಮತ.

ಮೇಗಣ ಷಡ್ವಿಧ ಶೈವಪಂಥಗಳು ವರ್ಣಾಶ್ರಮದನ್ವಯ ಕಲ್ಪಿತವಾಗಿದ್ದರೆ ಆಗಮಗಳನ್ವಯ ಬೇರೆ ಬೇರೆ ಶೈವಪಂಥಗಳನ್ನೂ ಪರಿಕಲ್ಪಿಸಲಾಗಿದೆ. ಸಿದ್ಧಾಂತ ಶಿಖಾಮಣಿಯಲ್ಲಿ ಆಗಮಭೇದಗಳನ್ನು ಕುರಿತು ಹೀಗೆ ಹೇಳಲಾಗಿದೆ.

**ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ**
**ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿಭೇದತಃ**

ಶೈವ, ಪಾಶುಪತ, ಸೋಮ ಮತ್ತು ಲಾಕುಲ ಎಂಬಿವು ಶಿವಾಗಮ ಭೇದಗಳೆಂದು ಇದ ರಿಂದ ವ್ಯಕ್ತವಾಗುತ್ತಿದೆ. ವಿವೇಕಚಿಂತಾಮಣಿಯೊಳಗೂ ಶೈವ, ಪಾಶುಪತ, ಸೋಮ, ಲಾಕುಳವೆಂಬ ಶಾಸ್ತ್ರಾಂತರಗಳು ಶುದ್ಧ ತಾಂತ್ರಿಕ ಪ್ರತಿಪಾದಕಂಗಳೆಂದೂ ಉಕ್ತವಾಗಿವೆ. ಪ್ರಾಚೀನ ಕರ್ನಾಟಕದಲ್ಲಿ ಪ್ರಸಿದ್ಧವಾದ ಪಾಶುಪತ, ಲಾಕುಲ, ಶೈವ ಪಂಥಗಳಿಗೆ ವಿಶಿಷ್ಟ ವಾದ ಆಗಮಗಳಿದ್ದುದು ಇಲ್ಲಿ ಸ್ಪಷ್ಟವಾಗುತ್ತದೆ.

ಶೈವವೆಂಬ ಶಿವಾಗಮವಿಭಾಗದಲ್ಲಿ ಮತ್ತೆ ನಾಲ್ಕು ಭೇದಗಳುಂಟು.[೧]

**ತೇಷು ಶೈವಂ ಚತುರ್ಭೇದಂ ತಂತ್ರಂ ಸರ್ವವಿನಿಶ್ಚಿತಂ**
**ವಾಮಂ ಚ ದಕ್ಷಿಣಂ ಚೈವ ಮಿಶ್ರಂ ಸಿದ್ಧಾಂತಸಂಜ್ಞಕಂ**

ವಾಮ, ದಕ್ಷಿಣ, ಮಿಶ್ರ ಮತ್ತು ಸಿದ್ಧಾಂತವೆಂಬ ನಾಲ್ಕು ಪ್ರಭೇದಗಳು ಆರಾಧ್ಯದೇವತೆ ಗಳನ್ನು ಆಧರಿಸಿವೆ. ಶಕ್ತಿಪರವಾದುದೇ ವಾಮ, ಭೈರವಪರವಾದುದು ದಕ್ಷಿಣ. ಸಪ್ತ ಮಾತೃಕಾಪರವಾದುದು ಮಿಶ್ರ, ಪರಶಿವಪರವಾದುದು ಸಿದ್ಧಾಂತವೆನಿಸುವುದು.[೨] ಬಳಿಕಾ ಶೈವಂಗಳಲ್ಲಿ ಮುಖ್ಯವಾದ ಸಾಮಾನ್ಯ ಶೈವ, ಮಿಶ್ರಶೈವ, ಶುದ್ಧಶೈವ ಮತ್ತು ವೀರಶೈವ

---

[೧] ಸಿ. ಶಿ. ೫—೧೦.

[೨] ಶಕ್ತಿಪ್ರಧಾನಂ ವಾಮಾಖ್ಯಂ ದಕ್ಷಿಣಂ ಭೈರವಾತ್ಮಕಂ
ಸಪ್ತಮಾತೃಪರಂ ಮಿಶ್ರಂ ಸಿದ್ಧಾಂತಂ ವೇದಸಮ್ಮತಂ
ಸಿ. ಶಿ. ೫. ೧೧.

ವೆಂದು ಚತುರ್ವಿಧ ಶೈವಗಳು[೧] ಎಂಬ ಮಾತು ವಿವೇಕಚಿಂತಾಮಣಿಯಲ್ಲಿ ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತ ಎಂಬ ಪ್ರಭೇದಗಳ ಉಲ್ಲೇಖವಾದೊಡನೆಯೇ ಬರುತ್ತದೆ. ಇದರಿಂದ ವಾಮವೆಂಬ ಶಾಖೆಯಲ್ಲಿ ಸಾಮಾನ್ಯ ಶೈವವೂ, ದಕ್ಷಿಣದಲ್ಲಿ ಶುದ್ಧಶೈವವೂ, ಮಿಶ್ರದಲ್ಲಿ ಮಿಶ್ರಶೈವವೂ, ಸಿದ್ಧಾಂತದಲ್ಲಿ ವೀರಶೈವವೂ ಮುಖ್ಯವಾದುವುಗಳೆಂದು ಅರ್ಥಯಿಸಲು ಬರುವಂತಿದೆ. ಆದರೆ ಈ ಮಾತು ವಿವೇಕಚಿಂತಾಮಣಿಯಲ್ಲಿ ಸ್ಪಷ್ಟವಿಲ್ಲ. ಮುಂದೆ ಅಲ್ಲಿ ಬರುವ ಸಾಮಾನ್ಯ, ಶುದ್ಧ, ಮಿಶ್ರ ಶೈವಗಳ ಸಂಕ್ಷಿಪ್ತವರ್ಣನೆಯನ್ನು ನೋಡುವಲ್ಲಿ ನಮ್ಮ ಊಹೆಗೆ ಪುಷ್ಟಿ ದೊರೆಯುವಂತಿಲ್ಲ. ಒಂದು ವೇಳೆ ತತ್ಸಂಬಂಧ ವಾದ ಅವರ ವಿವರಗಳೇ ಪೂರ್ಣವಾಗದಿರುವ ಸಂಭವವೂ ಉಂಟು. ಆದರೆ ಸಿದ್ಧಾಂತ ದಲ್ಲಿ ವೀರಶೈವವು ಅಂತರ್ಗತವಾಗುತ್ತದೆಂಬುದು ಸಿದ್ಧಾಂತಶಿಖಾಮಣಿಯಿಂದ ತಿಳಿದು ಬರುತ್ತದೆ.

> **ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ**
> **ನಿರ್ದಿಷ್ಟಮುತ್ತರೇ ಭಾಗೇ ವೀರಶೈವ ಮತಂ ಪರಂ[೨]**

ಕಾಮಿಕಾದಿ ಮಹಾತಂತ್ರಗಳಿಗೆ ಸಿದ್ಧಾಂತವೆಂಬ ಅಭಿಧಾನವಿರುವುದೆಂದೂ ಅಲ್ಲಿ ಉತ್ತರ ಭಾಗದೊಳಗೆ ವೀರಶೈವವು ಉಕ್ತವಾಗಿರುವುದೆಂದೂ ಈ ಶ್ಲೋಕದಿಂದ ವೇದ್ಯವಾಗು ತ್ತದೆ. ಈ ನಾಲ್ಕು ಶೈವಗಳ ಸಂಕ್ಷಿಪ್ತ ವರ್ಣನೆ ವಿವೇಕಚಿಂತಾಮಣಿಯಲ್ಲಿ ಹೀಗೆ ಉಕ್ತವಾಗಿದೆ.

## ಸಾಮಾನ್ಯ ಶೈವ

ವಿಭೂತಿಧಾರಣದಿಂದ ಶುದ್ಧಾತ್ಮನಾಗಿ ಸ್ವಯಂಭೂ ಲಿಂಗವನ್ನಾಗಲಿ ಸ್ಥಾವರ ಲಿಂಗವನ್ನಾಗಲಿ ಪೂಜಿಸುತ್ತ ಶಿವಭಕ್ತಜನವಾತ್ಸಲ್ಯ, ಶಿವಪೂಜಾರತಿ, ಶಿವಾರ್ಚನೆ, ಶಿವಾರ್ಥವಾದ ವ್ಯಾಪಾರ, ಶಿವಕಥಾಶ್ರವಣ, ಶಿವಧ್ಯಾನ, ಶಿವಕಥಾನುಕೂಲತೆ, ಪರಮ ಸಾತ್ವಿಕವೆಂಬ ಅಷ್ಟವಿಧಭಕ್ತಿಯುಕ್ತನಾಗಿರುವಾತನು ಸಾಮಾನ್ಯಶೈವನು.

## ಮಿಶ್ರಶೈವ

ಮಿಶ್ರಶೈವದಲ್ಲಿ ಶಿವಲಿಂಗಪೂಜೆಯೊಡನೆ ವಿಷ್ಣು, ಉಮೆ, ಷಣ್ಮುಖ, ವಿಘ್ನೇಶ್ವರ, ಸೂರ್ಯರೆಂಬ ಪಂಚ ದೈವತಗಳ ಪೂಜೆಯೂ ನಡೆಯುತ್ತದೆ. ಮಿಕ್ಕ ಬ್ರಹ್ಮ ಇಂದ್ರಾದಿ ದೇವತೆಗಳ ಆರಾಧನೆಯೂ ಆಗುತ್ತದೆ. ಆದರೆ ಶಿವನೇ ಸರ್ವಾತ್ಮಕನು. ಮಿಕ್ಕ ದೇವತೆ ಗಳೆಲ್ಲ ಆತನ ಭಕ್ತರು ಎಂಬ ಭಾವನೆ ಮಿಶ್ರಶೈವದಲ್ಲಿ ಬಲವಾಗಿರುತ್ತದೆ.

---

೧. ವಿ. ಚಿಂ. ಪುಟ ೬೮.

೨. ಪರಿಚ್ಛೇದ ೫–೧೪.

## ಶುದ್ಧಶೈವ

ಅನಾದಿಶೈವನಾದ ಸದಾಶಿವನ ಸದ್ಯೋಜಾತಾದಿ ಪಂಚಮುಖಗಳಿಂದ ದೀಕ್ಷಿತರಾದ ಕೌಶಿಕ, ಕಾಶ್ಯಪ, ಭರದ್ವಾಜ, ಅತ್ರಿ, ಗೌತಮರೇ ಮೊದಲಾದ ಶೈವಋಷಿಗಳ ಗೋತ್ರಜರಾದ ಮಹಾಶೈವರೆಂದೆನಿಸುವ ಶಿವದ್ವಿಜರೇ ಶುದ್ಧಶೈವರು.

## ವೀರಶೈವ

ವೀರಶೈವನು ಸದಾ ಲಿಂಗಾಂಗಾನುಬಂಧಿಯು. ಲಿಂಗಭೋಗೋಪಭೋಗಿಯಾಗಿರುವನು. ಸರ್ವವೂ ಶಿವಮಯವೆಂದು ಭಾವಿಸುವನು. ಪಂಚಸೂತಕಗಳನ್ನು ಮನ್ನಿಸನು. ಪಂಚಾಚಾರನಿಷ್ಠನಾಗಿರುವನು. ಅಂಗವನ್ನು ಲಿಂಗದಲ್ಲಿ ಬೆರಸಿ ಲಿಂಗೈಕ್ಯನಾಗುವನು. ಇಂತಹ ವೀರಶೈವನು ಕ್ರಿಯಾಭೇದದಿಂದ ಸಾಮಾನ್ಯ, ವಿಶೇಷ, ನಿರಾಭಾರಿ ಎಂದು ಮೂರು ತೆರನಾಗಿರುವನು. ತೋಂಟದ ಸಿದ್ಧಲಿಂಗ ಶಿವಯೋಗಿಗಳು ವೀರಶೈವವು ಶುದ್ಧ, ವಿಶೇಷ, ನಿರ್ವಾಣವೆಂದು ಮೂರು ತೆರನಾಗಿರುವುದೆಂಬುದನ್ನು ತಿಳಿಸುತ್ತಾರೆ.[೧] ಈ ಮೂರು ಮುಂದೆ ಆರು ಬಗೆಯಾಗಿರುವುದನ್ನು ಅವರು ತಿಳಿಸುತ್ತಾರೆ. ಹೀಗೆ ಶೈವ ಧರ್ಮವು ವಿವಿಧಮುಖವಾಗಿ ಬೆಳೆದುನಿಂತಿರುತ್ತದೆ. ಶೈವಾಗಮ ಸಾಹಿತ್ಯವು ಪೂರ್ತಿಯಾಗಿ ದೊರೆತಿಲ್ಲವಾದುದರಿಂದ ಅಲ್ಲಲ್ಲಿ ಅನೇಕ ಸಂದಿಗ್ಧ ವಿಷಯಗಳು ಉಳಿದಿರುವುದು ಅನಿವಾರ್ಯವಾಗಿದೆ.

## ಶೈವಸಿದ್ಧಾಂತಗಳು

ಶೈವದರ್ಶನಗಳಲ್ಲಿ ಕಾಶ್ಮೀರಶೈವ, ತಮಿಳುಶೈವ, ವೀರಶೈವ ಇವು ಬಹು ಮಹತ್ವವಾದುವು. ಕಾಶ್ಮೀರಶೈವವನ್ನು 'ತ್ರಿಕ' ಇಲ್ಲವೆ 'ಪಾಶುಪತಮತ'ವೆಂದೂ[೨] ತಮಿಳು ಶೈವವನ್ನು ಶೈವಸಿದ್ಧಾಂತವೆಂದೂ ಕರೆವ ಸಂಪ್ರದಾಯವುಂಟು. ವೀರಶೈವವನ್ನು 'ಷಟ್‌ಸ್ಥಲ ಸಿದ್ಧಾಂತ'ವೆಂದೂ ಹೆಸರಿಸುವುದುಂಟು. ತ್ರಿಕ ಮತ್ತು ಶೈವಸಿದ್ಧಾಂತಗಳು ಶಿವಸಮಾನತಾವಾದವನ್ನು ಎತ್ತಿಹಿಡಿದರೆ, ವೀರಶೈವವು ಶಿವಸಾಮರಸ್ಯವಾದವನ್ನು ಸಮರ್ಥಿಸುತ್ತದೆ. ಪಶು, ಪಾಶ ಇವು ಕಾಶ್ಮೀರಶೈವದ ತ್ರಿಕಾಭಿಧಾನದ ಸಂಜ್ಞೆಗಳು. ಪಶುವೆಂದರೆ ಬದ್ಧಜೀವಿ; ಪತಿಯೆಂದರೆ ಪರಮಶಿವ; ಪಾಶವೆಂದರೆ ಮಾಯೆ. ಇಲ್ಲಿ ಮೂರು ತತ್ವಗಳಲ್ಲಿ ಜೀವಾತ್ಮನು ಮಲತ್ರಯಗಳ ಮೂಲಕ ಪಾಶಬದ್ಧನಾಗಿರುವನು. ಮಲಪರಿಪಾಕದಿಂದ ಜ್ಞಾನೋದಯವಾಗಿ ಆತ್ಮನಿಗೆ ತನ್ನ ಮೂಲಸ್ವರೂಪದ ಪ್ರತ್ಯಭಿಜ್ಞೆಯಾಗುವುದು. ಮಗು ಬಹುದಿನಗಳಾದ ನಂತರ ತನ್ನ ತಂದೆಯನ್ನು ಗುರುತಿಸಿ

---

೧. ತೋಂ. ಸಿ. ವಚನ ಪು. ೫ ವ. ೯.

೨. ಶಿವಸೂತ್ರಗಳು ಪುಟ ೭.

ದಂತೆ. ಈ ಅವಸ್ಥೆಯಲ್ಲಿ ಶುದ್ಧಾತ್ಮನು ಶಿವಸಮಾನತೆಯನ್ನು ಪಡೆಯುವನು. ತಮಿಳು ಶೈವಸಿದ್ಧಾಂತದನ್ವಯ ಬದ್ಧನಾದ ಜೀವಾತ್ಮನು ಮಲಪರಿಪಾಕದಿಂದಲೇ ಶುದ್ಧಸ್ಥಿತಿ ಯನ್ನು ಪಡೆಯಬೇಕಾಗುತ್ತದೆ. ಶುದ್ಧಾತ್ಮರುಗಳು ಶಿವಪ್ರಕಾಶದಲ್ಲಿ ಮುಳುಗಿ ಕಾಣ ದಂತಾಗಿದ್ದರೂ ಅವರ ಸ್ವತಂತ್ರ ಅಸ್ತಿತ್ವಕ್ಕೆ ಚ್ಯುತಿಯಿಲ್ಲ. ಇದು ಮುಕ್ತಸ್ಥಿತಿ. ವೀರ ಶೈವದ ಪರಿಯೇ ಬೇರೆ. ಅದು ಲಿಂಗಾಂಗಸಾಮರಸ್ಯಪ್ರಬೋಧಕವಾಗಿದೆ. ಬದ್ಧ ಜೀವಿಯು ದೀಕ್ಷಾತ್ರಯದಿಂದ ಶುದ್ಧನಾಗಿ ಆಣವ, ಕಾರ್ಮಿಕ, ಮಾಯಾ ಮಲವಿಚ್ಛೇದನ ದಿಂದ ಅಂಗಸ್ವರೂಪವನ್ನು ಪಡೆಯುತ್ತಾನೆ. ಅಂಗನೆಂದರೆ ಶುದ್ಧಾಂತಃಕರಣ ಜೀವಿ. ಈ ಅಂಗನು ತನ್ನೊಳಗಿನ ಭಕ್ತಿಯನ್ನು ಸತ್ಕ್ರಿಯೆಯ ಮೂಲಕ ಅರಳಿಸುತ್ತ, ಲಿಂಗ ದೊಳಗಿನ ಶಕ್ತಿಯಲ್ಲಿ ಸಮರಸಗೊಳಿಸುತ್ತ ಕೊನೆಗೆ ಲಿಂಗಾಂಗಸಾಮರಸ್ಯವನ್ನು ಪಡೆಯು ತ್ತಾನೆ; ಅದೇ ಮೋಕ್ಷ. ತಾತ್ವಿಕದೃಷ್ಟಿಯಿಂದ ಮೂವತ್ತಾರು ತತ್ವಗಳೂ ಮಲತ್ರಯ ಗಳೂ ಮುಂತಾದುವು ಈ ಮೂರೂ ಶೈವಕ್ಕೆ ಸಾಮಾನ್ಯವಾಗಿವೆ. ಆದರೆ ಇನ್ನುಳಿದ ದೃಷ್ಟಿ ಯಿಂದ ಅವುಗಳಲ್ಲಿ ಭೇದವೂ ಬೇಕಾದಷ್ಟಿದೆ. ವೀರಶೈವ ತತ್ವದರ್ಶನವನ್ನು ವಿವರಿಸು ವಲ್ಲಿ ಈ ಭೇದವನ್ನು ಸ್ಪಷ್ಟಗೊಳಿಸಲಾಗುವುದು.

## ವೀರಶೈವದರ್ಶನ

ವೀರಶೈವದರ್ಶನಕ್ಕೆ ಷಟ್‌ಸ್ಥಲಶಾಸ್ತ್ರವೆಂಬ ಅಭಿಧಾನವಿರುವುದನ್ನು ಹಿಂದೆ ಉಲ್ಲೇಖಿಸಲಾಗಿದೆ. ಷಟ್‌ಸ್ಥಲಸಿದ್ಧಾಂತದ ಬೇರುಗಳು ಆಗಮಗಳಲ್ಲಿಯೇ ಕಂಡುಬರು ತ್ತವೆ. ಕಾಮಿಕಾಗಮದಲ್ಲಿ ವೀರಶೈವಕ್ರಮದ ವಿಷಯ ಉಲ್ಲಿಖಿತವಾಗಿದೆ.

> **"ಬಿಂದುಶ್ಶಕ್ತಿಃ ಶಿವೋ ನಾದಃ ಶಿವಲಿಂಗಂ ತು ಕಥ್ಯತೇ ।**
> **ವೀರಶೈವ ಕ್ರಮಃಪ್ರೋಕ್ತಃ ಪ್ರಾಯಶ್ಚಿತ್ತ ವಿವರ್ಜಿತಃ ॥**
> **ಯದ್ದತ್ತಂ ಗುರುಣಾ ಲಿಂಗಮವಧಾನೇನ ಧಾರಯೇತ್ ।**
> **ಪ್ರಮಾದಾತ್ ಪತಿತೇ ಲಿಂಗೇ ಪ್ರಾಣಾನಪಿ ಪರಿತ್ಯಜೇತ್ ॥"**[೧]

ವೀರಶೈವದ ನಾಮನಿರ್ದೇಶನವು ಪ್ರಥಮಾಗಮದಲ್ಲಿಯೇ ಕಂಡುಬರುವುದು ಗಮ ನಾರ್ಹವಾಗಿದೆ. ಇದೇ ಬಗೆಯಾಗಿ ಇನ್ನೂ ಅನೇಕ ಆಗಮಗಳಲ್ಲಿ ವೀರಶೈವದ ಲಕ್ಷಣ ಗಳು ಉಕ್ತವಾಗಿವೆ.

> **"ಲಿಂಗಾಪಾಯಾದಿ ದೋಷೇಷು ವ್ರತಚರ್ಯಾದಿ ಲೋಪನೇ ।**
> **ಪ್ರಾಣಾನ್‌ದತ್ತೇ ಪ್ರಾಣಲಿಂಗೇ ಸೋಽಂಧೇ ತಮಸಿ ಮಜ್ಜತಿ ॥"**[೨]

ಸೂಕ್ಷ್ಮಾಗಮ ಹೀಗೆ ಪ್ರಾಣಲಿಂಗದ ವಿಷಯವನ್ನು ಪ್ರಸ್ತಾಪಿಸುವುದು. ಇಷ್ಟಲಿಂಗವು ಕಳಚಿಹೋದಲ್ಲಿ ಪುನಃ ಅದನ್ನು ದೊರಕಿಸಿ ಧಾರಣಮಾಡಬೇಕೆಂಬುದೂ ವೀರಶೈವದ ಲಿಂಗಧಾರಣ ಲಕ್ಷಣವಾಗಿದೆ.

---

೧. ಕಾಮಿಕಾಗಮ, ೨. ಸೂಕ್ಷ್ಮಾಗಮ.

"ಇಷ್ಟಲಿಂಗಂ ವಿಭಿನ್ನಂ ಚೇತ್ ಭೂಯೋ ಭೋಕ್ತುಂ ಯದಿಚ್ಛತಿ ।
ತೀರ್ಥಪಾನಂ ಸುರಾಪಾನಂ ಅನ್ನಂ ಗೋಮಾಂಸಭಕ್ಷಣಂ ॥"[೧]

ಇಷ್ಟಲಿಂಗವು ಭಿನ್ನವಾದ ಸಂದರ್ಭದಲ್ಲಿ ಲಿಂಗಧಾರಿಯು ಊಟಮಾಡಲಪೇಕ್ಷಿಸಿದರೆ, ಆತನು ಸೇವಿಸಿದ ತೀರ್ಥವು ಸುರೆಯಾಗಿಯೂ ಅನ್ನವು ಗೋಮಾಂಸವಾಗಿಯೂ ಪರಿಣಮಿಸುವುದೆಂದು ಯೋಗಜಾಗಮದ ಮತ.

"ಇಷ್ಟಲಿಂಗಸ್ಯ ವೈಕಲ್ಯೇ ಪ್ರಾಣತ್ಯಾಗಂ ಸಮಾಚರೇತ್ ॥"[೨]

ಹೀಗೆ ಬೇರೆ ಬೇರೆ ಆಗಮಗಳಲ್ಲಿ ವೀರಶೈವದ ಲಕ್ಷಣಗಳು ವ್ಯಕ್ತವಾಗಿವೆ. ವಾತುಲ, ವೀರ, ಚಂದ್ರಜ್ಞಾನ, ಮತಂಗ, ಪಾರಮೇಶ್ವರ ಮೊದಲಾದ ಆಗಮಗಳು ವೀರಶೈವದ ದೃಷ್ಟಿಯಲ್ಲಿ ಬಹು ಮಹತ್ವವಾದುವು.

ವಾತುಲಾಗಮವು ವೀರಶೈವದ ಪ್ರವೃತ್ತಿ—ನಿವೃತ್ತಿಮಾರ್ಗಗಳನ್ನು ಶಕ್ತಿ, ಕಲೆ, ಸಾದಾಖ್ಯಗಳು, ಮೂವತ್ತಾರು ತತ್ವಗಳು ಮುಂತಾದವುಗಳೊಂದಿಗೆ ವಿಶದವಾಗಿ ವಿವರಿಸುವುದಲ್ಲದೆ ಷಟ್‌ಸ್ಥಲದ ಸೂಕ್ಷ್ಮಾಂಶಗಳನ್ನೂ ಎತ್ತಿತೋರಿಸುತ್ತದೆ. ಲಿಂಗಾಂಗಸಾಮರಸ್ಯದ ಸ್ಫುಟವಾದ ಚಿತ್ರವೂ ಅಲ್ಲಿ ವೇದ್ಯವಾಗುತ್ತದೆ.

"ಹಸ್ತಮಸ್ತಕಸಂಯೋಗಾತ್ ಭೂತಿಪಟ್ಟಸ್ಯ ಧಾರಣಾತ್
ಶಿವದೇಹೀತಿ ವಿಜ್ಞೇಯಃ ಸರ್ವಪಾಪೈಃ ಪ್ರಮುಚ್ಯತೇ
ಗುರುಣಾ ದತ್ತಲಿಂಗಂ ತು ಶಿವಮಂತ್ರೇಣ ಧಾರಯೇತ್
ಮೂರ್ಧ್ನಿ ಕಂಠೇ ಭುಜೇ ಹಸ್ತೇ ಹೃತ್‌ಸ್ಥಲೇ ನಾಭಿಮಂಡಲೇ

* * * *
* * * *

ಗುರುಲಿಂಗೇ ಸದಾ ಭಕ್ತಿಂ ಕಾರಯೇತ್ ಭಸಿತೇ ವ್ರತೀ
ಸ್ವೀಕರೋತಿ ಯದಾ ಲಿಂಗಂ ಗುರುಣಾ ದೀಕ್ಷಯಾಣುನಾ
ತದಾ ಪ್ರಭೃತಿ ಲಿಂಗೈಕ್ಯಮವಿನಾಭಾವಯೋಗತಃ
ದೇಹಂ ಪ್ರಾಣೇನ ಸಂಸ್ಥಾಪ್ಯ ಪ್ರಾಣಂ ಲಿಂಗೇನ ನಿಕ್ಷಿಪೇತ್
ಪ್ರಾಣೇನ ನಿಕ್ಷಿಪೇಲ್ಲಿಂಗಂ ಪೃಥಗ್ಭಾವಂ ನ ಕಾರಯೇತ್
ವೀರಶೈವಕ್ರಮಃ ಪ್ರೋಕ್ತಃ ಪ್ರಾಯಶ್ಚಿತ್ತವಿವರ್ಜಿತಃ[೩]

ಇದನ್ನು ಮನದಂದು ಮಗ್ಗೆಯ ಮಾಯಿದೇವರು ತಮ್ಮ 'ಶಿವಾನುಭವಸೂತ್ರ'ದಲ್ಲಿ ಹೀಗೆ ವಿವರಿಸುವರು:

---

೧. ಯೋಗಜಾಗಮ.

೨. ಕಿರಣಾಗಮ.

೩. ವಾತುಲಾಗಮ ಪಟಲ ೧೦-೩೧-೩೩. ೪೯, ೫೦.

"ವಾತುಲಾಖ್ಯೇ ಮಹಾತಂತ್ರೇ ಪೂರ್ವೋತ್ತರ ವಿಭೇದತಃ
ಭಾಗದ್ವಯಂ ಸಮಾಖ್ಯಾತಂ ತಸ್ಮಿನ್ನುತ್ತರನಾಮನೀ
ತಂತ್ರೋತ್ತರಪ್ರದೀಪಾಖ್ಯಂ ಶಿವಸಿದ್ಧಾಂತತಂತ್ರಕಂ
ಅಸ್ತಿ ತಂತ್ರಾಃ ದೇವೇಷು ದೇವ್ಯೇ ಷಟ್‌ಸ್ಥಲನಿರ್ಣಯಂ"[೧]

ಶಿವಾಗಮಗಳಲ್ಲಿ ವೀರಶೈವ ನಿರ್ದಿಷ್ಟವಾದುದನ್ನು ಸಿದ್ಧಾಂತಶಿಖಾಮಣಿಯೂ ಸಾರಿ ಹೇಳುತ್ತದೆ.

"ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ"[೨]

ಕಾಮಿಕಾದಿ ಇಪ್ಪತ್ತೆಂಟು ಆಗಮಗಳ ಉತ್ತರ ಭಾಗದೊಳಗೆ ವೀರಶೈವವು ನಿರ್ದಿಷ್ಟ ವಾಗಿದೆಯೆಂದು ಶಿವಯೋಗಿ ಶಿವಾಚಾರ್ಯರ ಮತ. ಈ ವಿವೇಚನೆಯಿಂದ ಷಟ್‌ಸ್ಥಲಸಿದ್ಧಾಂತದ ಬೇರುಗಳು ಶಿವಾಗಮಗಳಲ್ಲಿ ಇವೆಯೆಂಬುದು ಸ್ಪಷ್ಟವಾಗುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ನಡೆದ ಶಿವಶರಣರ ಕ್ರಾಂತಿಯಿಂದ ವೀರಶೈವವು ನವನವೋನ್ಮೇಷಣಶಾಲಿನಿಯಾದ ಪ್ರಜ್ಞೆಯನ್ನು ಪಡೆಯಿತು. ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ರಂಗಗಳಲ್ಲಿ ಶಿವಶರಣರು ಹೊಸ ಮೌಲ್ಯಗಳನ್ನು ಕಂಡುಹಿಡಿದಂತೆ ತತ್ವ ದರ್ಶನದಲ್ಲಿಯೂ ಹೊಸ ಹಾದಿಯನ್ನು ತುಳಿದರು. ಪಿಂಡಾದಿ ಜ್ಞಾನಶೂನ್ಯಾಂತಮಾದ ನೂರೊಂದು ಸ್ಥಲಗಳನ್ನೊಳಗೊಂಡ ಷಟ್‌ಸ್ಥಲಶಾಸ್ತ್ರದ ವಿವರಣೆಯನ್ನು ಹಿಂದಿನ ವೀರಶೈವವು ಬೋಧಿಸಿದರೆ, ವಚನಕಾರರು ಮತ್ತೆ ಅದರಲ್ಲಿ ಹೊಸಮಾರ್ಪುಗಳನ್ನು ಮಾಡಿಕೊಂಡಂತಿದೆ. ಚನ್ನಬಸವಣ್ಣನವರ ಒಂದು ವಚನದಿಂದ ಈ ಮಾತಿಗೆ ಪುಷ್ಟಿ ದೊರೆಯುತ್ತಿದೆ. ಬಸವಣ್ಣನವರು ಒಂದು ಸಂದರ್ಭದಲ್ಲಿ ಹೀಗೆ ವಚನಿಸುವರು.

"ಮೆಲ್ಲಮೆಲ್ಲನೆ ಭಕ್ತನೆನಿಸಿಕೊಂಬೆ, ಮೆಲ್ಲಮೆಲ್ಲನೆ ಮಹೇಶ್ವರನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಸಾದಿಯೆನಿಸಿಕೊಂಬೆ, ಮೆಲ್ಲಮೆಲ್ಲನೆ
ಪ್ರಾಣಲಿಂಗಿಯೆನಿಸಿಕೊಂಬೆ,
ಮೆಲ್ಲಮೆಲ್ಲನೆ ಶರಣನೆನಿಸಿಕೊಂಬೆ, ಮೆಲ್ಲಮೆಲ್ಲನೆ ಐಕ್ಯನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಷಡುಸ್ಥಲವ ಮೀಱಿ ನಿರವಯಸ್ಥಲವನೈದುವೆ
ಕೂಡಲಸಂಗಮದೇವಾ"[೩]

ಇಲ್ಲಿ ಉಕ್ತವಾದ ಕ್ರಮಸಮುಚ್ಚಯವನ್ನು—ಭಕ್ತಾದಿಯಾಗಿ ಐಕ್ಯದ ವರೆಗಿನ ಸ್ಥಲ ಸಾಧನೆಯಲ್ಲಿ ಹಂತಹಂತವಾಗಿ, ಕ್ರಮಕ್ರಮವಾಗಿ ಸಾಗಬೇಕೆಂಬ ಅಭಿಪ್ರಾಯವನ್ನು ಚನ್ನಬಸವಣ್ಣನವರು ಹೀಗೆ ಖಂಡಿಸಿರುವರು.

---

೧. ಶಿವಸೂತ್ರ ಪ್ರಥಮಾಧಿಕರಣ ೨೬-೨೭.

೨. ಪರಿಚ್ಛೇದ ೫-೧೬.

೩. ಬ. ವ.

"ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಹೇಶ್ವರ,
ಮೆಲ್ಲಮೆಲ್ಲನೆ ಪ್ರಸಾದಿ, ಮೆಲ್ಲಮೆಲ್ಲನೆ ಪ್ರಾಣಲಿಂಗಿ,
ಮೆಲ್ಲಮೆಲ್ಲನೆ ಶರಣ, ಮೆಲ್ಲಮೆಲ್ಲನೆ ಐಕ್ಯರಾದೆಹೆವೆಂಬರು ನಿಮ್ಮ ಶರಣರು,
ತಾವೇನು ಮರುಜವಣಿಯ ಕೊಂಡರೇ, ಅಮೃತಸೇವನೆಯ ಮಾಡಿದರೇ?
ಆವ ಸ್ಥಲದಲ್ಲಿ ನಿಂದರೂ ಆ ಸ್ಥಲದಲ್ಲಿ ಷಡುಸ್ಥಲವಡಗದಿರ್ದಡೆ,
ಆ ಭಕ್ತಿಯ ಬಾಯಲ್ಲಿ
ಹುಡಿಯ ಹೊಯ್ಯನೆ ಕೂಡಲಚನ್ನಸಂಗಮದೇವ"[೧]

ಇಲ್ಲಿ ಚನ್ನಬಸವಣ್ಣನವರು ಷಟ್‌ಸ್ಥಲವು ಕ್ರಮಸಮುಚ್ಚಯವಾಗದೆ ಸಮಸಮುಚ್ಚಯ ವಾಗಬೇಕೆಂದು ಅಭಿಪ್ರಾಯವಿತ್ತಿರುವರು. ಇದು ಶಿವಶರಣರು ಕಂಡುಹಿಡಿದ ನೂತನ ದರ್ಶನ. ಷಟ್‌ಸ್ಥಲಸಾಧನೆಯಲ್ಲಿ ಪ್ರತಿಯೊಬ್ಬನೂ ಭಕ್ತಸ್ಥಲದಿಂದಲೇ ಪ್ರಾರಂಭಿಸ ಬೇಕೆಂದು ಇವರ ಅಭಿಪ್ರಾಯವಿಲ್ಲ. ಸಾಧಕರ ಪ್ರಕೃತಿ ಭಿನ್ನಭಿನ್ನವಾಗಿರಬಹುದು. ಸ್ವಭಾವತ: ನಿಷ್ಠೆಯನ್ನು ಪಡೆದ ಸಾಧಕನು ತನ್ನ ಸಹಜದ ನೈಷ್ಠೆಯ ಸ್ಥಿತಿಯನ್ನು ಬಿಟ್ಟು ಅದರ ಹಿಂದಿನ ಶ್ರದ್ಧೆಯತ್ತ ಸಾಗುವುದೇಕೆ? ನೈಷ್ಠೆಯಿಂದಲೇ ಆರಂಭಿಸಿ ಅದ ರಲ್ಲಿಯೇ ಭಕ್ತಾದಿ ಷಟ್‌ಸ್ಥಲಗಳನ್ನು ಸಾಧಿಸಲು ಬರುವುದೆಂಬುದನ್ನು ಇವರು ಅರಿತು ಆಚರಿಸಿ ತೋರಿಸಿದರು. ಕ್ರಮಸಮುಚ್ಚಯದಲ್ಲಿ ಒಂದು ದೋಷ ಉಂಟಾಗುವ ಸಂಭವ ವಿದೆ. ಭಕ್ತನಾಗಿ ಆಚಾರಲಿಂಗವನ್ನಾರಾಧಿಸಿ ಗಂಧವನ್ನು ಪ್ರಸಾದಮಯವನ್ನಾಗಿ ಮಾಡುವ ಸಂದರ್ಭದಲ್ಲಿ ಮಿಕ್ಕ ಇಂದ್ರಿಯಗಳ ಮುಖಾಂತರವಾಗಿ ಬರುವ ಪದಾರ್ಥ ಗಳ ಪಾಡೇನು? ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಇವುಗಳ ಆರಾಧನೆಯು ಏಕಕಾಲದಲ್ಲಿಯೇ ನಡೆದರೆ ಆಯಾ ಇಂದ್ರಿಯ ಗಳಿಂದ ಬರುವ ಪದಾರ್ಥಗಳೆಲ್ಲವೂ ಪ್ರಸಾದವಾಗುತ್ತವೆ. ಹೀಗಾದರೆ ಒಂದೇ ಜನ್ಮದಲ್ಲಿ ಭವವನ್ನು ನೀಗಿ ಲಿಂಗಾಂಗಸಾಮರಸ್ಯವನ್ನು ಪಡೆಯಬಹುದೆಂದು ಚನ್ನಬಸವಣ್ಣನವರ ಅಭಿಮತ. ಅಂತೆಯೇ ಪ್ರತಿಯೊಂದು ಭಕ್ತಾದಿ ಷಟ್‌ಸ್ಥಲಗಳಲ್ಲಿ ಮತ್ತೆ ಭಕ್ತಾದಿ ಆರು ಅವಾಂತರಸ್ಥಲಗಳಾದುವು.[೨] ಇವನ್ನು ಸ್ಥಲಕುಲವೆಂದು ಕರೆದರು.

ಹೀಗೆಯೇ ತತ್ತ್ವವಿಚಾರದಲ್ಲಿಯೂ ಸಾಧನೆಯ ವಿಚಾರದಲ್ಲಿಯೂ ಶಿವಶರಣರು ಖಿಲವಾಗುತ್ತಿದ್ದ ಸಿದ್ಧಾಂತವನ್ನು ಪುನರುಜ್ಜೀವನಗೊಳಿಸಿದರು. ಹಿಂದೆ ಉಲ್ಲಿಖಿತವಾದ ಶಿವಾಗಮೋಕ್ತಿಗಳಲ್ಲಿ ಇಷ್ಟಲಿಂಗವು ಭಿನ್ನವಾದರೆ ಇಲ್ಲವೆ ಕಳಚಿಹೋದರೆ ತತ್‌ಕ್ಷಣ ದಲ್ಲಿಯೆ ಪ್ರಾಣವನ್ನು ಬಿಡಬೇಕೆಂಬ ಅಭಿಪ್ರಾಯ ವ್ಯಕ್ತವಾಗಿದೆ.[೩] ಶಿವಶರಣರು ಇದಕ್ಕೆ ಸೈಗೊಡಲಿಲ್ಲ. ಶೂನ್ಯಸಂಪಾದನೆಯಲ್ಲಿ ಬರುವ ನುಲಿಯ ಚಂದಯ್ಯಗಳ ಸಂಪಾದನೆ

---

೧. ಚ. ಬ. ವ. (ತಾಮಸನಿರಸನಸ್ಥಲ)

೨. ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯ ಮುಂತಾದವು.

೩. ಇಷ್ಟಲಿಂಗಸ್ಯ ವೈಕಲ್ಯೇ ಪ್ರಾಣತ್ಯಾಗಂ ಸಮಾಚರೇತ್ (ಕಿರಣಾಗಮ).

ಯನ್ನವಲೋಕಿಸಿದರೆ ಶಿವಶರಣರು ಈ ಬಗೆಗೆ ಎಷ್ಟು ತೀಕ್ಷ್ಣವಾಗಿ ಸಮಾಲೋಚನೆ ಮಾಡಿರುವರೆಂಬುದು ವಿದಿತವಾಗುತ್ತದೆ. ಇವರು ವೀರಶೈವದರ್ಶನದಲ್ಲಿ ಇಂತಹ ಅದ್ಭುತವಾದ ಕ್ರಾಂತಿಯನ್ನೆಸಗದಿದ್ದರೆ ಹದಿನೈದನೆಯ ಶತಮಾನದ ಕವಿಗಳು ಅವರನ್ನು ಕೆಳಗಿನಂತೆ ಸಂಬೋಧಿಸುವ ಕಾರಣವೇ ಇರಲಿಲ್ಲ.

> ". . . ಸಮಸ್ತ ಭಕ್ತನಿ
> ಕಾಯವನು ಪಾವನವ ಮಾಡಿದ
> ರಾಯ ಪೂರ್ವಾಚಾರ್ಯ ಸಂಗನಬಸವ ಶರಣಾರ್ಥಿ
> . . . . . . . .
> . . . ಷಡುಸ್ಥಲವನು
> ದ್ಧಾರಿಸಿದ ಗುರು ಚನ್ನಸಂಗನಬಸವ ಶರಣಾರ್ಥಿ"[೧]
> "ಜಯ ಬಸವೇಶ ಭಕ್ತಜನಭಾಗ್ಯಶುಭೋದಯ ವೀರಶೈವ ನಿ
> ರ್ಣಯ ಪರಮಾವತಾರ . . . .
> ಬಸವಕುಮಾರ ಭಾಕ್ತಿಕ ಪುರಸ್ಸರ ಷಟ್‌ಸ್ಥಲಧೀರ . . .
> ಚನ್ನಬಸವಯ್ಯ . . . ."[೨]

ಹೀಗೆ ಇನ್ನೂ ಅನೇಕ ಕವಿಗಳೂ ಶರಣರೂ ಬಸವಣ್ಣ ಚನ್ನಬಸವಣ್ಣನವರನ್ನು ವೀರಶೈವ ಪ್ರಮಥಾಚಾರ್ಯರೆಂದೂ ಪ್ರಥಮಾಚಾರ್ಯರೆಂದೂ ಕರೆದಿರುವರು. ಇದು ಬಸವಾದಿ ಪ್ರಮಥರಿಂದ ನಡೆದ ಷಟ್‌ಸ್ಥಲೋದ್ಧಾರದ ಕುರುಹೆಂಬುದು ಸುಸ್ಪಷ್ಟ.

ಹೀಗೆಯೇ ನೂರೊಂದು ವಿರಕ್ತರ ಕಾಲದಲ್ಲಿಯೂ ಅನಂತರ ತೋಂಟದ ಸಿದ್ಧಲಿಂಗೇಶ್ವರರ ಕಾಲದಲ್ಲಿಯೂ ಷಟ್‌ಸ್ಥಲೋದ್ಧಾರವಾದ ವಿಷಯವನ್ನು ಹಿಂದೆ ಪ್ರಸ್ತಾಪಿಸಲಾಗಿದೆ.

ಸಹಸ್ರಾರು ವರ್ಷಗಳ ಅವಧಿಯಲ್ಲಿ ವೀರಶೈವದರ್ಶನವು ಕಾಲಕಾಲಕ್ಕೆ ತಕ್ಕ ಮಾರ್ಪುಗಳನ್ನು ಪಡೆಯುತ್ತ ತೋಂಟದ ಸಿದ್ಧಲಿಂಗೇಶ್ವರರ ಹಾಗೂ ಷಣ್ಮುಖಸ್ವಾಮಿಗಳ ಕಾಲದಲ್ಲಿ ಅದು ಪರಿಪೂರ್ಣ ದೆಸೆಯನ್ನು ಮುಟ್ಟಿತೆಂದು ಹೇಳಬಹುದು. ವೀರಶೈವದರ್ಶನದ ವಿಚಾರವನ್ನು ಬಹು ಸೂಕ್ಷ್ಮವಾಗಿ ಅವಲೋಕನ ಮಾಡಿದವರಲ್ಲಿ ತೋಂಟದ ಸಿದ್ಧಲಿಂಗೇಶ್ವರರು ಅಗ್ರಗಣ್ಯರು. ಪ್ರಾಯಶಃ ಅವರನ್ನು ಚನ್ನಬಸವಣ್ಣನವರ ಸಾಲಿನಲ್ಲಿ ನಿಲ್ಲಿಸಬೇಕಾಗುತ್ತದೆ. ಅವರ 'ಷಟ್‌ಸ್ಥಲ ಜ್ಞಾನಸಾರಾಮೃತ ವಚನ'ಗಳಲ್ಲಿ ವೀರಶೈವದರ್ಶನದ ಮಹತ್ವದ ಅಂಶಗಳು ವಿವರ ವಿವರವಾಗಿ ಬರುತ್ತವೆ. ಅವನ್ನು ದೃಷ್ಟಿಯಲ್ಲಿಟ್ಟುಕೊಂಡು ವೀರಶೈವದರ್ಶನವನ್ನು ಇಲ್ಲಿ ಸಮಾಲೋಚಿಸಬಹುದು.

ವೀರಶೈವದರ್ಶನಕ್ಕೆ ಷಟ್‌ಸ್ಥಲಸಿದ್ಧಾಂತವೆಂದು ಅಭಿಧಾನವಿರುವುದನ್ನು ಹಿಂದೆ ಉಲ್ಲೇಖಿಸಲಾಗಿದೆ. ಸಿದ್ಧಾಂತವೆಂಬಲ್ಲಿ ಸಿದ್ಧ ಮತ್ತು ಅಂತ ಎಂಬೆರಡಂಗಗಳುಂಟು.

---

[೧] ಪ್ರಭುಲಿಂಗಲೀಲೆಯ ಮಂಗಲಾಚರಣೆಯ ಪದ್ಯ ೨-೩.

[೨] ಶಿವಾಧವಶತಕ ಪದ್ಯ ೨-೩.

ಸಿದ್ಧವೆಂದರೆ ವಸ್ತುಸ್ವಭಾವಗಳನ್ನು ನಿರ್ಣಯಿಸುವುದು; ಅಂತವೆಂದರೆ ವ್ಯವಸ್ಥೆ. ಸಿದ್ಧಾಂತ ವೆಂದರೆ ವಸ್ತುಸ್ವಭಾವ ನಿರ್ಣಯ ಯೋಜನೆ. ಇದನ್ನೇ ತತ್ವಶಾಸ್ತ್ರವೆಂದು ಕರೆಯುವರು. ತತ್ವವೆಂದರೂ ವಸ್ತುಸ್ವಭಾವವೇ. ಷಟ್‌ಸ್ಥಲವನ್ನು ಸಿದ್ಧಾಂತವೆಂದು ಕರೆದಿರುವುದರಿಂದ ಇಲ್ಲಿ ಒಂದು ಬಗೆಯ ಶಾಸ್ತ್ರೀಯವಾದ ವಸ್ತುಸ್ವಭಾವನಿರ್ಣಯತತ್ವಯೋಜನೆ, ವಿವರಣೆ, ಸಂಯೋಜನೆ, ಇರಲೇಬೇಕೆಂದರ್ಥವಾಗುತ್ತದೆ. ಅದಿಲ್ಲದಿದ್ದರೆ ಅಂತಹ ಅಭಿಧಾನಕ್ಕೆ ಈ ಶಾಸ್ತ್ರವು ಅರ್ಹವಾಗುತ್ತಿರಲಿಲ್ಲ. ಇಲ್ಲಿ ವೀರಶೈವದರ್ಶನದ ಯೋಜನೆಯನ್ನು ವಿವರಿಸಬಹುದು.

ಸಹಜ, ಬಯಲು, ಸರ್ವಶೂನ್ಯ, ನಿರಾಲಂಬವೆಂದು ಹೆಸರಿಸುವ ವಸ್ತುವೊಂದು ಈ ಚರಾಚರಸೃಷ್ಟಿಗೆ ಮೂಲವೆಂದು ವೀರಶೈವದ ನಂಬುಗೆ. ಅದು ತನ್ನ ತಾನರಿಯದ, ನೆನಹು ನಿರ್ಧರಿಸದ ಸಹಜಸ್ಥಿತಿ. ನಿತ್ಯ, ನಿರವಯ; ಪರಿಪೂರ್ಣ. ಈ ಸಹಜದಲ್ಲಿಯೇ ಅವಿನಾಭಾವಸಂಬಂಧದಿಂದ ಶಕ್ತಿಯಡಗಿದೆಯೆಂದು ಇದರ ನಂಬುಗೆ. ಈ ಶಕ್ತಿಯು ಸಹಜದಿಂದ ಬೇರೆಯಲ್ಲ. ಸಹಜಕ್ಕೆ ಶಕ್ತಿಯನ್ನುಳಿದರೆ ಅಸ್ತಿತ್ವವಿಲ್ಲ. ಹೀಗೆ ಎರಡಲ್ಲದ ಒಂದು, ಕೇವಲ ಒಂದಲ್ಲದ ವಿಶಿಷ್ಟಸ್ಥಿತಿಯನ್ನು ಪಡೆದಿರುತ್ತದೆ. ಇದು ತತ್ವಾತೀತವಾದ ವಸ್ತು.

ಈ ದರ್ಶನವು ಮಿಕ್ಕ ಶೈವದರ್ಶನಗಳೊಡನೆ ಮೂವತ್ತಾರು ತತ್ವಗಳನ್ನು ಒಪ್ಪಿಕೊಂಡಿದೆ. ಶೈವಾಗಮಗಳಲ್ಲಿ ಅವುಗಳ ವಿವರ ಹೀಗಿದೆ:




ಈ ತತ್ವಗಳಲ್ಲಿ ವಿಶ್ವವೆಲ್ಲ ಅಡಕವಾಗಿದೆ. ಬದ್ಧಾತ್ಮನಾಗಿರುವ ಜೀವನೂ ಈ ಮೂವತ್ತಾರು ತತ್ವಮಯವಾದ ಪುರ್ಯಷ್ಟಕಶರೀರದಿಂದ ಕೂಡಿರುವನು. ಈ ತತ್ವಗಳನ್ನು

ಎಲ್ಲ ಶೈವರು ಆರು ವರ್ಗಗಳಲ್ಲಿ ವಿಭಜಿಸುವರು. ಅವಕ್ಕೆ ಷಡಧ್ವಗಳೆನ್ನುವರು. ಜೀವನು ಈ ತತ್ವಗಳಲ್ಲಿ ಆರು ಮಾರ್ಗವಾಗಿ ನಡೆದು ಮುಕ್ತಿಯನ್ನೈದುವನು. ಅಂತೆಯೇ ಇವಕ್ಕೆ ಷಡಧ್ವಗಳೆನ್ನುವರು. ಇವು ವರ್ಣಾಧ್ವ, ಪದಾಧ್ವ, ಮಂತ್ರಾಧ್ವ, ಕಲಾಧ್ವ, ತತ್ವಾಧ್ವ, ಭುವನಾಧ್ವವೆಂದು ಹೆಸರನ್ನು ಪಡೆದಿರುವುವು. ಮೊದಲಿನ ಮೂರು ಶಬ್ದಮಯವಾದ ಅಧ್ವಗಳು; ಮುಂದಿನ ಮೂರು ಅರ್ಥಮಯವಾದ ಅಧ್ವಗಳು. ಹೀಗೆ ವೀರಶೈವದಲ್ಲಿ ತತ್ವಗಳ ವಿವರಣೆಯೂ ವಿಭಜನೆಯೂ ಆಗುತ್ತದೆ. ಈ ವಿವರವನ್ನು ಮುಂದೆ ವಿಶದ ಪಡಿಸಲಾಗುವುದು.

## ಪ್ರಮಾಣಗಳು

ವೀರಶೈವರು ಈ ತತ್ವ ಹಾಗೂ ತತ್ವಾತೀತ ವಸ್ತುವಿನ ಸ್ವರೂಪ, ಸಂಬಂಧಗಳನ್ನು ಯಾವ ಪ್ರಮಾಣಗಳ ಮೇಲೆ ನಿರ್ಣಯಿಸುವರೆಂಬುದು ವಿಚಾರಾರ್ಹವಾಗಿದೆ. ಪ್ರತಿಯೊಂದು ಸಿದ್ಧಾಂತದಲ್ಲಿಯೂ ಯುಕ್ತಯುಕ್ತಿಯಿಂದ ಈ ವ್ಯವಸ್ಥೆಯನ್ನು ಏರ್ಪಡಿಸಿರುವರು. ಷಟ್‌ಸ್ಥಲವು ಅನುಭವಪ್ರಮಾಣವಾದ ಸಿದ್ಧಾಂತವೆನಿಸಿದರೂ ಅಲ್ಲಿಯೂ ಶಾಸ್ತ್ರೀಯವಾದ ತತ್ವವಿವೇಚನೆಯಿದೆ. ಅಲ್ಲಿ ಒಂದು ಪ್ರಮೆ ಉಂಟು. ಪ್ರಮೆಯೆಂದರೆ ಯಥಾರ್ಥಜ್ಞಾನ. ನಿತ್ಯಾನಿತ್ಯ ವಸ್ತುಗಳ ಸ್ವರೂಪವನ್ನು ತಿಳಿದು ಕೊನೆಯಲ್ಲಿ ಸರ್ವಶೂನ್ಯನಿರಾಲಂಬವಾದ ಸಹಜಸ್ಥಿತಿಯೇ ಮೂಲವೆಂಬ ಜ್ಞಾನವು ಈ ದರ್ಶನದಲ್ಲಿ ಅನುಭವವೇದ್ಯವಾಗಬೇಕಾಗುತ್ತದೆ; ಇದು ಪ್ರಮೆ. ಇದಕ್ಕೆ ಆಶ್ರಯವಾಗಿರುವಾತನು ಪ್ರಮಾತನು; ಅಂದರೆ ಜೀವಾತ್ಮನು. ವಿಷಯವಾಗಿರುವುದು ಪ್ರಮೇಯ. ಕೊನೆಗೆ ಅಲ್ಲಿ ಉಂಟಾಗುವ ಜ್ಞಾನ ಪ್ರಮಿತಿ. ಹೀಗೆ ಪ್ರಮಾಣ, ಪ್ರಮೇಯ, ಪ್ರಮಾತ, ಪ್ರಮಿತಿಯೆಂಬ ನಾಲ್ಕು ವಿಧದಲ್ಲಿ ವೀರಶೈವತತ್ವಜ್ಞಾನವು ಪ್ರಪಂಚವನ್ನು ವಿಭಜಿಸುವುದು. ಈ ಶಾಸ್ತ್ರದಲ್ಲಿಯೂ ಅನುಬಂಧಚತುಷ್ಟಯವಿದೆ. ಅಂಗ, ಲಿಂಗದಲ್ಲಿ ಸಾಮರಸ್ಯವನ್ನು ಪಡೆಯುವುದೇ ವಿಷಯ. ಮಲತ್ರಯ ಪರಿಚ್ಛೇದನ ಮಾಡಿಕೊಂಡು ಕೈವಲ್ಯಲಕ್ಷ್ಮಿಯನ್ನು ಪಡೆಯುವುದೇ ಪ್ರಯೋಜನ. ಅಷ್ಟಾವರಣ ಪಂಚಾಚಾರನಿಷ್ಠನಾಗಿ ಷಟ್‌ಸ್ಥಲನಿರತನಾದವನೇ ಅಧಿಕಾರಿ. ಲಿಂಗಾಂಗಸಾಮರಸ್ಯರೂಪವಾದ ವಿಷಯಕ್ಕೂ ಈ ಶಾಸ್ತ್ರಕ್ಕೂ ಇರುವ ಪ್ರತಿಪಾದ್ಯ-ಪ್ರತಿಪಾದಕ ಭಾವವೇ ಸಂಬಂಧ. ಇದೇ ಅನುಬಂಧಚತುಷ್ಟಯ. ಹೀಗೆ ಶಾಸ್ತ್ರೋಕ್ತವಾಗಿ ತತ್ವವಿವೇಚನೆ ಮಾಡಿರುವ ವೀರಶೈವಕ್ಕೆ ವಿಶಿಷ್ಟವಾದ ಪ್ರಮಾಣಗಳಿರುವುದು ಸ್ವಾಭಾವಿಕವಾಗಿದೆ. ಕೇವಲ ಪೃಥ್ವಿ, ಅಪ್, ತೇಜ, ವಾಯುವೆಂಬ ನಾಲ್ಕು ತತ್ವಗಳನ್ನು ಮಾತ್ರ ನಂಬಿದ ಚಾರ್ವಾಕರು ಪ್ರತ್ಯಕ್ಷ ಪ್ರಮಾಣವೊಂದನ್ನೇ ಆಧರಿಸಿದರು. ಇಂದ್ರಿಯಗಳಿಗೆ ಗೋಚರವಾಗದ ಯಾವ ವಿಷಯವನ್ನೂ ಅವರು ನಂಬಲಿಲ್ಲ. ನಿರೀಶ್ವರವಾದವನ್ನು ಅವಲಂಬಿಸಿದ ಬೌದ್ಧದಾರ್ಶನಿಕರು ಮತ್ತು ವೈಶೇಷಿಕರು ಪ್ರತ್ಯಕ್ಷ, ಅನುಮಾನವೆಂಬ ಎರಡು ಪ್ರಮಾಣಗಳನ್ನು ಮಾತ್ರ ಇಟ್ಟುಕೊಂಡಿರುವರು. ಇಲ್ಲಿ ಬೌದ್ಧರು ಆರ್ಯಸತ್ಯವಸ್ತುಗಳನ್ನೂ ಸ್ಕಂಧಪಂಚಕವನ್ನೂ ಇಟ್ಟುಕೊಂಡು ವಸ್ತುಸ್ವಭಾವವನ್ನು ತಾತ್ವಿಕವಾಗಿ ವಿವೇಚಿಸಿರುವರು. 'ಕ್ಷಣಿಕವಾದ'ವನ್ನು

ನಂಬಿದ ಅವರಿಗೆ ಕೇವಲ ಪ್ರತ್ಯಕ್ಷಪ್ರಮಾಣವೊಂದರಿಂದಲೇ ಸೃಷ್ಟಿಯ ತತ್ವಗಳ ಸ್ವರೂಪ ಗಳನ್ನು ವಿವರಿಸುವುದಾಗಲಿಲ್ಲ. ಅಂತೆಯೇ ಅವರು ಅನುಮಾನಪ್ರಮಾಣವನ್ನು ಒಪ್ಪಿ ಕೊಂಡರು. ಆತ್ಮತತ್ವದ ಅಸ್ತಿತ್ವವನ್ನು ಒಪ್ಪಿಕೊಂಡ ಸಾಂಖ್ಯರು ಪ್ರತ್ಯಕ್ಷ, ಅನುಮಾನ, ಆಗಮ ಈ ಪ್ರಮಾಣಗಳಿಂದ ಪ್ರಪಂಚಸ್ವಭಾವವನ್ನೂ ಅದಕ್ಕೆ ಮೂಲಕಾರಣವಾದ ಪ್ರಕೃತಿಯ ಸ್ವರೂಪವನ್ನೂ ಪ್ರಕೃತಿ-ಪುರುಷತ್ವದ ಸಂಬಂಧವನ್ನೂ ನಿರ್ಣಯಿಸಿದರು. ಉದಯನಾಚಾರ್ಯರೇ ಮೊದಲಾದ ನೈಯಾಯಿಕರು ಪ್ರತ್ಯಕ್ಷದಿಂದಲೂ ಆಗಮ ಗಳಿಂದಲೂ ತಿಳಿದ ವಸ್ತುಗಳನ್ನು ಪುನಃ ಯುಕ್ತಿಯಿಂದ ಪರೀಕ್ಷಿಸುತ್ತಾರೆ. ನ್ಯಾಯ ಶಾಸ್ತ್ರದಲ್ಲಿ ಆತ್ಮ ಪರಮಾತ್ಮ ತತ್ವಗಳ ಒಪ್ಪಿಗೆಯಾಗಿದ್ದರೂ ಪರಮಾತ್ಮನೇ ಸಕಲ ಕಾರ್ಯಕ್ಕೆ ಕಾರಣವೆನಿಸಿಕೊಂಡಿದ್ದರೂ ಆತನು ನಿಗ್ರಹಾನುಗ್ರಹಶಕ್ತಿಯನ್ನು ಪಡೆದಿರು ವುದಿಲ್ಲ. ಆತ್ಮನಿಗೆ ಬಂದಿರುವ ಬಂಧವು ತನ್ನ ಮಿಥ್ಯಾಜ್ಞಾನದಿಂದ. ತತ್ವಜ್ಞಾನದಿಂದ ಯಥಾರ್ಥಜ್ಞಾನವಾಗಿ ಮೋಕ್ಷ ಪ್ರಾಪ್ತವಾಗುತ್ತದೆ. ಕಾರಣ ಈ ಬಂಧ, ಮೋಕ್ಷ ವಿಷಯದಲ್ಲಿ ಪರಮಾತ್ಮನ ಪ್ರಸ್ತಾಪವೇ ಬಾರದೆಂದು ಅವರ ಮತ. ಈ ಯಥಾರ್ಥ ಜ್ಞಾನಕ್ಕೆ ಕಾರಣವೆಂದು ನೈಯಾಯಿಕರು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ ಎಂಬ ನಾಲ್ಕು ಪ್ರಮಾಣಗಳನ್ನು ಅಂಗೀಕರಿಸಿರುವರು. ಪ್ರಾಭಾಕರರು ಈ ನಾಲ್ಕಲ್ಲದೆ ಅರ್ಥಾಪತ್ತಿಯನ್ನೂ ಅಂಗೀಕರಿಸಿ ಒಟ್ಟು ಐದು ಪ್ರಮಾಣಗಳನ್ನು ಒಪ್ಪಿರುವರು. ಶಾಂಕರಾದ್ವೈತಿಗಳು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪ ಲಬ್ಧಿ ಎಂಬ ಆರು ಪ್ರಮಾಣಗಳನ್ನು ಅಂಗೀಕರಿಸಿರುವರು. ಈ ಆರು ಪ್ರಮಾಣಗಳಲ್ಲದೆ ಸಂಭವ, ಐತಿಹ್ಯ, ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ, ಪ್ರಾತಿಭ ಎಂಬ ಬೇರೆ ಆರು ಪ್ರಮಾಣ ಗಳೂ ಉಂಟು. ಹೀಗೆ ಪ್ರಮಾಣಗಳು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ವೀರಶೈವದ ಪ್ರಮಾಣಗಳನ್ನು ವಿಚಾರಿಸಬಹುದು.

ವೀರಶೈವರು ಪ್ರತ್ಯಕ್ಷ, ಅನುಮಾನ, ಶಬ್ದ ಎಂಬ ಮೂರು ಪ್ರಮಾಣಗಳನ್ನಿಟ್ಟು ಕೊಂಡು ಮಿಕ್ಕ ಪ್ರಮಾಣಗಳನ್ನು ಅವುಗಳಲ್ಲಿಯೇ ಅಂತರ್ಗತ ಮಾಡುವರೆಂದು ಕೆಲವರ ಮತ.[೧] ಅನುಪಲಬ್ಧಿಯನ್ನು ಪ್ರತ್ಯಕ್ಷದಲ್ಲಿಯೂ ಉಪಮಾನ, ಅರ್ಥಾಪತ್ತಿ, ಸಂಭವ ಗಳನ್ನು ಅನುಮಾನದಲ್ಲಿಯೂ ಐತಿಹ್ಯವನ್ನು ಶಬ್ದದಲ್ಲಿಯೂ ಅಂತರ್ಗತಮಾಡುವ ರೆಂದು ವಿದಿತವಾಗುತ್ತದೆ. ಆದರೆ, ಪ್ರತ್ಯಕ್ಷ, ಅನುಮಾನ, ಆಗಮ ಮತ್ತು ಅರ್ಥಾಪತ್ತಿ ಎಂಬ ನಾಲ್ಕು ಪ್ರಮಾಣಗಳನ್ನು ಅಂಗೀಕರಿಸುವರೆಂದು ವಾತುಲತಂತ್ರಕ್ಕೆ ಟೀಕೆಯನ್ನು ಬರೆದ ಗುಬ್ಬಿಯ ಮಲ್ಲಣಾರ್ಯರು ಅಭಿಪ್ರಾಯಪಡುವರು. ವಾತುಲಾಗಮ ಟೀಕೆಯ ಉಪೋದ್ಘಾತದಲ್ಲಿ ಅವರು ಈ ವಿಷಯವನ್ನು ಹೀಗೆ ವಿವರಿಸುವರು:

'ಪಾರಮೇಶ್ವರ ತಂತ್ರದ ಪೌಷ್ಕರದಲ್ಲಿ ಪರಮೇಶ್ವರನು ಪ್ರಮಾಣ ಲಕ್ಷಣಂ ಗಳನು ನಿರೂಪಿಸಿದನು' ಎಂದು ಹೇಳಿ ಕೆಳಗಿನ ಶ್ಲೋಕವನ್ನು ಉದ್ಧರಿಸಿ ವಾಖ್ಯಾನಿಸು ವರು.

---

[೧] ವೀ. ರ. ಪು. ೨೦೨. ಕನ್ನಡ ವೀರಶೈವಾನಂದ ಚಂದ್ರಿಕೆ ಪು, ೩೬೪.

**ಚತ್ವಾರಿ ತಾನಿ ಮಾನಾನಿ ಪ್ರತ್ಯಕ್ಷಾದೀನಿ ಹೇ ದ್ವಿಜಾಃ ।**
**ಪ್ರತ್ಯಕ್ಷಮನುಮಾನಂ ಚ ಶಬ್ದಾರ್ಥಾಪತ್ತಿರೇವ ಚ ॥**

ಪ್ರತ್ಯಕ್ಷ, ಅನುಮಾನ, ಶಬ್ದ ಮತ್ತು ಅರ್ಥಾಪತ್ತಿ ಇವು ನಾಲ್ಕೂ ಪ್ರಮಾಣಗಳು ಗ್ರಾಹ್ಯವೆಂದು ಇದರರ್ಥ. ಇವುಗಳಲ್ಲಿ ಪ್ರತ್ಯಕ್ಷಪ್ರಮಾಣದ ಕಲ್ಪನೆ ಹೀಗೆ:

**ಸಂಶಯಾದಿವಿನಿರ್ಮುಕ್ತಾ ಚಿಚ್ಛಕ್ತಿರ್ಮಾನಮುಚ್ಯತೇ**

'ಸಂಶಯ, ವಿಪರೀತ ಜ್ಞಾನಗಳಿಂದ ಬಿಡಲ್ಪಟ್ಟಂಥಾ ಜ್ಞಾನಶಕ್ತಿಯೇ ಪ್ರತ್ಯಕ್ಷಪ್ರಮಾಣ' ವೆಂದು ಮಲ್ಲಣಾರ್ಯರು ವ್ಯಾಖ್ಯಾನಿಸಿರುವರು. ಪ್ರತ್ಯಕ್ಷಜ್ಞಾನದಲ್ಲಿ ಸಂಶಯಕ್ಕೆ ಎಡೆಯಿಲ್ಲ. ಹಗ್ಗವನ್ನು ಕಂಡಾಗ ಹಗ್ಗದ ತಿಳಿವಳಿಕೆಯುಂಟಾಗುವುದು ಪ್ರತ್ಯಕ್ಷಜ್ಞಾನ; ಅದಕ್ಕೆ ಪ್ರತಿಯಾಗಿ ಹಗ್ಗವೋ ಹಾವೋ ಎಂಬ ಭಾವನೆಯುಂಟಾಗುವುದು ಸಂಶಯಜ್ಞಾನ. ಪ್ರತ್ಯಕ್ಷಪ್ರಮಾಣದಲ್ಲಿ ಈ ಬಗೆಯ ಸಂದೇಹ, ವಿಪರೀತ ಜ್ಞಾನಗಳಿಗೆ ಅವಕಾಶವಿಲ್ಲ.

**ಅನುಮಾನಂ ದೃಢವ್ಯಾಪ್ತೌ ಪರೋಕ್ಷಾರ್ಥಾವಬೋಧಕಂ ।**

ಎಂದು ಅನುಮಾನಪ್ರಮಾಣದ ಲಕ್ಷಣ ಹೇಳಿರುವರು. 'ದೃಢವ್ಯಾಪ್ತಿಯಿಂದುಂಟಾಗುವ ದೂರಾರ್ಥದ ತಿಳಿವು ಪ್ರತಿಜ್ಞಾದಿ ಪಂಚಾವಯವನುಳ್ಳ ಅನುಮಾನಪ್ರಮಾಣವೆನಿಸುವುದು' ಎಂದು ಅರ್ಥ ಬರೆದಿರುವರು. ಅಂದರೆ ದೃಢವ್ಯಾಪ್ತಿಯಿಂದ ಪರೋಕ್ಷದಲ್ಲಿದ್ದ ವಸ್ತುವಿನ ತಿಳಿವಳಿಕೆಯುಂಟಾಗುವುದು. ವಹ್ನಿಯ ದೃಢವ್ಯಾಪ್ತಿಯಿಂದ ಕಣ್ಣಿಗೆ ಕಾಣದಿದ್ದ ಅಗ್ನಿಯ ಅಸ್ತಿತ್ವವನ್ನು ತಿಳಿದುಕೊಳ್ಳಲಾಗುತ್ತದೆ. 'ಪರ್ವತೋ ವಹ್ನಿಮಾನ್ ಧೂಮಾತ್' ಎಂದು ಹೇಳುತ್ತೇವೆ. ಇಲ್ಲಿ ಇಂದ್ರಿಯಗೋಚರವಾಗಿರುವುದು ಧೂಮ ಮಾತ್ರ. ಅಗ್ನಿಗೂ ಧೂಮಕ್ಕೂ ಸಾಹಚರ್ಯ ನಿತ್ಯವಾಗಿದೆ. ಈ ಸಾಹಚರ್ಯಸಂಬಂಧದಿಂದ ನಮಗೆ ಕಾಣದಿದ್ದ ಅಗ್ನಿಯ ತಿಳಿವಳಿಕೆಯುಂಟಾಗುತ್ತದೆ.

ಇನ್ನು ಶಬ್ದ ಅಥವಾ ಆಗಮದ ಅರ್ಥವನ್ನು ವಿವರಿಸಲು, ಆಪ್ತನೆಂದರೆ ಯಾರೆಂಬುದನ್ನು ಮೊದಲು ವಿವರಿಸುವರು.

**ಪ್ರತ್ಯಕ್ಷೇಣಾನುಮಾನೇನ ಯದೇತತ್ತು ಸುನಿಶ್ಚಿತಂ ।**
**ಯೋವಕ್ತಿ ಸೋಽಯಮಾಪ್ತಃ ಸ್ಯಾತ್ತಸ್ಮಾದಾಪ್ತತರಶ್ಶಿವಃ ॥**

ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳಿಂದ ಸುನಿಶ್ಚಿತವಾದ ಅರ್ಥವನ್ನು ತಿಳಿಸುವವನು ಆಪ್ತನು. ತನ್ನ ನಿಜಜ್ಞಾನದ ಅನುಭವವನ್ನು ನೀಡಿ, ಮಿತ್ರನ ಭ್ರಾಂತಿಯನ್ನು ಹೊಡೆದೋಡಿಸುವವನು ಆಪ್ತನಲ್ಲವೆ? ಈ ಜಗತ್ತಿನಲ್ಲಿ ಆಪ್ತತಮನೆಂದರೆ ಶಿವನು. ಆತನನ್ನು ಮಲ್ಲಣಾರ್ಯರು ಹೀಗೆ ವರ್ಣಿಸುವರು:

**ಸುಪ್ರಸನ್ನೇಂದ್ರಿಯಗ್ರಾಮಃ ಸರ್ವಜ್ಞಃ ಸರ್ವಗೋಚರಃ ।**
**ಪಕ್ಷಪಾತವಿನಿರ್ಮುಕ್ತೋ ಯಥಾರ್ಥಗ್ರಾಹಕಸ್ಸದಾ ॥**

'ಮಿಗೆ ಪ್ರಸನ್ನವಾದ ಇಂದ್ರಿಯಗ್ರಾಮವುಳ್ಳಾತನಾಗಿ ಸಮಸ್ತವನು ಅರಿದಿಹನಾಗಿ ಸಮಸ್ತವನು ಗೋಚರಿಸಿ ಇಹಾತನಾಗಿ ಪಕ್ಷಪಾತದಿಂದ ಬಿಡಲ್ಪಟ್ಟಾತನಾಗಿ ಎಲ್ಲಾಗಳೂ ತಥ್ಯಾರ್ಥಗ್ರಾಹಕನಾಗಿ,

**ಅವ್ಯಯಃ ಪರಿಪೂರ್ಣಶ್ಚ ಸ್ವತಂತ್ರಃ ಪಶುಪಾಶಹಾ ।**
**ಪ್ರಮಾಣಮೇಕಂ ತದ್ವಾಕ್ಯಂ ತಥ್ಯಂ ಶ್ರೇಯೋನಿಧಿಸ್ಸದಾ ॥**

ದೇಶಕಾಲಾದಿಗಳಿಂದ ಬಳಿಕೆ ಇಲ್ಲದಾತನಾಗಿ, ಸರ್ವತ್ರ ಪರಿಪೂರ್ಣನಾಗಿ, ಸಮಸ್ತವೂ ತನ್ನ ಅಧೀನವಾಗಿ ತಾನಾವುದರ ಅಧೀನವಲ್ಲದಾತನಾಗಿ, ಬ್ರಹ್ಮಾದಿ ಪಶುಗಳ ಮಲ ಮಾಯಾದಿ ಪಾಶಂಗಳನು ಕೆಡಿಸುವಾತನಾಗಿ ಎಲ್ಲಾಗಳು ಮುಕ್ತಿಸ್ಥಾನವಾದ ಆವನೊಬ್ಬ ದೇವನುಂಟು; ಆ ಪರಮೇಶ್ವರನ ತಥ್ಯವಹಂತಹ ವಾಕ್ಯವೇ ಮುಖ್ಯ ಪ್ರಮಾಣ. ಮಲ್ಲಣಾರ್ಯರ ವ್ಯಾಖ್ಯಾನದಿಂದ ಈ ಸಿದ್ಧಾಂತದಲ್ಲಿ ಶಬ್ದಪ್ರಮಾಣವೇ ಮುಖ್ಯವೆಂಬ ಮಾತು ಸ್ಪಷ್ಟವಾಗುತ್ತದೆ.

**ದೃಶ್ಯಮಾನಮಸರ್ವಜ್ಞಂ ಕಲ್ಪಯೇತ್ ಸೋಪಪಾದಕಮ್ ।**
**ಪಶುಷ್ವೇವ ಪಶುತ್ವಾಖ್ಯಂ ಸರ್ವಜ್ಞೇ ಶಾಸ್ತ್ರತಃ ಸ್ಥಿತೇ ॥**

ಶಿವನು ಸರ್ವಜ್ಞನೆಂದರೆ, ದೃಶ್ಯಮಾನ ಸೃಷ್ಟಿಯೆಲ್ಲಾ ಅಸರ್ವಜ್ಞವೆಂದು ಅರ್ಥವಾಗುತ್ತದೆ. ಇದು ಅರ್ಥಾಪತ್ತಿ. 'ಪೀನೋ ದೇವದತ್ತೋ ದಿವಾ ನ ಭುಙ್ತೇ' ದಷ್ಟಪುಷ್ಟನಾದ ದೇವದತ್ತನು ಹಗಲು ಊಟ ಮಾಡುವುದಿಲ್ಲ ಎಂದು ಹೇಳುವಲ್ಲಿ ಎರಡು ವಿಷಯಗಳು ವಾಚ್ಯವಾಗಿವೆ.

೧. ದೇವದತ್ತನು ದಷ್ಟಪುಷ್ಟನಾಗಿರುವನು.
೨. ಆತನು ಹಗಲು ಊಟ ಮಾಡುವುದಿಲ್ಲ.

ಇದರಿಂದ ಆತನು ರಾತ್ರಿ ಊಟ ಮಾಡುತ್ತಿರಲೇಬೇಕೆಂದು ಅರ್ಥವಾಗುತ್ತಿರುವುದು ಅರ್ಥಾಪತ್ತಿ ಪ್ರಮಾಣದಿಂದ.

ಈ ಪ್ರಮಾಣಚತುಷ್ಟಯದಲ್ಲಿ ಆಗಮಪ್ರಮಾಣವೇ ಅತಿಶಯವಾದುದೆಂದು ಉಕ್ತವಾಗಿದೆ.

**ಪ್ರಮಾಣ ಚತುಷ್ಟಯಾಣಾಂ ಆಗಮ ಪ್ರಮಾಣಮೇವ ಚ ।**
**ಅತಿಶಯಪ್ರಮಾಣಮಿತಿ ಉದಾಹೃತಂ ॥**

ಹೀಗೆ ವಾತುಲಾಗಮದ ವ್ಯಾಖ್ಯಾನಮುಖದಲ್ಲಿ ಪಾರಮೇಶ್ವರ ಮತ್ತು ಪೌಷ್ಕರಾಗಮವನ್ನು ಆಧರಿಸಿ ವೀರಶೈವಕ್ಕೆ ಅನ್ವಯವಾಗುವ ಪ್ರಮಾಣಗಳನ್ನು ಮಲ್ಲಣಾರ್ಯರು ವಿವರಿಸಿರುವರು.

ಪ್ರಮಾಣಗಳ ವಿಷಯವನ್ನು ಇದುವರೆಗೆ ವಿಶದವಾಗಿ ವಿಚಾರಿಸಲಾಯಿತು. 'ಮೋಕ್ಷ ವಿಷಯಪ್ರಧಾನವಾಗಿರುವ ತತ್ವಶಾಸ್ತ್ರದಲ್ಲಿ ಈ ಪ್ರಮಾಣಗಳ ವಿವರಣೆ ಏಕೆ?' ಎಂಬ ಪ್ರಶ್ನೆಗೆ ಪ್ರಾರಂಭದಲ್ಲಿ ಸ್ವಲ್ಪ ಮಟ್ಟಿಗೆ ಉತ್ತರಿಸಲಾಗಿದೆ. ಯಥಾರ್ಥಜ್ಞಾನವೇ

ಮೋಕ್ಷ, ಮಿಥ್ಯಾಜ್ಞಾನವೇ ಬಂಧ. ಈ ಯಥಾರ್ಥಾನುಭವಕ್ಕೆ ಪ್ರಮೆಯೆನ್ನುವರು; ಅಯಥಾರ್ಥಾನುಭವಕ್ಕೆ ಭ್ರಮೆಯೆನ್ನುವರು. ಪ್ರಮೆಯಿಲ್ಲದೆ ಮೋಕ್ಷವಿಲ್ಲ; ಅಂದರೆ ಪ್ರಮೆಯೇ ಮೋಕ್ಷ. ಈ ಪ್ರಮೆಗೆ ಸಾಧನವಾದುದೇ ಪ್ರಮಾಣ. ಪ್ರತಿಯೊಂದು ಸಿದ್ಧಾಂತದ ಗುರಿಯೂ ಯಥಾರ್ಥಜ್ಞಾನಸಂಪಾದನೆಯೇ ಆಗಿರುವುದರಿಂದ ತತ್ ಸಾಧನವಾಗಿರುವ ಪ್ರಮಾಣಗಳ ವಿವೇಚನೆ ಅಲ್ಲಿ ಅವಶ್ಯವೆನಿಸುತ್ತದೆ.

ವೀರಶೈವವು ಈ ಪ್ರಮಾಣಗಳನ್ನನುಸರಿಸಿ ಅನ್ಯಮತಖಂಡನೆ ಹಾಗೂ ಸ್ವಸಿದ್ಧಾಂತ ಪ್ರತಿಷ್ಠಾಪನೆಗಳನ್ನು ಮಾಡುತ್ತದೆ.

'ಪ್ರತ್ಯಕ್ಷಮೇಕಂ ಚಾರ್ವಾಕಾಃ' ಎಂಬ ಸೂತ್ರ ಹೇಳುವಂತೆ ಚಾರ್ವಾಕರು ಪ್ರತ್ಯಕ್ಷಪ್ರಮಾಣವೊಂದನ್ನೇ ಆಧರಿಸಿ, ಆತ್ಮವೆಂಬ ಬೇರೊಂದು ತತ್ತ್ವವನ್ನೊಪ್ಪದೆ ದೇಹವೇ ಆತ್ಮವೆಂದು ಸಾರಿದರು. ಅದಕ್ಕೆ ಅವರು ಕೊಡುವ ಕಾರಣವೆಂದರೆ, ಆತ್ಮನೆಂಬ ವಸ್ತುವಿದ್ದರೆ ಅದು ಪ್ರತ್ಯಕ್ಷ ಕಾಣಬೇಕು. ಆದರೆ, ದೇಹದ ಹೊರತು ಬೇರೆ ಯಾವ ವಸ್ತುವೂ ಪ್ರತ್ಯಕ್ಷಾನುಭವಗೋಚರವಾಗುವುದಿಲ್ಲ. ಹೀಗೆ ಪ್ರತ್ಯಕ್ಷ ನಿದರ್ಶನಕ್ಕೆ ಬಾರದ ವಸ್ತುವನ್ನು ನಂಬಲು ನಾವು ಸಿದ್ಧರಿಲ್ಲ ಎನ್ನುತ್ತಾರೆ. ಈ ವಿವರಣೆಯಿಂದ ಚಾರ್ವಾಕರು ಶಬ್ದ ಮೊದಲಾದ ಪ್ರಮಾಣಗಳನ್ನು ನಿರಾಕರಿಸುವರೆಂಬುದು ಸ್ಪಷ್ಟವಾಗುತ್ತದೆ. ಶಬ್ದ ಪ್ರಮಾಣವನ್ನು ಅಂಗೀಕರಿಸುವುದಿಲ್ಲವೆಂದು ಚಾರ್ವಾಕರು ಹೇಳಿದರೆ, ಅದಕ್ಕೆ ಪ್ರತಿಯಾಗಿ ವೀರಶೈವ ಸಿದ್ಧಾಂತ ಪ್ರತಿಪಾದಕರು ಹೀಗೆ ಕೇಳಬಹುದು. ಶಬ್ದವನ್ನು ಪ್ರಮಾಣವೆಂದು ಅಂಗೀಕರಿಸುವುದಿಲ್ಲವೆಂದು ಹೇಳುವ ಚಾರ್ವಾಕರು ಶಬ್ದಮುಖದಿಂದಲೇ ಆ ಮಾತನ್ನು ಹೇಳುತ್ತಾರೆ. ಅಂದಮೇಲೆ ಶಬ್ದ ಪ್ರಮಾಣವಲ್ಲವೆಂಬ ಅವರ ನುಡಿಯು ಆಧಾರದ ಮೇಲಿಂದಲೇ, ಶಬ್ದಪ್ರಮಾಣವನ್ನು ಒಪ್ಪುವುದಿಲ್ಲವೆಂಬ ಅವರ ವಾದವನ್ನೊಪ್ಪಲಿಕ್ಕಾಗದು. ಶಬ್ದವು ಅನುಭವಜ್ಞಾನದ ಅಂತರಾಳದಿಂದ ಬಂದುದು. ವ್ಯಷ್ಟಿಯಿಂದ ಬಂದ ಇಂತಹ ಶಬ್ದಶಕ್ತಿಯಲ್ಲಿ ಸಮಷ್ಟಿಶಕ್ತಿ ಅಡಗಿರುವುದುಂಟು. ಲೋಕದಲ್ಲಿ ಪ್ರತಿಯೊಬ್ಬನ ವ್ಯವಹಾರವೂ ತನ್ನ ಪ್ರತ್ಯಕ್ಷಾನುಭವದಿಂದಲೇ ನಡೆಯಬೇಕೆಂದರೆ ಸಾಧ್ಯವಿಲ್ಲ. ಸ್ವಾನುಭವಕ್ಕೆ ಬಾರದ ಕೆಲವು ವಿಷಯಗಳು ಅನ್ಯರಿಂದ ಅರಿತು ಆಚರಿಸಿದ ನಂತರ ಅನುಭವವೇದ್ಯವಾಗಬಲ್ಲುವು. ಆದುದರಿಂದ ಆಧ್ಯಾತ್ಮಿಕ ಕ್ಷೇತ್ರದಲ್ಲಿಯೂ ಇಂತಹ ಅನುಭವದ ಶಬ್ದಪ್ರಮಾಣವನ್ನು ಒಪ್ಪಲೇಬೇಕಾಗುತ್ತದೆ. ಇದಲ್ಲದೆ ಅನುಮಾನದಿಂದಲೂ ಕೆಲವು ವಿಷಯಗಳನ್ನು ಕಂಡುಕೊಳ್ಳಬೇಕಾಗುತ್ತಿದೆ. ಅಗ್ನಿ, ಧೂಮಗಳಲ್ಲಿ ಸಾಹಚರ್ಯಸಂಬಂಧವಿರುವುದರಿಂದ ಧೂಮವನ್ನು ಕಂಡು ತತ್‌ಸನ್ನಿಹದಲ್ಲಿ ಅಗ್ನಿ ಇರಬೇಕೆಂದು ನಿರ್ಣಯಿಸುವುದು ಲೋಕ ವ್ಯವಹಾರದ ಮಾತು. ಇದಕ್ಕೆ ಅನುಮಾನ ಪ್ರಮಾಣವೆನ್ನುವರು. ದೇಹವೇ ಆತ್ಮವೆಂದು ಚಾರ್ವಾಕರು ಹೇಳಿದರೆ ದೇಹದಂತೆ ಇಂದ್ರಿಯಗಳಿಗೆ ಗೋಚರವಾಗುವ ರೂಪವುಳ್ಳ ಭೌತಿಕಜನ್ಯವಾಗಿರುವ ಘಟಪಟಾದಿವಸ್ತುಗಳೂ ಆತ್ಮವೇ ಆಗಬೇಕಾಗುತ್ತದೆ. ಆದರೆ, ಚಾರ್ವಾಕರು ದೇಹವನ್ನೇ ಆತ್ಮವೆಂದು ಹೇಳಿ ಮಿಕ್ಕುದನ್ನು ಆತ್ಮತತ್ತ್ವದಲ್ಲಿ ಅಂಗೀಕರಿಸುವುದಿಲ್ಲ. ಇಂದ್ರಿಯಗಳು

ಆತ್ಮವೆಂದರೆ ಒಂದೊಂದು ಇಂದ್ರಿಯವೂ ಒಂದೇ ಕಾರ್ಯವನ್ನು ಮಾಡಬಲ್ಲುದು. ಆದರೆ ಲೋಕರೂಢಿಯಲ್ಲಿ ಅಂದು ಕಂಡ ವಸ್ತುವನ್ನು ಇಂದು ಮುಟ್ಟಿದೆನೆಂದು ಹೇಳುವ ಸತ್ಯಸಂಗತಿಯೊಂದುಂಟು. ನೇತ್ರೇಂದ್ರಿಯವು ಕಂಡ ವಿಷಯವನ್ನು ತ್ವಗಿಂದ್ರಿಯವು ಮುಟ್ಟಬೇಕಾದರೆ ಇವೆರಡನ್ನೂ ಸಮನ್ವಯಮಾಡುವ ಇನ್ನೊಂದು ವಸ್ತುವು ಇರಲೇ ಬೇಕೆಂಬುದು ಅನುಮಾನದಿಂದ ಸಿದ್ಧವಾಗುತ್ತದೆ. ಇಂದ್ರಿಯಾನುಭವಗಳಿಗೆ ಆಶ್ರಯ ವಾದ ಇನ್ನೊಂದು ಶಾಶ್ವತವಸ್ತುವು ಇರಬೇಕೆಂಬುದು ಹೀಗೆ ಸಿದ್ಧವಾಗುತ್ತದೆ. ಪ್ರಾಣ, ಇಂದ್ರಿಯ, ಬುದ್ಧಿ ಮುಂತಾದುವುಗಳಿಂದ ಭಿನ್ನವಾದ ಒಂದು ವಸ್ತುವು ಇರಬೇಕೆಂಬುದನ್ನು ವೀರಶೈವವೂ ಮಿಕ್ಕ ಆಸ್ತಿಕಪಂಥಗಳೂ ಹೀಗೆ ಪ್ರತಿಷ್ಠಾಪನೆ ಮಾಡುತ್ತವೆ. ಅನುಮಾನ ಪ್ರಮಾಣವನ್ನು ಒಪ್ಪದಿದ್ದರೆ ವ್ಯಾಘಾತದೋಷವುಂಟಾಗುತ್ತದೆ. 'ವಂಧ್ಯಾಪುತ್ರಃ' ಎಂದು ಹೇಳುವಲ್ಲಿ ಉಂಟಾಗುವ ದೋಷವು ಅನುಮಾನ ಪ್ರಮಾಣದಿಂದ ಸ್ವೀಕರಿಸುವ ಜ್ಞಾನದಲ್ಲಿ ಉಂಟಾಗುವುದಿಲ್ಲ. ಇದರಂತೆ ವ್ಯಭಿಚಾರದೋಷವೂ ಉಂಟಾಗುವುದಿಲ್ಲ. 'ಶುಕ್ತಿ-ರಜತನ್ಯಾಯ'ದಲ್ಲಿ ಕಪ್ಪೆಚಿಪ್ಪಿನ ಕಾಂತಿಯನ್ನು ಕಂಡು ಆ ಹೊಳಪಿನ ಮೂಲಕ ಅದು ಬೆಳ್ಳಿ ಇರಬೇಕೆಂದು ಭಾವಿಸುವುದು ನೈಜವಲ್ಲ. ಏಕೆಂದರೆ ಅಲ್ಲಿರುವ ಮೂಲ ವಸ್ತು ಶುಕ್ತಿ; ರಜತವಲ್ಲ. ಇಂತಹ ಜ್ಞಾನದಲ್ಲಿ ವ್ಯಭಿಚಾರದೋಷ ಉಂಟಾಗುತ್ತದೆ. ಆದರೆ, ಪರಬ್ರಹ್ಮನಿಷ್ಠಶಕ್ತಿಯ ವ್ಯಕ್ತರೂಪವಾದ ಸೃಷ್ಟಿಯಿಂದ ಆ ಶಕ್ತಿಯನ್ನು ಅನು ಮಾನಿಸುವಲ್ಲಿ ವ್ಯಭಿಚಾರದೋಷದ ಪ್ರಸಂಗವೇ ಇಲ್ಲ. ಆದುದರಿಂದ ಹೀಗೆ ವ್ಯಾಘಾತ, ವ್ಯಭಿಚಾರದೋಷವಿನಿರ್ಮುಕ್ತವಾದ ಅನುಮಾನಪ್ರಮಾಣವನ್ನು ಒಪ್ಪಲೇಬೇಕಾಗುತ್ತದೆ. ಅದರ ಆಧಾರದಿಂದ ಆತ್ಮ, ದೇಹ ಇವೆರಡೂ ಭಿನ್ನವಸ್ತುಗಳೆಂದು ಸಿದ್ಧವಾಗುತ್ತದೆ.

ಹೀಗೆಯೇ ಬೌದ್ಧರ ಕ್ಷಣಿಕವಾದವನ್ನು ವೀರಶೈವವು ಖಂಡಿಸಬಲ್ಲುದು. "ಕ್ಷಣಿಕ ವಿಜ್ಞಾನಸಂತತಿರೇವ ಆತ್ಮಾ" ಎಂದು ಕ್ಷಣಿಕವಾದವು ಹೇಳುತ್ತದೆ. ಅಂದರೆ, ಎಲ್ಲ ಪದಾರ್ಥಗಳೂ ಕ್ಷಣಮಾತ್ರ ಇರುವುವಲ್ಲದೆ ಸ್ಥಿರವಲ್ಲವೆಂದು ಈ ವಾದದ ನಂಬುಗೆ. ಇದರನ್ವಯ ಚೇತನ, ಅಚೇತನ ಮೊದಲಾದ ಎಲ್ಲ ವಸ್ತುಗಳೂ ಕ್ಷಣಿಕವೇ ಆಗಬೇಕಾಗು ತ್ತದೆ. ಇದು ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗುವುದಿಲ್ಲ. ಒಬ್ಬ ವ್ಯಕ್ತಿಯು ಬಾಲ್ಯದಲ್ಲಿ ಕಂಡ ಅನುಭವವನ್ನು ಯೌವನ ವೃದ್ಧಾಪ್ಯಗಳಲ್ಲಿ ಸ್ಮರಿಸಿಕೊಳ್ಳುವುದು ಎಲ್ಲರ ಅನು ಭವಕ್ಕೆ ಬಂದ ಮಾತು. ಬಾಲ್ಯ ಕ್ಷಣಕಾಲವಿದ್ದು ಆಗ ಕಂಡ ವಸ್ತುವೂ ಕ್ಷಣಕಾಲ ಜೀವಿಸಿ ಎರಡೂ ನಶಿಸಿಹೋದಮೇಲೆ ಯೌವನ ವೃದ್ಧಾಪ್ಯಗಳಲ್ಲಿ ಮತ್ತೆ ಆ ಅನುಭವ ಬರುವುದೇಕೆ? ಇದು ಪ್ರತ್ಯಕ್ಷಕ್ಕೆ ವಿರೋಧವಲ್ಲವೆ? ಬಾಲ್ಯ, ಯೌವನ, ವೃದ್ಧಾಪ್ಯ ಗಳನ್ನು ಒಟ್ಟುಗೂಡಿಸುವ ಒಂದು ಶಾಶ್ವತ ತತ್ವವಿರದಿದ್ದರೆ, ಇಂಥ ಅನುಭವಗಳಿಗೆ ಆಧಾರವೇ ಇಲ್ಲವಾಗುತ್ತದೆ. ಆದುದರಿಂದ ಕ್ಷಣಿಕವಾದವು ಪ್ರತ್ಯಕ್ಷಪ್ರಮಾಣದಿಂದ ಸಿದ್ಧಿಸಲಾರದು.

"ಸರ್ವೇ ಭಾವಾಃ ಕ್ಷಣಿಕಾಃ" ಎಂಬುದನ್ನು ಅನುಮಾನ ಪ್ರಮಾಣದಿಂದಲೂ ಸಿದ್ಧಿಸಲು ಸಾಧ್ಯವಿಲ್ಲ. ಅನುಮಾನ ಪ್ರಮಾಣದಲ್ಲಿ ಸಾಧ್ಯ ಹೇತುಗಳ ನಡುವೆ ವ್ಯಾಪ್ತಿ

ಜ್ಞಾನವಿರುತ್ತದೆ. 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬಲ್ಲಿ ಈ ಬಗೆಯ ವ್ಯಾಪ್ತಿಜ್ಞಾನವಿರುತ್ತದೆ. ಆದರೆ, 'ಸರ್ವೇ ಭಾವಾಃ ಕ್ಷಣಿಕಾಃ' ಎಂಬಲ್ಲಿ ಸರ್ವಭಾವ (ಪದಾರ್ಥ)ಗಳೇ ಪಕ್ಷ, ಕ್ಷಣಿಕವೆಂಬುದೇ ಸಾಧ್ಯ. ಈ ಸಾಧ್ಯವು ಆ ಪಕ್ಷದಲ್ಲಿ ಇರಬೇಕಾದರೆ ವ್ಯಾಪ್ಯವಾದ ಹೇತು ಇಲ್ಲದಿರುವುದರಿಂದ ಅನುಮಾನ ಪ್ರಮಾಣವು ಇಲ್ಲಿ ನಡೆಯಲಾರದು.

ಇದರಂತೆ ಶಬ್ದಪ್ರಮಾಣದಿಂದಲೂ, ಈ ಕ್ಷಣಿಕವಾದವು ಸಿದ್ಧಿಸಲು ಸಾಧ್ಯವಿಲ್ಲ. ಏಕೆಂದರೆ, ಈ ಸಿದ್ಧಾಂತದನ್ವಯ ಎಲ್ಲವೂ ಕ್ಷಣಿಕ. ಆದುದರಿಂದ ಶಬ್ದವೂ ಕ್ಷಣಿಕವೇ. ಕ್ಷಣಿಕವಾದ ಶಬ್ದವು ಹೇಗೆ ಪ್ರಮಾಣವಾಗಬಲ್ಲುದು? ಅದಕ್ಕೆ ಅಸ್ತಿತ್ವವಿದ್ದರೆ ಮಾತ್ರ ಅದು ಪ್ರಮಾಣವಾಗಿ ನಿಲ್ಲಬಹುದು. ಆದುದರಿಂದ ಪ್ರತ್ಯಕ್ಷ, ಅನುಮಾನ, ಶಬ್ದ ಈ ಪ್ರಮಾಣಗಳನ್ವಯ ಕ್ಷಣಿಕವಾದವು ನಿಲ್ಲಲಾರದು. ಶಾಶ್ವತವಾದುದೊಂದು ವಸ್ತು ಇದ್ದರೆ ತಾನೇ ಈ ವ್ಯವಹಾರಗಳೆಲ್ಲವೂ ಸರಿಯಾಗಿ ಸಾಗಬಲ್ಲುವು. ಹೀಗೆ ವೀರಶೈವವು ಪ್ರಬಲವಾದ ದರ್ಶನಗಳನ್ನು ಪ್ರತ್ಯಕ್ಷ, ಅನುಮಾನ, ಶಬ್ದ ಪ್ರಮಾಣಗಳ ಆಧಾರದಿಂದ ಖಂಡಿಸಿ ಶಕ್ತಿವಿಶಿಷ್ಟಾದ್ವೈತವನ್ನು ಪ್ರತಿಷ್ಠಾಪಿಸುತ್ತದೆ.

ಪರಬ್ರಹ್ಮ, ಪರಶಿವ, ಲಿಂಗ, ಸ್ಥಲ ಈ ಪದವಾಚ್ಯವಾದ ಒಂದು ವಸ್ತುವಿನ ಅಸ್ತಿತ್ವವನ್ನು ಒಪ್ಪಿಕೊಳ್ಳುವುದೇಕೆ? ಆ ಪರಬ್ರಹ್ಮವು ಅಪೃಥಕ್ ಶಕ್ತಿವಿಶಿಷ್ಟವಾಗಿದೆಯೆಂದು ಹೇಳುವುದೇಕೆ? ಲೋಕದೊಳಗಿನ ಎಲ್ಲ ದರ್ಶನಗಳೂ ಇದನ್ನು ಒಪ್ಪಿರುವವೆ? ಎಂಬ ಹಲವಾರು ಪ್ರಶ್ನೆಗಳು ಉದ್ಭವಿಸುತ್ತವೆ. ಅವಕ್ಕೆ ಸಮರ್ಪಕವಾದ ಉತ್ತರವನ್ನೀಯದೆ ಶಕ್ತಿವಿಶಿಷ್ಟವಾದ ಪರಶಿವತತ್ವದ ಅಂಗೀಕಾರವನ್ನು ಮಾಡಿದರೆ ಅದು ಶಾಸ್ತ್ರಸಮ್ಮತವಾಗದು. ಲೋಕದಲ್ಲಿ ಎಲ್ಲ ದರ್ಶನಗಳೂ ಈ ಅಭಿಪ್ರಾಯವನ್ನು ಒಪ್ಪಿಲ್ಲವೆಂಬುದು ನಿಜ. ಒಂದೊಂದು ದರ್ಶನದ ಅಭಿಮತ ಒಂದೊಂದು ಬಗೆಯಾಗಿದೆ. ಸಾಂಖ್ಯದರ್ಶನದನ್ವಯ ಪ್ರಕೃತಿಯೇ ಜಗತ್ಕಾರಣ; ಪ್ರಕೃತಿ ಪುರುಷ ಎಂಬಿವೆರಡೇ ಪದಾರ್ಥಗಳು; ಇವೆರಡಕ್ಕಿಂತ ಭಿನ್ನವಾದ ಈಶ್ವರನೆಂಬ ವಸ್ತು ಆ ದರ್ಶನದಲ್ಲಿ ಇಲ್ಲವೇ ಇಲ್ಲ. ಪುರುಷನ ಸಾನ್ನಿಧ್ಯಮಾತ್ರದಿಂದ ಪ್ರಕೃತಿಯು ಜಗತ್ಸೃಷ್ಟಿ, ಸ್ಥಿತಿ, ಲಯಗಳನ್ನು ಎಸಗುತ್ತಿರುವುದು. ಬೌದ್ಧರು ಕ್ಷಣಿಕ ವಿಜ್ಞಾನಸಂತತಿಯೇ ಆತ್ಮವೆನ್ನುತ್ತಾರೆ. ಅದಕ್ಕಿಂತ ಬೇರೆಯಾದ, ನಿತ್ಯವಾದ ಪರಶಿವತತ್ವವೊಂದು ಉಂಟೆಂದು ಅವರು ನಂಬುವುದಿಲ್ಲ; ಲೋಕದ ವಸ್ತುಗಳೆಲ್ಲವೂ ಜ್ಞಾನಸ್ವರೂಪವೆಂದು ಅವರ ನಂಬುಗೆ. ಆ ಜ್ಞಾನಕ್ಕೆ ಹೊರತಾದ ಸತ್ಯಪದಾರ್ಥಗಳಿಲ್ಲವೆಂದು ಅವರು ತಿಳಿಯುತ್ತಾರೆ. ಕ್ಷಣಿಕವಾದ ಬುದ್ಧಿ ಸಂತತಿಯೇ ಆತ್ಮ. ಅದಕ್ಕೆ ಬೇರೆ ಪ್ರೇರಕನಾದ ಈಶ್ವರನು ಬೇಕಿಲ್ಲ. ಕ್ಷಣಿಕವಾದ ಬುದ್ಧಿಯಿಂದ ವಿಭಿನ್ನವಾದ ಪದಾರ್ಥಗಳಾಗಲಿ, ಈಶ್ವರನಾಗಲಿ, ಇಲ್ಲವೆಂದು ಅವರು ನಂಬುತ್ತಾರೆ. ಅಂಥ ಪ್ರಮಾಣಗಳನ್ನೇ ಅವರು ನಂಬುವುದಿಲ್ಲ. ಕ್ಷಣಿಕಪ್ರಮಾಣಕ್ಕೆ ಗೋಚರಿಸುವ ಈಶ್ವರನೂ ಕ್ಷಣಿಕನೇ. ಇದೇ ರೀತಿಯಾಗಿ ಪೂರ್ವಮೀಮಾಂಸಕರು ದುಃಖರಹಿತವಾದ ಸುಖವೇ ಸ್ವರ್ಗ; ಯಜ್ಞಗಳನ್ನು ಮಾಡಿ ಅಂತಹ ಫಲವನ್ನು ಆತ್ಮನು ಅನು

ಭವಿಸುತ್ತಾನೆ. ಈ ಸುಖವನ್ನು ಅನುಭವಿಸಲು ಆತ್ಮನಿಗಿಂತ ಭಿನ್ನವಾದ ಈಶ್ವರನ ಆವಶ್ಯಕತೆ ಇಲ್ಲ ಎನ್ನುವರು. ಹೀಗೆ ಅನೇಕ ಮತಗಳು ನಿರೀಶ್ವರವಾದವನ್ನು ಎತ್ತಿಹಿಡಿಯುತ್ತವೆ. ನಿರೀಶ್ವರವಾದದ ಪತಾಕೆಯನ್ನೆತ್ತಿಹಿಡಿದ ಚಾರ್ವಾಕರಂತೂ ಸರಿಯೇ ಸರಿ. ಈ ಮತಗಳಲ್ಲಿ ಈಶ್ವರನಿಲ್ಲವೆಂದು ಹೇಳಿರುವುದರಿಂದ ಕೆಳಗಣ ಪ್ರಶ್ನೆಗಳೇಳುತ್ತವೆ. ಜಡವಾದ ಪ್ರಕೃತಿಯು ಹೇಗೆ ಕಾರ್ಯವನ್ನು ಮಾಡಬಲ್ಲುದು? ಇದಕ್ಕೆ ಸಾಂಖ್ಯರ ಉತ್ತರವೇನು? ಚೇತನದ ಸಹಾಯ ಅದಕ್ಕೆ ಬೇಡವೆ? ಚೇತನರೂಪನಾದ ಪುರುಷನ ಸಾನ್ನಿಧ್ಯವೇ ಜಡಪ್ರಕೃತಿಯಲ್ಲಿ ಕ್ಷೋಭೆಯನ್ನುಂಟುಮಾಡಲು ಸಾಧ್ಯವಿಲ್ಲ. ಕರ್ಮವೇ ದೇವರೆಂದು ಹೇಳುವ ಮೀಮಾಂಸಕರು ಕರ್ಮಕ್ಕೆ ಸ್ಥಿರತೆ ಇಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ಪುಣ್ಯ ತೀರಿದೊಡನೆಯೇ ಆತ್ಮನು ದುಃಖವನ್ನು ಅನುಭವಿಸುವುದಿಲ್ಲವೇ? ಅಂದ ಮೇಲೆ ಆತ್ಮನಿಗೆ ಮೋಕ್ಷ ಹೇಗೆ ದೊರೆಯಬಲ್ಲುದು? ಪರಶಿವತತ್ವವನ್ನು ಅಂಗೀಕರಿಸಿದರೆ ಆತ್ಮನಿಗೆ ಏಕತ್ವ ಸಿದ್ಧಿಯಾಗುತ್ತದೆ. ಅನೇಕಾತ್ಮವಾದಿಗಳ ಪಂಥಗಳಲ್ಲಿ ಆತ್ಮರ ಸ್ವರೂಪವೂ ಭಿನ್ನ ಭಿನ್ನವಾಗಿರುತ್ತದೆ. ಅವರು ಒಬ್ಬೊಬ್ಬರೂ ವಿಲಕ್ಷಣವಾಗಿರುವರು. ಸ್ವಸ್ವರೂಪ ಮಾತ್ರದಲ್ಲಿ 'ಅಹಂ' ಎಂಬ ಅನುಸಂಧಾನವನ್ನು ಪಡೆಯಬಹುದಲ್ಲದೆ ಪರವಿಷಯಗಳನ್ನು ಪರಸ್ವರೂಪಗಳನ್ನು ಅರಿತುಕೊಳ್ಳುವುದು ಅವಕ್ಕೆ ಸಾಧ್ಯವೇ ಇಲ್ಲ. 'ಅಹಂ ಜಾನಾಮಿ' ಎಂಬಲ್ಲಿರುವ ಜ್ಞಾನವು ಸಾಂಖ್ಯದರ್ಶನದಲ್ಲಿ ಸಾಧ್ಯವೇ ಇಲ್ಲ. ಅಹಮಸ್ಮಿ ಎಂಬುದಿಷ್ಟೇ ಸಾಧ್ಯ. ಬೌದ್ಧಧರ್ಮದ ಸ್ಥಿತಿಯೂ ಇದೇ ಪ್ರಕಾರವಾಗಿದೆ. ಇವರೂ ಒಂದು ದೃಷ್ಟಿಯಿಂದ ಅನಂತಾತ್ಮರನ್ನೇ ಅಂಗೀಕರಿಸಿದಂತಾಗುತ್ತದೆ. ಏಕೆಂದರೆ, ಆತ್ಮವು ಕ್ಷಣಿಕವಿಜ್ಞಾನ ಸಂತತಿರೂಪವೆಂದು ಅವರು ಹೇಳುತ್ತಾರೆ. ಇಂಥ ಕ್ಷಣಿಕ ವಿಜ್ಞಾನದಿಂದುಂಟಾದ ಸಂಸ್ಕಾರಗಳೂ ಅನಂತವಾಗಿರುತ್ತವೆ. ಅವು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಜನ್ಯವಾಗಿ ವಿವಿಧ ವೃತ್ತಿಗಳನ್ನು ಪಡೆದಿರುತ್ತವೆ. ಅವಕ್ಕೆ ಏಕದೇಶೀಯತ್ವ, ಏಕಕಾಲೀನತ್ವ ಇರುವುದಿಲ್ಲ. ಅಂದಮೇಲೆ ಅವುಗಳಿಗೆ ಪರಸ್ಪರ ಸಂಬಂಧ ಉಂಟಾಗುವ ಬಗೆ ಎಂತು? ಹೀಗೆ ಸಾಂಖ್ಯ, ಮೀಮಾಂಸಕ ಮತ್ತು ಬೌದ್ಧ ಮತಗಳಲ್ಲಿ ಆತ್ಮಗಳು ಸ್ವಸ್ವರೂಪಾನುಸಂಧಾನವನ್ನು ಪಡೆದಿರುತ್ತವೆ ಮಾತ್ರವಲ್ಲದೆ, ಪರಸ್ವರೂಪವಿಷಯದಲ್ಲಿ ಅಂಥ ಅನುಸಂಧಾನವನ್ನು ಪಡೆದಿರುವುದಿಲ್ಲ. 'ನಾನು ಅದನ್ನು ಕಂಡೆನು, ಇದನ್ನು ಉಂಡೆನು' ಎಂಬಲ್ಲಿ ಇರುವ ಅಹಮಾಕಾರದ ಒಂದು ಸಂವಿತ್ ಅಲ್ಲಿ ಇರುವುದಿಲ್ಲ. ವಾಸ್ತವವಾಗಿ ಈ 'ಅಹಂ' ಎಂಬ ಸಂವಿತ್ (ಜ್ಞಾನ) ಸ್ವರೂಪವೇ ಎಲ್ಲ ಅನುಭವಗಳನ್ನೂ ಜ್ಞಾನಗಳನ್ನೂ ಅಳವಡಿಸಿಕೊಂಡಿರುತ್ತದೆ. ಇದರಿಂದ ಜ್ಞಾನಾಶ್ರಯವಾಗಿಯೂ ಜ್ಞಾನಸ್ವರೂಪವಾಗಿಯೂ ಇರುವ ಒಬ್ಬ ಕರ್ತೃವಿದ್ದರೆ ಈ ಸ್ವಪರ ಅನುಸಂಧಾನಗಳೆಲ್ಲವೂ ಸಹಜವಾಗಿ ನಡೆಯುತ್ತವೆ. ಸ್ಥಿರವಾಗಿರುವ ಒಬ್ಬ ಆತ್ಮನನ್ನು ಅಂಗೀಕರಿಸದಿದ್ದರೆ ಈ ಪರವಿಷಯಕ ಸಂವಿತ್ ಸಾಧ್ಯವೇ ಇಲ್ಲ. ಸ್ಥಿರವಾದ ಆತ್ಮನ ಮೂಲಸ್ವರೂಪವೇ ಪರಮಾತ್ಮ. ಜ್ಞಾನ ಮೊದಲಾದ ಕ್ರಿಯೆಗಳು ಪರಮಾತ್ಮನಲ್ಲಿ ವಿಶ್ರಾಂತಿಯನ್ನು ಪಡೆಯದೇ ಬೇರೆ ಸತ್ತೆಯನ್ನು ಪಡೆಯಲಾರವು.

ಆದ್ದರಿಂದ ಅನುಭಾವ, ಸ್ಮರಣೆ, ವಿಕಲ್ಪ, ಪ್ರತ್ಯಭಿಜ್ಞೆ ಮುಂತಾದ ಜ್ಞಾನಾವಸ್ಥೆಗಳಿಗೆ ಆಶ್ರಯುವಾಗಿರುವ ಅಹಮೆಂಬ ಅರ್ಥವನ್ನು ಸ್ಫುರಿಸುವ ಪರಬ್ರಹ್ಮತತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆತನು ಸ್ವತಂತ್ರ ಪ್ರಕಾಶವುಳ್ಳವನಾಗಿರುತ್ತಾನೆ. ಮೇಲಿನ ವಿವರಣೆಯಿಂದ ಪರಶಿವಬ್ರಹ್ಮದ ಅಸ್ತಿತ್ವಕ್ಕೆ ಇರುವ ಕಾರಣವು ಸ್ಪಷ್ಟವಾಗಬಲ್ಲುದು.

ಇನ್ನು ಈ ಪರಬ್ರಹ್ಮವನ್ನು ಒಪ್ಪಿಕೊಂಡ ದರ್ಶನಗಳೆಲ್ಲವೂ ಒಂದೇ ಬಗೆಯಾಗಿಲ್ಲ. ಕೇವಲಾದ್ವೈತಿಗಳು ಪರಮಾತ್ಮನು ನಿರ್ವಿಶೇಷನಾಗಿರುವನೆಂದೂ ಸಚ್ಚಿದಾನಂದ ನಿತ್ಯ ಪರಿಪೂರ್ಣನಾಗಿರುವನೆಂದೂ ಈ ಜಗತ್ತು ಮಿಥ್ಯಾರೂಪವಾಗಿ ಸತ್ಯಸ್ವರೂಪದ ಪರಬ್ರಹ್ಮದಲ್ಲಿ ಅಧ್ಯಾಸವಾಗಿರುವುದೆಂದೂ ನಂಬುತ್ತಾರೆ. "ಸರ್ವಂ ಖಲ್ವಿದಂ ಬ್ರಹ್ಮ । ಜೀವೋ ಬ್ರಹ್ಮೈವ ನಾಪರಃ" ಎಂಬ ಸೂತ್ರದನ್ವಯ ಸರ್ವವೂ ಬ್ರಹ್ಮಮಯುವಾಗಿದೆಯೆಂದೂ ಜೀವಾತ್ಮನೂ ಪರಮಾತ್ಮನೇ ಎಂದೂ ಅದ್ವೈತಿಗಳ ಮತ. ಇದಕ್ಕೆ ಪ್ರತಿಯಾಗಿ ದ್ವೈತಿಗಳು ಜೀವಾತ್ಮ, ಪರಮಾತ್ಮ ಜಗತ್ತು ಇವು ಮೂರೂ ಭಿನ್ನ ಭಿನ್ನವಾಗಿಯೇ ಇರುತ್ತವೆಂದು ಹೇಳುತ್ತಾರೆ. ಪರಮಾತ್ಮನು ಸಚ್ಚಿದಾನಂದ ನಿತ್ಯ ಪರಿಪೂರ್ಣನಾಗಿದ್ದರೂ ಜೀವಾತ್ಮ ಪರಮಾತ್ಮರಲ್ಲಿ ಐಕ್ಯಾನುಸಂಧಾನವಿಲ್ಲ. ವಿಶಿಷ್ಟಾದ್ವೈತಿಗಳು ಪರಮಾತ್ಮನು ಚಿದಚಿತ್‌ವಿಶಿಷ್ಟನಾಗಿರುವನೆಂದೂ ಆತನಲ್ಲಿ ಚಿತ್‌ಸ್ವರೂಪದ ಆತ್ಮ, ಅಚಿತ್‌ಸ್ವರೂಪದ ಜಗತ್ತು ಎರಡೂ ಅಡಕವಾಗಿರುತ್ತವೆಂದೂ ಅಭಿಪ್ರಾಯಪಡುವರು. ಅವ್ಯಕ್ತಸ್ವರೂಪದಲ್ಲಿ ಇವುಗಳ ಅಸ್ತಿತ್ವ ಪರಮಾತ್ಮನಲ್ಲಿ ಇದ್ದೇ ಇರುತ್ತದೆ. ವ್ಯಕ್ತರೂಪದಲ್ಲಿ ಅವು ದೃಷ್ಟಿಗೋಚರವಾಗುತ್ತವೆ. ವೀರಶೈವವು ಈ ಸಂದರ್ಭದಲ್ಲಿ ಶಕ್ತಿವಿಶಿಷ್ಟವಾದ ಪರಬ್ರಹ್ಮವನ್ನು ಅಂಗೀಕರಿಸುತ್ತದೆ. ಅದಕ್ಕೆ ಪರಶಿವ, ಸ್ಥಲ ಇತ್ಯಾದಿ ಪರ್ಯಾಯಪದಗಳೂ ಉಂಟು. "ಶಕ್ತಿಶ್ಚ ಶಕ್ತಿಶ್ಚ ಶಕ್ತೀ ತಾಭ್ಯಾಂ ವಿಶಿಷ್ಟೌ ಜೀವೇಶೌ ತಯೋಃ ಅದ್ವೈತಂ ಶಕ್ತಿವಿಶಿಷ್ಟಾದ್ವೈತಂ" ಎಂದು ವ್ಯಾಖ್ಯಾನಿಸುವುದುಂಟು. ಶಕ್ತಿವಿಶಿಷ್ಟ ಜೀವನಿಗೂ ಶಕ್ತಿವಿಶಿಷ್ಟ ಶಿವನಿಗೂ ಸಾಮರಸ್ಯ ಉಂಟೆಂಬುದು ಇದರರ್ಥ. ಶಕ್ತಿಯು ಸ್ಥೂಲ, ಸೂಕ್ಷ್ಮ ಎಂದು ಎರಡು ತೆರನಾಗಿದೆ. ಜೀವನು ಸ್ಥೂಲಶಕ್ತಿಯನ್ನು ಪಡೆದಿರುವನು. ಶಿವನು ಸೂಕ್ಷ್ಮ ಶಕ್ತಿಯನ್ನು ಪಡೆದಿರುವನು. ಜೀವನು ಕಿಂಚಿಜ್ಞತ್ವ, ಕಿಂಚಿತ್ ಕರ್ತೃತ್ವ, ಕಿಂಚಿದ್ವ್ಯಾಪಕತ್ವವುಳ್ಳವನು. ಶಿವನು ಸರ್ವಜ್ಞತ್ವ, ಸರ್ವಕರ್ತೃತ್ವ, ಸರ್ವವ್ಯಾಪಕತ್ವವನ್ನು ಪಡೆದಿರುವನು. ಈ ಉಭಯ ಶಕ್ತಿಗಳಿಂದ ಕೂಡಿದ ಶಿವಜೀವೈಕ್ಯವನ್ನು ಬೋಧಿಸುವುದರಿಂದ ಈ ಸಿದ್ಧಾಂತಕ್ಕೆ ಶಕ್ತಿವಿಶಿಷ್ಟಾದ್ವೈತವೆನ್ನುವರು. ಇಲ್ಲಿ ಈ ಶಕ್ತಿಯ ಆವಶ್ಯಕತೆಯೇನೆಂಬುದನ್ನು ವಿಚಾರಿಸಬೇಕಾಗುವುದು.

ಜಗತ್ತು ಮಿಥ್ಯವೆಂದು ಹೇಳಿದ ಅದ್ವೈತವಾದಿಗಳು ಸತ್ಯದಿಂದ ಮಿಥ್ಯವು ಹೇಗೆ ಜನ್ಮವೆತ್ತಿತೆಂಬುದನ್ನು ವಿವರಿಸುವುದಿಲ್ಲ. ಆತ್ಮ, ಜಗತ್ತು ಇವೆಲ್ಲವೂ ಪರಮಾತ್ಮನಿಂದ ಉದ್ಭವಿಸಿದ್ದರೆ ಸತ್ಯಸ್ವರೂಪದ ಪರಮಾತ್ಮನಿಂದ ಹುಟ್ಟಿದ ಈ ವಸ್ತುಗಳೂ ಸತ್ಯವೇ ಆಗಿರಬೇಕಲ್ಲದೆ, ಮಿಥ್ಯವಾಗಿರಲಾರವು. ಪರಮಾತ್ಮನು ತಾನೇ ಈ ಜಗದ್ರೂಪವನ್ನು ತಳೆದನೆಂದರೆ, ವಿಕಾರಕ್ಕೊಳಗಾದನೆಂದೂ ಸೃಷ್ಟಿ, ಸ್ಥಿತಿ, ಲಯಗಳಿಗೆ ಅಧೀನನೆಂದೂ

ಅರ್ಥವಾಗುತ್ತದೆ. ಆದರೆ, ಸಚ್ಚಿದಾನಂದ ನಿತ್ಯಪರಿಪೂರ್ಣನಾದ ಪರಮಾತ್ಮನಿಗೆ ಈ ವಿಕೃತ ಅವಸ್ಥೆಯನ್ನು ಆರೋಪಿಸುವುದು ಸರಿ ಎನಿಸಲಾರದು. ಪರಮಾತ್ಮನ ಅವಿಕೃತ ರೂಪವನ್ನೂ ಜಗತ್ತಿನ ಸತ್ಯಸ್ವರೂಪವನ್ನೂ ಏಕಕಾಲದಲ್ಲಿಯೇ ಪ್ರತಿಷ್ಠಾಪನೆ ಮಾಡಬೇಕಾದರೆ, ಈ ಸಿದ್ಧಾಂತವು ಜಗತ್ತೆಲ್ಲ ಶಕ್ತಿಸ್ವರೂಪವೆಂದೂ ಅವ್ಯಕ್ತಾವಸ್ಥೆಯಲ್ಲಿ ಶಕ್ತಿರೂಪದ ಸೃಷ್ಟಿಯು ಪರಮಾತ್ಮನಲ್ಲಿ ಅಪೃಥಕ್‌ರೂಪದಿಂದ ಅಂದರೆ ಅವಿನಾಭಾವ ಸಂಬಂಧದಿಂದ ಇರುವುದೆಂದೂ ಸ್ವಲೀಲೆಗಾಗಿ ತನ್ನ ನೆನಹು ನಿರ್ಧರಿಸಿದೊಡನೆ ಸ್ವಶಕ್ತಿಯಲ್ಲಿ ಕ್ಷೋಭೆಯುಂಟಾಗಿ ಆತನು ಸೃಷ್ಟಿಗೆ ಉನ್ಮುಖನಾದನೆಂದೂ ಹೇಳುತ್ತದೆ. ಹೀಗೆ ಶಕ್ತಿವಿಶಿಷ್ಟಾದ್ವೈತಸಿದ್ಧಾಂತವು ಜಡವೆಂಬ ವಸ್ತುವನ್ನೇ ಒಪ್ಪುವುದಿಲ್ಲ; ಎಲ್ಲವೂ ಚೇತನಸ್ವರೂಪನಾದ ಪರಮಾತ್ಮನ ಸ್ವರೂಪವೇ. ಅಂದರೆ, ಪರಮಾತ್ಮನಲ್ಲಿ ಅವಿನಾಭಾವಸಂಬಂಧದಿಂದಿರುವ ಶಕ್ತಿಯೇ ನಾಮರೂಪಾತ್ಮಕವಾದ ಸೃಷ್ಟಿಯಾಗುತ್ತದೆ ಎಂದು ಈ ಸಿದ್ಧಾಂತದ ಮತ. ಪರಶಿವನಲ್ಲಿ ಸ್ವವಿಮರ್ಶರೂಪದ ಶಕ್ತಿಯನ್ನು ಅಂಗೀಕರಿಸದಿದ್ದರೆ ಅಲ್ಲಿ ಅಸ್ಮಿ, ಪ್ರಕಾಶೇ, ನಂದಾಮಿ ಎಂಬ ಸಂವಿತ್ತು ಉಂಟಾಗುತ್ತಿರಲಿಲ್ಲ. ಈ ಶಕ್ತಿವಿಶಿಷ್ಟತೆಯನ್ನು ಅಂಗೀಕರಿಸದಿದ್ದರೆ ಸರ್ವಜ್ಞತ್ವ, ಸರ್ವಶಕ್ತಿಮತ್ವ, ಸರ್ವಕಾರಣತ್ವ, ಸರ್ವನಿಯಂತೃತ್ವ, ಸರ್ವಾನುಗ್ರಾಹಕತ್ವ ಮುಂತಾದುವುಗಳು ಆ ಬ್ರಹ್ಮನಲ್ಲಿ ತೋರದೆ ಆತನು ತೇಜೋಮಯವಾಗಿ ಬೆಳಗುವ ಶಿಲೆಯಾಗಬಲ್ಲನು. ಇದನ್ನು ದೂರಮಾಡುವುದಕ್ಕಾಗಿಯೇ ವೀರಶೈವಸಿದ್ಧಾಂತವು ಶಕ್ತಿವಿಶಿಷ್ಟ ಪರಮಾತ್ಮನನ್ನು ಅಂಗೀಕರಿಸಿತು.

ಶಿವ ಶಕ್ತಿಸಂಬಂಧವೆಂತೆಂಬುದನ್ನು ನಿರ್ಣಯಿಸುವುದು ಅವಶ್ಯ. "ಪರಾಸ್ಯ ಶಕ್ತಿರ್ವಿವಿಧೈವಶ್ರೂಯತೇ। ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾ ಚ॥" ಎಂದು ಶ್ವೇತಾಶ್ವತರ ಉಪನಿಷತ್ತು ಸಾರುತ್ತದೆ. ಎಂದರೆ ಜ್ಞಾನ, ಬಲ, ಕ್ರಿಯಾತ್ಮಕವಾದ ಶಕ್ತಿಯು ಸ್ವಾಭಾವಿಕವಾಗಿಯೇ ಶಿವನಲ್ಲಿರುತ್ತದೆ ಎಂದು ಇದರ ಸಾಮಾನ್ಯಾರ್ಥ. ಶಕ್ತಿ ಮತ್ತು ಶಕ್ತಿಮಾನ್ ಇವೆರಡೂ ಅಭಿನ್ನವೆಂಬುದು ಲೋಕದಲ್ಲಿ ಕಂಡ ಅನುಭವ. ಪುಷ್ಪ-ಪರಿಮಳ, ಬೆಳುದಿಂಗಳು-ತಂಪು, ಇಂಗಡಲು–ಇಂಪು ಅವಿನಾಭಾವದಿಂದಿರುವಂತೆ ಶಿವಶಕ್ತಿಯರು ಅವಿನಾಭಾವದಿಂದಿರುವರೆಂಬುದು ವೀರಶೈವದ ಅಭಿಮತ. "ಒಂದೆಂಬೆನೆ ಎರಡಾಯಿತ್ತು, ಎರಡೆಂಬೆನೆ ಒಂದಾಯಿತ್ತು" ಎಂದು ಪ್ರಭುದೇವರು ನುಡಿದಿರುವುದೂ "ಮಾಯೆಯಗಲಿದ ಬಳಿಕ ಭಾವಿಸೆ ಜೀವವುಂಟೇ ಎನಗೆ" ಎಂದು ಚಾಮರಸನು ಹೇಳಿರುವುದೂ ಶಿವಶಕ್ತಿಯರ ಅವಿನಾಭಾವ ಸಂಬಂಧವನ್ನು ವರ್ಣಿಸುವುದಕ್ಕಾಗಿ. ಇದೇ ಶಿವಾದ್ವೈತ.

ಶಕ್ತಿಯೆಂದರೇನು? ಅದು ಜಡವೇ, ಚೇತನವೇ? ಅದಕ್ಕೆ ಶಿವಸಮಾನಾತ್ಮಕವಾದ ಸತ್ತೆಯುಂಟೆ? ಎಂಬ ಸಂದೇಹಗಳನ್ನೆತ್ತಿ ಶಿವಾದ್ವೈತವನ್ನಾಕ್ಷೇಪಿಸಿ, ಹಲವರು ಅದ್ವೈತಿಗಳಂತೆ ಶಕ್ತಿಯು ಮಿಥ್ಯಾಭೂತವಾದ ಮಾಯೆಯೆಂದೋ, ದ್ವೈತಿಗಳಂತೆ ಜಡವೆಂದೋ ವಾದ ಹೂಡಬಹುದು. ಹೀಗೆ ವಾದವನ್ನು ಹೂಡಿದರೆ, ಅದಕ್ಕೆ ಪ್ರಮಾಣಗಳ ಆಧಾರ ವಾವುದು? ಪ್ರತ್ಯಕ್ಷವು ಇಲ್ಲಿ ನಡೆಯಲಾರದು. ಏಕೆಂದರೆ, ಅವಿದ್ಯೆಯನ್ನು ಸಾಕ್ಷಾತ್ಕರಿಸಿಕೊಂಡವರುಂಟೇ? ಯಾವುದಾದರೂ ಇಂದ್ರಿಯದ ಮೂಲಕ ಅನುಭವಿಸಿದುದುಂಟೆ?

ಇದಕ್ಕೆಲ್ಲ ಉತ್ತರ ನಕಾರಾತ್ಮಕವಾಗಿರುವುದರಿಂದ ಪ್ರತ್ಯಕ್ಷಪ್ರಮಾಣದ ಆಧಾರದಿಂದ ಶಕ್ತಿಯು ಮಿಥ್ಯಾಭೂತವಾಯೆಂದೂ ಜಡವೆಂದೂ ನಿರ್ಣಯಿಸುವಂತಿಲ್ಲ. ಅನು ಮಾನ ಪ್ರಮಾಣದಿಂದ ಸಾಧಿಸಬಹುದೆಂದರೆ ಸಾಧ್ಯಸಾಧನಗಳ ನಡುವೆ ಸಾಹ ಚರ್ಯಸಂಬಂಧವಿರಬೇಕಾಗುತ್ತದೆ. ಧೂಮದಿಂದ ಅಗ್ನಿಯ ಅಸ್ತಿತ್ವವನ್ನು ಅನು ಮಾನಿಸುವಲ್ಲಿ ಅವೆರಡರ ನಡುವೆ ಸಾಹಚರ್ಯಸಂಬಂಧವಿರುತ್ತದೆ. ಧೂಮವ್ಯಾಪ್ತಿ ಯಿಂದ ಅಗ್ನಿಯ ಅಸ್ತಿತ್ವವನ್ನು ಒಪ್ಪಿಕೊಳ್ಳುವುದು ಅನುಮಾನದ ಕ್ಷೇತ್ರ. ಶಕ್ತಿಯೆಂಬ ಬೇರೆ ತತ್ವವನ್ನೊಪ್ಪಿಕೊಳ್ಳಬೇಕಾದರೆ ತತ್ಸಾಹಚರ್ಯವಾದ ಇನ್ನೊಂದು ತತ್ವವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಅವೆರಡರಲ್ಲಿ ಕಾರ್ಯ ಕಾರಣ ಸಂಬಂಧವಿರಬೇಕಾಗುತ್ತದೆ. ಕಣ್ಣಿಗೆ ಕಾಣುವ ಜಗದ್ರೂಪಕಾರ್ಯಕ್ಕೆ ಶಕ್ತಿತತ್ವವು ಕಾರಣವೆಂಬ ಆಧಾರವನ್ನು ಮುಂದು ಮಾಡಿದರೆ, ಅವೆರಡೂ ಗುಣಧರ್ಮ ಭಿನ್ನವಾಗಿರಬೇಕಾಗುತ್ತದೆ. ಆದರೆ, ಶಕ್ತಿ ಮತ್ತು ಸೃಷ್ಟಿ ಇವೆರಡೂ ಭಿನ್ನವಲ್ಲ; ಒಂದೇ. ಒಂದು ಅವ್ಯಕ್ತ; ಮತ್ತೊಂದು ವ್ಯಕ್ತ. ಆದುದ ರಿಂದ ಧೂಮವಹ್ನಿಗಳಲ್ಲಿ ಕಂಡುಬರುವ ಅಂತರವು ಶಕ್ತಿಸೃಷ್ಟಿಗಳಲ್ಲಿ ಕಾಣಲಾರದು. ಜಗತ್ತು ಶಕ್ತಿಯ ಪರಿಣಾಮ; ಧೂಮ ವಹ್ನಿಯ ಪರಿಣಾಮವಲ್ಲ. ಇಲ್ಲಿರುವುದು ಕಾರ್ಯಕಾರಣಸಂಬಂಧ. ಪರಿಣಾಮರೂಪವಾದ ಸೃಷ್ಟಿಯ ಆಧಾರದಿಂದಲೇ ಶಕ್ತಿಗೆ ಸ್ವತಂತ್ರ ಅಸ್ತಿತ್ವವನ್ನು ಕಲ್ಪಿಸಿದರೆ ಪ್ರಮೇಯ (ಸೃಷ್ಟಿ), ಪ್ರಮಾಣ (ಶಕ್ತಿ) ಇವೆರಡೂ ಭಿನ್ನವೆಂದೂ ಸತ್ಯವೆಂದೂ ಒಪ್ಪಿಕೊಳ್ಳಬೇಕಾಗುತ್ತದೆ. ಅವು ಸತ್ಯವಾದರೂ ಭಿನ್ನವಲ್ಲ. ಅವೆರಡರ ನಡುವೆ ಆತ್ಯಂತಿಕ ಭೇದವಿಲ್ಲ. ಆದುದರಿಂದ ಶಕ್ತಿಗೆ ಸ್ವತಂತ್ರ ಅಸ್ತಿತ್ವವನ್ನು ಕಲ್ಪಿಸುವ ಅನುಮಾನಪ್ರಮಾಣ ನಿಲ್ಲಲಾರದು. ಶಕ್ತಿ ಮತ್ತು ಶಿವ ಇವೆರಡೂ ಸಚ್ಚಿದಾನಂದ ನಿತ್ಯಪರಿಪೂರ್ಣವಾಗಿ ಸರ್ವಾವಸ್ಥೆಯಲ್ಲಿಯೂ ಅವಿನಾಭಾವದಿಂದ ಎರಡಲ್ಲದ ಒಂದಾಗಿರುತ್ತವೆ. ಕಾರಣ ವೀರಶೈವದ ಪರಬ್ರಹ್ಮವು ನಿರ್ಗುಣಪರ ಬ್ರಹ್ಮವಲ್ಲ; ಅದು ಸವಿಶೇಷ ಪರಬ್ರಹ್ಮ; ಶಕ್ತಿವಿಶಿಷ್ಟಶಿವ.

ಶಕ್ತಿವಿಶಿಷ್ಟ ಶಿವನಿಂದ ಈ ಸೃಷ್ಟಿಯುತ್ಪತ್ತಿಯಾಗಿದೆಯೆಂಬ ವಿಚಾರ ವ್ಯಾವಹಾರಿಕ ಹಾಗೂ ವಿಜ್ಞಾನಸತ್ಯದ ಒರೆಗಲ್ಲಿಗೆ ನಿಲ್ಲಬಲ್ಲುದು. ವ್ಯಾವಹಾರಿಕವಾಗಿ ಪೃಥ್ವಿಯಲ್ಲಿ ಧಾರಣಶಕ್ತಿಯಿರುವುದು, ಜಲದಲ್ಲಿ ಆಪ್ಯಾಯನ ಶಕ್ತಿಯಿರುವುದು, ತೇಜದಲ್ಲಿ ದಾಹಕ ಶಕ್ತಿಯಿರುವುದು, ಎಲ್ಲರ ಅನುಭವಕ್ಕೆ ಬಂದ ಮಾತು. ಇದರಂತೆ ವ್ಯಕ್ತಸೃಷ್ಟಿಯೊಳಗಿನ ವಸ್ತುಗಳು ಶಕ್ತಿಯುಕ್ತವಾಗಿವೆಯೆಂಬುದಕ್ಕೆ ಅನೇಕ ನಿದರ್ಶನಗಳನ್ನು ಕೊಡಬಹುದು. ಭೌತಸೃಷ್ಟಿ ಮೂಲವೆನಿಸಿದ ಪರಮಾಣು ಇಲೆಕ್ಟ್ರೋನ್ ಮತ್ತು ಪ್ರೋಟೋನ್ ಎಂಬ ಶಕ್ತಿಯಿಂದ ಸಂಘಟಿತವಾಗಿವೆಯೆಂದೂ ಹೀಗೆ ಜಡವೆಂದು ತೋರುವ ಸೃಷ್ಟಿಯೆಲ್ಲವು ಶಕ್ತಿಮಯವೆಂದೂ ವಿಜ್ಞಾನದ ಮತ ![೧] ಶಕ್ತಿವಿಶಿಷ್ಟ ಶಿವಾಂಶರಾದ ಜೀವಾತ್ಮರೂ ಶಕ್ತಿ ವಿಶಿಷ್ಟರಾಗಿರುವರೆಂದು ಆಧುನಿಕ ಮಾನಸಶಾಸ್ತ್ರಜ್ಞರಾದ "Jung" ಮೊದಲಾದವರ

---

[೧] Science and reality by John W. Lowsin.

ಅಭಿಮತ. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಆ್ಯನಿಮಸ್ ಮತ್ತು ಆ್ಯನಿಮಾ ಇವೆಯೆಂದು ಅವರ ಅಭಿಮತ. ಇದೇ ಆ ಶಿವಶಕ್ತಿಯರ ಕಲ್ಪನೆಗೆ ಸರಿಹೋಗುವಂತಿದೆ. ಶಕ್ತಿ ವಿಶಿಷ್ಟ ಶಿವನ ಕಲ್ಪನೆ ಎಷ್ಟು ವಿಶ್ವಸಮ್ಮತವಾಗಬಲ್ಲುದೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

## ಪರಶಿವ

ವೀರಶೈವದಲ್ಲಿ ಪರಶಿವ ಇಲ್ಲವೇ ಪರಬ್ರಹ್ಮವನ್ನು ಲಿಂಗ, ಸ್ಥಲ, ಬಯಲು, ಸಹಜ ಮತ್ತು ಶೂನ್ಯ ಎಂಬ ಅಭಿಧಾನಗಳಿಂದ ಕರೆಯಲಾಗಿದೆ ಎಂಬುದಕ್ಕೆ ಅನೇಕ ನಿದರ್ಶನಗಳು ದೊರೆಯಬಲ್ಲುವು. ಇವುಗಳಲ್ಲಿ ಕೆಲವನ್ನು ವಿವೇಚಿಸಬಹುದು.

## ಲಿಂಗ

ಲೀನಂ ಪ್ರಪಂಚರೂಪಂ ಹಿ ಸರ್ವಮೇತತ್ ಚರಾಚರಂ ।
ಸರ್ಗಾದೌ ಗಮ್ಯತೇ ಭೂಯಸ್ತಸ್ಮಾಲ್ಲಿಂಗಮುದೀರಿತಂ॥ (ಸೂಕ್ಷ್ಮಾಗಮಪಟಲ ೬)

ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ।
ಯತ್ ಪ್ರಯನ್ತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವತದ್ಬ್ರಹ್ಮೇತಿ ॥
(ತೈತ್ತಿರೀಯ ಉಪನಿಷತ್ತು ೩-೧)

ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ ।
ತದೇವ ಲಿಂಗಮಿತ್ಯುಕ್ತಂ ಲಿಂಗತತ್ತ್ವಪರಾಯಣೈಃ ॥
(ವೀರಶೈವ ಚಿಂತಾಮಣಿ ಭಾಗ ೨ - ಪುಟ ೯೦)

ಲೀಯನಾತ್ ಲಿಂಗಮಿತ್ಯಾಹುಃ ಅಪರೇ ವೇದವಿತ್ತಮಾಃ ।
ತಥಾಪಿ ಲಿಂಗಂ ಭಗವಾನ್ ಸ್ವಯಮೇವ ಮಹೇಶ್ವರಃ॥ (ಸೂತಸಂಹಿತೆ ಪುಟ೫೭-೨)

ಲೀನಾರ್ಥಂ ಗಮಕಂ ಚಿಹ್ನಂ ಲಿಂಗಮಿತ್ಯಭಿಧೀಯತೇ । (ಶಿವಪುರಾಣ)

ಲಯಂ ಗಚ್ಛತಿ ಯತ್ರೈವ ಜಗದೇತತ್ ಚರಾಚರಂ ।
ಪುನಃಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮ ಶಾಶ್ವತಂ॥ (ಸಿದ್ಧಾಂತಶಿಖಾಮಣಿ ೬-೩೬)

ತಸ್ಮಾಲ್ಲಿಂಗಮಿತಿ ಖ್ಯಾತಂ . . . . ಬೃಹತ್ವಾತ್ ಬೃಂಹಣತ್ವಾತ್ ಚ
ಬ್ರಹ್ಮಶಬ್ದಾಭಿಧೇಯಕಂ । (ಸಿದ್ಧಾಂತ ಶಿಖಾಮಣಿ ೬-೩೭)

ಲೀಯಂತೇ ಯತ್ರ ಗಮ್ಯಂತೇ ತಲ್ಲಿಂಗಂ ಬ್ರಹ್ಮ ಕೇವಲಂ ।
(ಸಿದ್ಧಾಂತ ಶಿಖಾಮಣಿ ೧೨-೩೫)

ಲೀಲೆ ನಿಂದೊಡೆ ಸ್ವಯಂಭುವೆಂಬರು.

ಮೇಗಣ ಉಕ್ತಿಯಿಂದ ಲಿಂಗಶಬ್ದದ ಅರ್ಥವೂ ಕಲ್ಪನೆಯೂ ಸ್ಪಷ್ಟವಾಗಬಲ್ಲುದು. ಆಗಮೋಪನಿಷತ್ಕಾಲದಿಂದ ವಚನವಾಙ್ಮಯದ ವರೆಗಿನ ಅವಧಿಯಲ್ಲಿ ವೀರಶೈವದ ವಿಶಿಷ್ಟವಾದ ಈ ಲಿಂಗದ ಕಲ್ಪನೆ ಅನೂಚಾನವಾಗಿ ಹೇಗೆ ನಡೆದು ಬಂದಿದೆ ಎಂಬುದು

ಇಲ್ಲಿ ಸ್ಪಷ್ಟವಾಗುತ್ತದೆ. ಪರಬ್ರಹ್ಮವೆಂಬುದೊಂದು ವಸ್ತುವಿದೆ. ಸಕಲಭೂತಂಗಳೆಲ್ಲವೂ ಅಲ್ಲಿಂದಲೇ ಉತ್ಪತ್ತಿಯಾಗಿ, ಅಲ್ಲಿಯೇ ಜೀವಿಸಿ ಕೊನೆಗೆ ಅಲ್ಲಿಯೇ ಲೀನವಾಗುವುವು. ಹೀಗೆಂದು ತೈತ್ತಿರೀಯ ಉಪನಿಷತ್ತು ಈಶ್ವರ ಮತ್ತು ಸೃಷ್ಟಿ ಇವುಗಳ ಪರಸ್ಪರ ಸಂಬಂಧ ವನ್ನು ಸ್ಪಷ್ಟಗೊಳಿಸಿತು. ಎಲ್ಲಿಂದ ಈ ಭೂತಗಳೆಲ್ಲ ಉದ್ಭವಿಸಿದುವೋ ಅದಕ್ಕಿಂತ ಬೃಹತ್ ಆದುದೂ ಪರವಾದುದೂ ಬೇರೆ ಯಾವುದೂ ಇಲ್ಲ. ಅದೇ ಪರಬ್ರಹ್ಮ. ಶಿವಾಗಮಗಳು ಆ ಪರಬ್ರಹ್ಮವನ್ನೇ ಲಿಂಗವೆಂದು ಕರೆದುವು. 'ಲಿಂಗ' ಶಬ್ದದಲ್ಲಿರುವ 'ಲಿ' ಮತ್ತು 'ಗ' ಎಂಬೆರಡಂಗಗಳಿಗೆ ತಮ್ಮ ಸಿದ್ಧಾಂತಕ್ಕೆ ಅನ್ವಯವಾಗುವಂತೆ ಅರ್ಥವನ್ನು ಕಲ್ಪಿಸಿದರು. ಮೊದಲನೆಯದಕ್ಕೆ ಲೀನಂ ಪ್ರಪಂಚಂ, ಲೀಯತೇ ಚರಾಚರಂ, ಲೀಯನಾತ್ ಲೀನಾರ್ಥ ಚಿಹ್ನಂ, ಲಯಂ ಗಚ್ಛತಿ, ಜಗದೇತತ್ ಲೀಯಂತೆ ಎಂದು ಮುಂತಾಗಿ ಲಯಸೂಚಕವಾದ ಅರ್ಥವನ್ನಿಟ್ಟುಕೊಂಡರು. ಪ್ರಪಂಚವು ಆ ಪರಬ್ರಹ್ಮನಲ್ಲಿ ಲೀನವಾಗುತ್ತದೆ ಎಂಬುದೇ ಇದರ ಅರ್ಥ. ಲೀನವಾಗಬೇಕಾದರೆ ಅದಕ್ಕೆ ಉತ್ಪತ್ತಿ ಇರಲೇಬೇಕು. ಉತ್ಪತ್ತಿ ಯುಳ್ಳುದೇ ಲಯವಾಗಬಲ್ಲುದು. ಇಲ್ಲಿ ಲಯವೆಂದರೆ ಪೂರ್ಣ ನಾಶ ಎಂದರ್ಥವಲ್ಲ. ವ್ಯಕ್ತರೂಪವಾದುದು ಅವ್ಯಕ್ತ ಸ್ಥಿತಿಯನ್ನು ಪಡೆಯಿತೆಂಬುದೇ ಇದರ ಅರ್ಥ. ಲಯ ಗೊಂಡ ಚರಾಚರ ಸೃಷ್ಟಿಯು ವ್ಯಕ್ತರೂಪದಿಂದ ಅವ್ಯಕ್ತಸ್ಥಿತಿಯಲ್ಲಿ ಉಳಿಯುತ್ತದೆ. ಹೀಗೆ ಲಯವನ್ನೈದುವ ಚರಾಚರ ಸೃಷ್ಟಿಯು ಉತ್ಪತ್ತಿಯಾಯಿತೆಂದರೆ ಇಲ್ಲದುದು ಹೊಸದಾಗಿ ಮೈವೆತ್ತಿತು ಎಂದು ಅರ್ಥವಲ್ಲ. ಪರಶಿವನಲ್ಲಿ ಅವ್ಯಕ್ತವಾಗಿ ಇದ್ದ ಶಕ್ತಿಯೇ ಸಂಕ್ಷೋಭೆಯಿಂದ ವ್ಯಕ್ತವಾಗಿ ಚರಾಚರ ಸೃಷ್ಟಿಯ ವ್ಯುತ್ಪತ್ತಿಯಾಯಿತು ಎಂಬುದು ಇದರ ಕಲ್ಪನೆ. ಇಲ್ಲಿ ವ್ಯುತ್ಪತ್ತಿಯೆಂದರೆ ಗಮನ. ಪರಶಿವನಲ್ಲಿ ನೆನಹು ನಿರ್ಧರಿಸದ ಮುನ್ನ ತನ್ನ ತಾನರಿಯದೆ ಅವಿನಾಭಾವದಿಂದಿದ್ದ ಶಕ್ತಿಯು ನೆನಹು ನಿರ್ಧರಿಸಿದೊಡ ನೆಯೇ ಗಮನಕಾರ್ಯವನ್ನು ಕೈಕೊಳ್ಳುತ್ತದೆ. ಆ ಗಮನದಲ್ಲಿಯೇ ವ್ಯಕ್ತ ಸೃಷ್ಟಿಯು ಉತ್ಪತ್ತಿ. ಇದನ್ನೇ ಈಶಾವಾಸ್ಯೋಪನಿಷತ್ತಿನಲ್ಲಿ, 'ಜಗತ್ಯಾಂ ಜಗತ್' ಎಂದು ಕರೆದಿರು ವರು. ಈ ಜಗತ್ತು ಗಮನದಲ್ಲಿಯ ಗಮನ. ಲಿಂಗ ಶಬ್ದದ ಎರಡಂಗಗಳಿಗೂ ಹೀಗೆ ವಿಶಿ ಷ್ಟಾರ್ಥವನ್ನು ಕಲ್ಪಿಸಿ, 'ಲಿ' ಎಂಬುದನ್ನು ಲಯಸೂಚಕವಾಗಿಯೂ, 'ಗ' ಎಂಬುದನ್ನು ಗಮನಸೂಚಕವಾಗಿಯೂ ಇಟ್ಟುಕೊಂಡು ವೀರಶೈವರು ತಮ್ಮ ಸಿದ್ಧಾಂತವನ್ನು ವಿವರಿ ಸಿದರು. ಲಿಂಗ ಪದದ ಬಳಕೆ ವೀರಶೈವದಲ್ಲಿ ವಿಪುಲವಾಗಿರುವುದಕ್ಕೆ ಆ ಶಬ್ದದಿಂದ ಈ ಸಿದ್ಧಾಂತದ ಪೂರ್ಣ ಕಲ್ಪನೆಯುಂಟಾಗುವುದೇ ಕಾರಣವೆಂದು ತೋರುತ್ತದೆ.

## ಸ್ಥಲ

ಸ್ಥಲವೆಂಬುದು ವೀರಶೈವದ ವಿಶಿಷ್ಟವಾದ ಪರಿಭಾಷೆ. ಇದಕ್ಕೆ ಸಾಮಾನ್ಯವಾಗಿ ಲಿಂಗಪದಕ್ಕಿದ್ದ ಅರ್ಥವೇ ಇದೆ. ಮಗ್ಗೆಯ ಮಾಯಿ ದೇವರ ವಿವರಣೆಯಿಂದ ಸ್ಥಲ ಪದದ ಅರ್ಥವನ್ನು ಸ್ಪಷ್ಟಪಡಿಸಬಹುದು.

ಏಕಮೇವ ಪರಂ ಬ್ರಹ್ಮ ಸಚ್ಚಿದಾನಂದ ಲಕ್ಷಣಂ ।
ಶಿವತತ್ತ್ವಂ ಶಿವಾಚಾರ್ಯಾಃ ಸ್ಥಲಮಿತ್ಯಾಹುರಾದರಾತ್[೧] ॥

ಏಕಮೇವಾದ್ವಿತೀಯವಾದ ಶಿವತತ್ವವನ್ನು ಶಿವಾಚಾರ್ಯರು ಸ್ಥಲವೆಂದು ಕರೆಯಲು ಕಾರಣವುಂಟು.

ಸರ್ವೇಷಾಂ ಸ್ಥಾನಭೂತತ್ವಾಲ್ಲಯಭೂತತ್ವತಸ್ತತಃ ।
ತತ್ವಾನಾಂ ಮಹದಾದೀನಾಂ ಸ್ಥಲಮಿತ್ಯಭಿಧೀಯತೇ ॥

ಯತ್ರಾದೌ ಸ್ಥೀಯತೇ ವಿಶ್ವಂ ಪ್ರಾಕೃತಂ ಪೌರುಷಂ ಯತಃ ।
ಲೀಯತೇ ಪುನರಂತೇ ತು ಸ್ಥಲಂ ತತ್ ಪ್ರೋಚ್ಯತೇ ತತಃ ॥

ಸ್ಥಕಾರಃ ಸ್ಥಾನವಾಚೀಸ್ಯಾಲ್ಲಕಾರೋ ಲಯವಾಚಕಃ ।
ತಯೋಃ ಕಾರಣಭೂತಂ ಯತ್ ತದೇವಸ್ಥಲಮುಚ್ಯತೇ ॥

ಅಧಿಷ್ಠಾನಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ।
ಜಗತೋ ಯದ್ಭವೇತ್ತತ್ತ್ವಂ ತದ್ಧಿವೈ ಸ್ಥಲಮುಚ್ಯತೇ ॥

ಆಧಾರಂ ಸರ್ವಶಕ್ತೀನಾಂ ಜ್ಯೋತಿಷಾಮಖಿಲಾತ್ಮನಾಂ ।
ಯತ್ತತ್ತ್ವಂ ಭವತಿ ಪ್ರಾಜ್ಞೈಃ ಸ್ಥಲಂ ತತ್ ಪರಿಗೀಯತೇ ॥

ಆಲಯಃ ಸರ್ವಭೂತಾನಾಂ ಲೋಕಾನಾಂ ಸರ್ವಸಂಪದಾಂ ।
ಯದ್ಭವೇತ್ ಪರಮಂ ಬ್ರಹ್ಮ ಸ್ಥಲಂ ತತ್ ಪ್ರಾಹುರಕ್ಷರಂ[೨] ॥

ಇವೆಲ್ಲ ಸೂತ್ರಗಳ ಮತಿತಾರ್ಥ ಒಂದೇ. ಪರಬ್ರಹ್ಮವು ಮಹದಾದಿ ತತ್ವಗಳಿಗೆ ಜನ್ಮ ಸ್ಥಾನವಾಗಿಯೂ ಲಯಸ್ಥಲವಾಗಿಯೂ ಇರುತ್ತದೆ. ವಿಶ್ವದ ಪ್ರಾಕೃತ ಮತ್ತು ಪೌರುಷ ರೂಪಗಳೆಲ್ಲ ಅಲ್ಲಿಯೇ ಸ್ಥಿತಿಲಯಗಳನ್ನು ಪಡೆಯುತ್ತವೆ. ಅಂದರೆ ಜೀವಜಗತ್ತುಗಳೆಲ್ಲ ಪರಮಾತ್ಮನಲ್ಲಿ ಜನಿಸಿ ಅಲ್ಲಿಯೇ ವಿರಮಿಸುತ್ತವೆ ಎಂದರ್ಥ. ಹೀಗೆ ಚರಾಚರಸೃಷ್ಟಿಗೆ ಸ್ಥಾನವಾಗಿ ಮತ್ತು ಲಯವಾಗಿ ಇರುವುದೇ ಪರಬ್ರಹ್ಮ. ಲಿಂಗ ಮತ್ತು ಸ್ಥಲ ಇವೆರಡೂ ಶಬ್ದಗಳಲ್ಲಿ 'ಲ' ಕಾರವು ಲಯಸೂಚಕವಾಗಿರುವುದು ಮೇಲಿನ ವಿವರಣೆಯಿಂದ ಸ್ಪಷ್ಟ ವಾಗುತ್ತದೆ. ಆದರೆ ಲಿಂಗಶಬ್ದದ 'ಗ' ಕಾರವು ಗಮನಾರ್ಥ ಸೂಚಕವಾಗಿದ್ದರೆ ಸ್ಥಲ ಪದದ 'ಸ್ಥ' ಕಾರವು ಸ್ಥಾನ, ಆಧಾರಸೂಚಕವಾಗಿದೆ. ಲಿಂಗಶಬ್ದದ 'ಗ' ಕಾರವು ಸೃಷ್ಟಿಯ ಉತ್ಪತ್ತಿ ವಿಕಾಸಗಳನ್ನು ಸೂಚಿಸಿದರೆ ಸ್ಥಲಪದದ 'ಸ್ಥ' ಕಾರ ಅದರ ವಿರಮ ಸ್ಥಾನವನ್ನು ಸೂಚಿಸುತ್ತದೆ. ಅಂತೆಯೇ ಅಧಿಷ್ಠಾನ, ಸ್ಥಾನ, ಆಧಾರ ಎಂಬ ಪದಗಳನ್ನು ಮಾಯಿದೇವರು ಬಳಸಿರುವರು. ಈ ಸ್ಥಲವು ಸರ್ವಶಕ್ತಿಗೆ ಆಧಾರವಾಗಿದೆ. ಅಖಿಲಾತ್ಮರುಗಳಿಗೆ ವಿರಮಸ್ಥಾನವಾಗಿದೆ. ಷಟ್ತ್ರಿಂಶತ್ತತ್ವಗಳಿಗೆ ತವರಾಗಿದೆ. ಆದುದರಿಂದ ಸ್ಥಲ ಮತ್ತು ಲಿಂಗ ಎಂಬ ಎರಡೂ ಪರಿಭಾಷೆಗಳನ್ನು ಸಮಾನಾರ್ಥದಲ್ಲಿಯೇ ವೀರ

೧. ಶಿವಾನುಭವಸೂತ್ರ ೨-೨.
೨. ಶಿವಾನುಭವ ಸೂತ್ರ ೨. ೨—೮.

ಶೈವರು ಬಳಸುವರು. ಈ ಪದಪ್ರಯೋಗದಲ್ಲಿರುವ ಸೂಕ್ಷ್ಮ ಅರ್ಥವ್ಯತ್ಯಾಸವು ಕ್ರಮೇಣ ವಿದಿತವಾಗುವುದು.

## ಸಹಜ

ಚರಾಚರಸೃಷ್ಟಿಗೆ ಕಾರಣವಾದ ಈ ಪರಶಿವ, ಪರಬ್ರಹ್ಮ, ಲಿಂಗ, ಸ್ಥಲಗಳ ನೈಜ ಸ್ಥಿತಿಯೆಂದರೆ ಸಹಜ. ಅದನ್ನು ಪ್ರಭುದೇವ, ಚನ್ನಬಸವಣ್ಣನವರೇ ಮೊದಲಾದ ಶಿವ ಶರಣರು ತಮ್ಮ ವಚನಗಳಲ್ಲಿ ವರ್ಣಿಸಿರುವರು.

**ಸಹಜದಿಂದ ನಿರಾಲಂಬವಾಯಿತ್ತು**
**ನಿರಾಲಂಬದಿಂದ ನಿರಾಳವಾಯಿತ್ತು**
**ನಿರಾಳದಿಂದ ನಿರವಯುವಾಯಿತ್ತು**
**ನಿರವಯದಿಂದ ಅನಾದಿಯಾಯಿತ್ತು**
**ಅನಾದಿಯಲ್ಲಿ ಮೂರ್ತಿಯಾದನೊಬ್ಬ ಶರಣ.**
**ಆ ಶರಣನ ಮೂರ್ತಿಯಿಂದ ಸದಾಶಿವನಾದ**
**ಆ ಸದಾಶಿವನ ಮೂರ್ತಿಯಿಂದ ಶಿವನಾದ**
**ಆ ಶಿವನ ಮೂರ್ತಿಯಿಂದ ರುದ್ರನಾದ**
**ಆ ರುದ್ರನ ಮೂರ್ತಿಯಿಂದ ವಿಷ್ಣುವಾದ**
**ಆ ವಿಷ್ಣುವಿನ ಮೂರ್ತಿಯಿಂದ ಬ್ರಹ್ಮನಾದ**
**ಆ ಬ್ರಹ್ಮನ ಮೂರ್ತಿಯಿಂದಲಾದವು ಸಕಲ ಜಗತ್ತುಗಳೆಲ್ಲ.**
**ಇವರೆಲ್ಲಾ ನಮ್ಮ ಗುಹೇಶ್ವರನ ಕರಸ್ಥಲದ ಹಂಗಿನಲ್ಲಿ ಹುಟ್ಟ ಬೆಳೆದರು.**[೧]

ಪರಮಾತ್ಮನ ಈ ಸ್ಥಿತಿಯನ್ನು ವರ್ಣಿಸಲು ವಿವಿಧ ಸಿದ್ಧಾಂತಗಳು ಬಗೆಬಗೆಯಾಗಿ ಹವಣಿಸಿವೆ. ಬೃಹದರ್ಥವನ್ನು ಗಮನದಲ್ಲಿಟ್ಟುಕೊಂಡು ಬ್ರಹ್ಮ ಎಂದು ಕರೆಯ ಲಾಯಿತು. ಅದೊಂದೇ ವಸ್ತುವು ಶಾಶ್ವತವಾದುದು ಎಂಬರ್ಥದಲ್ಲಿ ಅದನ್ನು 'ಸತ್' ಎಂದೂ ಕರೆಯಲಾಯಿತು. ಉಪನಿಷತ್ತುಗಳಲ್ಲಿ ತತ್ವಮಸ್ಯಾದಿ ವಾಕ್ಯವು ಸುಪ್ರಸಿದ್ಧ ವಾಯಿತು. ವೀರಶೈವವು ಪರಬ್ರಹ್ಮದ ಮೂಲಸ್ಥಿತಿಯನ್ನು ಸಹಜ, ಬಯಲು ಎಂದು ಕರೆಯಿತು. ಈ ಪದಗಳು ವಚನವಾಙ್ಮಯದ ಕಾಲದಲ್ಲಿಯೇ ಬಳಕೆಗೊಂಡಂತೆ ತೋರು ತ್ತಿವೆ. ಚರಾಚರ ಸೃಷ್ಟಿಯೆಲ್ಲ ವಾಸ್ತವವಾದುದು, ಸಹಜವಾದುದು, ಸದ್ರೂಪವಾದುದು. ಇದಕ್ಕೆ ಕಾರಣವಾದ ಪರಬ್ರಹ್ಮವೂ ಸಹಜವಲ್ಲದೆ ಬೇರೆ ಮತ್ತೇನಾಗಬಲ್ಲುದು? ವಿವಿಧ ಮುಖವಾಗಿ, ಬಗೆಬಗೆಯಾಗಿ ತೋರುತ್ತಿರುವ ಸೃಷ್ಟಿಯೆಲ್ಲ ಆ ಸಹಜದ ಪರಿವರ್ತನ. ಆ ಸಹಜವನ್ನೇ ಶೂನ್ಯ, ನಿಶ್ಶೂನ್ಯ, ಬಯಲು, ನಿರವಯಲು ಎಂದು ಕರೆಯಲಾಗಿದೆ. ಇದು ಪರಮಾತ್ಮನು ತನ್ನಲ್ಲಿ ಸರ್ವಶಕ್ತಿಯನ್ನು ಅಳವಡಿಸಿಕೊಂಡು ಸ್ವಶಕ್ತಿಕ್ಷೋಭೆಯಿಲ್ಲದ ಸ್ಥಿತಿಯನ್ನು ವರ್ಣಿಸುತ್ತದೆ. ಆಗ ನಿಜವಾಗಿಯೂ ಅದು ಶೂನ್ಯವೇ, ನಿಶ್ಶೂನ್ಯವೇ. ಅಲ್ಲಿ ಕಾಲವಿಲ್ಲ; ಕಲೆಯಿಲ್ಲ; ಕಲ್ಪವಿಲ್ಲ; ಸೃಷ್ಟಿ, ಸ್ಥಿತಿ, ಲಯಗಳಿಲ್ಲ. ಏನು ಏನೂ

೧. ಅಲ್ಲಮನ ವಚನ ಚಂದ್ರಿಕೆ, ಪು. ೧.

ಇಲ್ಲದ ಆ ಸ್ಥಿತಿ ಬಯಲೇ; ಅದು ನಿಶ್ಶೂನ್ಯವೇ. ಆದರೆ ಅದು ಏನಿಲ್ಲದ ಬಯಲಲ್ಲ, ಸಾಮಾನ್ಯ ಶೂನ್ಯವಲ್ಲ, ಎಲ್ಲವನ್ನು ಒಳಗೊಂಡ ನಿಶ್ಶೂನ್ಯ. ನಿಸ್ತರಂಗಸಮುದ್ರ ಸ್ಪಷ್ಟ ವಾಗಿರುವಂತೆ ತನ್ನಲ್ಲಿ ತಾನು ಲೀಯವಾದ ಸ್ಥಿತಿಯದು. ಅದನ್ನೇ ಶೂನ್ಯ, ಬಯಲು ಎಂದು ಕರೆದಿರುವರು. ಇವೆರಡೂ ಪರ್ಯಾಯ ಪದಗಳೇ. ಆದರೆ ಬೌದ್ಧಧರ್ಮದ ಶೂನ್ಯ (Void) ತತ್ವಕ್ಕೂ ವೀರಶೈವದ ಶೂನ್ಯತತ್ವಕ್ಕೂ ಯಾವ ಸಂಬಂಧವೂ ಇಲ್ಲ ವೆಂಬುದು ಗಮನದಲ್ಲಿಡತಕ್ಕುದು.

## ಸರ್ವಶೂನ್ಯ ನಿರಾಲಂಬಸ್ಥಲ

ಲೋಕಕಲ್ಯಾಣದ ದೃಷ್ಟಿ ಈ ಪರತತ್ವದಲ್ಲಿದೆ ಎಂಬ ಕಾರಣದಿಂದ ಅದನ್ನು ಪರಶಿವ ಎಂದು ಕರೆದಿರುವರು. ಈ ಪರಶಿವತತ್ತ್ವವನ್ನು ತೋಂಟದಾರ್ಯರು ಸರ್ವಶೂನ್ಯ ನಿರಾಲಂಬಸ್ಥಲವೆಂದು ಕರೆದಿರುವರು.

**ಆದಿಮಧ್ಯಾವಸಾನವಿಲ್ಲದಂದು**
**ನಾದಬಿಂದುಕಳೆಗಳಿಲ್ಲದಂದು**
**ಸಾವಯನಿರವಯವಿಲ್ಲದಂದು**
**ತತ್ವಬ್ರಹ್ಮಾಂಡಾದಿ ಲೋಕಾದಿಲೋಕಂಗಳೇನುಯೇನೂ ಇಲ್ಲದಂದು**
**ನಿತ್ಯನಿರಂಜನ ಪರವಸ್ತು ನೀನೊಬ್ಬನೆಯಿದ್ದೆಯಲ್ಲ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.**

ಆ ಸ್ಥಿತಿಯಲ್ಲಿ ನಾನು ನೀನೆಂಬ ಭ್ರಾಂತಿಸೂತಕ ಹುಟ್ಟಿರಲಿಲ್ಲ; ನಾಮ, ರೂಪ, ಕ್ರೀಗಳೇನೂ ಇರಲಿಲ್ಲ. ಸರ್ವಶೂನ್ಯವಾದ ಪರವಸ್ತುವೊಂದೇ ಇದ್ದುದು. ಆಗ ಜ್ಞಾನಾ ಜ್ಞಾನಗಳಿರಲಿಲ್ಲ. ರೂಪು ನಿರೂಪು ಹುಟ್ಟಿರಲಿಲ್ಲ. ಕಾಮ ನಿಃಕಾಮಗಳಿರಲಿಲ್ಲ. ಮಾಯಾಮಾಯಂಗಳೇನೂ ತಲೆದೋರಿರಲಿಲ್ಲ. ಆಗ ಸರ್ವಶೂನ್ಯ ವಸ್ತು ತನ್ನ ಘನತೆಯ ತಾನರಿಯದೆ, ಇದಿರರಿಯದೆ, ಏನನೂ ಅರಿಯದೆ ತಾನೆ ತಾನಾಗಿರ್ದಿತು. ಅಲ್ಲಿ ಅಂತರವಿರಲಿಲ್ಲ, ಬಾಹ್ಯವಿರಲಿಲ್ಲ; ಅಡಿ, ಮುಡಿ, ಒಡಲು, ಮತ್ತೊಂದೆಡೆಯೇನೂ ಇರಲಿಲ್ಲ; ಸರ್ವಶೂನ್ಯವೊಂದೇ ಇದ್ದಿತು. ಆ ಸರ್ವಶೂನ್ಯವನ್ನು ಸಿದ್ಧಲಿಂಗ ಶಿವಯೋಗಿ ಗಳು ನಿರಾಲಂಬವೆಂದು ಕರೆದಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಆ ಶೂನ್ಯವು ಅಸ್ತಿತ್ವ ರಹಿತವಾದ ಶೂನ್ಯವಲ್ಲ. ಅದು ಸರ್ವಾಸ್ತಿಸೂಚಕ. ಮತ್ತೊಂದಕ್ಕೆಡೆಯಿಲ್ಲದೆ ತಾನೇ ತಾನಾಗಿ ಸರ್ವವನ್ನೂ ತುಂಬಿಕೊಂಡಿರುವ ಶೂನ್ಯವದು. ಅಂತೆಯೇ ಅದಕ್ಕೆ ಆಧಾರ ಬೇಕಿಲ್ಲ. ಆಧೇಯವಿದ್ದರೆ ತಾನೇ ಆಧಾರಬೇಕಾಗುವುದು ! ಆಧಾರಾಧೇಯ ತಾನೇ ಆಗಿದ್ದರೆ ಅದಕ್ಕೆ ಬೇರೆ ಆಶ್ರಯದ ಹಂಗೇಕೆ?

ವೀರಶೈವದ ಪರವಸ್ತುವಿನ ಕಲ್ಪನೆ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನ ಗಳಲ್ಲಿ ಪರಿಪೂರ್ಣವಾದಂತಿದೆ. ಆದಿ-ಆಧಾರ, ಅಂತರ-ಬಾಹ್ಯ, ಸ್ಥೂಲ-ಸೂಕ್ಷ್ಮ, ಮಾಯಿಕ-ನಿರ್ಮಾಯಿಕ, ಜ್ಞಾನ-ಅಜ್ಞಾನ, ಸಾವಯವ-ನಿರವಯವ ಇಂತಹ ಯಾವ

ದ್ವಂದ್ವಗಳಿಲ್ಲದಂದು ಆ ನಿತ್ಯ ನಿರಂಜನ ಪರವಸ್ತುವೊಂದಿತ್ತು. ಆ ಒಂದು ತನ್ನ ಲೀಲೆಯಲ್ಲಿ ಸಕಲ ಚರಾಚರ ಸೃಷ್ಟಿಯ ಸ್ವರೂಪವನ್ನೈದಿ, ಲೀಲೆ ನಿಂದಡೆ ಅಲ್ಲಿಯೆ ವಿರಮಿಸಿದ ವಿಷಯ ಹಿಂದೆ ಸ್ಪಷ್ಟವಾಗಿದೆ. ಸರ್ವಶೂನ್ಯವಾಗಿದ್ದ ಪರವಸ್ತುವಿನಲ್ಲಿ ಮುಂದೆ ವ್ಯಕ್ತವಾಗಲಿರುವ ಚರಾಚರಸೃಷ್ಟಿ ಅವ್ಯಕ್ತರೂಪದಿಂದ ಇದ್ದಿತೆಂದು ಹಿಂದೆ ಹೇಳಲಾಗಿದೆ.

ಈ ಪರಶಿವಬ್ರಹ್ಮವು ಅದ್ವಿತೀಯವೂ ಸತ್ಯವೂ ನಿತ್ಯವೂ ಸಚ್ಚಿದಾನಂದಪರಿಪೂರ್ಣವೂ ಆದ್ಯಂತರಹಿತವೂ ಆಗಿದೆ.

> **ನಿರಾಮಯಂ ನಿರಾಕಾರಂ ನಿರ್ಗುಣಂ ನಿರ್ಮಲಂ ಶಿವಂ ।**
> **ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಂ[೧] ॥**

ಲಿಂಗವು ದೋಷರಹಿತವಾಗಿದೆ. ಅದಕ್ಕೆ ಆಕಾರವಿಲ್ಲ; ಅದು ಗುಣವಿಲ್ಲದುದೂ ಮಲವಿಲ್ಲದುದೂ ಆಗಿದೆ. ಈ ಕಾರಣದಿಂದ ಇದಕ್ಕೆ ಸಚ್ಚಿದಾನಂದಲಕ್ಷಣವುಳ್ಳ ಪರಬ್ರಹ್ಮ ಎಂದು ಕರೆಯಲಾಗಿದೆ ಎಂದು ಸೂಕ್ಷ್ಮಾಗಮದ ಹೇಳಿಕೆ. ಪರಮಾತ್ಮನು ಸತ್‌ಪದವಾಚ್ಯನೆಂಬುದನ್ನು ಛಾಂದೋಗ್ಯೋಪನಿಷತ್ತು

> **ಸದೇವ ಸೌಮ್ಯೇದಮಗ್ರಮಾಸೀತ್**
> **ಏಕಮೇವಾದ್ವಿತೀಯಂ ಬ್ರಹ್ಮ**

ಎಂಬ ಮಂತ್ರಮೂಲಕವಾಗಿ ಪ್ರತಿಪಾದಿಸುತ್ತದೆ. ಮೊದಲು ಅಂದರೆ ಕಾಲದೃಷ್ಟಿಯಿಂದಲ್ಲ, ಸೃಷ್ಟಿಯ ವಿಕಾಸದ ಮುನ್ನ ಪರಬ್ರಹ್ಮವು ಕೇವಲ ಸತ್ ಆಗಿದ್ದಿತು. ಅದು ಒಂದೇ ಆಗಿದ್ದು ಅದ್ವಿತೀಯವೆನಿಸಿದ್ದಿತು. ಅದರ ಲಕ್ಷಣವು ವಾತುಲಾಗಮದಲ್ಲಿ ಹೀಗೆ ಉಕ್ತವಾಗಿದೆ:

> **ಶಿವಂ ಪರಾತ್‌ಪರಂ ಸೂಕ್ಷ್ಮಂ ನಿತ್ಯಂ ಸರ್ವಗತಾವ್ಯಯಮ್ ।**
> **ಅನಿಂದಿತಮನೌಪಮ್ಯಮಪ್ರಮಾಣಮನಾಮಯಮ್ ॥**
> **ಶುದ್ಧತ್ವಾಚ್ಛಿವಮುದ್ದಿಷ್ಟಂ ಪರಾದೂರ್ಧ್ವಂ ಪರಾತ್ಪರಮ್ ।**
> **ವ್ಯೋಮಾತೀತಂ ಚ ಸೂಕ್ಷ್ಮಂ ಹಿ ನಿತ್ಯಂ ಕಾರಣಾಕಾರಣಂ ॥**
> **ವ್ಯಾಪ್ತಂ ಸರ್ವಗತಂ ಪ್ರೋಕ್ತಮಕ್ಷೀಣಾದವ್ಯಯಂ ಭವೇತ್ ।**
> **ಅಮಲಾದನಿನ್ದಿತಂ ಜ್ಞೇಯಮಸಾದೃಶ್ಯಾದನೌಪಮಮ್ ॥**
> **ಪ್ರಮಾಣಾದ್ಯತಿರಿಕ್ತತ್ವಾದಪ್ರಮೇಯಮಿತಿ ಸ್ಮೃತಮ್ ।**
> **ನಿರ್ಗುಣತ್ವಾದ್ವಿಶೇಷೇಣ ಚಾನಾಮಯಮಿತಿ ಸ್ಮೃತಂ ॥**
> **ಇತ್ಯೇತೈರ್ಲಕ್ಷಣೈರ್ಯುಕ್ತಂ ಶಿವರೂಪಮಿತಿ ಸ್ಮೃತಂ[೨] ।**

ಶಿವನು ಪರಾತ್ಪರನು; ಸೂಕ್ಷ್ಮನು; ಸರ್ವಗತನು, ಅವ್ಯಯನು; ನಿಂದಾರಹಿತನು; ಉಪಮಾತೀತನು, ವ್ಯಾಧಿರಹಿತನು. ಶುದ್ಧತ್ವದ ಮೂಲಕ ಆತನು ಶಿವನೆನಿಸಿರುವನು. ಪರಕ್ಕೆ ಪರವಾಗಿ ಅದರಾಚೆಗಿರುವುದರಿಂದ ಪರಾತ್ಪರನೆನಿಸಿರುವನು. ಆತನು ನಿತ್ಯನು.

---

೧. ಸೂಕ್ಷ್ಮಾಗಮ ಪಟಲ ೬.

೨. ವಾತುಲಾಗಮ; ತತ್ವಪಟಲ ೧೯-೨೨.

ಕಾರಣಕ್ಕೆ ಕಾರಣನು. ವ್ಯಾಪ್ತಿಯ ಮೂಲಕ ಸರ್ವಗತನೆನಿಸಿರುವನು. ಕ್ಷೀಣತ್ವವಿಲ್ಲದ ಮೂಲಕ ಅವ್ಯಯ ನೆನಿಸಿರುವನು. ಹೀಗೆ ಪರಶಿವನ ಲಕ್ಷಣಗಳನ್ನೂ ಅವಕ್ಕೆ ಕಾರಣಗಳನ್ನೂ ವಾತುಲಾಗಮವು ವಿವರಿಸುತ್ತದೆ. ಹೆಚ್ಚುಕಡಿಮೆ ಎಲ್ಲ ಗ್ರಂಥಗಳೂ ಪರಶಿವನ ಸ್ವರೂಪ ಲಕ್ಷಣಗಳನ್ನು ಹೀಗೆಯೇ ವಿವರಿಸುತ್ತವೆ. ಉದಾಹರಣೆಗೆಂದು ಸಿದ್ಧಾಂತ ಶಿಖಾಮಣಿಯನ್ನು ಅವಲೋಕಿಸಬಹುದು:

ಅಸ್ತಿ ಸಚ್ಚಿತ್ ಸುಖಾಕಾರಮಲಕ್ಷಣ ಪದಾಸ್ಪದಂ ।
ನಿರ್ವಿಕಲ್ಪ ನಿರಾಕಾರಂ ನಿರಸ್ತಾಶೇಷ ವಿಪ್ಲವಂ[೧] ॥

ಪರಿಚ್ಛೇದ ಕಥಾಶೂನ್ಯಂ ಪ್ರಪಂಚಾತೀತ ವೈಭವಂ ।
ಪ್ರತ್ಯಕ್ಷಾದಿ ಪ್ರಮಾಣಾನಾಮಗೋಚರ ಪದೇಸ್ಥಿತಂ[೨] ॥

ಶಿವರುದ್ರ ಮಹಾದೇವ ಭವಾದಿ ಪದ ಸಂಜ್ಞಿತಂ ।
ಅದ್ವಿತೀಯಮನಿರ್ದೇಶ್ಯಂ ಪರಂ ಬ್ರಹ್ಮ ಸನಾತನಂ[೩] ॥

ಏಕ ಏವ ಶಿವಸ್ಸಾಕ್ಷಾಚ್ಚಿದಾನಂದಮಯೋ ವಿಭುಃ ।
ನಿರ್ವಿಕಲ್ಪೋ ನಿರಾಕಾರೋ ನಿರ್ಗುಣೋ ನಿಷ್ಪ್ರಪಂಚಕಃ[೪] ॥

ಸರ್ವಜ್ಞಃ ಸರ್ವಕರ್ತಾ ಚ ನಿತ್ಯಮುಕ್ತೋ ಮಹೇಶ್ವರಃ[೫] ।

ಪರಶಿವನು ಪ್ರಮಾಣಗಳಿಗೆ ನಿಲುಕದೆ, ಕೇವಲ ಅನುಭವವೇದ್ಯನಾಗುವನೆಂಬಂಶ ಇಲ್ಲಿ ಮಹತ್ವವಾದುದು. ಆತನು ಸರ್ವಜ್ಞನೂ, ಸರ್ವಕರ್ತೃವೂ, ಸರ್ವವ್ಯಾಪ್ತನೂ ಆಗಿರುವನು. ಆತನಿಗೆ ಸಂಕಲ್ಪವಿಕಲ್ಪಗಳಿಲ್ಲ. ಗುಣಪ್ರಪಂಚರಹಿತನಾಗಿರುವನು. ಸಚ್ಚಿದಾನಂದ ನಿತ್ಯಪರಿಪೂರ್ಣನಾಗಿರುವನು.

ಏಕಮೇವ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಂ[೬]

ಎಂದು ಮಾಯಿದೇವರು ಪರಶಿವಬ್ರಹ್ಮದ ಲಕ್ಷಣಗಳನ್ನು ವಿವರಿಸುವರು. ತೋಂಟದ ಸಿದ್ಧಲಿಂಗ ಶಿವಯೋಗಿಗಳು ಚರಾಚರಸೃಷ್ಟಿಯ ಮೂಲವಸ್ತುವನ್ನು 'ಸರ್ವಶೂನ್ಯ ನಿರಾಲಂಬಸ್ಥಲ'ವೆಂದು ಕರೆದು ಅದನ್ನು ಹೀಗೆ ವರ್ಣಿಸಿರುವರು:

ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವನೆಂಬ
    ಪಂಚಾಧಿದೇವತೆಗಳಿಲ್ಲದಂದು
ಈ ಪಂಚೈವರ ಲಯಗಮನಂಗಳಿಗೆ ಕಾರಣವಾದ
    ಶಿವಶಕ್ತಿಗಳಿಲ್ಲದಂದು
ಈ ಶಿವಶಕ್ತಿಗಳಿಗೆ ಕಾರಣವಾದ ಸತ್ತು ಚಿತ್ತು ಆನಂದ ನಿತ್ಯಪರಿಪೂರ್ಣವೆಂಬ
    ನಿಃಕಲತತ್ವವಿಲ್ಲದಂದು
ನೀನು ಶೂನ್ಯನಾಗಿದ್ದೆಯಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ[೭].

---

೧. ಸಿ. ಶಿ. ೨. ೩. ೨. ಸಿ. ಶಿ. ೨, ೪. ೩. ಸಿ. ಶಿ. ೨-೬. ೪. ಸಿ. ಶಿ. ೫. ೩೨.
೫. ಸಿ. ಶಿ. ೫. ೪೨. ೬. ಶಿವಾನುಭವಸೂತ್ರಂ ೨-೨ ೭. ತೋಂ. ಶಿ. ವ. ೧೯.

ಅಂದರೆ ಸರ್ವಶೂನ್ಯ ನಿರಾಲಂಬಸ್ಥಲವು ಸಚ್ಚಿದಾನಂದ ನಿತ್ಯಪರಿಪೂರ್ಣವೆಂಬ ಲಕ್ಷಣಕ್ಕೂ ನಿಲುಕದಂತಹದು ಎಂಬುದು ಶಿವಯೋಗಿಗಳ ಅಭಿಪ್ರಾಯ. ಅದು ಮಾತು ಮನಂಗಳಿಂದ ಅತ್ತತ್ತ ಮೀರಿದ ಸಾತಿಶಯದ ನಿರುಪಾಧಿಕ ವಸ್ತುವನ್ನು 'ಹೀಗೆ' ಎಂದು ವರ್ಣಿಸುವುದು ಸಾಧ್ಯವಿಲ್ಲವೆಂಬುದನ್ನು ಉಪನಿಷತ್ತುಗಳೂ ಕಂಡುಕೊಂಡಿವೆ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂದೂ "ನೇತಿ, ನೇತಿ, ನೇತಿ" ಎಂದೂ ಪರಬ್ರಹ್ಮವನ್ನು ಅವು ವರ್ಣಿಸಿವೆ.

## ಜೀವಾತ್ಮ

**ನೀವು ನಿಮ್ಮ ಸ್ವಲೀಲೆಯಿಂದ**
**ಜಗದ ಲೀಲಾವೈಭವಂಗಳ ನಟಿಸಬೇಕೆಂದು ನಿಮ್ಮಲ್ಲಿ ನೆನಹುದೋರಲು**
**ಆ ನೆನಹು ನಿರ್ಧರಿಸಿ ಚಿತ್ತೆನಿಸಿತ್ತು**

ಪರಶಿವನಲ್ಲಿ ವಿಮರ್ಶಾಶಕ್ತಿಯು ಅವಿನಾಭಾವರೂಪದಿಂದ ಇದೆ ಎಂಬುದನ್ನು ಹಿಂದೆ ವಿವರಿಸಲಾಗಿದೆ. 'ಅಸ್ಮಿ ಪ್ರಕಾಶೇ ನಂದಾಮಿ' ಎಂಬ ಅನುಭವವೇ ಪರಬ್ರಹ್ಮದ ವಿಮರ್ಶಾಶಕ್ತಿಯು. ಆ ವಿಮರ್ಶಾಶಕ್ತಿಯು ಪರಬ್ರಹ್ಮದಲ್ಲಿ ಹುದುಗಿಕೊಂಡಿದ್ದರೂ ಪರಬ್ರಹ್ಮಕ್ಕೆ 'ಅಸ್ಮಿ' ಎಂಬ ನೆನಹು ಇಲ್ಲದ ಸ್ಥಿತಿಯೊಂದಿತ್ತು. ಆ ಸ್ಥಿತಿಯಲ್ಲಿ ಅದಕ್ಕೆ ಲೀಲಾವೈಭವಂಗಳ ನಟಿಸಬೇಕೆಂದು ನೆನಹು ತೋರಿತು. ಅದೇ ಸ್ವವಿಮರ್ಶಾಶಕ್ತಿಯಲ್ಲಿ ತಲೆದೋರಿದ ಅಸ್ಮಿ ಎಂಬ ಭಾವನೆ; ಸ್ವಶಕ್ತಿ ಕ್ಷೋಭೆ. ಅಖಂಡ ನಿರವಯ ಪರಿಪೂರ್ಣ ಚೈತನ್ಯಜ್ಞಾನವೆನಿಸಿದ ಸತ್ತು. ಆ ವಿಮರ್ಶಾಶಕ್ತಿಯಲ್ಲಿ ಪ್ರಕಾಶೇ ಎಂಬ ಗುಣವೊಂದಿದೆ. ಅದು ಚೈತನ್ಯಜ್ಞಾನಪ್ರಭಾಸಾಮರ್ಥ್ಯದ ಬೆಳಗು. ಅಸ್ಮಿ ಎಂಬ ನೆನಹು ನಿರ್ಧರಿಸಿ ಈ ಬೆಳಗು ಗಟ್ಟಿಗೊಂಡು ಚಿತ್ತೆನಿಸಿತ್ತು. ಈ ಚಿತ್ತು ಶಕ್ತಿಯ ಸ್ವವಿಭಾಗಪರಾಮರ್ಶಾ ದಿಶೆಯು. ಒಮ್ಮೆ ಕ್ಷೋಭೆ ತಲೆದೋರಿದ ಮೇಲೆ ಅದರಲ್ಲಿ ಪ್ರಳಯಕಾಲದ ವರೆಗೆ ಕ್ರಿಯೆ ನಡೆಯಲೇಬೇಕು. ಅದಕ್ಕೆ ಮೂಲ ಪರವಸ್ತುವಿನ ಸ್ವಲೀಲೆಯ ಪ್ರೇರಣೆ ಇದೆ. ಆ ಪ್ರೇರಣೆ ಇರುವ ವರೆಗೆ ಈ ಚಿಚ್ಛಕ್ತಿವಿಲಾಸ ನಡೆಯಲೇಬೇಕು. ಸಚ್ಚಿದಾನಂದ ರೂಪದ ಪರಶಿವನು ತನ್ನ ಜ್ಞಾನವಿಲಾಸಾನಂದಲೀಲೆಯಿಂದ ಈ ಶಕ್ತಿವಿಕಸನದ ಕಾರ್ಯವನ್ನು ಕೈಕೊಂಡನೆಂದು ವಚನಕಾರರು ಹೇಳಿದರೆ[1] ಆಗಮುಗಳಲ್ಲಿ,

**ಯೋಗಿನಾಂ ಉಪಕಾರಾಯ ಸ್ವೇಚ್ಛಯಾ ಚಿಂತ್ಯತೇ ಶಿವಃ ।**
**ತಚ್ಛಿವೇತು ಪರಾಶಕ್ತಿಃ ಸಹಸ್ರಾಂಶೇನ ಜಾಯತೇ[2] ॥**

ಎಂದು ಹೇಳಲಾಗಿದೆ. ವಾತುಲಾಗಮದಲ್ಲಿ ಬರುವ ಈ ವಿವರಣೆಯಿಂದ ಶಕ್ತಿವಿಕಾಸ, ಸೃಷ್ಟಿಪ್ರವೃತ್ತಿ, ಇವುಗಳಿಗೆ ಯೋಗಿಗಳಿಗೆ ಉಪಕಾರವಾಗಲೆಂಬ ಉದ್ದೇಶವಿರುವ ಪರ

---

೧. ಲಿಂ. ಲೀ. ವಿ. ಚಾ. ಪು. ೨.
ಅಖಂಡೇಶ್ವರ ವಚನ ಪು. ೩.
೨. ವಾತುಲಾಗಮ ತತ್ತ್ವಭೇದ ಪಟಲ '

ಮಾತ್ಮನ ಸ್ವೇಚ್ಛಾಚಿಂತನೆಯೇ ಕಾರಣವೆಂದು ವಿದಿತವಾಗುತ್ತದೆ. ಈ ಶಕ್ತಿಸಂಕ್ಷೋಭೆಗೆ ಸ್ವಲೀಲಾನಂದ ವಿಲಾಸವೇ ಕಾರಣವೆಂದು ತೋಂಟದ ಸಿದ್ಧಲಿಂಗ ಶಿವಯೋಗಿಗಳೇ ಮೊದಲಾದ ವಚನಕಾರರ ಅಭಿಮತ.

ಮೇಲೆ ಹೇಳಿದ ಚಿತ್ತು ಪ್ರವೃತ್ತಿಯ ಕಾರ್ಯದಲ್ಲಿ ಚಿನ್ನಾದ, ಚಿದ್ಬಿಂದು, ಚಿತ್ಕಳೆ ಎಂಬ ರೂಹುಧಾರಣೆಮಾಡಿ ಅವುಗಳೊಡನೆ ತಾನೂ ಗಟ್ಟಿಗೊಂಡು ಅಖಂಡಗೋಳ ಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು.

**ನಿಃಕಲ ಶಿವತತ್ವದಲ್ಲಿ ಜ್ಞಾನಚಿತ್ತು ಉದಯವಾಯಿತ್ತು**
**ಆ ಚಿತ್ತಿನಿಂದ ಅಕಾರ, ಉಕಾರ, ಮಕಾರಗಳೆಂಬ ಅಕ್ಷರತ್ರಯಂಗಳಾದವು**
**ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ**
**ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು.**
**ಇಂತೀ ನಾಲ್ಕು ಒಂದಾದಲ್ಲಿ ಓಂಕಾರವೆಂಬ ಪ್ರಣವದುತ್ಪತ್ತಿಯಾಯಿತ್ತು.**
**ಆ ಓಂಕಾರವೆಂಬ ಪ್ರಣವವೇ**
**ಅಖಂಡ ಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿಯಪ್ಪ**
**ಮಹಾಲಿಂಗ ನೋಡಾ.**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ**

ಈ ವಚನದಿಂದ ನಿಃಕಲಶಿವತತ್ವದಲ್ಲಿ ಮಹಾಲಿಂಗದ ಉದಯವಾದ ಪರಿಯೆಂತೆಂಬುದು ಸ್ಪಷ್ಟವಾಗುತ್ತದೆ. ಈ ಮಹಾಲಿಂಗದ ಉದಯಕ್ಕೆ ಸಚ್ಚಿದಾನಂದ ಸ್ವರೂಪದ ನಿಃಕಲ ಪರತತ್ವದ ಜ್ಞಾನವಿಲಾಸಾನಂದ ಲೀಲೆಯೇ ಕಾರಣ. ಅಖಂಡ ಪರಂಜ್ಯೋತಿರ್ಮಯ ವಾದ ಮಹಾಲಿಂಗವು ತನ್ನ ಸ್ವಲೀಲಾ ಸ್ವತಂತ್ರತೆಯಿಂದ ತನ್ನ ತಾನರ್ಚಿಸಿ ಪೂಜಿಸಿ ಕೊಳ್ಳುವ ಒಂದು ಲೀಲಾವಿಲಾಸದಿಂದ ತನ್ನ ಅಖಂಡ ಚಿಚ್ಛಕ್ತಿಯ ಸಹಸ್ರಾಂಶದೊಳ ಗೊಂದಂಶವನ್ನು ಬೇರ್ಪಡಿಸಿತು. ಅದೇ ಆತ್ಮವಾಯಿತು. 'ಚೈತನ್ಯಮಾತ್ಮಾ' ಎಂದು ಬ್ರಹ್ಮಸೂತ್ರ ಶಿವಸೂತ್ರಗಳಲ್ಲಿ ಉಕ್ತವಾಗಿರುವುದು ಇದೇ ಅರ್ಥವನ್ನೇ ಎತ್ತಿ ಹಿಡಿಯು ತ್ತದೆ. 'ಅಂಶೋ ನಾನಾ ವ್ಯಪದೇಶಾತ್' ಎಂಬ ಸೂತ್ರದಿಂದ ಬ್ರಹ್ಮಸೂತ್ರವು, ಆತ್ಮನು ಪರಮಾತ್ಮನ ಅಂಶವೆಂಬುದನ್ನು ಸ್ಪಷ್ಟಪಡಿಸುತ್ತದೆ. 'ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ' ಎಂಬ ಭಗವದ್ಗೀತೆಯ ಉಕ್ತಿಯಲ್ಲಿಯೂ ಆತ್ಮನು ಪರಮಾತ್ಮನ ಅಂಶವೆಂಬ ಅರ್ಥ ಸ್ಪಷ್ಟವಾಗುತ್ತದೆ. 'ಯಥಾ ಸುದೀಪ್ತಾತ್ ಪಾವಕಾತ್ ವಿಸ್ಫು ಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ ತಥಾಕ್ಷರಾ ದ್ವಿವಿಧಾಃ ಸೌಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿ ಯಾಂತಿ' ಎಂದು ಮುಂಡಕೋಪನಿಷತ್ತು, ಆತ್ಮಗಳು ಪರಮಾತ್ಮನಿಂದ ಉದ್ಭವಿಸಿದ ಪರಿಯನ್ನು ವಿವರಿಸುತ್ತದೆ. ಅಗ್ನಿಯಿಂದ ಅಗ್ನ್ಯಂಶ ಗಳಾದ ಅನಂತಾನಂತ ಕಿಡಿಗಳು ಆವಿರ್ಭವಿಸುವಂತೆ ಪರಬ್ರಹ್ಮದಿಂದ ತದಂಶಭೂತರಾದ ಅನಂತಾನಂತ ಆತ್ಮರು ಆವಿರ್ಭವಿಸುತ್ತಾರೆ. ಹೀಗೆ ಉದ್ಭವಿಸಿದ ಆತ್ಮರು ಜೀವಾತ್ಮ ರಾದ ಪರಿಯೆಂತು? ಮಹಾಲಿಂಗಜ್ಯೋತಿಯಿಂದ ಉದ್ಭವಿಸಿದ ಕಿಡಿಗಳು ಆತ್ಮಗಳಾದರೆ,

ಆ ಮಹಾಲಿಂಗದ ಪಂಚಮುಖಗಳಲ್ಲಿ ಉದ್ಭವಿಸಿದ ಸಾದಾಖ್ಯಗಳಿಂದ ಮೈದೋರಿದ ತತ್ವಗಳು ಆತ್ಮಗಳಿಗೆ ದೇಹವಾಗುತ್ತವೆ. ಆತ್ಮರಿಗೆ ದೇಹಸಂಬಂಧವುಂಟಾಗಲು ದೇಹ ಕರಣಂಗಳಲ್ಲಿ ಅಹಂ ಮಮತೆ ಉಂಟಾಗುತ್ತದೆ. ಈ ದೇಹಕರಣಂಗಳೇ ನಾನೆಂಬ ಭಾವನೆಯು ಅಜ್ಞಾನ. ಈ ಅಜ್ಞಾನದಿಂದ ಬದ್ಧನಾದ ಆತ್ಮನು ಜೀವನೆನಿಸುತ್ತಾನೆ. ಲೀಲೆಯಲ್ಲಿ ಶುದ್ಧ ಚಿದ್ರೂಪನಾದ ಪರಮಾತ್ಮನು ಸೇವ್ಯಸೇವಕ, ಪೂಜ್ಯಪೂಜಕ ನಾದಂತೆ ಭೋಕ್ತೃಭೋಜ್ಯನೂ ಆಗಿದ್ದಾನೆ. ಜೀವಾತ್ಮನೇ ಭೋಕ್ತೃವೆನಿಸುವನು. ಆತನು ಅಜ್ಞಾನದ ಮೂಲಕ ಮಲತ್ರಯಕ್ಕೆ ಒಳಗಾಗಿರುವನು. ಆಣವ, ಮಾಯಾ, ಕಾರ್ಮಿಕ ಎಂಬೀ ಮಲಗಳು ಅಜ್ಞಾನದಿಂದಲೇ ಉತ್ಪತ್ತಿಯಾಗುವುವು. ಆತ್ಮನು ಪರಮಾತ್ಮಸ್ಥಿತಿಯಲ್ಲಿಯೂ ಶುದ್ಧಾತ್ಮರೂಪದಲ್ಲಿಯೂ ಸರ್ವಜ್ಞನಾಗಿರುವನು. ಸರ್ವ ಕರ್ತೃವಾಗಿರುವನು. ಸರ್ವವ್ಯಾಪಕನೂ ಆಗಿರುವನು. ಆದರೆ ತನ್ನ ಪರಿಸರದಲ್ಲಿದ್ದ ಪಂಚವಿಂಶತಿ ತತ್ವರೂಪದ ದೇಹದೊಡನೆ ಬೆರಸಿ ಅಹಂಕಾರಭಾವನೆಯನ್ನು ತಳೆದು ತಾನೇ ದೇಹವೆಂಬ ಮರವೆಯಲ್ಲಿರಲು ಆತನ ಸರ್ವಜ್ಞತ್ವಕ್ಕೆ ಪ್ರತಿಯಾಗಿ ಕಿಂಚಿಜ್ಞತ್ವ ಉಂಟಾಗುವುದು; ಇದೇ ಮಾಯಾಮಲ. ಸರ್ವವ್ಯಾಪಕತ್ವಕ್ಕೆ ಪ್ರತಿಯಾಗಿ ಕಿಂಚಿ-ದ್ವ್ಯಾಪ್ತಿಯುಂಟಾಗುವುದು; ಇದೇ ಆಣವಮಲ. ಸರ್ವಕರ್ತೃತ್ವಶಕ್ತಿಗೆ ಪ್ರತಿಯಾಗಿ ಕಿಂಚಿತ್‌ಕರ್ತೃತ್ವಶಕ್ತಿಯುಂಟಾಗುವುದು; ಇದೇ ಕಾರ್ಮಿಕಮಲ. ಹೀಗೆ ಮಲತ್ರಯ ದಿಂದ ಬಿಗಿವಡೆದ ಜೀವಾತ್ಮನೇ ಭೋಕ್ತೃ ಎನಿಸುವನು. ಭೋಕ್ತೃ ಕಿಂಚಿತ್ ಸತ್ವ ರಜೋಗುಣರೂಪನಾಗಿರುವನು. ಅತ್ಯಂತ ತಾಮಸೋಪಾಧಿ ವಿಶಿಷ್ಟವಾದ ಚೈತನ್ಯವು ಭೋಜ್ಯವೆನಿಸುವುದು.

**ಕಿಂಚಿತ್ ಸತ್ವರಜೋರೂಪಂ ಭೋಕ್ತೃಸಂಜ್ಞಕಮುಚ್ಯತೇ ।**
**ಅತ್ಯಂತ ತಾಮಸೋಪಾಧಿರ್ಭೋಜ್ಯಮಿತ್ಯಭಿಧೀಯತೇ**[೧] **॥**

ಪರಶಿವಬ್ರಹ್ಮನಿಷ್ಠವಾದ ಶಕ್ತಿ ಸಚ್ಚಿದಾನಂದ ರೂಪವಾದುದೆಂದು ಹಿಂದೆ ಹೇಳ ಲಾಗಿದೆ. ಸತ್, ಎಂದರೆ ಜ್ಞಾನವೆಂದೂ ಚಿತ್ ಅದರ ಕ್ರಿಯಾರೂಪದ ಬೆಳಗೆಂದೂ ವಿವರಿಸಲಾಗಿದೆ. ಮೂಲದಲ್ಲಿ ಕ್ರಿಯಾಜ್ಞಾನಗಳೆರಡೂ ಅಪೃಥಕ್ ರೂಪದಿಂದಿರುತ್ತವೆ. ಸೃಷ್ಟಿ ದಶೆಯಲ್ಲಿ ಅವು ಪೃಥಕ್ಕಾಗುತ್ತವೆ[೨] ಜ್ಞಾನಾಂಶವು ಉತ್ತಮ ಕರ್ತೃತ್ವದಿಂದ ಬಿಡು ಗಡೆಯಾಗಿ ಸತ್ವಗುಣರೂಪದ ಶಕ್ತಿಯಾಗುತ್ತದೆ. ಕ್ರಿಯಾಂಶವು ಉತ್ತಮ ಜ್ಞಾತೃತ್ವ ದಿಂದ ವಿಮುಕ್ತವಾಗಿ ಕಿಂಚಿತ್ ಸತ್ವತಮೋಗುಣ ಮಿಶ್ರವಾದ ರಜೋಗುಣ ಶಕ್ತಿಯೆನಿಸು ತ್ತದೆ. ಜ್ಞಾನಕ್ರಿಯೆಗಳಲ್ಲಿ ಭೇದ ಬುದ್ಧಿಯನ್ನು ಹುಟ್ಟಿಸುವುದೇ ತಮೋಗುಣ ಶಕ್ತಿಯು. ಇದೇ ಜಡವಾದ ಮಾಯೆಯು. ಶಿವಶಕ್ತಿಯು ಈ ಜಡಮಾಯೆಯನ್ನು ಪ್ರವೇಶಿಸಿ ಪ್ರಕೃತಿಯೆನಿಸುವುದು. ಸತ್ವ, ರಜ, ತಮೋಗುಣಾತ್ಮಕವಾದ ಪ್ರಕೃತಿಯೇ ಸುಖದುಃಖ

---

೧. ಸಿದ್ಧಾಂತ ಶಿಖಾಮಣಿ ಪಿಂಡಸ್ಥಲ ೩೫-೩೬.
೨. ಸಿದ್ಧಾಂತ ಶಿಖಾಮಣಿ ಪಿಂಡಸ್ಥಲ—೩೫-೩೬.

ಗಳಿಗೆ ಕಾರಣವಾಗುತ್ತದೆ. ಪರಮಾತ್ಮನ ಅಂಶವೆನಿಸಿದ ಆತ್ಮನು ಪ್ರಕೃತಿಯಲ್ಲಿ ಬೆರೆತು ಸುಖದುಃಖಗಳನ್ನು ಅನುಭವಿಸುವ ಜೀವಾತ್ಮನಾಗುವನು.

**ಅನಾದ್ಯವಿದ್ಯಾಸಂಬಂಧಾತ್ ತದಂಶೋ ಜೀವನಾಮಕಃ ।**

ಎಂದು ಸಿದ್ಧಾಂತಶಿಖಾಮಣಿಯು ಹೇಳುತ್ತಿದೆ. ಮೇಲೆ ವಿವರಿಸಿದಂತೆ ಪರಮಾತ್ಮನ ಅಂಶರೂಪನಾದ ಆತ್ಮನು ಪ್ರಕೃತಿಯ ಸಂಬಂಧದಿಂದ ಜೀವವೆನಿಸುತ್ತಾನೆ. ಜೀವವನ್ನು ಆಶ್ರಯಿಸಿದ ಈ ಪ್ರಕೃತಿಯು ಅಧೋಮಾಯೆಯೆನಿಸುತ್ತದೆ. ಶಿವನನ್ನು ಆಶ್ರಯಿಸಿರು ವದು ಊರ್ಧ್ವಮಾಯೆ. ಮೊದಲನೆಯದು ಅಶುದ್ಧಮಾಯೆ, ಎರಡನೆಯದು ಶುದ್ಧ ಮಾಯೆ. ಅಶುದ್ಧಮಾಯೆಯಿಂದ ಮೋಹವುಂಟಾಗುತ್ತದೆ. ಆ ಮೋಹವೇ ದುಃಖ ಕಾರಣ. ಏಕೆಂದರೆ ಅಶುದ್ಧಮಾಯೆಯ ಮೋಹಕ್ಕೊಳಗಾಗಿ ದೇಹವೇ ತಾನೆಂದು ಬಗೆದು ಮೂಲಸ್ವರೂಪವನ್ನೇ ಮರೆಯುವನು. ಅಹಂ ಬ್ರಹ್ಮಾಽಸ್ಮಿ ಎಂಬುದನ್ನು ಮರೆತು ಅಹಂ ದೇಹೋಽಸ್ಮಿ ಎಂದು ಭಾವಿಸುವನು. ಈ ಅವಿದ್ಯೆಯ ಶಕ್ತಿಭೇದದಿಂದ ಜೀವಾತ್ಮನು ನಾನಾರೂಪಗಳನ್ನು ತಳೆಯುವನು; ಜನನ ಮರಣಕ್ಕೊಳಗಾಗಿ ಬದ್ಧ ನಾಗಿರುವನು; ಅಜ್ಞಾನದಿಂದುಂಟಾದ ಕರ್ಮಫಲವನ್ನು ಅನುಭೋಗಿಸುವನು. ಈ ಕರ್ಮವೇ ಅವನ ದುಃಖಕ್ಕೂ ಜನನ ಮರಣಗಳಿಗೂ ಕಾರಣ.

ಈ ಆತ್ಮನು ಸಕಲ ಪ್ರಾಣಿಗಳ ಹೃದಯದಲ್ಲಿ ಪೀಠಸ್ಥನಾಗಿದ್ದು ಇಡೀ ದೇಹವನ್ನೇ ಬೆಳಗುತ್ತಿರುವನು. ಬದ್ಧನಾದ ಜೀವನು ಶುದ್ಧನಾಗುವವರೆಗೆ ಅಂದರೆ ಕರ್ಮಪರಿಪಾಕ ದಿಂದ ಮಲತ್ರಯವನ್ನು ಪರಿಚ್ಛೇದನಮಾಡಿಕೊಂಡು ಲಿಂಗದಲ್ಲಿ ಲೀಯವಾಗುವ ವರೆಗೆ ಆತ್ಮನಿಗೆ ಜನ್ಮಾಂತರಗಳ ಜಂಜಡ ತಪ್ಪಿದುದಲ್ಲ.

## ತತ್ವಗಳು

**ಆಪ್ರಲಯಂ ಯತ್ತಿಷ್ಠತಿ ಸರ್ವೇಷಾಂ ಭೋಗದಾಯಿ ಭೂತಾನಾಂ**
**ತತ್ವಮಿತಿ ಪ್ರೋಕ್ತಂ ನ ಶರೀರ ಘಟಾದಿ ತತ್ವಮತಃ**[೧]

ಸೃಷ್ಟಿಯ ವ್ಯುತ್ಪತ್ತಿಯಿಂದ ಆರಂಭಿಸಿ ಪ್ರಳಯದ ವರೆಗೆ ನಿಂತು ಆವುದು ಆತ್ಮಗಳಿಗೆ ಬೋಗವನ್ನುಂಟುಮಾಡುವುದೋ ಅದನ್ನು ತತ್ವವೆಂದು ಕರೆಯುವರು. ವೀರಶೈವ ಸಿದ್ಧಾಂತವು ಒಪ್ಪಿಕೊಂಡ ೩೬ ತತ್ವಗಳು ಒಂದಕ್ಕೊಂದು ಕಾರ್ಯಕಾರಣ ಭಾವ ದಿಂದಿದ್ದು ತಾತ್ವಿಕಗಳೆನಿಸಿದ್ದರೂ ಅವು ಪ್ರಳಯದ ವರೆಗೆ ನಿಲ್ಲುವುದರಿಂದ ತತ್ವಗಳೆಂದು ಪರಿಗಣಿತವಾಗಿವೆ. ಆದರೆ ಘಟಪಟಾದಿಗಳೂ ಶರೀರವೂ ಕೊನೆಯ ವರೆಗೆ ನಿಲ್ಲದಿರುವು ದರಿಂದ ಅವನ್ನು ತತ್ವವೆನ್ನಲಾಗದು.

ತತ್ವಗಳೆಲ್ಲ ಶಕ್ತಿವಿಶಿಷ್ಟಪರಬ್ರಹ್ಮದಿಂದಲೇ ಹೊರಹೊಮ್ಮಿವೆ. ಅಂದಮೇಲೆ ಅವೆಲ್ಲ ಶಕ್ತಿಯ ವಿವಿಧ ಅವಸ್ಥೆಗಳೆನ್ನಲು ಅಭ್ಯಂತರವಿಲ್ಲ. ಈ ತತ್ವ ಹಾಗೂ ಜೀವಾತ್ಮರು

೧. ಭೋಜ ಪ್ರಣೀತ ತತ್ವಪ್ರಕಾಶಿಕಾ.

ಗಳ ಆವಿರ್ಭಾವವನ್ನು ವೀರಶೈವವು ಪ್ರವೃತ್ತಿ ಮಾರ್ಗವೆಂದು ಕರೆದಿದೆ. ಆತ್ಮಗಳ ಆವಿರ್ಭಾವವು ಮಹಾಲಿಂಗದಿಂದಾದ ಬಗೆಯನ್ನು ಹಿಂದೆ ವಿವರಿಸಲಾಗಿದೆ. ಆತನು ಜೀವಾತ್ಮನಾಗಿ ಭೋಕ್ತೃವೆನಿಸಿ ಭೋಜ್ಯವೆನಿಸಿದ ರಸರೂಪ ಪದಾರ್ಥಗಳಲ್ಲಿ ನಿರತನಾದ ವಿಷಯವನ್ನು ಹಿಂದೆ ಹೇಳಲಾಗಿದೆ. ಈ ಭೋಜ್ಯರೂಪವೇ ತತ್ವಾತ್ಮಕವಾದ ಸೃಷ್ಟಿ. ಸ್ವಲೀಲೆಯಲ್ಲಿ ತನ್ನಂಶದಿಂದ ಭೋಕ್ತೃವನ್ನು ನಿರ್ಮಿಸಿದ ಪರಮಾತ್ಮನೇ ಭೋಜ್ಯವೆನಿಸಿದ ಸೃಷ್ಟಿಯನ್ನು ನಿರ್ಮಿಸಿರುವನು. ಶುದ್ಧನಾದ ಆತ್ಮನು ಈ ಸೃಷ್ಟಿಯಲ್ಲಿ ಅಹಂಭಾವದಿಂದ ಮಮಕರಿಸಿ ಸಹಕರಿಸಿ ವ್ಯವಹರಿಸುತ್ತಿರುವುದರಿಂದ ಬದ್ಧನಾಗಿರುವನೆಂಬುದನ್ನು ಅರಿತು ಕೊಳ್ಳಲಾಗಿದೆ. ಇಲ್ಲಿ ತತ್ವಾತ್ಮಕವಾದ ಸೃಷ್ಟಿಯ ವ್ಯುತ್ಪತ್ತಿ. ವಿಕಾಸ ಎಂತೆಂಬುದನ್ನು ನೋಡಬೇಕಾಗಿದೆ.

> **ಲೋಕಾದಿ ಲೋಕಂಗಳೇನು ಏನೂ ಇಲ್ಲದಂದು**
> **ಏಕನೇವ ಪರಬ್ರಹ್ಮವು ತಾನೊಂದೇ ನೋಡಾ;**
> **ಅದು ತನ್ನನ್ನು ನೆನೆಯದೆ ಇದಿರನು ನೆನೆಯದೆ**
> **ನೆನಹು ನಿಷ್ಪತ್ತಿಯಾಗಿದ್ದಿತ್ತು ನೋಡಾ.**
> **ಆ ನೆನಹಿಲ್ಲದ ಘನವಸ್ತು ನೆನೆದ ನೆನಹೇ ಸಾವಯವಾಗಿ**
> **ಚಿತ್ತೆನಿಸಿಕೊಂಡಿತ್ತು.**

ಆ ಚಿತ್ತೇ, ಸತ್ತು, ಚಿತ್ತು, ಆನಂದ, ನಿತ್ಯಪರಿಪೂರ್ಣ ಎಂಬ ಪದಂಗಳನಂಗೀಕರಿಸಿ ನಿಃಕಲ ಶಿವತತ್ವವೆನಿಸಿತ್ತು ನೋಡಾ. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಈ ವಚನದಿಂದ ಸರ್ವಶೂನ್ಯ ನಿರಾಲಂಬ ಸ್ಥಲದಿಂದ ಸೃಷ್ಟಿಯ ಉನ್ಮುಖಸ್ಥಿತಿ ಎಂತಾಯಿತೆಂಬುದರ ಕಲ್ಪನೆಯಾಗಬಲ್ಲುದು. ಸಿದ್ಧಲಿಂಗ ಶಿವಯೋಗಿಗಳು ಈ ಅವಸ್ಥೆಗಳನ್ನು ಸರ್ವಶೂನ್ಯ ನಿರಾಲಂಬಸ್ಥಲ, ಶೂನ್ಯಲಿಂಗಸ್ಥಲ, ನಿಃಕಲಲಿಂಗಸ್ಥಲ, ಮಹಾಲಿಂಗಸ್ಥಲ ಎಂದು ಮುಂತಾಗಿ ವಿವರಿಸಿರುವರು. ಈ ಸಂದರ್ಭದಲ್ಲಿ ವಾತುಲಾಗಮವು ನಿಷ್ಕಲ, ಸಕಲ ನಿಷ್ಕಲ ಮತ್ತು ಸಕಲ ಎಂದು ಪರಶಿವನ ಮೂರವಸ್ಥೆಗಳನ್ನು ವರ್ಣಿಸುತ್ತದೆ.

> **ನಿಷ್ಕಲಂ ತತ್ವಮಿತ್ಯುಕ್ತಂ ಸಕಲಂ ಮೂರ್ತಿರೀರಿತಂ ।**
> **ಸಕಲಂ ನಿಷ್ಕಲಂ ಚೈವ ಪ್ರಭಾವಮಿತಿ ಕೀರ್ತಿತಂ ॥**
> **ದೇಹೀ ನಿಷ್ಕಲಮಿತ್ಯುಕ್ತಂ ದೇವಃ ಸಕಲ ನಿಷ್ಕಲಃ ।**
> **ದೇಹಿದೇಹಸ್ಯ ಸಂಬಂಧಮೇವ ರೂಪಮಿತಿ ಶ್ರುತಂ ॥**
> **ಸರ್ವೇಷಾಂ ಧ್ಯಾನಪೂಜಾರ್ಥಂ ಸಕಲಂ ನಿಷ್ಕಲಂ ಭವೇತ್[೧] ।**

ಅಂದರೆ ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಪರಶಿವನೇ ನಿಷ್ಕಲ. ಆತನು ಯೋಗಿಗಳ ಆತ್ಮಕಲ್ಯಾಣಕ್ಕಾಗಿ ತನ್ನ ಶಕ್ತ್ಯುನ್ಮೇಷ ಕ್ರಿಯೆಯಿಂದ ಸಕಲ ನಿಷ್ಕಲ ರೂಪವನ್ನು ಧರಿಸು ವನು. ಮುಂದೆ ಸಕಲ ರೂಪವನ್ನು ಧಾರಣಮಾಡುವನು. ವಾತುಲಾಗಮದನ್ವಯ ಸಕಲನಿಷ್ಕಲರೂಪವೇ ಮಿಕ್ಕವರು ಹೆಸರಿಸಿರುವ ಮಹಾಲಿಂಗವೆಂದು ವಿದಿತವಾಗುತ್ತದೆ.

---

೧. ವಾತುಲಾಗಮ ತತ್ವಭೇದ ಪಟಲ. ೩೮-೪೦.

ಈ ಮಹಾಲಿಂಗದ ಮುಖಗಳಿಂದಲೇ ಸಾದಾಖ್ಯಗಳೂ ಅಲ್ಲಿಂದ ತತ್ವಗಳೂ ನಿಷ್ಪನ್ನ ವಾಗುತ್ತವೆ. ಕಲ್ಲುಮಠದ ಪ್ರಭುದೇವರು ಲಿಂಗಲೀಲಾವಿಲಾಸ ಚಾರಿತ್ರದಲ್ಲಿ ನಿಷ್ಕಲ ಲಿಂಗಸ್ಥಲ, ಮಹಾಲಿಂಗಸ್ಥಲ, ಲಿಂಗಮೂರ್ತಿಸ್ಥಲ, ಎಂದು ಸ್ಥಲವಿಭಜನೆಯನ್ನು ಮುಂದುವರಿಸಿರುವರು. ಇವು ವಾತುಲಾಗಮದಲ್ಲಿ ನಿರ್ದೇಶಿಸಿದ ನಿಷ್ಕಲ, ಸಕಲ–ನಿಷ್ಕಲ, ಸಕಲ ಎಂಬಿವುಗಳಿಗೆ ಪರ್ಯಾಯಪದಗಳಾದಂತಿವೆ. ತೋಂಟದ ಸಿದ್ಧಲಿಂಗ ಶಿವಯೋಗಿಗಳಾದರೋ ಈ ಸ್ಥಲವಿಭಜನೆಯನ್ನು ಬಹು ಸೂಕ್ಷ್ಮವಾಗಿ ಪರ್ಯಾಲೋಚಿಸಿರುವರು. ಅವರು ವಿವರಿಸಿದ ಸರ್ವಶೂನ್ಯ, ಶೂನ್ಯಲಿಂಗಸ್ಥಲಗಳು ಸತ್ತು, ಚಿತ್ತು, ಆನಂದ, ನಿತ್ಯಪರಿಪೂರ್ಣ ಎಂಬ ನಿಃಕಲತತ್ವವಿಲ್ಲದಂದು ಇದ್ದುವೆಂದು ಹೇಳುತ್ತಾರೆ. ವಾತುಲಾಗಮದಂತೆ ಸಿದ್ಧಲಿಂಗ ಶಿವಯೋಗಿಗಳು ವಿವರಿಸುವ ನಿಃಕಲಲಿಂಗಸ್ಥಲವು ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಪರವಸ್ತುವು. ಇವುಗಳಾಚೆಗೆ ಅವೆರಡೂ ಸ್ಥಲಗಳು ಉನ್ಮೇಷದ ಅತ್ಯಂತ ಸೂಕ್ಷ್ಮಾವಸ್ಥೆಯಲ್ಲಿ ತಲೆದೋರಿವೆ. ಚಿಚ್ಛಕ್ತಿ ಪರಶಿವನ ನೆನಹಿನಲ್ಲಿಯೇ ಅಂಕುರಿಸಿ ಮುಂದೆ ಅಡಿ ಇಡತೊಡಗಿತು. ಆ ನೆನಹು ನಿರ್ಧರಿಸಿ ಚಿತ್ತಾಯಿತ್ತು. ಆ ಚಿತ್ತು ಚೆನ್ನಾದ ಚಿದ್ಬಿಂದು ಚಿತ್ಕಲೆಗಳಿಗಾಗಿ ಮೂಲ ಚಿತ್ತಿನೊಡನೆ ಕೂಡಿ ಮಹಾಲಿಂಗವಾಯಿತೆಂಬುದನ್ನು ಹಿಂದೆ ಕಂಡುಕೊಳ್ಳಲಾಗಿದೆ. ಅಖಂಡಗೋಳಕಾಕಾರ ತೇಜೋಮೂರ್ತಿಯಪ್ಪ ಈ ಮಹಾಲಿಂಗದಿಂದ ಪಂಚಸಾದಾಖ್ಯಗಳು ವ್ಯುತ್ಪತ್ತಿಯಾಗುತ್ತವೆ. ಶಿವನ ಚಿಚ್ಛಕ್ತಿಯ ಸಹಸ್ರಾಂಶದಲ್ಲಿ ಪರಾಶಕ್ತಿ. ಆ ಪರಾಶಕ್ತಿಯ ಸಹಸ್ರಾಂಶದಿಂದ ಆದಿಶಕ್ತಿ. ಆ ಆದಿಶಕ್ತಿಯ ಸಹಸ್ರಾಂಶದಿಂದ ಇಚ್ಛಾಶಕ್ತಿ. ಆ ಇಚ್ಛಾಶಕ್ತಿಯ ಸಹಸ್ರಾಂಶದಿಂದ ಜ್ಞಾನಶಕ್ತಿ. ಆ ಜ್ಞಾನಶಕ್ತಿಯ ಸಹಸ್ರಾಂಶದಿಂದ ಕ್ರಿಯಾಶಕ್ತಿ ಉದ್ಭವಿಸಿದುವು. ಹೀಗೆ ಒಂದೇ ಶಿವಶಕ್ತಿ ಆರುತೆರನಾಯಿತು. ಇವುಗಳಿಗೆ ಕ್ರಮವಾಗಿ ಶಾಂತ್ಯತೀತೋತ್ತರೆ, ಶಾಂತ್ಯತೀತೆ, ಶಾಂತಿ, ವಿದ್ಯಾ, ಪತಿಷ್ಠಾ ನಿವೃತ್ತಿಗಳೆಂಬ ಕಲಾ ಪರ್ಯಾಯ ನಾಮಂಗಳುಂಟು.[೧] ಇವುಗಳಿಂದ ಸಾದಾಖ್ಯಗಳು ಹೀಗೆ ಸಂಭವಿಸುತ್ತವೆ. ಪರಾಶಕ್ತಿಯ ದಶಾಂಶದಲ್ಲಿ ಶಿವಸಾದಾಖ್ಯವು ಸಂಭವಿಸುತ್ತದೆ. ಅದು ಪರಾಶಕ್ತಿಯಿಂದ ಉದ್ಭವಿಸಿದುದರಿಂದಲೂ ಸಿದ್ಧತ್ವವನ್ನು ತಳೆದಿರುವುದರಿಂದಲೂ ಶಿವ ಎಂಬ ಹೆಸರನ್ನು ಪಡೆದಿದೆ. ಅದು ಸೂಕ್ಷ್ಮರೂಪವನ್ನು ತಳೆದು ಜ್ಯೋತಿರ್ಮಯವಾಗಿರುತ್ತದೆ. ಆಕಾಶದಲ್ಲಿ ವಿದ್ಯುತ್ತು ಹೊಳೆಯುವಂತೆ ಪ್ರತ್ಯಕ್ಷದಲ್ಲಿ ಇದು ಸರ್ವತೋಮುಖವಾಗಿರುತ್ತದೆ. ಈ ಶಿವತತ್ವವೇ ಅಖಿಲತತ್ವಗಳ ಆಲಯವಾಗಿದೆ. ಶಿವ ಸಾದಾಖ್ಯವಾದ ಮೇಲೆ ಬರುವುದು ಅಮೂರ್ತಸಾದಾಖ್ಯ. ಶಾಂತಿಯೆಂಬ ಪರ್ಯಾಯನಾಮವುಳ್ಳ ಆದಿಶಕ್ತಿಯ ದಶಾಂಶದಿಂದ ಅಮೂರ್ತಸಾದಾಖ್ಯವು ಹುಟ್ಟುತ್ತದೆ. ಆದಿಶಕ್ತಿಯ ಅಮೃತತ್ವದ ಮೂಲಕ ಇದಕ್ಕೆ ಆ ಹೆಸರು ಪ್ರಾಪ್ತವಾಗಿದೆ. ಇದು ಕೋಟಿಸೂರ್ಯರ ಬೆಳಗನ್ನು ಪಡೆದು ಜ್ಯೋತಿಸ್ತಂಭಾಕೃತಿಯನ್ನು ತಳೆದಿರುತ್ತದೆ. ಈ ಲಿಂಗದಿಂದಲೇ

---

೧. ತೋ. ಶಿ. ವ. ೩೮-೩೯,
ವಾತುಲಾಗಮ ತತ್ವಭೇದ ಪಟಲ ೪೭-೬೫.

ಸಚರಾಚರಸೃಷ್ಟಿಯ ಉತ್ಪತ್ತಿ, ಲಯ ಉಂಟಾಗುವುದು. ಇದರಂತೆ ಇಚ್ಛಾಶಕ್ತಿ, ಜ್ಞಾನ ಶಕ್ತಿ ಮತ್ತು ಕ್ರಿಯಾಶಕ್ತಿ ಇವುಗಳ ಹತ್ತನೆಯ ಒಂದಂಶದಲ್ಲಿ ಕ್ರಮವಾಗಿ ಮೂರ್ತ ಸಾದಾಖ್ಯ ಕರ್ತೃಸಾದಾಖ್ಯ ಮತ್ತು ಕರ್ಮಸಾದಾಖ್ಯಗಳು ಉದ್ಭವಿಸುತ್ತವೆ.[೧]

ಮೇಲೆ ನಿರ್ದೇಶಿಸಿದ ಶಿವ, ಅಮೂರ್ತ, ಮೂರ್ತ, ಕರ್ತೃ, ಕರ್ಮ ಸಾದಾಖ್ಯ ಗಳನ್ನು ಅನುಕ್ರಮವಾಗಿ ಸದಾಶಿವ, ಈಶ, ಬ್ರಹ್ಮ, ಈಶ್ವರ ಮತ್ತು ಈಶಾನ ಎಂಬ ಅಭಿಧಾನದಿಂದ ಕರೆಯಲಾಗಿದೆ.[೨] ಸಿದ್ಧಲಿಂಗ ಶಿವಯೋಗಿಗಳ ವಚನಗಳಲ್ಲಿ ಈ ಪಂಚ ಸಾದಾಖ್ಯಗಳಲ್ಲದೆ ಮಹಾಸಾದಾಖ್ಯವೆಂಬ ಆರನೆಯ ಸಾದಾಖ್ಯವು ಉಲ್ಲಿಖಿತವಾಗಿದೆ. ಅನಾದಿ ಪರಶಿವತತ್ವದಿಂದ ಚಿತ್ತು, ಆ ಚಿತ್ತಿನಿಂದ ನಾದ, ಬಿಂದು, ಕಳೆಗಳು ಉತ್ಪತ್ತಿ ಯಾಗಿ ಅಖಂಡಪರಿಪೂರ್ಣಗೋಳಕಾಕಾರತೇಜೋಮೂರ್ತಿ ಲಿಂಗ ಸ್ವರೂಪವಾಯಿತು. ಆ ಮಹಾಲಿಂಗದ ಪಂಚಸಾದಾಖ್ಯಮೂರ್ತಿ ಉತ್ಪತ್ತಿಯಾಯಿತ್ತು ನೋಡಾ-ಎಂದು ಶಿವಯೋಗಿಗಳು ತಮ್ಮದೊಂದು ವಚನದಲ್ಲಿ ನುಡಿದಿರುವರು. ಆದರೆ ಸಾದಾಖ್ಯಗಳ ಸೂಕ್ಷ್ಮವಿವರವನ್ನು ಕೊಡುವಲ್ಲಿ ಅವರು ಆರೂ ಸಾದಾಖ್ಯಗಳನ್ನಿಟ್ಟುಕೊಂಡಿರುವರು. ಅದರ ವಿವರ ಹೀಗೆ:

**ನಿಃಕಲಶಿವನ ಮಧ್ಯದಲ್ಲಿ ಚಿಚ್ಛಕ್ತಿ ಉದಯಿಸಿದಳು.**
**ಆ ಚಿಚ್ಛಕ್ತಿಯ ಮಧ್ಯದಲ್ಲಿ ಶಾಂತ್ಯತೀತೋತ್ತರೆಯೆಂಬ ಕಲೆ,**
**ಆ ಶಾಂತ್ಯತೀತೋತ್ತರೆಯೆಂಬ ಕಲೆಯ ಮಧ್ಯದಲ್ಲಿ ಮಹಾಲಿಂಗ,**
**ಆ ಮಹಾಲಿಂಗದ ಮಧ್ಯದಲ್ಲಿ ನಿರ್ಮುಕ್ತ ಸಾದಾಖ್ಯ,**
**ಆ ನಿರ್ಮುಕ್ತ ಸಾದಾಖ್ಯದ ಮಧ್ಯದಲ್ಲಿ ಪಶುಪತಿಯೆಂಬ ಕಲಾಮೂರ್ತಿ,**
**ಆ ಪಶುಪತಿಯೆಂಬ ಕಲಾಮೂರ್ತಿಯ ಮಧ್ಯದಲ್ಲಿ ಶಿವನೆಂಬ ಐಕ್ಯ,**
**ಆ ಐಕ್ಯನ ಮಧ್ಯದಲ್ಲಿ ಉಪಮಾತೀತನು,**
**ಆ ಉಪಮಾತೀತನ ಮಧ್ಯದಲ್ಲಿ ಆತ್ಮನು,**
**ಇಂತು ಮಹಾಸಾದಾಖ್ಯದ ಸೃಷ್ಟಿ.**

**ಆ ನಿಃಕಲ ಶಿವನ ಮಧ್ಯದಲ್ಲಿ ಪರಾಶಕ್ತಿ,**
**ಆ ಪರಾಶಕ್ತಿಯ ಮಧ್ಯದಲ್ಲಿ ಶಾಂತ್ಯತೀತೆಯೆಂಬ ಕಲೆ,**
**ಆ ಶಾಂತ್ಯತೀತೆಯೆಂಬ ಕಲೆಯ ಮಧ್ಯದಲ್ಲಿ ಪ್ರಸಾದಲಿಂಗ,**
**ಆ ಪ್ರಸಾದಲಿಂಗದ ಮಧ್ಯದಲ್ಲಿ ಶಿವಸಾದಾಖ್ಯ,**
**ಆ ಶಿವಸಾದಾಖ್ಯದ ಮಧ್ಯದಲ್ಲಿ ಮಹಾದೇವನೆಂಬ ಕಲಾಮೂರ್ತಿ,**
**ಆ ಮಹಾದೇವನೆಂಬ ಕಲಾಮೂರ್ತಿಯ ಮಧ್ಯದಲ್ಲಿ ಕ್ಷೇತ್ರಜ್ಞನೆಂಬ ಶರಣ,**
**ಆ ಶರಣನ ಮಧ್ಯದಲ್ಲಿ ಸದಾಶಿವನು,**
**ಆ ಸದಾಶಿವನ ಮಧ್ಯದಲ್ಲಿ ಆಕಾಶ,**
**ಇಂತು ಶಿವಸಾದಾಖ್ಯದ ಸೃಷ್ಟಿ,**

---

೧. ವಾತುಲಾಗಮ : ತತ್ವಭೇದಪಟಲ ೪೨-೬೫.
೨. ವಾತುಲಾಗಮ : ತತ್ವಭೇದಪಟಲ ೩೧-೩೨.

ಆ ನಿಃಕಲ ಶಿವನ ಮಧ್ಯದಲ್ಲಿ ಆದಿಶಕ್ತಿ,
ಆ ಆದಿಶಕ್ತಿಯು ಮಧ್ಯದಲ್ಲಿ ಶಾಂತಿಯೆಂಬ ಕಲೆ,
ಆ ಶಾಂತಿಯೆಂಬ ಕಲೆಯು ಮಧ್ಯದಲ್ಲಿ ಜಂಗಮಲಿಂಗ,
ಆ ಜಂಗಮಲಿಂಗದ ಮಧ್ಯದಲ್ಲಿ ಅಮೂರ್ತಿಸಾದಾಖ್ಯ,
ಆ ಅಮೂರ್ತಿಸಾದಾಖ್ಯದ ಮಧ್ಯದಲ್ಲಿ ಭೀಮೇಶ್ವರನೆಂಬ ಕಲಾಮೂರ್ತಿ,
ಆ ಭೀಮೇಶ್ವರನೆಂಬ ಕಲಾಮೂರ್ತಿಯು ಮಧ್ಯದಲ್ಲಿ ಕರ್ತಾರನೆಂಬ ಪ್ರಾಣಲಿಂಗಿ
ಆ ಕರ್ತಾರನೆಂಬ ಪ್ರಾಣಲಿಂಗಿಯು ಮಧ್ಯದಲ್ಲಿ ಈಶ್ವರ,
ಆ ಈಶ್ವರನ ಮಧ್ಯದಲ್ಲಿ ವಾಯು,
ಇಂತು ಅಮೂರ್ತಿಸಾದಾಖ್ಯದ ಸೃಷ್ಟಿ.

ಆ ನಿಃಕಲ ಶಿವನ ಮಧ್ಯದಲ್ಲಿ ಇಚ್ಛಾಶಕ್ತಿ,
ಆ ಇಚ್ಛಾಶಕ್ತಿಯು ಮಧ್ಯದಲ್ಲಿ ವಿದ್ಯೆಯೆಂಬ ಕಲೆ,
ಆ ವಿದ್ಯೆಯೆಂಬ ಕಲೆಯು ಮಧ್ಯದಲ್ಲಿ ಶಿವಲಿಂಗ,
ಆ ಶಿವಲಿಂಗದ ಮಧ್ಯದಲ್ಲಿ ಮೂರ್ತಿಸಾದಾಖ್ಯ,
ಆ ಮೂರ್ತಿಸಾದಾಖ್ಯದ ಮಧ್ಯದಲ್ಲಿ ಮಹಾರುದ್ರನೆಂಬ ಕಲಾಮೂರ್ತಿ,
ಆ ಮಹಾರುದ್ರನೆಂಬ ಕಲಾಮೂರ್ತಿಯು ಮಧ್ಯದಲ್ಲಿ ಭವನೆಂಬ ಪ್ರಸಾದಿ,
ಆ ಭವನೆಂಬ ಪ್ರಸಾದಿಯು ಮಧ್ಯದಲ್ಲಿ ರುದ್ರ,
ಆ ರುದ್ರನ ಮಧ್ಯದಲ್ಲಿ ಅಗ್ನಿ,
ಇಂತು ಮೂರ್ತಿಸಾದಾಖ್ಯದ ಸೃಷ್ಟಿ.

ಆ ನಿಃಕಲ ಶಿವನ ಮಧ್ಯದಲ್ಲಿ ಜ್ಞಾನಶಕ್ತಿ,
ಆ ಜ್ಞಾನಶಕ್ತಿಯು ಮಧ್ಯದಲ್ಲಿ ಪ್ರತಿಷ್ಠೆಯೆಂಬ ಕಲೆ,
ಆ ಪ್ರತಿಷ್ಠೆಯೆಂಬ ಕಲೆಯು ಮಧ್ಯದಲ್ಲಿ ಗುರುಲಿಂಗ,
ಆ ಗುರುಲಿಂಗದ ಮಧ್ಯದಲ್ಲಿ ಕರ್ತೃಸಾದಾಖ್ಯ,
ಆ ಕರ್ತೃಸಾದಾಖ್ಯದ ಮಧ್ಯದಲ್ಲಿ ಶರ್ವನೆಂಬ ಕಲಾಮೂರ್ತಿ,
ಆ ಶರ್ವನೆಂಬ ಕಲಾಮೂರ್ತಿಯು ಮಧ್ಯದಲ್ಲಿ ಚೈತನ್ಯನೆಂಬ ಮಾಹೇಶ್ವರ,
ಆ ಚೈತನ್ಯನೆಂಬ ಮಾಹೇಶ್ವರನ ಮಧ್ಯದಲ್ಲಿ ವಿಷ್ಣು,
ಆ ವಿಷ್ಣುವಿನ ಮಧ್ಯದಲ್ಲಿ ಅಪ್ಪು,
ಇಂತು ಕರ್ತೃಸಾದಾಖ್ಯದ ಸೃಷ್ಟಿ.

ಆ ನಿಃಕಲ ಶಿವನ ಮಧ್ಯದಲ್ಲಿ ಕ್ರಿಯಾಶಕ್ತಿ,
ಆ ಕ್ರಿಯಾಶಕ್ತಿಯು ಮಧ್ಯದಲ್ಲಿ ನಿವೃತ್ತಿಯೆಂಬ ಕಲೆ,
ಆ ನಿವೃತ್ತಿಯೆಂಬ ಕಲೆಯು ಮಧ್ಯದಲ್ಲಿ ಆಚಾರಲಿಂಗ,
ಆ ಆಚಾರಲಿಂಗದ ಮಧ್ಯದಲ್ಲಿ ಕರ್ಮಸಾದಾಖ್ಯ,
ಆ ಕರ್ಮಸಾದಾಖ್ಯದ ಮಧ್ಯದಲ್ಲಿ ಭವನೆಂಬ ಕಲಾಮೂರ್ತಿ,
ಭವನೆಂಬ ಕಲಾಮೂರ್ತಿಯು ಮಧ್ಯದಲ್ಲಿ ಅಂತರ್ಯಾಮಿಯೆಂಬ ಭಕ್ತ,
ಆ ಅಂತರ್ಯಾಮಿಯೆಂಬ ಭಕ್ತನ ಮಧ್ಯದಲ್ಲಿ ಬ್ರಹ್ಮ.
ಆ ಬ್ರಹ್ಮನ ಮಧ್ಯದಲ್ಲಿ ಪೃಥ್ವಿ,

ಆ ಬ್ರಹ್ಮನಿಂದ ನರರು, ಸುರರು, ಅಸುರರು,
ಅಂಡಜ, ಸ್ವೇದಜ, ಉದ್ಭಿಜ ಜರಾಯುಜವೆಂಬ
ಸಕಲ ಚರಾಚರಂಗಳೆಲ್ಲವು ಹುಟ್ಟಿದವು
ಇಂತಿವೆಲ್ಲವು ಶಿವನ ನೆನಹು ಮಾತ್ರದಿಂದಲಾದವಯ್ಯಾ
ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೇ.[೧]

ಈ ಸುದೀರ್ಘವಾದ ವಚನದಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಸಾದಾಖ್ಯ ವಿವರಗಳನ್ನು, ಜಗದುತ್ಪತ್ತಿಯ ಕ್ರಮವನ್ನು ಸ್ಪಷ್ಟವಾಗಿ ತಿಳಿಸಿರುವರು. ಸಾದಾಖ್ಯದ ಕಲ್ಪನೆಯಲ್ಲಿ ಉಂಟಾದ ಅಭಿವೃದ್ಧಿಯೂ ಶಿವಶರಣರು ಅದರಲ್ಲಿ ಮಾಡಿಕೊಂಡ ವೈಶಿಷ್ಟ್ಯವೂ ಅಲ್ಲಿ ಸುಸ್ಪಷ್ಟವಾಗುತ್ತದೆ. ಈ ವಿವರಣೆಯಲ್ಲಿ ಕೆಳಗಿನ ಅಂಶಗಳು ಬಹು ಮಹತ್ವವಾದುವು. ಚಿಚ್ಛಕ್ತಿಯಲ್ಲಿ ಆತ್ಮತತ್ವವಿರುತ್ತದೆ. ಚಿಚ್ಛಕ್ತಿಯಿಂದ ಉದಿಸಿದ ಪರಾಶಕ್ತಿಯಲ್ಲಿ ಆಕಾಶತತ್ವವು ಇರುತ್ತದೆ. ಪರಾಶಕ್ತಿಯಿಂದ ಹುಟ್ಟಿದ ಆದಿಶಕ್ತಿಯಲ್ಲಿ ವಾಯುತತ್ವವಿರುತ್ತದೆ. ಆ ಆದಿಶಕ್ತಿಸಂಭೂತವಾದ ಇಚ್ಛಾಶಕ್ತಿಯಲ್ಲಿ ಅಗ್ನಿತತ್ವವಿರುತ್ತದೆ. ಇಚ್ಛಾಶಕ್ತಿಯಿಂದ ಸಂಜನಿಸಿದ ಜ್ಞಾನಶಕ್ತಿಯಲ್ಲಿ ಅಪ್ಪು ತತ್ವವಿರುತ್ತದೆ. ಅಂದರೆ "ಆತ್ಮನಃ ಆಕಾಶಃ, ಆಕಾಶಾತ್ ವಾಯು......" ಆತ್ಮದಿಂದ ಆಕಾಶ, ಆಕಾಶದಿಂದ ವಾಯು. ವಾಯುವಿನಿಂದ ಅಗ್ನಿ, ಅಗ್ನಿಯಿಂದ ಅಪ್, ಅಪ್ಪುವಿನಿಂದ ಪೃಥ್ವಿ ಹುಟ್ಟುತ್ತವೆಯೆಂಬುದು ಇಲ್ಲಿ ಸಿದ್ಧವಾಯಿತು. ಉಪನಿಷತ್ತಿನ ಈ ವಿಚಾರಸರಣಿಯನ್ನು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಒಪ್ಪಿಕೊಂಡು ಅದನ್ನು ಸಾದಾಖ್ಯಗಳ ಮೂಲಕ ವಿವರಿಸುವರು. ಇನ್ನು ಈ ಐದು ತತ್ವಗಳು ಪಂಚೀಕರಣವನ್ನೈದಿ ಪಂಚವಿಂಶತಿ ತತ್ವಗಳಾಗುವ ಬಗೆಯನ್ನು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಕೆಳಗಣ ವಚನದಲ್ಲಿ ಸ್ಪಷ್ಟಪಡಿಸಿರುವರು.

ವಸ್ತುವೆಂದರೆ ಪರಬ್ರಹ್ಮದ ನಾಮ
ಆ ವಸ್ತುವಿನಿಂದ ಆತ್ಮನ ಜನನ,

ಈ ವಿವರಣೆಯಲ್ಲಿ ಆಕಾಶತತ್ವದಿಂದ ಅಂತಃಕರಣಚತುಷ್ಟಯ, ವಾಯು ತತ್ವದಿಂದ ಪಂಚಜ್ಞಾನೇಂದ್ರಿಯಗಳು, ಜಲತತ್ವದಿಂದ ಪಂಚ ತನ್ಮಾತ್ರಗಳು, ಪೃಥ್ವಿತತ್ವದಿಂದ ಪಂಚಕರ್ಮೇಂದ್ರಿಯಗಳು ಹುಟ್ಟಿದ ವಿಷಯವು ಸ್ಪಷ್ಟವಾಗಿದೆ. ಈ ಚತುರ್ವಿಂಶತಿ ತತ್ವಗಳೆಲ್ಲಕ್ಕೂ ಆಶ್ರಯವಾಗಿ ಚೈತನ್ಯವಾಗಿ ಆತ್ಮನೊಬ್ಬನುಂಟು. ಈ ೨೪ ತತ್ವಗಳಿಗೆ ಮೂಲವಾದ ಚಿಚ್ಛಕ್ತಿಯನ್ನು ಪ್ರಕೃತಿ, ಮಾಯೆ ಎಂದು ಕರೆಯುವರು. ಈ 'ಪ್ರಕೃತಿ'ಯನ್ನು ಕೂಡಿಸಿದರೆ ಮೇಗಣ ತತ್ವಗಳ ಸಂಖ್ಯೆ ೨೫ ಆಗುವದು. ಈ ಪ್ರಕೃತಿತತ್ವದ ವ್ಯುತ್ಪತ್ತಿಯೆಂತೆಂಬುವನ್ನು ಹಿಂದೆ ವಿವರಿಸಲಾಗಿದೆ. ಶಕ್ತಿಯು ಸೃಷ್ಟಿಗೆ ಉನ್ಮುಖವಾಗುವ ಪೂರ್ವದಲ್ಲಿ ಪರಬ್ರಹ್ಮದಲ್ಲಿ ನೆಲೆಸಿದ್ದು ಅಲ್ಲಿ ಕ್ರಿಯಾಜ್ಞಾನ ಸಾಮರಸ್ಯವಿರುತ್ತದೆ.

೧. ತೋ. ಸಿ. ವ. ೬೩.

ಅದು ಸೃಷ್ಟಿಗೆ ಉನ್ಮುಖವಾಗಲು ಅಲ್ಲಿ ಕ್ರಿಯಾ ಮತ್ತು ಜ್ಞಾನಗಳನ್ನು ಬೇರ್ಪಡಿಸುವ ಭೇದಬುದ್ಧಿ ಭಾವವು ತಲೆದೋರುತ್ತದೆ. ಈ ಭೇದಬುದ್ಧಿಯೇ ತಮೋಗುಣಶಕ್ತಿಯೆನಿಸುವುದು. ಇದೇ ಜಡವಾದ ಮಾಯೆ. ಈ ಜಡಮಾಯೆಯಲ್ಲಿ ಶಿವನ ವಿಮರ್ಶಾಶಕ್ತಿಯು ಪ್ರವೇಶಿಸಿ ಪ್ರಕೃತಿಯೆನಿಸುವುದು. ಈ ಪ್ರಕೃತಿಯು ಸತ್ವ, ರಜ, ತಮೋಗುಣಯುಕ್ತವಾಗಿರುವುದು. ಈ ಗುಣತ್ರಯದ ವೈಷಮ್ಯದಲ್ಲಿಯೇ ಸೃಷ್ಟಿಯ ವೈವಿಧ್ಯವು ತಲೆದೋರುತ್ತದೆ. ಈ ಪರಶಿವನ ಅಂಶವಾದ ಆತ್ಮವು ಮಾಯಾಶಕ್ತಿಯನ್ನು ಪ್ರವೇಶಿಸಿ ಪುರುಷತತ್ವವೆನಿಸಿಕೊಳ್ಳುವುದು. ಈ ಪುರುಷನಿಗೆ (ಕಂಚುಕಿಗೆ) ಕಂಚುಕ ರೂಪವಾಗಿ ಕಾಲ, ನಿಯತಿ, ಕಲಾ, ರಾಗ, ವಿದ್ಯಾ ಎಂಬ ಪಂಚತತ್ವಗಳು ಜನಿಸುತ್ತವೆ. ಶುದ್ಧ ಸ್ಥಿತಿಯಲ್ಲಿ ಆತ್ಮನು ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ ಎಂಬ ಪಂಚಲಕ್ಷಣಗಳುಳ್ಳವನಾಗಿರುವನು. ಪರಶಿವಕಲ್ಪದಂತೆ ಆತನು ಇಚ್ಛಾ, ಕ್ರಿಯಾ, ಜ್ಞಾನಶಕ್ತಿ ಸಂಕೋಚರೂಪವಾದ ಆಣವ, ಕಾರ್ಮಿಕ, ಮಾಯಾ ಮಲತ್ರಯ ಬಂಧನಕ್ಕೊಳಗಾಗುವನು. ಆಣವ ಮಲದಿಂದ ಅಪರಿಪೂರ್ಣತ್ವ, ಕಾರ್ಮಿಕ ಮಲದಿಂದ ಅಲ್ಪ ಕರ್ತೃತ್ವ, ಮಾಯಾ ಮಲದಿಂದ ಅಲ್ಪಜ್ಞತ್ವ ಪ್ರಾಪ್ತವಾಗುತ್ತವೆ. ಮಲತ್ರಯಬಂಧಿತನಾದ ಆತ್ಮನ ಸರ್ವಕರ್ತೃತ್ವಶಕ್ತಿ ಅತ್ಯಂತ ಸಂಕೋಚಸ್ಥಿತಿಯನ್ನು ಹೊಂದುವುದೇ ಕಲಾತತ್ವ. ಅಲ್ಪಜ್ಞಾನತತ್ವದ ಸ್ಥಿತಿಯೇ ವಿದ್ಯಾತತ್ವ. ಅಪರಿಪೂರ್ಣತ್ವ ರೂಪವೇ ವಿಷಯಾಸಕ್ತಿಯನ್ನುಂಟುಮಾಡುವ ರಾಗತತ್ವ. ಅನಿತ್ಯತ್ವ ರೂಪವೇ ಭೂತ, ಭವಿಷತ್, ವರ್ತಮಾನದ ಕಲ್ಪನೆಯುಳ್ಳ ಕಾಲತತ್ವ. ಅವ್ಯಾಪಕತ್ವರೂಪವೇ ನಿಯಮ ಹೇತುಭೂತವಾದ ನಿಯತಿ ತತ್ವ. ಇವು ಪಂಚ ಕಂಚುಗಳು. ಈ ಪಂಚ ಕಂಚುಕದ ಬಂಧನಕ್ಕೊಳಗಾದ ಪುರುಷನು ಕಂಚುಕಿಯು. ಕಂಚುಕಿ, ಪಂಚ ಕಂಚುಕಗಳು, ಇಪ್ಪತ್ತೈದು ತತ್ವಗಳು ಒಟ್ಟುಗೂಡಿ ೩೧ ಅಶುದ್ಧ ತತ್ವಗಳಾಗುತ್ತವೆ.

ಇನ್ನು ಶುದ್ಧತತ್ವಗಳ ವಿವರಣೆ ಹೀಗೆ: ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಗಳು ಒಂದರಿಂದೊಂದು ಹುಟ್ಟಿದ ಬಗೆಯನ್ನು ಹಿಂದೆ ವಿವರಿಸಲಾಗಿದೆ. ಪರಶಿವಬ್ರಹ್ಮವು ಜ್ಞಾನಶಕ್ತಿಯಲ್ಲಿ ಬೆರೆತು ನಾನು ಸರ್ವಜ್ಞನು ಎಂಬ ಅಭಿಮಾನವನ್ನು ಪಡೆದು ಶಿವತತ್ವವೆನಿಸಿಕೊಳ್ಳುವುದು. ಈ ಶಿವತತ್ವವು ಸೃಷ್ಟಿನಿರ್ಮಾಣಕ್ಕೆ ನಿಮಿತ್ತ ಕಾರಣವಾಗುವುದು. ಅದೇ ಪರಶಿವಬ್ರಹ್ಮವು ಕ್ರಿಯಾಶಕ್ತಿಯಲ್ಲಿ ಕೂಡಿ ನಾನು ಸರ್ವಕರ್ತೃವೆಂಬ ಅಭಿಮಾನವನ್ನು ಪಡೆದು ಶಕ್ತಿತತ್ವವೆನಿಸುವುದು. ಈ ಶಕ್ತಿತತ್ವವು ಸೃಷ್ಟಿ ನಿರ್ಮಾಣಕ್ಕೆ ಉಪಾದಾನ ಕಾರಣವಾಗುವುದು. ಶಕ್ತಿತತ್ವವು ಜ್ಞಾನಶಕ್ತಿಯೊಡನೆ ಬೆರೆತು 'ಅಹಮಿದಂ' ನಾನು ಈ ಪ್ರಪಂಚವು ಎಂಬ ಅಭಿಮಾನವನ್ನು ಪಡೆದು ಸದಾಶಿವತತ್ವವೆನಿಸುವುದು. ಅದೇ ಶಕ್ತಿ ತತ್ವವು ಕ್ರಿಯಾ ಶಕ್ತಿಯಲ್ಲಿ ಬೆರಸಿ 'ಅಹಮಿದಂ' ಅಭಿಮಾನವನ್ನು ಪಡೆದು ಈಶ್ವರ-ತತ್ವವೆನಿಸಿಕೊಳ್ಳುವುದು. ಆ ಶಕ್ತಿತತ್ವವೇ ನಾನು ಎಂಬ ಅಹಂಕಾರಕ್ಕೂ ಇದು ಎಂಬ ಪ್ರಪಂಚಕ್ಕೂ ಅಭೇದ ಜ್ಞಾನವನ್ನು ಕಲ್ಪಿಸಿ ಶುದ್ಧ ವಿದ್ಯಾತತ್ವವೆನಿಸುತ್ತದೆ.

ಶುದ್ಧ ತತ್ವಗಳು: ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ.

ಅಶುದ್ಧ ತತ್ವಗಳು: ಪ್ರಕೃತಿ, ಅಂತಃಕರಣಚತುಷ್ಟಯ, ವಾಯುಪಂಚಕ, ಪಂಚ ಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಪಂಚತನ್ಮಾತ್ರಗಳು. ವಾಯುಪಂಚಕಕ್ಕೆ ಪ್ರತಿಯಾಗಿ ಕೆಲವರು ಪಂಚಭೂತಗಳನ್ನು ಸೇರಿಸುವರು. ಕಾಲ, ನಿಯತಿ, ಕಲಾ, ರಾಗ, ವಿದ್ಯಾ, ಪುರುಷ.

## ಒಟ್ಟು ತತ್ವಗಳು ಮೂವತ್ತಾರು

ವೀರಶೈವವು ಮೂವತ್ತಾರು ತತ್ವಗಳನ್ನು ಒಪ್ಪಿಕೊಂಡಿದೆಯೆಂಬುದು ಸರ್ವ ಶ್ರುತ.[೧] ಆದರೆ ಸಿದ್ಧಲಿಂಗ ಶಿವಯೋಗಿಗಳು ಸ್ಪಷ್ಟವಾಗಿ ಹೇಳುವದು ೨೫ ತತ್ವಗಳನ್ನು ಮಾತ್ರ. ಈ ೨೫ ತತ್ವಗಳ ವಿವರಣೆಯಲ್ಲಿ ಚನ್ನಬಸವೇಶ್ವರ, ಪ್ರಭುದೇವರು, ತೋಂಟದ ಸಿದ್ಧಲಿಂಗೇಶ್ವರ ವೊದಲಾದವರು ಒಂದು ಅಭಿಪ್ರಾಯವನ್ನು ತಳೆದಿದ್ದರೆ ಮಹಾದೇವಿ ಯಕ್ಕನವರು ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಪಂಚಶಕ್ತಿಗಳಿಂದ ಪಂಚ ಕರಣಗಳು, ಪಂಚಕರಣಗಳಿಂದ ಪಂಚತನ್ಮಾತ್ರಗಳು, ಪಂಚತನ್ಮಾತ್ರಗಳಿಂದ ಪಂಚಭೂತ ಗಳು ಉತ್ಪತ್ತಿಯಾದುವೆಂದು ಅಕ್ಕನವರ ಅಭಿಪ್ರಾಯ. ಇಲ್ಲಿಗೆ ಪಂಚಸಾದಾಖ್ಯ, ಪಂಚ ಮೂರ್ತಿ ಲಿಂಗಸ್ಥಲ, ಆ ಪಂಚಭೂತಗಳೇ ಪಂಚೀಕರಣವನೈದಿ, ಒಂದೊಂದು ತತ್ವಂಗಳು ಐದು ತತ್ವಗಳಲ್ಲಿ ಕೂಡಿ ೨೫ ತತ್ವಗಳಾದುವು.[೨] ಮಹಾದೇವಿಯಕ್ಕನವರು ಸಾದಾಖ್ಯ ಮತ್ತು ಪಂಚೀಕರಣಗಳ ಮಾತೆತ್ತಿದ್ದರೂ ವಿವರಣೆಯಲ್ಲಿ ತೋಂಟದ ಸಿದ್ಧೇಶ್ವರರ ಅಭಿಪ್ರಾಯಕ್ಕೂ ಅಕ್ಕನವರ ಅಭಿಪ್ರಾಯಕ್ಕೂ ವ್ಯತ್ಯಾಸವಿದ್ದುದು ಸುಸ್ಪಷ್ಟ. ಅಕ್ಕ ನವರು ಈ ದೃಷ್ಟಿಯಲ್ಲಿ ಸಾಂಖ್ಯಾಭಿಮತಕ್ಕೆ ಹೆಚ್ಚು ಸಮೀಪದಲ್ಲಿದ್ದರೂ ಈ ಮೂರೂ ಅಭಿಪ್ರಾಯಗಳಲ್ಲಿಯೂ ಭಿನ್ನತೆ ಇದೆ.

ಸಾಂಖ್ಯರು ೨೫ ತತ್ವಗಳನ್ನು ವಿವರಿಸುವ ಕ್ರಮ ಹೀಗೆ:

ಪ್ರಕೃತಿ ಬುದ್ಧಿ ಅಹಂಕಾರ




೧. ವೀರಶೈವಾನಂದ ಚಂದ್ರಿಕೆ
ವೀರಶೈವ ತತ್ವ ಪ್ರಕಾಶಿಕೆ
ವೀರಶೈವ ರತ್ನ
Hand book of Veershaivism

೨. ಮಹಾದೇವಿಯಕ್ಕನವರ ಸೃಷ್ಟಿಯ ವಚನ.

ಈ ವಿವರಣೆಯಂತೆ ಪ್ರಕೃತಿ, ಬುದ್ಧಿ, ಅಹಂಕಾರ, ಪಂಚಜ್ಞಾನೇಂದ್ರಿಯಗಳು ಪಂಚ ಕರ್ಮೇಂದ್ರಿಯಗಳು, ಮನಸ್ಸು, ಪಂಚತನ್ಮಾತ್ರಗಳು, ಪಂಚಭೂತಗಳು ಮತ್ತು ಜೀವಾತ್ಮ ಇವು ಸಾಂಖ್ಯರ ೨೫ ತತ್ವಗಳಾಗುತ್ತವೆ. ಇದರಿಂದ ವೀರಶೈವದ ೨೫ ತತ್ವಗಳು ಸಂಖ್ಯಾ ದೃಷ್ಟಿಯಿಂದ ಸಾಂಖ್ಯಕ್ಕೆ ಹೋಲುವಂತೆ ಇದ್ದರೂ ಅವುಗಳ ನಿಷ್ಪತ್ತಿ ಹಾಗೂ ಯೋಜನೆ ಬೇರೆ ತೆರನಾಗಿದೆಯೆಂಬುದು ಸಿದ್ಧಲಿಂಗ ಶಿವಯೋಗಿಗಳ ವಚನದಿಂದ ಸ್ಪಷ್ಟವಾಗುತ್ತದೆ.

ಸಿದ್ಧಲಿಂಗ ಶಿವಯೋಗಿಗಳು ಆತ್ಮನಿಂದ, ಆಕಾಶ, ಆಕಾಶದಿಂದ ವಾಯು ಮೊದಲಾದುವು ಜನಿಸಿದುವೆಂದು ಹೇಳುವಲ್ಲಿ ತೈತ್ತಿರೀಯೋಪನಿಷತ್ತಿನ ಅಭಿಪ್ರಾಯ ಕಂಡು ಬಂದರೂ ಆ ವಿವರಣೆಯಲ್ಲಿ ಕಂಡುಬರುವ ಸಾದಾಖ್ಯದ ಕಲ್ಪನೆ ಉಪನಿಷತ್ತುಗಳಲ್ಲಾಗಲೀ ಇತರ ಶೈವದರ್ಶನಗಳಲ್ಲಾಗಲೀ ಅಥವಾ ಬೇರೆ ಯಾವ ದರ್ಶನಗಳಲ್ಲಾಗಲೀ ಕಂಡುಬರುವುದಿಲ್ಲ. ೨೫ ತತ್ವಗಳ ಜೊತೆಗೆ ಮತ್ತೆ ೧೧ ತತ್ವಗಳನ್ನು ಅಂಗೀಕರಿಸಿ ವೀರಶೈವವು ೩೬ ತತ್ವಗಳನ್ನು ಒಪ್ಪಿದೆ. ಪರಶಿವತತ್ವದಿಂದ ಸೃಷ್ಟಿನಿರ್ಮಾಣವಾದ ಲೀಲೆಯನ್ನು ಸಿದ್ಧಲಿಂಗ ಶಿವಯೋಗಿಗಳು ಇನ್ನೊಂದು ಬಗೆಯಿಂದ ಹೀಗೆ ವರ್ಣಿಸಿರುವರು.[೧]

> **ಮಹಾಲಿಂಗಮಧ್ಯದಲ್ಲಿ ಪಂಚಮುಖ, ದಶಭುಜ, ದಶ-**
> **ಪಂಚನೇತ್ರಗಳಿಂದ ಒಪ್ಪುತ್ತಿರುವ ಸದಾಶಿವಮೂರ್ತಿ ಉದಯವಾದನು.**
> **ಆತನ ಈಶಾನಮುಖದಲ್ಲಿ ಆಕಾಶ, ತತ್ಪುರುಷಮುಖದಲ್ಲಿ ವಾಯು,**
> **ಅಘೋರ ಮುಖದಲ್ಲಿ ಅಗ್ನಿ, ವಾಮದೇವಮುಖದಲ್ಲಿ ಅಪ್ಪು,**
> **ಮನಸ್ಸಿನಲ್ಲಿ ಚಂದ್ರ, ಚಕ್ಷುವಿನಲ್ಲಿ ಸೂರ್ಯ, ಗೌಪ್ಯಮುಖದಲ್ಲಿ ಆತ್ಮ**
> **ಜನಿಸಿದುವು. ಈ ಅಷ್ಟಮೂರ್ತಿಯಿಂದ ಸಮಸ್ತ ಜಗತ್ತಾಯಿತ್ತು.**
> **ಆ ಜಗತ್ತುಗಳು–ಚತುರ್ದಶ ಭುವನಗಳು, ಸಪ್ತಸಮುದ್ರಗಳು,**
> **ಸಪ್ತದ್ವೀಪಗಳು, ಸಪ್ತ ಕುಲಪರ್ವತಗಳು ಸಪ್ತಗ್ರಹರಾಶಿ**
> **ತಾರಾಪಥಗಳು ಇವೆಲ್ಲವನು ಗರ್ಭೀಕರಿಸಿಕೊಂಡುದೇ ಬ್ರಹ್ಮಾಂಡ.**

ಇದು ಜಗತ್ತಿನ ವೈವಿಧ್ಯದ ಕಲ್ಪನೆ. ಈ ಸೃಷ್ಟಿಯು ಅತ್ಯಂತ ಗೂಢ ಚೈತನ್ಯಯುಕ್ತವಾದ ಜಡವು. ಇನ್ನು ಚೈತನ್ಯವು ಅತ್ಯಂತ ಪ್ರಕಟಸ್ವರೂಪದಲ್ಲಿರುವ ಜೀವನ ವೈವಿಧ್ಯ. ಹೀಗೆ ಆತನ ವೈವಿಧ್ಯ ಉಪಾಧಿ ಮೂಲಕವಾಗಿದೆ. ಉಪಾಧಿ ಎರಡು ಬಗೆಯಾಗಿದೆ. ಒಂದು ಶುದ್ಧೋಪಾಧಿ. ಅಂದರೆ ಮೋಹಕಾರಿಯಲ್ಲದ ಪರಾಮಾಯ. ಎರಡನೆಯದು ಅಶುದ್ಧೋಪಾಧಿ. ಅಂದರೆ ಮೋಹಕಾರಿಯಾದ ಅವಿದ್ಯೆ. ಈ ಅವಿದ್ಯೆಯ ಶಕ್ತಿಭೇದದ ಮೂಲಕ ಜೀವನು ಅನೇಕ ರೂಪ ತಳೆಯುವನು; "ಮಾಯಾಶಕ್ತಿವಶಾದೀಶೋ ನಾನಾ ರೂಪಧರಃ" ಎಂದು ಸಿದ್ಧಾಂತ ಶಿಖಾಮಣಿ ಹೇಳುತ್ತದೆ. ಅವಿದ್ಯೆಯಿಂದ ಮೋಹಿತನಾದ ಜೀವನು ಬ್ರಹ್ಮೈಕ್ಯಜ್ಞಾನವರ್ಜಿತನಾಗಿ, ಕರ್ಮಾನುಸಾರವಾಗಿ ದೇವ, ತಿರ್ಯಕ್, ಮನುಷ್ಯ ಮೊದಲಾದ ನಾನಾ ಯೋನಿವಿಭೇದದಿಂದ ಚಕ್ರನೇಮಿ ಕ್ರಮದಲ್ಲಿ ತಿರುಗುತ್ತಿರುವನು. ಇದೇ ಜೀವಾತ್ಮಸಂಬಂಧ.

---

೧. ತೋ. ಶಿ. ವ. ೬೭.

## ಅವಿಕೃತಪರಿಣಾಮವಾದ

ಶಕ್ತಿವಿಶಿಷ್ಟ ಪರಶಿವನಿಂದ ಜೀವ, ಜಗತ್ತುಗಳು ಉತ್ಪತ್ತಿಯಾದ ಬಗೆಯನ್ನು ಕಂಡುಕೊಳ್ಳಲಾಯಿತು. ಪರಬ್ರಹ್ಮದಿಂದ ಸೃಷ್ಟಿ ನಿರ್ಮಾಣವಾದ ಬಗೆಯನ್ನು ವಿವಿಧ ದರ್ಶನಗಳು ಬೇರೆ ಬೇರೆಯಾಗಿ ವಿವರಿಸುತ್ತವೆ. ನ್ಯಾಯ, ವೈಶೇಷಿಕರು ಪರಮಾಣು ಗಳಿಂದ ಸೃಷ್ಟಿಯ ಉತ್ಪತ್ತಿಯಾಯಿತೆಂದು ಹೇಳುವರು. ಪರಮಾತ್ಮನು ಆತ್ಮರ ಕರ್ಮಾನು ಸಾರವಾಗಿ ಸೃಷ್ಟಿಯನ್ನು ಹುಟ್ಟಿಸುವನು. ಇದಕ್ಕೆ 'ಆರಂಭವಾದ' ಎಂದು ಕರೆಯುವರು. ಸಾಂಖ್ಯ, ಯೋಗದಾರ್ಶನಿಕರು ಈ ಸೃಷ್ಟಿಯು ಪ್ರಕೃತಿಯ ಪರಿಣಾಮವೆಂದು ಹೇಳು ವರು. ಪ್ರಕೃತಿ ಮೂಲಪ್ರಕೃತಿಯಾಗಿ ಉಳಿದು, ಅದರಂಶದಲ್ಲಿ ಪರಿಣಾಮ ಹೊಂದಿ ಮಹದಾದಿ ತತ್ವಗಳಾಗುತ್ತವೆ. ಇಲ್ಲಿ ಕಾರಣ ಪ್ರಕೃತಿ; ಕಾರ್ಯ ಮಹದಾದಿ ತತ್ವಗಳು. ಅಂದರೆ ಸೃಷ್ಟಿ. ಈ ಕಾರ್ಯ-ಕಾರಣಗಳಲ್ಲಿ ಸತ್ತಾತ್ಮಕವಾದ ಸಮಾನತೆ ಇರುತ್ತದೆ. ಅಂದರೆ ಕಾರಣಸತ್ತೆ ಮತ್ತು ಕಾರ್ಯಸತ್ತೆ ಇವೆರಡೂ ಸಮಾನವಾಗಿಯೇ ಇರುತ್ತವೆ. ಅವೆರಡರಲ್ಲಿರುವುದೂ ವ್ಯಾವಹಾರಿಕ ಸತ್ತೆ. ಈ ಪರಿಣಾಮವಾದಕ್ಕೆ ವ್ಯತಿರಿಕ್ತವಾಗಿ ಶಾಂಕರಾದ್ವೈತಿಗಳು ವಿವರ್ತವಾದವನ್ನು ಎತ್ತಿಹಿಡಿದರು. ಈ ಸೃಷ್ಟಿ ಪರಬ್ರಹ್ಮದ ಪರಿಣಾಮವಲ್ಲ; ವಿವರ್ತ. ಇಲ್ಲಿ ಕಾರಣರೂಪವಾದ ಬ್ರಹ್ಮ ಮತ್ತು ಕಾರ್ಯರೂಪವಾದ ಸೃಷ್ಟಿ ಇವೆರಡರ ನಡುವೆ ವಿಷಮಸತ್ತೆ ಇರುತ್ತದೆ. ಅದ್ವೈತಿಗಳು ಈ ಸೃಷ್ಟಿ ಕೇವಲ 'ವ್ಯಾವಹಾರಿಕಸತ್ತೆ'ಯೆಂದೂ ಅಭಿಪ್ರಾಯಪಡುವರು. ವ್ಯಾವಹಾರಿಕ ಪ್ರಪಂಚದ ಲ್ಲಿಯೂ ವ್ಯಾವಹಾರಿಕಸತ್ತೆಯಲ್ಲದೆ ಪ್ರಾತಿಭಾಸಿಕಸತ್ತೆ ಎಂಬುದೂ ಒಂದುಂಟು. ಹಗ್ಗ ವನ್ನು ಹಾವೆಂದು ಭಾವಿಸಿದಲ್ಲಿ ಉಂಟಾಗುವ ಭ್ರಾಂತಿಜ್ಞಾನ, ಪ್ರಾತಿಭಾಸಿಕಸತ್ತೆಯದು. ವ್ಯಾವಹಾರಿಕಸತ್ತಾಜ್ಞಾನವಾದೊಡನೆಯೇ ಪ್ರಾತಿಭಾಸಿಕಸತ್ತೆ ಇಲ್ಲದಂತಾಗುವುದು. ಈ ವ್ಯಾವಹಾರಿಕಸತ್ತೆಯೂ ಪಾರಮಾರ್ಥಿಕ ಜ್ಞಾನೋದಯದಲ್ಲಿ ಇಲ್ಲದಂತಾಗುವುದು. ಆಗ 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ಸಿದ್ಧಾಂತ ನೆಲೆಗೊಳ್ಳುತ್ತದೆ. ಸತ್ತಾವೈಷಮ್ಯ ವೆಂದರೆ ಇದೇ. ಪಾರಮಾರ್ಥಿಕಸತ್ತೆ ಇರುವಲ್ಲಿ ವ್ಯಾವಹಾರಿಕಸತ್ತೆಗೆ ಸ್ಥಾನವಿಲ್ಲ. ಇದೇ ವಿವರ್ತವಾದದ ರಹಸ್ಯ. ಈ ದೃಷ್ಟಿಯಲ್ಲಿ ವೀರಶೈವವು ಪರಿಣಾಮವಾದವನ್ನೇ ಎತ್ತಿ ಹಿಡಿಯುತ್ತದೆ. ಪರಿಣಾಮವಾದದಲ್ಲಿ ವಿಕೃತ ಪರಿಣಾಮವಾದ ಮತ್ತು ಅವಿಕೃತ ಪರಿಣಾಮವಾದ ಎಂದು ಎರಡು ಭೇದಗಳುಂಟು. ಸೇಶ್ವರ ಮತ್ತು ನಿರೀಶ್ವರ ಸಾಂಖ್ಯರು ಒಪ್ಪಿಕೊಂಡಿರುವುದು ವಿಕೃತಪರಿಣಾಮವಾದವನ್ನು. ಹಾಲು ಮತ್ತು ಮೊಸರು ಇವೆರಡರ ನಡುವಿನ ಸಂಬಂಧ ಈ ವಿಕೃತಪರಿಣಾಮಕ್ಕೆ ಉತ್ತಮ ನಿದರ್ಶನ. ಹಾಲಿನ ಪರಿಣಾಮ ಮೊಸರು; ಅವೆರಡಕ್ಕೂ ವ್ಯಾವಹಾರಿಕ ಸತ್ತಾಸಮಾನತೆ ಇದೆ. ಅಲ್ಲಿ ಕಾರ್ಯಕಾರಣ ಸಂಬಂಧವಿದ್ದರೂ ಕಾರ್ಯ ಪುನಃ ಕಾರಣರೂಪವನ್ನು ತಳೆಯಲಾರದು. ಅಂದರೆ. ಮೊಸರು ಹಾಲಾಗಲಾರದು. ಪ್ರಕೃತಿಯಲ್ಲಿ ಕಾರ್ಯರೂಪವಾಗಿ ಪರಿಣಮಿಸಿದ ವಿವಿಧ ತತ್ವಗಳು ಪುನಃ ಪ್ರಕೃತಿರೂಪವನ್ನು ತಳೆಯಲಾರವು. ಆದರೆ ಅವಿಕೃತ

ಪರಿಣಾಮವಾದದ ರೀತಿ ಬೇರೆ. ಸುವರ್ಣಕುಂಡಲ ವಿಧಾನದಲ್ಲಿ ಕುಂಡಲ ಸುವರ್ಣದ ಕಾರ್ಯ; ಆದರೆ, ಅವೆರಡರಲ್ಲಿಯೂ ಸುವರ್ಣಸತ್ತೆ ಉಂಟು. ಕುಂಡಲವು ಮರಳಿ ಸುವರ್ಣವಾಗಬಲ್ಲುದು; ಸುವರ್ಣವು ಕುಂಡಲವಾಗಬಲ್ಲುದು. ಸುವರ್ಣತ್ವಕ್ಕೆ ಭಂಗ ವಿಲ್ಲದ ಈ ನ್ಯಾಯವು ಅವಿಕೃತವೆನಿಸಿದೆ. ಮೊಸರು ಹಾಲಿನ ವಿಕಾರ. ಆದರೆ, ಕುಂಡಲ ಸುವರ್ಣದ ವಿಕಾರವಲ್ಲ. ಅದರ ಅವಿಕೃತರೂಪ. ವೀರಶೈವದಲ್ಲಿ ಚರಾಚರಸೃಷ್ಟಿಯೆಲ್ಲ ಪರಶಿವನ ಅವಿಕೃತರೂಪ. ಕೂರ್ಮವು ಲೀಲೆಯಲ್ಲಿ ತನ್ನ ಅವಯವಗಳನ್ನು ಹೊರ ಚಾಚಿ ಪುನಃ ಅವುಗಳನ್ನು ಒಳಗೆಳೆದುಕೊಂಡಂತೆ ಶಿವಸೃಷ್ಟಿಯ ಸಂಬಂಧ. ಶಿವನಲ್ಲಿ ಅವಿನಾಭಾವದಿಂದಿದ್ದ ಶಕ್ತಿ, ಸಂಕ್ಷೋಭೆಯಿಂದ ಸೃಷ್ಟಿಯಾಗಿ ವ್ಯೈವೆತ್ತು ಪುನಃ ಶಿವ ನಲ್ಲಿಯೇ ಶಕ್ತಿರೂಪವನ್ನು ತಳೆಯುತ್ತದೆ. ಮಯೂರಾಂಡರಸನ್ಯಾಯವು ಇದನ್ನು ಸರಿಯಾಗಿ ವಿವರಿಸಬಲ್ಲುದು. ನವಿಲಿನ ತತ್ತಿಯೊಳಗಿದ್ದ ರಸದಲ್ಲಿ ಮುಂದೆ ಆ ನವಿಲಿನಲ್ಲಿ ತೋರುವ ಅಂಗಾಂಗಗಳೆಲ್ಲವೂ ಹುದುಗಿಕೊಂಡಿರುವಂತೆ ಚರಾಚರಸೃಷ್ಟಿಯೆಲ್ಲ ಶಿವಾಭಿನ್ನ ವಾದ ಶಕ್ತಿಯಲ್ಲಿ ಸಾಮರಸ್ಯಹೊಂದಿರುತ್ತದೆ. ಇದೇ ಅವಿಕೃತ ಪರಿಣಾಮ. ವೀರಶೈವವು ತನ್ನ ಸಿದ್ಧಾಂತವನ್ನು ಈ ಅವಿಕೃತ ಪರಿಣಾಮವಾದದ ಆಧಾರದಿಂದ ಸ್ಪಷ್ಟಪಡಿಸಿತು.

## ಶಿವಾದ್ವೈತ

ಶಿವಜೀವರ ಸಂಬಂಧವನ್ನು ವೀರಶೈವವು ಭೇದಾಭೇದವೆಂದು ವಿವರಿಸುತ್ತದೆ. ಮಹಾಲಿಂಗದ ಕಿಡಿಗಳೇ ಆತ್ಮಗಳೆಂದು ಹಿಂದೆ ಹೇಳಲಾಗಿದೆ. ಮಹಾಲಿಂಗ ಮತ್ತು ಈ ಆತ್ಮ ಇವುಗಳ ಸಂಬಂಧವೇನು? ಅವೆರಡರ ನಡುವೆ ಆತ್ಯಂತಿಕ ಭೇದವಿಲ್ಲ; ಮತ್ತು ಆತ್ಯಂತಿಕ ಅಭೇದವೂ ಇಲ್ಲ. ಅಗ್ನಿ ಮತ್ತು ಜಲಗಳ ನಡುವೆ ಆತ್ಯಂತಿಕ ಭೇದವಿರುತ್ತದೆ. ಅಗ್ನಿಯಿಂದಾಗುವ ಕ್ರಿಯೆ ಜಲದಿಂದಾಗುವುದಿಲ್ಲ. ಆದರೆ, ಅಗ್ನಿ ಮತ್ತು ಕಿಡಿಗಳ ನಡುವಿನ ಸಂಬಂಧ ಹೀಗಲ್ಲ. ಸಣ್ಣ ಅರಳೆಯ ಕಿಡಿ ಅರಳೆಯ ರಾಸಿಯಲ್ಲಿ ಸೇರಿ ಅದ್ಭುತವಾದ ಜ್ವಲನ ಕ್ರಿಯೆಯನ್ನು ಮಾಡುವುದು ಎಲ್ಲರ ಅನುಭವಕ್ಕೆ ಬಂದ ಮಾತು. ಅವೆರಡರ ನಡುವೆ ಅಭೇದವಿದ್ದುದರಿಂದಲೇ ಈ ಕಾರ್ಯ ಸಾಧ್ಯವಾಯಿತಂ. ಆದರೆ ಇದು ಅಭೇದವಲ್ಲ. ದಹನ ಪಾಕಾದಿ ಕ್ರಿಯೆಗಳು ಅಗ್ನಿಯಿಂದ ನಡೆದಷ್ಟು ಕಿಡಿಯಿಂದ ನಡೆಯು ವುದಿಲ್ಲ. ಇದನ್ನೇ ವೀರಶೈವವು ಭೇದಾಭೇದವೆಂದು ಕರೆಯಿತು. 'ಸರ್ಪಕುಂಡಲಿ ನ್ಯಾಯ'ದಲ್ಲಿ ಕುಂಡಲಾಕಾರವಾಗಿದ್ದ ಸರ್ಪವು ಮುಂದೆ ಸಾಗಿದಾಗ ಅವೆರಡರ ನಡುವೆ ಭೇದಾಭೇದವೇ ಕಂಡುಬರುತ್ತದೆ. ಇದನ್ನೇ ಕೆಲವರು ದ್ವೈತಾದ್ವೈತವೆಂದು ಕರೆದರು. ಆದರೆ, ತೋಂಟದ ಸಿದ್ಧಲಿಂಗ ಶಿವಯೋಗಿಗಳು ಈ ಭೇದಾಭೇದ ದ್ವೈತಾದ್ವೈತಗಳನ್ನು ಒಪ್ಪಿಕೊಳ್ಳದೆ ಶಿವಾದ್ವೈತವನ್ನೇ ಎತ್ತಿ ಹಿಡಿದರು.

**'ಈ ಷಟ್‌ಸ್ಥಲಮಾರ್ಗವು ದ್ವೈತಾದ್ವೈತದ ಪರಿವರ್ತನೆಯುಲ್ಲ;**
**ಅದೇನು ಕಾರಣಣವೆಂದಡೆ,**

**ಇದು ಶಿವಾದ್ವೈತವಮಾರ್ಗವಾದ ಕಾರಣ'**[೧]
**'ಈ ಷಡುಸ್ಥಲವಮಾರ್ಗವನು ದ್ವೈತಾದ್ವೈತದೊಳಗೆ**
**ಕೂಡಲಿಕ್ಕಿ ನುಡಿಯಲಾಗದು.'**[೨]

ವೀರಶೈವ ಸಿದ್ಧಾಂತವನ್ನು ಸಿದ್ಧಲಿಂಗ ಶಿವಯೋಗಿಗಳು ಶಿವಾದ್ವೈತವೆಂದು ಕರೆದುದು ಔಚಿತ್ಯಪೂರ್ಣವೇ ಆಗಿದೆ. ಅನುಭಾವಮಾರ್ಗಪ್ರಧಾನವಾದ ಈ ಸಿದ್ಧಾಂತವನ್ನು ದ್ವೈತಾದ್ವೈತಗಳ ಸಾಲಿನಲ್ಲಿ ನಿಲ್ಲಿಸಕೂಡದೆಂಬುದೇ ಶಿವಯೋಗಿಗಳ ಮತ. ಅಂತೆಯೇ ಅವರ ಷಟ್‌ಸ್ಥಲಜ್ಞಾನಸಾರಾಮೃತ ವಚನಗಳಲ್ಲಿ ಎಲ್ಲಿಯೂ ದ್ವೈತಾದ್ವೈತ, ಭೇದಾ ಭೇದ, ಶಕ್ತಿವಿಶಿಷ್ಟಾದ್ವೈತ ಎಂಬ ಹೆಸರುಗಳಿಂದ ವೀರಶೈವಸಿದ್ಧಾಂತವನ್ನು ಕರೆದಿರುವು ದಿಲ್ಲ.

## ಲಿಂಗಾಂಗಸಾಮರಸ್ಯ

ಪರಬ್ರಹ್ಮವು ಲಿಂಗವೆಂದೂ ಅಂಗವೆಂದೂ ಎರಡಾಯಿತ್ತು. ಅಂಗವೆಂದರೆ ಜೀವಾತ್ಮ, ಲಿಂಗವೆಂದರೆ ಪರಬ್ರಹ್ಮವೇ. ಲಿಂಗಗತವಾದ ಶಕ್ತಿ ಅಂಗದಲ್ಲಿ ಭಕ್ತಿಯಾಗಿ ನೆಲೆನಿಂತಿತು. ಈ ಶಕ್ತಿ-ಭಕ್ತಿಗಳು ಸಾಮರಸ್ಯ ಹೊಂದುವುದೇ ಲಿಂಗಾಂಗಸಾಮರಸ್ಯ. ಇದೇ ವೀರಶೈವದ ಮೋಕ್ಷ. ಈ ಮೋಕ್ಷಸಾಧನೆಗೆ ಷಟ್‌ಸ್ಥಲವೆಂಬ ಮಾರ್ಗವನ್ನು ವೀರಶೈವವು ಹಮ್ಮಿಕೊಂಡಿದೆ. ಅದು ಜೀವಾತ್ಮನು ಪರಮಾತ್ಮನಾಗುವ ಸಾಧನ ಮಾರ್ಗ. ಶುದ್ಧಾತ್ಮನಾದ ಅಂಗನಲ್ಲಿ ಪರಮಾತ್ಮನ ಶಕ್ತಿಯೇ ಭಕ್ತಿಭಾವದಲ್ಲಿರುವುದು. ಆ ಭಕ್ತಿಯೇ ವೀರಶೈವದ ಮುಕ್ತಿ. ಅಂಗನು ಲಿಂಗಮುಖಕ್ಕೆ ಅರ್ಪಣ ಮಾಡುವುದೇ ಭಕ್ತಿ. ಆ ಭಕ್ತಿಯೆಂಬುದು ಎರಡಿಲ್ಲದ ಕೂಟ. ಆ ಎರಡಿಲ್ಲದ ಕೂಟವೇ ಮುಕ್ತಿ. ಆ ಮುಕ್ತಿಸ್ವರೂಪವೇ ಮಹಾಘನಲಿಂಗ. ಮಹಾಘನಲಿಂಗವೇ ಅಖಂಡ ಪರಿಪೂರ್ಣ ಚೈತನ್ಯಚಿತ್‌ಸ್ವರೂಪ. ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ಥಿತಿಯೇ ಆ ಮುಕ್ತಿ. ಅಂಗವು ಸ್ವಸ್ವರೂಪವಾದ ಲಿಂಗವನ್ನು ಆರಾಧಿಸಿ, ಆರಾಧನೆಯೊಳಗಿನ ಭಕ್ತಿಯೇ ಬೆಳೆದು ಲಿಂಗ ವಾಗಿ, ಕೊನೆಗೆ ಅದೇ ಸಚ್ಚಿದಾನಂದ ಸ್ವರೂಪವನ್ನು ಪಡೆಯುತ್ತದೆ. ಎರಡಿಲ್ಲದ ಕೂಟದ ಈ ಭಕ್ತಿ ವಿಲಕ್ಷಣವಾದುದು. ತನ್ನ ತಾನು ಅರ್ಚಿಸಿಕೊಳ್ಳುವ, ಪೂಜಿಸಿಕೊಳ್ಳುವ, ತನ್ನನ್ನೇ ತಾನು ಕಂಡುಕೊಳ್ಳುವ ಭಕ್ತಿ ಸ್ವಲೀಲಾನಂದವಿಲಾಸದಲ್ಲಿ ಪರ್ಯವಸಾನ ಹೊಂದುತ್ತದೆ. ಆದುದರಿಂದ ವೀರಶೈವದ ಮೋಕ್ಷದ ಸ್ವರೂಪವೆಂದರೆ ಸಹಜ. ಬಯಲು, ಶೂನ್ಯ, ನಿಶ್ಶೂನ್ಯ. ಅಲ್ಲಿ ಆತ್ಮನು ಸ್ವಲೀಲಾವಿಲಾಸದಲ್ಲಿರುವನು. ಆ ಸ್ವಲೀಲಾನಂದವಿಲಾಸದಲ್ಲಿರುವ ಕ್ರಿಯೆಯೇ ಭಕ್ತಿ. ಸ್ವಲೀಲಾನಂದವಿಲಾಸಕ್ರಿಯೆ ಯೆಂದರೆ ಜ್ಞಾನ. ಅಂದರೆ, ಭಕ್ತಿಯೇ ಜ್ಞಾನವೆಂದರ್ಥವಾಯಿತು. ಇದನ್ನೇ ಕ್ರಿಯಾ ಜ್ಞಾನ ಸಾಮರಸ್ಯವೆಂದು ಹೇಳುವರು; ಇದೇ ಮೋಕ್ಷ. ಭಕ್ತಿಯೆಂಬುದು ವೀರಶೈವರ

---

೧. ತೋಂ. ಸಿ. ವ. ೩೯.
೨. ತೋಂ. ಸಿ. ವ. ೩೮.

ಪಂಚಮಪುರುಷಾರ್ಥವೆನ್ನುವುದು ಈ ಅರ್ಥದಲ್ಲಿ. ಪಂಚಮಪುರುಷಾರ್ಥವಾದ ಈ ಭಕ್ತಿ, ಕ್ರಿಯಾಜ್ಞಾನಸಾಮರಸ್ಯವನ್ನು ಪಡೆದಿರುತ್ತದೆ. ಇದು ಮೋಕ್ಷ ಸ್ವರೂಪ. ಇದೇ ಲಿಂಗಾಂಗಸಾಮರಸ್ಯ.

## ಅಂಗಲಿಂಗೋದ್ಭವ

ಪರಶಿವಬ್ರಹ್ಮವು ಇಚ್ಛಾ, ಕ್ರಿಯಾ, ಜ್ಞಾನಶಕ್ತಿನಿಷ್ಠವಾಗಿದೆ. ಈ ಶಕ್ತಿತ್ರಯದ ಮೂಲಕವಾಗಿಯೇ ಆತನಿಗೆ ಸರ್ವವ್ಯಾಪಕತ್ವ, ಸರ್ವಕರ್ತೃತ್ವ, ಸರ್ವಜ್ಞತ್ವ ಗುಣಗಳು ಪ್ರಾಪ್ತವಾಗಿವೆ. ಮುಂದೆ ಆಣವ, ಕಾರ್ಮಿಕ, ಮಾಯಾಮಲಗಳ ಸಂಬಂಧದಿಂದ ಈ ಶಕ್ತಿಗಳು ಸಂಕೋಚಗೊಂಡು ಪರಶಿವಬ್ರಹ್ಮದ ಅಂಶನಾದ ಆತ್ಮನನ್ನು ಆವರಿಸುತ್ತವೆ. ಇವುಗಳಿಂದ ಆವೃತನಾದ ಆತ್ಮನೇ ಜೀವಾತ್ಮ, ಸರ್ವವ್ಯಾಪಕತ್ವವೃತ್ತಿಯುಳ್ಳ ಇಚ್ಛಾ ಶಕ್ತಿಯು ಸಂಕೋಚಗೊಂಡು ಅಣುರೂಪವಾಗಿ, ಆತ್ಮನಿಗೆ ಕಾರಣಶರೀರವನ್ನುಂಟು ಮಾಡುತ್ತದೆ. ಈ ಕಾರಣಶರೀರವು ಜೀವಾತ್ಮನನ್ನು ಆವರಿಸಿರುವ ಮೊದಲನೆಯ ಆವರಣ. ಸರ್ವಜ್ಞತ್ವವೃತ್ತಿಯುಳ್ಳ ಜ್ಞಾನಶಕ್ತಿಯು ಸಂಕೋಚಗೊಂಡು ಕಿಂಚಿತ್ ಜ್ಞಾನವಾಗಿ, ಆತ್ಮನನ್ನು ಆವರಿಸಿದ ಸೂಕ್ಷ್ಮಶರೀರವಾಗುತ್ತದೆ. ಇದು ಜೀವಾತ್ಮ ನಿಗಿರುವ ಎರಡನೆಯ ಆವರಣ. ಇದೇ ಬಗೆಯಾಗಿ ಕ್ರಿಯಾಶಕ್ತಿಯು ಸಂಕೋಚಗೊಂಡು ಆತ್ಮನಲ್ಲಿ ಕಿಂಚಿತ್ ಕರ್ತೃತ್ವವನ್ನುಂಟುಮಾಡಿ, ಸ್ಥೂಲ ಶರೀರರೂಪದಿಂದ ಅವನಿಗೆ ಮೂರನೆಯ ಆವರಣವಾಗುವುದು. ಈ ವಿವರಣೆಯಿಂದ ಕಾರಣ, ಸೂಕ್ಷ್ಮ, ಸ್ಥೂಲ ತನುಗಳ ಉತ್ಪತ್ತಿ ಎಂತೆಂಬುದು ಸ್ಪಷ್ಟವಾಯಿತು.

ಈ ತನುತ್ರಯದ ಘಟಕಗಳೇ ಆತ್ಮತತ್ವವನ್ನುಳಿದ ಮಿಕ್ಕ ಇಪ್ಪತ್ತು ನಾಲ್ಕು ತತ್ವಗಳು. ಅವುಗಳಲ್ಲಿ ಪಂಚಭೂತಗಳಿಂದ ಸ್ಥೂಲತನು, ಮಿಕ್ಕ ಹತ್ತೊಂಬತ್ತು ತತ್ವ ಗಳಿಂದ ಸೂಕ್ಷ್ಮತನು ರೂಪುಗೊಳ್ಳುತ್ತವೆ. ಮನ-ಚಿತ್ತಗಳ ಸೂಕ್ಷ್ಮಾವಸ್ಥೆಯೇ ಕಾರಣತನು.

> "ಚಿತ್ತಸ್ಥ ಸಕಲಾರ್ಥಾನಾಂ ಮನನಂ ಯತ್ತು ಮಾನಸೇ
> ತದರ್ಪಣಂ ಶಿವೇ ಸಾಕ್ಷಾನ್ಮಾನಸೋಭಾವ ಉಚ್ಯತೇ
> ಭಾವ ಏವ ಹಿ ಜಂತೂನಾಂ ಕಾರಣಂ ಬಂಧಮೋಕ್ಷಯೋಃ
> ಭಾವಶುದ್ಧೌ ಭವೇನ್ಮುಕ್ತಿರ್ವಿಪರೀತೇ ತು ಸಂಸೃತಿಃ"[೧]

ಈ ಶ್ಲೋಕಗಳಿಂದ ಚಿತ್ತದ ಸೂಕ್ಷ್ಮಾವಸ್ಥೆಯೇ ಭಾವವೆಂದು ವ್ಯಕ್ತವಾಗುತ್ತದೆ. ವೇದಾಂತದಲ್ಲಿ ಈ ತನುತ್ರಯಗಳನ್ನು ಪಂಚಕೋಶಗಳಾಗಿ ವಿವರಿಸುವುದುಂಟು. ಅನ್ನ ಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ—ಎಂಬಿವೇ ಆ ಪಂಚಕೋಶಗಳು. ಅವುಗಳಲ್ಲಿ ಅನ್ನಮಯವೇ ಸ್ಥೂಲತನುವು. ಮನೋಮಯ,

---

೧. ಸಿದ್ಧಾಂತಶಿಖಾಮಣಿ—ಪರಿಚ್ಛೇದ ೭-೪೭ ಮತ್ತು ೪೮.

ಪ್ರಾಣಮಯ, ವಿಜ್ಞಾನಮಯ ಇವು ಮೂರೂ ಒಟ್ಟುಗೂಡಿದ ಲಿಂಗದೇಹವೇ ಸೂಕ್ಷ್ಮ ತನು. ಆನಂದಮಯವೇ ಕಾರಣತನು. ದೇಹಾಭಿಮಾನ, ಇಂದ್ರಿಯತೃಪ್ತಿ ಇವು ಸ್ಥೂಲ ತನುವಿನ ಗುಣ. ಅರಿಷಡ್ವರ್ಗಗಳು ಸೂಕ್ಷ್ಮತನುವಿನ ಗುಣ. ತೃಪ್ತಿ ಕಾರಣತನುವಿನ ಗುಣ.

ಈ ತನುತ್ರಯವನ್ನು ಕ್ರಮವಾಗಿ ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಕರೆಯುವರು. ಆತ್ಮನ ಮೊದಲನೆಯ ಆವರಣವಾಗಿ, ಅದರ ಹತ್ತಿರದಲ್ಲಿಯೇ ಇದ್ದು, ಕೊನೆಗೆ ಶಿವನಲ್ಲಿ ಸಾಮರಸ್ಯ ಹೊಂದುವುದರಿಂದ ಕಾರಣತನುವು ಯೋಗಾಂಗವೆನಿಸುವುದು. ಲಿಂಗಭೋಗೋಪಭೋಗಮಾಡುವುದರಿಂದ ಸೂಕ್ಷ್ಮತನುವು ಭೋಗಾಂಗವೆನಿಸುವುದು. ಗುರುಕೃತವಾದ ಲಿಂಗದೀಕ್ಷೆಯ ಮೂಲಕ ಮಲತ್ರಯಗಳನ್ನು ತ್ಯಾಗಮಾಡುವುದರಿಂದ ಸ್ಥೂಲತನುವು ತ್ಯಾಗಾಂಗವೆನಿಸುವುದು. ಯೋಗಾಂಗ, ಭೋಗಾಂಗ, ತ್ಯಾಗಾಂಗಗಳು ಕ್ರಿಯಾಭೇದದಿಂದ ಷಡಂಗಗಳಾಗುತ್ತವೆ. ಅದನ್ನು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಹೀಗೆ ವಿವರಿಸಿರುವರು:

**"ಇನ್ನು ಒಂದು ಅಂಗ ಮೂಱು ತೆಱನಾಯಿತ್ತು.**
**ಅದು ಹೇಂಗೆಂದಡೆ :**
**ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು**
**ಮೂಱು ಪ್ರಕಾರವಾಯಿತ್ತು.**
**ಈ ತ್ರಯಾಂಗ ಒಂದೊಂದು ಎರಡೆರಡಾಗಿ**
**ಆಱು ತೆಱನಾಯಿತ್ತು. ಹೇಂಗೆಂದಡೆ :**
**ಯೋಗಾಂಗವೇ ಐಕ್ಯನೆಂದು ಶರಣನೆಂದು**
**ಎರಡು ತೆಱನಾಯಿತ್ತು.**
**ಭೋಗಾಂಗವೇ ಪ್ರಾಣಲಿಂಗಿ ಪ್ರಸಾದಿಯೆಂದು**
**ಎರಡು ತೆಱನಾಯಿತ್ತು.**
**ತ್ಯಾಗಾಂಗವೇ ಮಾಹೇಶ್ವರನೆಂದು ಭಕ್ತನೆಂದು**
**ಎರಡು ತೆಱನಾಯಿತ್ತು.**
**ಹೀಗೊಬ್ಬ ಶಿವನು ಆಱು ತೆಱನಾದನು."[೧]**

ಇದು ಅಂಗಷಟ್‌ಸ್ಥಲ. ಈ ಅಂಗಷಟ್‌ಸ್ಥಲದಿಂದ ಪೂಜೆಗೊಳ್ಳಲು ಲಿಂಗಷಟ್‌ಸ್ಥಲವಾಯಿತು. ಅದು ಹೇಂಗೆಂದಡೆ:

**"ಭಾವಲಿಂಗವೆಂದು, ಪ್ರಾಣಲಿಂಗವೆಂದು, ಇಷ್ಟಲಿಂಗವೆಂದು**
**ಮೂಱು ತೆಱನಾಯಿತ್ತು.**
**ಆ ಭಾವಲಿಂಗ ಪ್ರಾಣಲಿಂಗ ಇಷ್ಟಲಿಂಗವೆಂಬ ಲಿಂಗತ್ರಯವು**
**ಒಂದೊಂದು ಲಿಂಗವೆರಡೆರಡಾಗಿ ಆಱು ತೆಱನಾಯಿತ್ತು.**
**ಅದು ಹೇಂಗೆಂದಡೆ :**

೧. ತೋಂ. ಸಿ. ವ. ೩೮.

ಭಾವಲಿಂಗವು ಮಹಾಲಿಂಗವೆಂದೂ ಪ್ರಸಾದಲಿಂಗವೆಂದೂ
ಎರಡು ತೆಱನಾಯಿತ್ತು.
ಪ್ರಾಣಲಿಂಗವು ಜಂಗಮಲಿಂಗವೆಂದೂ ಶಿವಲಿಂಗವೆಂದೂ
ಎರಡು ತೆಱನಾಯಿತ್ತು.
ಇಷ್ಟಲಿಂಗವು ಗುರುಲಿಂಗವೆಂದೂ ಆಚಾರಲಿಂಗವೆಂದೂ
ಎರಡು ತೆಱನಾಯಿತ್ತು.
ಹೀಗೊಬ್ಬ ಶಿವನು ಆಱು ತೆಱನಾದನು."[೧]

ತನುತ್ರಯದ ಉತ್ಪತ್ತಿ ತರ್ಕಬದ್ಧವಾಗಿರುವುದನ್ನು ಹಿಂದೆ ವಿವರಿಸಲಾಗಿದೆ. ಆ ತನುತ್ರಯದಿಂದ ಪೂಜೆಗೊಳ್ಳಲು ಲಿಂಗತ್ರಯವಾಗುವುದು ಸ್ವಾಭಾವಿಕ, ಅವೇ ಭಾವ ಪ್ರಾಣ ಇಷ್ಟಲಿಂಗಗಳು. ಈ ಲಿಂಗಗಳೇ ಆರುತೆರನಾಗಿರುವುದನ್ನು ಮೇಗಣ ವಚನದಲ್ಲಿ ಅವರೇ ವಿವರಿಸಿರುವರು. ಅವರೇ ಮುಂದಿನ ವಚನದಲ್ಲಿ ಈ ಷಡಂಗ, ಷಡ್ಲಿಂಗಗಳ ವ್ಯುತ್ಪತ್ತಿಯನ್ನು ತರ್ಕಶುದ್ಧವಾಗಿ ವಿವರಿಸುವ ಬಗೆ ಹೀಗೆ:

"ನಿಃಕಲ ಜ್ಞಾನಚಿತ್ತುವೆ ಬಲಿದು ಚಿಚ್ಛಕ್ತಿಯಾದಲ್ಲಿ
ಆ ಚಿಚ್ಛಕ್ತಿಯ ಸಂಗದಿಂದ ನೀನು ಮಹಾಲಿಂಗವಾದಲ್ಲಿ
ಆ ಶಾಂತ್ಯತೀತೋತ್ತರೆಯೆಂಬ ಕಲೆಯಿಂದ ನಾನು ಉದಯವಾಗಿ
ಆ ಮಹಾಲಿಂಗಕ್ಕಾಶ್ರಯವಾಗಿ ಐಕ್ಯನಾಗಿಪ್ಪುದ
ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳು.

ಆ ಚಿಚ್ಛಕ್ತಿಯಿಂದ ಪರಾಶಕ್ತಿ ಉದಯವಾಗಿ
ಆ ಪರಾಶಕ್ತಿಯ ಸಂಗದಿಂದ ನೀನು ಪ್ರಸಾದಲಿಂಗವಾದಲ್ಲಿ
ಆ ಶಾಂತ್ಯತೀತೆಯೆಂಬ ಕಲೆಯಲ್ಲಿ ನಾನುದಯವಾಗಿ
ಆ ಪ್ರಸಾದಲಿಂಗಕ್ಕಾಶ್ರಯವಾಗಿ ಶರಣರೂಪಾಗಿಪ್ಪುದ
ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳು.

ಆ ಪರಾಶಕ್ತಿಯಿಂದ ಆದಿಶಕ್ತಿ ಉದಯವಾಗಿ
ಆ ಆದಿಶಕ್ತಿಯ ಸಂಗದಿಂದ ನೀನು ಶುದ್ಧ ಸುಜ್ಞಾನವೆಂಬ ಜಂಗಮಲಿಂಗವಾದಲ್ಲಿ
ಆ ಶಾಂತಿಯೆಂಬ ಕಲೆಯಲ್ಲಿ ನಾನುದಯವಾಗಿ
ಆ ಜಂಗಮಲಿಂಗಕ್ಕಾಶ್ರಯವಾಗಿ ಪ್ರಾಣಲಿಂಗಿಯಪ್ಪುದ
ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳು.

ಆದಿ ಶಕ್ತಿಯಿಂದ ಇಚ್ಛಾಶಕ್ತಿ ಉದಯವಾಗಿ
ಆ ಇಚ್ಛಾಶಕ್ತಿಯ ಸಂಗದಿಂದ ನೀನು ದಿವ್ಯ ಶಿವಲಿಂಗಾಕಾರವಾದಲ್ಲಿ
ಆ ವಿದ್ಯೆಯೆಂಬ ಕಲೆಯಲ್ಲಿ ನಾನುದಯವಾಗಿ
ಆ ಶಿವಲಿಂಗಕ್ಕಾಶ್ರಯವಾಗಿ ಪರಮ ಪ್ರಸಾದಿಯಾಗಿಪ್ಪುದ
ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳು.

---

೧. ತೋಂ. ಸಿ. ವ. ೩೮.

ಆ ಇಚ್ಛಾಶಕ್ತಿಯಿಂದ ಸುಜ್ಞಾನಶಕ್ತಿ ಉದಯುವಾಗಿ
ಆ ಸುಜ್ಞಾನಶಕ್ತಿಯಿಂದ ನೀನು ಗುರುಲಿಂಗವಾದಲ್ಲಿ
ಆ ಪ್ರತಿಷ್ಠೆಯೆಂಬ ಕಲೆಯಲ್ಲಿ ನಾನುದಯುವಾಗಿ
ಆ ಗುರುಲಿಂಗಕ್ಕಾಶ್ರಯುವಾಗಿ ಮಹೇಶ್ವರನಾಗಿಪ್ಪುದ
ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳು.

ಆ ಸುಜ್ಞಾನಶಕ್ತಿಯಿಂದ ಕ್ರಿಯಾಶಕ್ತಿ ಉದಯುವಾಗಿ
ಆ ಕ್ರಿಯಾಶಕ್ತಿಯು ಸಂಗದಿಂದ ನೀನು ಆಚಾರಲಿಂಗವಾದಲ್ಲಿ
ಆ ನಿವೃತ್ತಿಯೆಂಬ ಕಲೆಯಲ್ಲಿ ನಾನುದಯುವಾಗಿ
ಆ ಆಚಾರಲಿಂಗಕ್ಕಾಶ್ರಯುವಾಗಿ ಸದ್ಭಕ್ತನಾಗಿಪ್ಪುದ
ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳು.

ನೀ ನಿನ್ನ ಸ್ವಲೀಲೆಯಿಂದ ನಾನಾರೂಪವಾದಲ್ಲಿ, ನಿನ್ನ ಬೆಂಬಳಿವಿಡಿದು
ನಾನು ನಾನಾರೂಪವಾಗುತ್ತಿರ್ದೆನಯ್ಯಾ."[೧]

ಪರಮಾತ್ಮನಲ್ಲಿ ಅವಿನಾಭಾವದಿಂದಿದ್ದ ಶಕ್ತಿ ಉನ್ಮೇಷಗೊಂಡು ನೆನಹು ನಿರ್ಧರಿಸಿ ಚಿಚ್ಛಕ್ತಿಯಾಗುವುದು. ಆ ಶಕ್ತಿವಿಕಾಸ ಹೀಗೆ ಮುನ್ನಡೆಯುವುದು: "ಚಿಚ್ಛಕ್ತಿ–ಪರಾಶಕ್ತಿ–ಆದಿಶಕ್ತಿ–ಇಚ್ಛಾಶಕ್ತಿ–ಜ್ಞಾನಶಕ್ತಿ–ಕ್ರಿಯಾಶಕ್ತಿ." ಈ ಶಕ್ತಿಗಳಿಗೆ ಅನುಕ್ರಮವಾಗಿ ಶಾಂತ್ಯತೀತೋತ್ತರೆ, ಶಾಂತ್ಯತೀತೆ, ಶಾಂತಿ, ವಿದ್ಯಾ, ಪ್ರತಿಷ್ಠಾ, ನಿವೃತ್ತಿ ಎಂಬ ಕಲಾ ಪರ್ಯಾಯನಾಮಗಳುಂಟು. ಆರು ಶಕ್ತಿಗಳ ಸಂಗದಿಂದ ಪರಶಿವತತ್ವವು ಕ್ರಮವಾಗಿ ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗವಾಗುವುದು. ಚಿಚ್ಛಕ್ತಿಯು ಮಹಾಲಿಂಗವನ್ನಾಶ್ರಯಿಸಿ ಶಾಂತ್ಯತೀತೋತ್ತರ ಕಲೆಯೆನಿಸುವುದು. ಪರಾಶಕ್ತಿಯು ಪ್ರಸಾದಲಿಂಗ ನಿಷ್ಠವಾಗಿ ಶಾಂತ್ಯತೀತ ಕಲೆಯೆನಿಸುವುದು. ಆದಿಶಕ್ತಿಯು ಜಂಗಮಲಿಂಗವನ್ನು ಹೊಂದಿ ಶಾಂತಿಕಲೆಯೆನಿಸುವುದು. ಇಚ್ಛಾಶಕ್ತಿಯು ಶಿವಲಿಂಗವನ್ನಾಶ್ರಯಿಸಿ ವಿದ್ಯಾಕಲೆಯೆನಿಸುವುದು. ಜ್ಞಾನಶಕ್ತಿಯು ಗುರುಲಿಂಗವನ್ನಾಶ್ರಯಿಸಿ ಪ್ರತಿಷ್ಠಾಕಲೆಯೆನಿಸುವುದು. ಕ್ರಿಯಾಶಕ್ತಿಯು ಆಚಾರಲಿಂಗವನ್ನಾಶ್ರಯಿಸಿ ನಿವೃತ್ತಿಕಲೆಯೆನಿಸುವುದು. ಪ್ರಥಮ ನಿರಾಕಾರವಸ್ತುವಿನಲ್ಲಿ ಉದಯವಾದ ಮಹಾಜ್ಞಾನರೂಪ ಶರಣ(ಆತ್ಮ)ನು ಈ ಆರು ಕಲೆಗಳ ಸಂಗಮದಿಂದ ಅನುಕ್ರಮವಾಗಿ ಐಕ್ಯ, ಶರಣ, ಪ್ರಾಣಲಿಂಗಿ, ಪ್ರಸಾದಿ, ಮಹೇಶ್ವರ, ಭಕ್ತ ಎಂಬ ಷಟ್‌ಸ್ಥಲಗಳಾಗಿ, ಕ್ರಮವಾಗಿ ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗಗಳಿಗೆ ಆಶ್ರಯವಾಗಿ ಅವುಗಳನ್ನೇ ಆರಾಧಿಸುವನು.

ಲಿಂಗತ್ರಯದಿಂದ ಷಡ್ಲಿಂಗಗಳೂ ಅಂಗತ್ರಯದಿಂದ ಷಡಂಗಗಳೂ ವ್ಯುತ್ಪತ್ತಿಯಾದುದನ್ನು ಹಿಂದೆ ವಿವರಿಸಲಾಗಿದೆ. ಲಿಂಗತ್ರಯ, ಅಂಗತ್ರಯಗಳ ಉತ್ಪತ್ತಿ ಶಾಸ್ತ್ರಸಮ್ಮತವಾಗಿದೆ; ತರ್ಕಬದ್ಧವಾಗಿದೆ. ಏಕೆಂದರೆ: ಅವು ಪರಶಿವಬ್ರಹ್ಮದಲ್ಲಿದ್ದ ಇಚ್ಛಾ,

---

೧. ತೋಂ. ಸಿ. ವ. ೩೮.

ಜ್ಞಾನ, ಕ್ರಿಯಾನಿಷ್ಠವಾಗಿವೆ. ಮೂರು ಆರಾದುದಕ್ಕೆ ಕ್ರಿಯಾಭೇದವೇ ಕಾರಣವೆಂದು ತೋಂಟದ ಸಿದ್ಧಲಿಂಗೇಶ್ವರರು ಹೇಳಿರುವರು. ಕ್ರಿಯಾಭೇದದಿಂದ ಆರು ಭೇದಗಳೇ ಏಕೆ ನಿರ್ಮಾಣವಾಗಬೇಕೆಂಬುದಕ್ಕೆ ಸಮರ್ಪಕ ಉತ್ತರ ಅಲ್ಲಿ ದೊರೆಯದು. ಆದರೆ, ಷಡ್ವಿಧ ಶಕ್ತಿಗಳನ್ನೂ ಆತ್ಮಸಹಿತವಾದ ಆರು ಭೂತಗಳನ್ನೂ ಅವಲೋಕಿಸಿದರೆ, ಈ ಷಡಂಗ ಷಡ್ಲಿಂಗಗಳ ರಹಸ್ಯ ವೇದ್ಯವಾಗಬಲ್ಲುದು. ಆತ್ಮಾದಿ ಭೂಮ್ಯಂತವಾದ ಆರು ಭೂತಗಳು ಐಕ್ಯಾದಿ ಭಕ್ತಾಂತವಾದ ಆರು ಸ್ಥಲಗಳಿಗೆ ಅಂಗಗಳಾಗಿರುವುವು. ಈ ಸ್ಥಲ ನಿಷ್ಠವಾಗಿಯೇ ಶಕ್ತಿಗಳು, ಲಿಂಗಗಳು ಆವಿರ್ಭವಿಸಿರುವುವು. ಆದುದರಿಂದ ಅತ್ತ ಶಕ್ತಿಗಳನ್ನು ಗಮನಿಸಿಯೂ ಇತ್ತ ಆತ್ಮಾದಿ ಭೂಮ್ಯಂತವಾದ ಆರು ತತ್ವಗಳನ್ನು ಅನುಲಕ್ಷಿಸಿಯೂ ಷಡ್ಲಿಂಗ, ಷಡಂಗಗಳನ್ನು ಕಲ್ಪಿಸಲಾಗಿದೆ. ಈ ವಿವರಣೆ ತರ್ಕಸಮ್ಮತವೆನಿಸಬಹುದಾಗಿದೆ. ಇದು ಪ್ರವೃತ್ತಿಮಾರ್ಗ. ಇನ್ನು ಈ ಷಡಂಗಗಳು ಷಡ್ಲಿಂಗಗಳಲ್ಲಿ ಸಮರಸವಾಗುವುದೇ ನಿವೃತ್ತಿಮಾರ್ಗ. ಹೀಗೆ ಸಾಮರಸ್ಯಹೊಂದುವಲ್ಲಿ ಷಡಂಗಗಳಿಗೆ ಸಹಾಯಕವಾಗುವುದು ಭಕ್ತಿ. ಆ ಭಕ್ತಿ ನಿಷ್ಪತ್ತಿಯಾಗಿರುವುದು ಹೀಗೆ: ಮಹಾಲಿಂಗವು ಲಿಂಗವೆಂದೂ ಅಂಗವೆಂದೂ ಎರಡಾದಲ್ಲಿ ಮಹಾಲಿಂಗನಿಷ್ಠವಾದ ಶಕ್ತಿಯು ಲಿಂಗದಲ್ಲಿ ಶಕ್ತಿಯಾಗಿಯೂ ಅಂಗದಲ್ಲಿ ಭಕ್ತಿಯಾಗಿಯೂ ಪರಿಣಮಿಸಿರುವುದು. ಆ ಭಕ್ತಿಯು ಷಡಂಗಗಳಿಗನುಗುಣವಾಗಿ ಷಡ್ವಿಧ ರೂಪಗಳನ್ನು ತಳೆಯುತ್ತದೆ. ನಿವೃತ್ತಿಯಲ್ಲಿ ಭಕ್ತನು ಶ್ರದ್ಧಾಭಕ್ತಿಯಿಂದ ಆಚಾರಲಿಂಗದಲ್ಲಿಯೂ ಮಹೇಶನು ನಿಷ್ಠಾಭಕ್ತಿಯಿಂದ ಗುರುಲಿಂಗದಲ್ಲಿಯೂ ಪ್ರಸಾದಿಯು ಅವಧಾನ ಭಕ್ತಿಯಿಂದ ಶಿವಲಿಂಗದಲ್ಲಿಯೂ ಪ್ರಾಣಲಿಂಗಿಯು ಅನುಭಾವಭಕ್ತಿಯಿಂದ ಜಂಗಮಲಿಂಗದಲ್ಲಿಯೂ ಶರಣನು ಆನಂದಭಕ್ತಿಯಿಂದ ಪ್ರಸಾದಲಿಂಗದಲ್ಲಿಯೂ ಐಕ್ಯನು ಸಮರಸಭಕ್ತಿಯಿಂದ ಮಹಾಲಿಂಗದಲ್ಲಿಯೂ ಬೆರೆಯುವರು. ಆ ಮೇಲೆ ಆಚಾರಲಿಂಗವು ಗುರುಲಿಂಗದಲ್ಲಿಯೂ ಗುರುಲಿಂಗವು ಶಿವಲಿಂಗದಲ್ಲಿಯೂ ಶಿವಲಿಂಗವು ಜಂಗಮಲಿಂಗದಲ್ಲಿಯೂ ಜಂಗಮಲಿಂಗವು ಪ್ರಸಾದಲಿಂಗದಲ್ಲಿಯೂ ಪ್ರಸಾದಲಿಂಗವು ಮಹಾಲಿಂಗದಲ್ಲಿಯೂ ಬೆರೆಯುವುವು. ಇದೇ ಲಿಂಗಾಂಗಸಾಮರಸ್ಯ. ಇದನ್ನು ಸಾಧಿಸುವುದಕ್ಕಾಗಿಯೇ ಭಕ್ತಾದಿ ಐಕ್ಯಾಂತವಾದ ಷಟ್‌ಸ್ಥಲಮಾರ್ಗವು ರೂಪಿತವಾಗಿದೆ.

## ಷಟ್‌ಸ್ಥಲ

ಷಟ್‌ಸ್ಥಲವು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಆರು ಸ್ಥಲಗಳನ್ನೊಳಗೊಂಡಿದೆ. ಈ ಸ್ಥಲಗಳನ್ನು ಕ್ರಮವಾಗಿ ಸಾಧಿಸಿಯೇ ಕೊನೆಯ ಸಿದ್ಧಿಯನ್ನು ಪಡೆಯಬೇಕೆಂಬ ನಿಯಮವಿಲ್ಲ. ಇಲ್ಲಿ ಕ್ರಮಸಮುಚ್ಚಯಕ್ಕೆ ಪ್ರತಿಯಾಗಿ ಸಮಸಮುಚ್ಚಯವಿದೆ. ಅಂದರೆ ಪ್ರತಿಯೊಂದು ಸ್ಥಲದಲ್ಲಿಯೂ ಅವಾಂತರ ಷಟ್‌ಸ್ಥಲಗಳು ಅಂತರ್ಗತವಾಗಿವೆ. ಆದುದರಿಂದ ಆವಾವ ಸ್ಥಲದಲ್ಲಿ ನಿಂದರೂ ಐಕ್ಯವನ್ನು ಸಾಧಿಸಬಹುದು.

# ಭಕ್ತಸ್ಥಲ

**ಪಿಂಡಸ್ಥಲ:**

ಭಕ್ತಸ್ಥಲ ಆರಂಭವಾಗುವುದು ಪಿಂಡಸ್ಥಲದಲ್ಲಿಯೇ. ತನ್ನ ನಿಜವನ್ನು ಮರೆತು, ಅಜ್ಞಾನದಲ್ಲಿ ಸಿಲುಕಿ ಜನನ ಮರಣಗಳಲ್ಲಿ ತೊಳಲುತ್ತಿರುವ ಜೀವನಿಗೆ ಪೂರ್ವಸುಕೃತ ದಿಂದ ನಿಜದತ್ತ ದೃಷ್ಟಿ ಹರಿಯುತ್ತದೆ. ಆ ಸುಕೃತನಿಮಿಷವೇ ಪಿಂಡೋದಯದ ಮಂಗಲಮುಹೂರ್ತ. ಕನ್ನೆಯ ಸ್ನೇಹದಂತಿದ್ದ ಆ ಪಿಂಡ ಮುಂದೆ ಬಲಿದು ಜ್ಞಾನ ಶೂನ್ಯಾಂತಮಾದ ಐಕ್ಯ ಸ್ಥಿತಿಯನ್ನು ಮುಟ್ಟಬೇಕಾಗಿದೆ. ಬದ್ಧನಾದ ಜೀವಿಯು ಶುದ್ಧಾಂತಃಕರಣದೇಹಿಯಾಗುವದೇ 'ಪಿಂಡಸ್ಥಲ'ವೆಂದು ಸಿದ್ಧಾಂತಶಿಖಾಮಣಿಕಾರನ ಅಭಿಪ್ರಾಯ.

> **"ಬಹುಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ**
> **ಶುದ್ಧಾಂತಃಕರಣೋ ದೇಹೀ ಪಿಂಡಶಬ್ದೇನ ಗೀಯತೇ ॥"[೧]**

ಭವ ಭವದಲ್ಲಿ ಹುಟ್ಟಿಬರುತ್ತಿರುವ ಜೀವಾತ್ಮನು ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯ ವಿಶೇಷಗಳಿಂದ ಪಾಪ ಪಲ್ಲಟವಾಗಿ ಶುದ್ಧಾಂತಃಕರಣನೆನಿಸುತ್ತಾನೆ. ಆಗತಾನೇ ಆತ್ಮನಿಗೆ ಊರ್ಧ್ವಗತಿ ಪ್ರಾಪ್ತವಾಗುತ್ತದೆ. ಸ್ವಸ್ವರೂಪವನ್ನು ತಿಳಿದುಕೊಳ್ಳಬೇಕೆಂಬ ಆಕಾಂಕ್ಷೆ ಆವಿರ್ಭವಿಸುತ್ತದೆ. ಈ ಪಿಂಡಸ್ಥಲವನ್ನು ಸಿದ್ಧಲಿಂಗ ಶಿವಯೋಗಿಗಳು ಹೀಗೆ ವರ್ಣಿಸಿರುವರು:

> **"ದೇಹವ ಮಱೆಗೊಂಡಿಪ್ಪ ಆತ್ಮನಂತೆ**
> **ಶಕ್ತಿಯ ಮಱೆಗೊಂಡಿಪ್ಪ ಶಿವನಂತೆ**
> **ಕ್ಷೀರವ ಮಱೆಗೊಂಡಿಪ್ಪ ತುಪ್ಪದಂತೆ**
> **ವಾಚ್ಯವ ಮಱೆಗೊಂಡಿಪ್ಪ ಅನಿರ್ವಾಚ್ಯದಂತೆ**
> **ಲೋಕಾರ್ಥದೊಳಡಗಿಪ್ಪ ಪರಮಾರ್ಥದಂತೆ**
> **ಎನ್ನ ಆತ್ಮದೊಳಡಗಿಪ್ಪ ಪರಮಾರ್ಥತತ್ವವು**
> **ಬೀಜದೊಳಡಗಿದ ವೃಕ್ಷದಂತೆ ಇದ್ದಿತ್ತಯ್ಯಾ.**
> **ನಾನಱಿಯದ ಮುನ್ನ ಎನ್ನೊಳಡಗಿದ್ದಿತಯ್ಯಾ, ಶರಣಲಿಂಗಸಂಬಂಧ!**
> **ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ."[೨]**

ಈ ಆತ್ಮನಲ್ಲಿ ಹುದುಗಿದ್ದ ಶರಣಲಿಂಗಸಂಬಂಧ ಅನಾದಿಯಾದುದು. ಪಿಂಡಜ್ಞಾನ ವಾಗುವ ಮುನ್ನವೇ ಅದು ನೆಲೆಸಿದ್ದಿತು. ಪಿಂಡಜ್ಞಾನೋದಯವಾಗಬೇಕಾದರೆ, ಅಂದರೆ ಶರಣಲಿಂಗ ಸಂಬಂಧದ ಅರಿವುಂಟಾಗಬೇಕಾದರೆ ಪಾಪಕ್ಷಯವಾಗಲೇಬೇಕು. ಆ ಸಂಬಂಧವು ಕ್ಷೀರವ ಮರೆಗೊಂಡಿಪ್ಪ ತುಪ್ಪದಂತೆ, ಬೀಜದೊಳಡಗಿದ ವೃಕ್ಷದಂತೆ

---

೧. ಸಿದ್ಧಾಂತ ಶಿಖಾಮಣಿ ಪರಿಚ್ಛೇದ ೫-೩೦.
೨. ತೋಂ. ಶಿ. ಪ. ೮೦.

ಇದೆ. ಆದರೆ, ತುಪ್ಪ ಹೊರಬರಬೇಕಾದರೆ ಕ್ಷೀರ ಅನೇಕ ಸಂಸ್ಕಾರಗಳನ್ನು ಹೊಂದ ಬೇಕಾಗಿಲ್ಲವೇ? ಬೀಜದಲ್ಲಿದ್ದ ವೃಕ್ಷವು ಹೊರಹೊಮ್ಮಬೇಕಾದರೆ ಅದಕ್ಕೆ ಕೃಷಿ ಆವಶ್ಯಕವಲ್ಲವೇ? ಅದರಂತೆ ಆತ್ಮನಲ್ಲಿ ಹುದುಗಿದ್ದ ಈ ಶರಣಲಿಂಗಸಂಬಂಧವು ಪ್ರಕಟವಾಗಬೇಕಾದರೆ ಅದು ಅನೇಕ ಸಂಸ್ಕಾರಗಳನ್ನು ಹೊಂದಲೇಬೇಕಾಗುತ್ತದೆ. ಈ ವಿಕಸನ ಮಾರ್ಗದಲ್ಲಿ ಮುಂದಿನ ಹೆಜ್ಜೆಯೆಂದರೆ ಪಿಂಡಜ್ಞಾನ.

**ಪಿಂಡಜ್ಞಾನಸ್ಥಲ:**

ಶುದ್ಧಾಂತಃಕರಣನಾದ ದೇಹಿಯು ಸ್ವಸ್ವರೂಪವನ್ನು ಸಾವಧಾನವಾಗಿ ತಿಳಿದು ಕೊಳ್ಳತೊಡಗುವನು.

> **"ಸ್ಫಟಿಕದ ಘಟದೊಳಗೆತ್ತಿದ ಜ್ಯೋತಿ**
> **ಒಳಹೊಱಗೊಂದೇ ಸ್ವಯವಾಗಿ ಪ್ರಜ್ವಲಿಸುವಂತೆ**
> **ಎನ್ನೊಳಗಿಪ್ಪಾತನೂ ಹೊಱಗಿಪ್ಪಾತನೂ**
> **ಒಂದೇ ವಸ್ತುವೆಂಬ ಆದ್ಯಂತವು ಕಂಡುಬಂದಿತ್ತು ನೋಡಾ!**
> **ಆ ಪರತತ್ವವೇ ಶರಣ ತಾನೆ ನೋಡಾ, ಬೇಱೊಂದು ಸ್ವರೂಪಲ್ಲ ಕಾಣಾ!**
> **ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ"[೧]**

ಎಂದು ಶಿವಯೋಗಿಗಳು ಪಿಂಡಜ್ಞಾನದ ಸ್ಥಿತಿಯನ್ನು ವರ್ಣಿಸಿರುವರು. ಪಿಂಡಜ್ಞಾನದ ಕಳೆ, ವಾಙ್ಮನಗಳನ್ನೂ ಅಕ್ಷರಜ್ಞಾನಗಳನ್ನೂ ಮೀರಿ ತೋರುವ ನಿರಂಜನವಸ್ತು. ಮಿಂಚಿನ ಪ್ರಭೆಯಲ್ಲಿ ಪಂಚವದನನನ್ನು ಕಾಣುವ ನೋಟ. ಅದು ಹೊಳೆಯುತ್ತಿದ್ದ ಕಾಲಾಗ್ನಿಯ ಕಾಂತಿಯನ್ನು ಪಡೆದಿರುವುದು. ಅನಂತ ಕೋಟಿ ಮಿಂಚುಗಳ ಸಂಚುಳ್ಳುದು. ಪಿಂಡದ ಮಧ್ಯದಲ್ಲಿ ಉದಯವಾಗುವ ಜ್ಞಾನ ಉಪಮಾತೀತವಾದುದು. ಈ ಜ್ಞಾನೋ ದಯದಲ್ಲಿ ಆತ್ಮನಿಗೆ ತನ್ನ ಮೂಲಸಂಬಂಧದ ಅರಿವಾಗುವುದು. ತಾನು ಸಚ್ಚಿದಾನಂದ ಸ್ವರೂಪದ ಚಿದಂಶನಾಗಿದ್ದು ಅಜ್ಞಾನದಿಂದ ಪಂಚವಿಂಶತಿ ತತ್ವಗಳ ಸಂಬಂಧವನ್ನು ಇಟ್ಟುಕೊಂಡಿರುವೆನೆಂಬ ತಿಳಿವಳಿಕೆ ಉಂಟಾಗಿ ಮಹದಾನಂದದ ಎದುರಿನಲ್ಲಿ ಈ ಕ್ಷಣಿಕ ವಾದ ಆನಂದ ತ್ಯಾಜ್ಯವೆನಿಸುತ್ತದೆ. ಸಂಸಾರದ ಬಗೆಗೆ ಆತ್ಮನಿಗೆ ಹೇಯಭಾವನೆ ಉಂಟಾಗುತ್ತದೆ. ಇದೇ ಸಂಸಾರಹೇಯ ಸ್ಥಲ.

**ಸಂಸಾರಹೇಯಸ್ಥಲ:**

ಸಂಸಾರದಲ್ಲಿ ಹೇಯಭಾವನೆ ಉಂಟಾಗದೆ ಪರಮಾತ್ಮನಲ್ಲಿ ಭಕ್ತಿಯು ನೆಲೆಗೊಳ್ಳ ಲಾರದು. ಎಷ್ಟೆಷ್ಟು ಸಂಸಾರರತಿ ಕಡಿಮೆಯಾಗುವುದೋ ಅಷ್ಟಷ್ಟು ಪರಮಾತ್ಮನಲ್ಲಿ ಭಕ್ತಿ ಹೆಚ್ಚುತ್ತದೆ. ಸಂಸಾರಹೇಯವೆಂದರೆ ಸಂಸಾರವನ್ನು ಬಿಡಬೇಕೆಂದು ಶರಣರು ಬೋಧಿಸುವುದಿಲ್ಲ. ಆ ಸಂಸಾರದಲ್ಲಿಯೇ ಇದ್ದು ಲಿಂಗಭೋಗೋಪಭೋಗ ಮಾಡಿದರೆ

---

೧. ತೋಂ. ಶಿ. ವ. ೮೯.

ಅದು ಸಂಸಾರದಿಂದ ಬಿಡುಗಡೆಯಾದಂತೆಯೇ. ಈ ಲಿಂಗಭೋಗೋಪಭೋಗ ಪ್ರಾಪ್ತಿಯಾಗಬೇಕಾದರೆ ಸಂಸಾರವೆಲ್ಲ ಇಂದ್ರಿಯಗಳ ವಿಷಯವೆಂಬ ಭಾವನೆ ತೊಲಗಬೇಕು. ಅದರ ಬಗೆಗೆ ಜುಗುಪ್ಸೆಯುಂಟಾಗದೆ ಪದಾರ್ಥ ಪ್ರಸಾದವಾಗುವುದು ಸಾಧ್ಯವಿಲ್ಲ. ಈ ಸಂಸಾರಹೇಯಭಾವನೆಯನ್ನು ಸಿದ್ಧಲಿಂಗ ಶಿವಯೋಗಿಗಳು ಬಹು ಮಾರ್ಮಿಕವಾಗಿ ಬೋಧಿಸಿರುವರು.

## ಗುರುಕಾರುಣ್ಯಸ್ಥಲ:

ಸಂಸಾರಹೇಯಭಾವನೆ ತೀಕ್ಷ್ಣವಾದ ಆತ್ಮನಿಗೆ ಗುರುಕಾರುಣ್ಯ ಲಭಿಸುತ್ತದೆ.

ಪರಮಾತ್ಮನ ಚಿದಂಶವೇ ಆತ್ಮನಾಗಿ ಹುಟ್ಟಿಬಂದಿದೆ. ಹೀಗೆ ಸ್ವಲೀಲೆಗೆಂದು ಆತ್ಮರುಗಳನ್ನೂ ಸೃಷ್ಟಿಯನ್ನೂ ನಿರ್ಮಿಸಿದ ಪರಶಿವನು ತಾನು ಸುಮ್ಮನೆ ಕುಳಿತಿಲ್ಲ. ಬಂಧನಕ್ಕೊಳಗಾದ ಆತ್ಮನು ಅದರಿಂದ ಬಿಡುಗಡೆ ಹೊಂದಬೇಕೆಂದು ಆತನಲ್ಲಿಯೇ ನಿಗ್ರಹದ ಮೂಲಕ ಭಕ್ತಿಯನ್ನು ಅಂಕುರಿಸುತ್ತಾನೆ. ಈ ಆತ್ಮರುಗಳ ಉದ್ಧಾರಕ್ಕಾಗಿಯೇ ಪರಶಿವನ ಸದ್ರೂಪ ಗುರುವಾಗಿಯೂ ಚಿದ್ರೂಪ ಲಿಂಗವಾಗಿಯೂ ಆನಂದರೂಪ ಜಂಗಮವಾಗಿಯೂ ಬಂದಿರುತ್ತದೆ. ಸಂಸಾರಹೇಯಭಾವ ತೀಕ್ಷ್ಣವಾದಲ್ಲಿ ಗುರು ಮೈದೋರುತ್ತಾನೆ. ಕರುಣೆಯಿಂದ ಅವನಿಗೆ ದೀಕ್ಷೆಯನ್ನು ಕೊಡುತ್ತಾನೆ.

> "ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ
> ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ॥"[೧]

ಪಾಶಬಂಧವನ್ನು ಕತ್ತರಿಸಿ ಶಿವಜ್ಞಾನವನ್ನು ದಯಪಾಲಿಸುವುದೇ ದೀಕ್ಷೆಯೆಂದು ಸಿದ್ಧಾಂತಶಿಖಾಮಣಿಯ ಅಭಿಪ್ರಾಯ. ಅದನ್ನೇ ಮಗ್ಗೆಯ ಮಾಯಿದೇವರು ಹೀಗೆ ವಿವರಿಸಿರುವರು:

> "ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ
> ದೀಯತೇ ಕ್ಷೀಯತೇ ಯಸ್ಮಾತ್ ಸಾ ದೀಕ್ಷೇತಿ ನಿಗದ್ಯತೇ ॥"[೨]

ಇಲ್ಲಿ ಮಲತ್ರಯವನ್ನು ಕ್ಷಯಗೊಳಿಸಿ ಲಿಂಗಸಂಬಂಧವನ್ನುಂಟುಮಾಡುವುದೇ ದೀಕ್ಷೆಯೆಂದು ಮಾಯಿದೇವರು ಸ್ಪಷ್ಟಪಡಿಸುವರು. ಆ ದೀಕ್ಷೆ-

> "ಸಾ ದೀಕ್ಷಾ ತ್ರಿವಿಧಾ ಪ್ರೋಕ್ತಾ ಶಿವಾಗಮವಿಶಾರದೈಃ
> ವೇಧಾರೂಪಾ ಮಂತ್ರರೂಪಾ ಕ್ರಿಯಾರೂಪಾ ಚ ತಾಪಸ"[೩]

ಗುರು ದಯಪಾಲಿಸುವ ದೀಕ್ಷೆಯು ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ, ಎಂದು ಮೂರು ಬಗೆಯಾಗಿದೆ.

---

೧. ಸಿದ್ಧಾಂತ ಶಿಖಾಮಣಿ ಪರಿಚ್ಛೇದ ೬-೧೧.
೨. ಶಿವಾನುಭವಸೂತ್ರ ಪರಿಚ್ಛೇದ ೫—೩೮.
೩. ಸಿದ್ಧಾಂತ ಶಿಖಾಮಣಿ ಪರಿಚ್ಛೇದ ೬—೧೨.

"**ಹಸ್ತಮಸ್ತಕಸಂಯೋಗಾತ್ ಫಲಾತ್ ವೇಧೇತಿ ಗೀಯತೇ ॥**"

ಎಂದು ಮಾಯಿದೇವರು ವೇಧಾದೀಕ್ಷೆಯನ್ನು ವ್ಯಾಖ್ಯಾನಿಸಿರುವರು. ವಿಧ್ಯುಕ್ತವಾಗಿ ಗುರುವು ಶಿಷ್ಯನನ್ನು ತನ್ನ ಮುಂದೆ ಕುಳ್ಳಿರಿಸಿ, ಮೊದಲು ಆತನನ್ನು ತನ್ನ ಜ್ಞಾನದೃಷ್ಟಿ ಯಿಂದ ನೋಡುತ್ತಲೇ ಇರುತ್ತಾನೆ. ಹೀಗೆ ನೋಡುತ್ತಲೇ ಪಾವನಾತ್ಮಕನಾದ ಆ ಗುರು ಶಿಷ್ಯನ ಮಸ್ತಕದ ಮೇಲೆ ತನ್ನ ಹಸ್ತವನ್ನಿಡುತ್ತಾನೆ. ಈ ಕ್ರಿಯೆ 'ಹಸ್ತಮಸ್ತಕ ಸಂಯೋಗ'ವೆಂದು ಪ್ರಸಿದ್ಧವಾಗಿದೆ. ಹೀಗೆ ಹಸ್ತ ಮಸ್ತಕ ಸಂಯೋಗರೂಪವಾದ ವೇಧಾದೀಕ್ಷೆಯು ಶಿವತ್ವಸಮಾವೇಶವಾಗಿರುತ್ತದೆ.

"**ಶ್ರೀಗುರು ಶಿಷ್ಯನ ಮಸ್ತಕದಲ್ಲಿ ತನ್ನ ಹಸ್ತಕಮಲವನಿರಿಸಿ**
**ಲಿಂಗಕಳೆಯ ಪ್ರತಿಷ್ಠೆಯ ಮಾಡಿದನಾಗಿ,**
**ಆ ಗುರುವಿನ ಹಸ್ತದಿಂದ ಆ ಕಳೆ ಹುಟ್ಟಿ,**
**ಅದೇ ಕರಸ್ಥಲಕ್ಕೆ ಇಷ್ಟಲಿಂಗವಾಯಿತ್ತು;**
**ಭಾವಭರಿತವಾಗಿ ಭಾವಲಿಂಗವಾಯಿತ್ತು;**
. . . . . . . . . . . . ॥"[೧]

ಎಂದು ಸಿದ್ಧಲಿಂಗಶಿವಯೋಗಿಗಳು ಈ ದೀಕ್ಷಾತ್ರಯದ ವಿಷಯವನ್ನು ಸಂಕ್ಷಿಪ್ತವಾಗಿ ವಿವರಿಸಿರುವರು. ಅಂದರೆ, ವೇಧಾದೀಕ್ಷೆಯಲ್ಲಿ ಲಿಂಗಕಳೆಯ ಉತ್ಪತ್ತಿ ಮತ್ತು ಪ್ರತಿಷ್ಠಾ ಪನೆ ಉಂಟಾಗುತ್ತದೆ ಎಂದು ಸ್ಪಷ್ಟವಾಗುತ್ತದೆ. ಹೀಗೆ ನಿಷ್ಪನ್ನವಾದ ಲಿಂಗಕಳೆಯನ್ನು ಗುರು ಮೊದಲು ಶಿಷ್ಯನ ಭಾವದಲ್ಲಿ ಪ್ರತಿಷ್ಠಾಪಿಸುತ್ತಾನೆ. ಭಾವದಲ್ಲಿ ಅದು ಭಾವಲಿಂಗ ವೆನಿಸುತ್ತದೆ. ಆ ಮೇಲೆ ಭಾವದಿಂದ ಪ್ರಾಣಕ್ಕೆ ತರುತ್ತಾನೆ. ಅಲ್ಲಿ ಪ್ರಾಣಲಿಂಗವನ್ನು ಪ್ರತಿಷ್ಠಾಪಿಸುತ್ತಾನೆ. ಪ್ರಾಣದಿಂದ ಶಿಷ್ಯನ ಕರಸ್ಥಲಕ್ಕೆ ತಂದು ಇಷ್ಟಲಿಂಗವನ್ನು ದಯ ಪಾಲಿಸುತ್ತಾನೆ. ಶಿಷ್ಯನ ಹಸ್ತದಲ್ಲಿ ವಿಧ್ಯುಕ್ತಸಂಸ್ಕಾರದಿಂದ ಕೂಡಿದ ಇಷ್ಟಲಿಂಗವು ಗುರುವಿನಿಂದ ಪ್ರಾಪ್ತವಾಗುವುದೇ ಕ್ರಿಯಾದೀಕ್ಷೆ.

"**ಶಿಷ್ಯಪಾಣಿತಲೇ ದತ್ತ್ವಾ ಯಾ ದೀಕ್ಷಾ ಸಾ ಕ್ರಿಯೋಚ್ಯತೇ ॥**"[೨]

ಎಂದು ಮಾಯಿದೇವರು ಇದೇ ಅಭಿಪ್ರಾಯವನ್ನು ವ್ಯಕ್ತಮಾಡಿರುವರು. ಶಿವಯೋಗಿ ಶಿವಾಚಾರ್ಯರು ಇದನ್ನು 'ಕುಂಡಮಂಡಲಿಕೋಪೇತಾ' ಎಂದು ಕರೆದಿರುವರು. ಮಹಾ ಘನಲಿಂಗವು ಕರಸ್ಥಲಕ್ಕೆ ಬಂದು ಚುಳಕಾಗುವ ಕ್ರಿಯೆಯೇ 'ಕ್ರಿಯಾದೀಕ್ಷೆ'ಯೆಂದು ಇವರೆಲ್ಲರ ಅಭಿಮತ. ವೇಧಾದೀಕ್ಷೆ ಕ್ರಿಯಾದೀಕ್ಷೆ ಇವುಗಳ ನಡುವೆ ಮಂತ್ರದೀಕ್ಷೆಯಾಗು ತ್ತದೆ. ಮಂತ್ರದೀಕ್ಷೆಯ ಕಾಲದಲ್ಲಿ ಗುರು, ಶಿಷ್ಯನ ಕರ್ಣದಲ್ಲಿ ಮಂತ್ರೋಪದೇಶ ಮಾಡು ತ್ತಾನೆ. ಮೊದಲು ವೇಧಾದೀಕ್ಷೆ, ಅನಂತರ ಮಂತ್ರದೀಕ್ಷೆ, ಆ ಮೇಲೆ ಕ್ರಿಯಾದೀಕ್ಷೆ. ಇದು ದೀಕ್ಷಾಕ್ರಮ. ಸಿದ್ಧಲಿಂಗ ಶಿವಯೋಗಿಗಳು ಹೇಳಿದಂತೆ ಲಿಂಗಕಳೆಯನ್ನು ಜಾಗೃತ

---

೧. ತೋಂ. ಸಿ. ವ. ೧೭೩.
೨. ಶಿವಾನುಭವಸೂತ್ರ ೫—೪೧.

ಗೊಳಿಸುವುದು, ಅದನ್ನು ಭಾವ, ಪ್ರಾಣ ಮತ್ತು ಇಷ್ಟಗಳಲ್ಲಿ ಪ್ರತಿಷ್ಠಾಪಿಸುವುದು, ಶಿಷ್ಯನಿಗೆ ಮಂತ್ರೋಪದೇಶ ಮಾಡುವುದು ಇವೇ ದೀಕ್ಷಾತ್ರಯದ ಉದ್ದೇಶ. ಈ ದೀಕ್ಷಾತ್ರಯದಿಂದ ಶಿಷ್ಯನ ತನು, ಜಡತನುವೆನಿಸದೆ ಮಂತ್ರತನುವಾಗುವುದು.

**"ಶ್ರೀಗುರು ಕ್ರಿಯಾದೀಕ್ಷೆಯಿಂದ**
**ತನುಗುಣವ ಭಸ್ಮೀಕೃತವಮಾಡಿದ ಬಳಿಕ,**
**ಅದು ಜಡತನುವಲ್ಲ.**
**ಶಿವ ಸತ್ಕ್ರಿಯಾಚಾರದ ಮೂಲಸೂತ್ರವೇ ತನ್ನ ತನುವೆಂದಱಿವುದು.**
**ಶ್ರೀಗುರು ಮಂತ್ರದೀಕ್ಷೆಯಿಂದ ಮನದ ಪೂರ್ವಾಶ್ರಯವ ಕಳೆದು**
**ಮನಕ್ಕೆ ಘನ ನೆನಹ ಸಂಬಂಧಿಸಿದನಾಗಿ,**
**ಮನ ನಿರ್ಮಲವಾಗಿ ಲಿಂಗಕ್ಕಾಶ್ರಯವೆಂದು ಅಱಿವುದು.**
**ಶ್ರೀಗುರು ಜ್ಞಾನದೀಕ್ಷೆಯಿಂದ ಪ್ರಾಣನ ಪ್ರಪಂಚಿನ ಪಶುಭಾವವ ಕಳೆದು**
**ಅಖಂಡಿತ ಜ್ಞಾನಲಿಂಗಕಳೆಯ**
**ತನ್ನ ಪ್ರಾಣನಾಥನೆಂದು ತಿಳಿಹಿದನಾಗಿ,**
**ಪ್ರಾಣನ ಮಲಿನವೆಂಬುದು ಪಶುಭಾವವಲ್ಲದೆ ಲಿಂಗಭಾವವಲ್ಲ."**[೧]

ಇಲ್ಲಿ ಸಿದ್ಧಲಿಂಗ ಶಿವಯೋಗಿಗಳು ಕ್ರಿಯಾದೀಕ್ಷೆಯಿಂದತ ನುವಿನ ಪೂರ್ವಾಶ್ರಯವು ಅಂದರೆ, ಜಡತೆ ಅಳಿದು, ಅದು ಶಿವಸತ್ಕ್ರಿಯಾಚಾರಕ್ಕೆ ಅಧಿಷ್ಠಾನವಾಗುವುದೆಂದೂ ಮಂತ್ರದೀಕ್ಷೆಯಿಂದ ಮನದ ಪೂರ್ವಾಶ್ರಯ ಅಂದರೆ, ಮೋಹವಳಿದು ಅದಕ್ಕೆ ಲಿಂಗಕಳೆ ಪ್ರಾಪ್ತವಾಗುವುದೆಂದೂ ಸ್ಪಷ್ಟಪಡಿಸಿರುವರು. ಇದು ದೀಕ್ಷಾತ್ರಯದ ರಹಸ್ಯ, ಉದ್ದೇಶ. ಒಂದು ಮಾತಿನಲ್ಲಿ ಹೇಳುವುದಾದರೆ, ಆತ್ಮನನ್ನು ಆವರಿಸಿದ್ದ ಆಣವ, ಕಾರ್ಮಿಕ, ಮಾಯಾ ಮಲಗಳನ್ನು ಪರಿಚ್ಛೇದನಗೊಳಿಸಿ, ಶ್ರೀಗುರು ಶಿಷ್ಯನನ್ನು ಶುದ್ಧಜೀವಿಯನ್ನಾಗಿ ಮಾಡುತ್ತಾನೆ. ಇಲ್ಲಿ ಮೂರು ಬಗೆಯ ದೀಕ್ಷೆಯನ್ನಿಟ್ಟುಕೊಂಡುದೇಕೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅದಕ್ಕೆ ಉತ್ತರವು ಮೇಗಣ ವಿವರಣೆಯಲ್ಲಿಯೇ ಸ್ಪಷ್ಟವಾಗಿದೆ. ಕಾರಣ, ಸೂಕ್ಷ್ಮ, ಸ್ಥೂಲತನುಗಳನ್ನು ಮಲತ್ರಯದಿಂದ ಬಿಡುಗಡೆ ಮಾಡುವುದಕ್ಕಾಗಿ ಭಾವ, ಪ್ರಾಣ, ಇಷ್ಟಗಳಲ್ಲಿ ಲಿಂಗಪ್ರತಿಷ್ಠಾಪನ ಮಾಡುವುದೇ ದೀಕ್ಷಾತ್ರಯದ ಉದ್ದೇಶ.

ಈಗ ಗುರುದೀಕ್ಷೆಯನ್ನು ಪಡೆದ ಶುದ್ಧಜೀವನು ಅಂಗನೆನಿಸಿ ಭಕ್ತಸ್ಥಲದ ತೀವ್ರಗತಿ ಆರಂಭವಾಗುತ್ತದೆ. ಭಕ್ತನ ದೇಹದಲ್ಲಿ ಪೃಥಿವ್ಯಾದಿ ತತ್ವಗಳು ನೆಲೆಗೊಂಡಿರುತ್ತವೆ. ನಾಸಿಕದಲ್ಲಿ ಪೃಥ್ವಿ, ಜಿಹ್ವೆಯಲ್ಲಿ ಆಪ್, ನೇತ್ರದಲ್ಲಿ ತೇಜ, ತ್ವಕ್ಕಿನಲ್ಲಿ ವಾಯು, ಶ್ರೋತ್ರದಲ್ಲಿ ಆಕಾಶ, ಹೃದಯದಲ್ಲಿ ಆತ್ಮತತ್ವಗಳು ನೆಲೆಗೊಂಡಿರುತ್ತವೆ. ಇಂದ್ರಿಯಗಳ ಭೌತಿಕ ತತ್ತ್ವ ಹಿಂಗಿ ಶಿವತತ್ತ್ವ ಅಳವಡಬೇಕೆಂದು ಭಕ್ತನ ನಾಸಿಕದಲ್ಲಿ ಆಚಾರಲಿಂಗವನ್ನು, ಜಿಹ್ವೆಯಲ್ಲಿ ಗುರುಲಿಂಗವನ್ನು, ನೇತ್ರದಲ್ಲಿ ಶಿವಲಿಂಗವನ್ನು, ತ್ವಕ್ಕಿನಲ್ಲಿ ಜಂಗಮಲಿಂಗವನ್ನು, ಶ್ರೋತ್ರದಲ್ಲಿ ಪ್ರಸಾದಲಿಂಗವನ್ನು ಗುರು ಪ್ರತಿಷ್ಠಿಸುವನು. ಇಂದ್ರಿಯಗಳ ಅಂಗಗುಣ

---

೧. ತೋಂ. ಸಿ. ವ. ೧೭೨.

ಗಳನ್ನು ಲಿಂಗಗುಣಗಳನ್ನಾಗಿ ಮಾರ್ಪಡಿಸುವುದೇ ಶ್ರೀಗುರುವಿನ ಉದ್ದೇಶ. ಹೀಗೆ ಮಾರ್ಪಡುವುದೇ ಲಿಂಗಾಂಗ ಸಾಮರಸ್ಯ. ಭಕ್ತಸ್ಥಲದಲ್ಲಿ ಶ್ರದ್ಧೆ ಆರಂಭವಾಗಿರುತ್ತದೆ. ಶಿವಲಿಂಗಸಂಪನ್ನನಾಗಿ ಪ್ರಣವಪಂಚಾಕ್ಷರಿಯನ್ನೇ ಜಪಿಸಿ ಶಿವಲಿಂಗಾರ್ಚನೆಯನ್ನು ಮಾಡಲು ಆ ಶಿವಲಿಂಗದ ಸಾಂಗಕ್ರಿಯೆಗಳು ಅಳವಟ್ಟು ಶ್ರದ್ಧೆಯಾಗುತ್ತದೆ. ಈ ಶ್ರದ್ಧೆ ಯಿಂದ ಒಡಗೂಡಿದುದೇ ಭಕ್ತಸ್ಥಲ. ಶ್ರದ್ಧೆಯೆಂದರೆ, ಆಶ್ರಯ, ಲಿಂಗಾಶ್ರಯ. ಸಂಸಾರದ ಮೇಲಿನ ತೃಷೆ ಹಿಂಗಿ ಲಿಂಗದ ಹಂಬಲ ಪ್ರಾಪ್ತವಾಗುವುದೇ ಶ್ರದ್ಧೆ. ಆ ಶ್ರದ್ಧೆಯುಳ್ಳಾತನೇ ಭಕ್ತ. ಭಕ್ತನ ವ್ಯಾಖ್ಯೆಯನ್ನು ಸಿದ್ಧಲಿಂಗ ಶಿವಯೋಗಿಗಳು ಹೀಗೆ ನಿರೂಪಿಸುವರು:

ಸದಾಚಾರದಲ್ಲಿ ನಡೆವವನ
ಶಿವನಲ್ಲಿ ಭಕ್ತಿಯಾಗಿಪ್ಪವನ
ಶಿವಲಾಂಛನವ ಕಂಡಲ್ಲಿ ವಂದನೆಗೈವುತಿಪ್ಪವನ
    ಲಿಂಗ ಜಂಗಮವ ಒಂದೆ ಭಾವದಲ್ಲಿ ಕಂಡು
ಭೃತ್ಯಾಚಾರ ಸದಾಚಾರಯುಕ್ತನಾಗಿರಬಲ್ಲರೆ ಭಕ್ತ ಸ್ಥಲವಿದೆಂಬೆನಯ್ಯಾ.
    ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಭಕ್ತಾದ್ಯೈಕ್ಯಾಂತವಹ ಷಡಂಗಕ್ಕೆ ಭಕ್ತನಂಗವೆ ಆದಿಯಾಗಿ
ಆ ಭಕ್ತಂಗೆ ಪೃಥ್ವಿಯೆ ಅಂಗವಾಗಿ
ಆ ಪೃಥ್ವಿಯು ಅಂಗವನುಳ್ಳ ಭಕ್ತನಲ್ಲಿಯೆ
    ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನಪ್ಪ
    ಅಂಗಪಂಚಕವು ಗರ್ಭೀಕೃತವಾಗಿ
ಆ ಭಕ್ತನಂಗದಲ್ಲಿಯೆ ಆಚಾರಲಿಂಗ ಸ್ವಾಯುತವಾಗಿ
ಆ ಆಚಾರಲಿಂಗದಲ್ಲಿಯೆ
ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗವೆನಿಸುವ
    ಲಿಂಗಪಂಚಕವು ಗರ್ಭೀಕೃತವಾಗಿ
ಆಚಾರಲಿಂಗವೆ ಸರ್ವಕಾರಣವಾಗಿ
ಇಂತೀ ಷಡ್ವಿಧಲಿಂಗದಲ್ಲಿಯೆ ಬೆರಸಿ ಬೇಱಿಲ್ಲದಿರಬಲ್ಲರೆ ಭಕ್ತನೆಂಬೆನಯ್ಯಾ
    ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಈ ಸ್ಥಲದಲ್ಲಿ ಹಿಂದೆ ವಿವರಿಸಿದಂತೆ ಆಚಾರವೇ ಮುಖ್ಯ. ಶ್ರದ್ಧೆ ಬಲಿತರೆ ಅದರ ಪರಿಣಾಮವಾಗುವುದು ಹೀಗೆ. ಭಕ್ತಸ್ಥಲಯುಕ್ತನಾದ ಸಾಧಕನು ಪೃಥ್ವ್ಯಂಗದಲ್ಲಿ ನಿಂತು ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗವನ್ನು ಶ್ರದ್ಧಾಭಕ್ತಿಯಿಂದ ಅರ್ಚಿಸುವನು. ಆಗ ಅವನ ಚಿತ್ತ ಸುಚಿತ್ತವಾಗುವುದು. ಆ ಸುಚಿತ್ತವೇ ಹಸ್ತವಾಗಿ ಪೃಥ್ವಿಗುಣವಾದ ಗಂಧ ಪದಾರ್ಥವನ್ನು ಗ್ರಹಿಸಿ ಘ್ರಾಣೇಂದ್ರಿಯದ ಮುಖದಲ್ಲಿ ಆಚಾರಲಿಂಗಕ್ಕೆ ಅರ್ಪಿಸುವುದು. ಹೀಗೆ ಗಂಧಪದಾರ್ಥ ಪ್ರಸಾದವಾಗುವುದು. ಆ ಆಚಾರಲಿಂಗದ ಗಂಧಪ್ರಸಾದವನ್ನು ಭೋಗಿಸಿದ ಲಿಂಗಭೋಗೋಪಭೋಗಿಯಾದ ಭಕ್ತನು ಮಹೇಶ್ವರನೆನಿಸುವನು.

## ಮಹೇಶ್ವರಸ್ಥಲ

ಶ್ರದ್ಧಾಭಕ್ತಿಯನ್ನು ಆಚರಿಸಿದ ಸದ್ಭಕ್ತನಿಗೆ ತನ್ನ ಪ್ರಸಾದ ಫಲವಾಗಿ ಆ ಶ್ರದ್ಧಾ ಭಕ್ತಿಯಲ್ಲಿ ಕೃತನಿಶ್ಚಯ ನೆಲೆಗೊಂಡು ನಿಷ್ಠೆಯಾಗುತ್ತದೆ. ಪರಮಾತ್ಮನ ಸಲುವಾಗಿದ್ದ ಪ್ರೇಮವಿಶ್ವಾಸಗಳೇ ಮುಂದೆ ನಿಷ್ಠೆಯಲ್ಲಿ ಪರಿಣಮಿಸುತ್ತವೆ. ಈ ನಿಷ್ಠಾಭಕ್ತಿಯಿಂದ ಕೂಡಿದ ಭಕ್ತನೇ ಮಹೇಶ್ವರನೆನಿಸುವನು. ಆಗ ಆತನಿಗೆ ಅನೃತ, ಅನಾಚಾರ, ಅನ್ಯ ಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ ಇವೆಲ್ಲವೂ ತ್ಯಾಜ್ಯವಾಗುತ್ತವೆ. ಲಿಂಗನಿಷ್ಠೆ ಬಲಿತಂ ಅವನು ಶುದ್ಧಾತ್ಮನಾಗಿರುತ್ತಾನೆ. ಮಹೇಶ್ವರನ ಲಕ್ಷಣವನ್ನು ಶಿವಯೋಗಿಗಳು ಹೀಗೆ ಹೇಳಿರುವರು:

ಜಲವೆ ಅಂಗವಾದ ಮಾಹೇಶ್ವರನಲ್ಲಿ
ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಭಕ್ತನಪ್ಪ
ಅಂಗಪಂಚಕವು ಗರ್ಭೀಕೃತವಾಗಿ
ಆ ಮಹೇಶ್ವರಂಗೆ ಗುರುಲಿಂಗಸಂಬಂಧವಾಗಿ
ಆ ಗುರುಲಿಂಗದಲ್ಲಿಯೆ
ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಆಚಾರಲಿಂಗವೆನಿಸುವ
ಲಿಂಗಪಂಚಕವು ಗರ್ಭೀಕೃತವಾಗಿ
ಗುರುಲಿಂಗವೆ ಆಶ್ರಯವಾಗಿ
ಇಂತೀ ಷಡ್ವಿಧಲಿಂಗದಲ್ಲಿಯೆ
ಬೆರಸಿ ಬೇಱಿಲ್ಲದಿರಬಲ್ಲರೆ ಮಾಹೇಶ್ವರನೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !

ಈ ಸ್ಥಲದಲ್ಲಿ ಜಲಾಂಗದಲ್ಲಿದ್ದ ಮಹೇಶ್ವರನು ನಿಷ್ಠಾಭಕ್ತಿಯುಕ್ತನಾಗಿ ಜ್ಞಾನಶಕ್ತಿ ಯೊಡಗೂಡಿದ ಗುರುಲಿಂಗವನ್ನು ಪೂಜಿಸುವನು. ತತ್ಪರಿಣಾಮವಾಗಿ ಅವನ ಬುದ್ಧಿ ಸುಬುದ್ಧಿಯಾಗುತ್ತದೆ. ಈ ಸುಬುದ್ಧಿಯೆಂಬ ಹಸ್ತದಿಂದ ಮಹೇಶ್ವರನು ರಸಪದಾರ್ಥ ವನ್ನು ಗ್ರಹಿಸಿ ಜಿಹ್ವಾಮುಖದಲ್ಲಿ ಗುರುಲಿಂಗಕ್ಕೆ ಅರ್ಪಿಸುವನು. ರಸಪದಾರ್ಥ ಪ್ರಸಾದ ವಾಗುವುದು. ಆ ಪ್ರಸಾದವನ್ನು ಭೋಗಿಸಿದ ಮಹೇಶ್ವರನು ಪ್ರಸಾದಿಯಾಗುವನು.

## ಪ್ರಸಾದಿಸ್ಥಲ

ನೈಷ್ಠಿಕಾಮುಖದಿಂದ ಆಚರಿಸಿದ ಮಹೇಶ್ವರನು ಆ ನಿಷ್ಠಾಭಕ್ತಿಯ ಬಲದಿಂದ ಶಿವಪ್ರಸನ್ನತ್ವವನ್ನು ಪಡೆಯುವನು. ಶಿವಪ್ರಸನ್ನತೆಯಿಂದ ಶಿವಪ್ರಸಾದತ್ವ ಪ್ರಾಪ್ತ ವಾಗುತ್ತದೆ. ಅಂತೆಯೇ ಅದು ಪ್ರಸಾದಿಸ್ಥಲವೆನಿಸುವುದು.

ಸರ್ವಾಂಗವನು ಲಿಂಗನಿಷ್ಠೆಯಿಂದ ಘಟ್ಟಿಗೊಳಿಸಿ
ಮನವ ಉನ್ಮನಿಯವಸ್ಥೆಯನೆಯ್ದಿಸಿ
ಶತಪತ್ರದಲ್ಲಿ ಸೈತಿಟ್ಟು ಲಿಂಗಕ್ಕೆ ಅರ್ಪಿಸಿದ ನೈವೇದ್ಯವ

ಲಿಂಗನೆನಹಿನಲ್ಲಿಯೆ ಸ್ವೀಕರಿಸುವುದು
ಅಂಗಾರ್ಪಿತವ ವಿಸರ್ಜಿಸುವುದಯ್ಯಾ !
ತಟ್ಟುವ ಮುಟ್ಟುವ ಸೋಂಕುವ ಮರ್ಮವನರಿದು
ಲಿಂಗಮುಖಕ್ಕೆ ನಿವೇದಿಸಿ
ಲಿಂಗಪ್ರಸಾದವ ಸ್ವೀಕರಿಸುತಿರಬಲ್ಲರೆ
ಪ್ರಸಾದಿಸ್ಥಲವಿದೆಂಬೆನಯ್ಯಾ !
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !

ಅಗ್ನಿಯೆ ಅಂಗವಾದ ಪ್ರಸಾದಿಯಲ್ಲಿ
ಪ್ರಾಣಲಿಂಗಿ ಶರಣ ಐಕ್ಯ ಭಕ್ತ ಮಾಹೇಶ್ವರನಪ್ಪ
ಅಂಗಪಂಚಕವು ಗರ್ಭೀಕೃತವಾಗಿ
ಆ ಪ್ರಸಾದಿಯಲ್ಲಿ ಶಿವಲಿಂಗ ಸಂಬಂಧವಾಗಿ
ಆ ಶಿವಲಿಂಗದಲ್ಲಿಯೆ
ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಆಚಾರಲಿಂಗ ಗುರುಲಿಂಗವೆನಿಸುವ
ಲಿಂಗಪಂಚವು ಗರ್ಭೀಕೃತವಾಗಿ
ಶಿವಲಿಂಗವೆ ಸರ್ವಾಶ್ರಯವಾಗಿ
ಇಂತೀ ಷಡ್ವಿಧಲಿಂಗದಲ್ಲಿ ಬೆರಸಿ ಬೇರಿಲ್ಲದಿರಬಲ್ಲರೆ ಪ್ರಸಾದಿಯೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !

ಈ ಪ್ರಸಾದಿಸ್ಥಲದಲ್ಲಿ ಸಾಧಕನಿಗೆ ಪರಮಾತ್ಮನ ಕೃಪೆ ಅಳವಟ್ಟಿದೆ. ಈ ಕೃಪೆ ಆತನಲ್ಲಿ ಅಳವಟ್ಟಿದ್ದ ಶ್ರದ್ಧೆ-ನಿಷ್ಠೆಗಳ ಫಲ. "ಶ್ರದ್ಧಾವಾನ್ ಲಭತೇ ಜ್ಞಾನಂ" ಎಂದು ಗೀತೆ ಹೇಳುತ್ತದೆ. ಬಯಕೆಯಲ್ಲಿ ಫಲವು ಅಂಕುರಿಸಿರುತ್ತದೆ. ಸಾಧಕನ ಭಕ್ತಿಯಲ್ಲಿ ನಿಷ್ಠೆ ಫಲಿಸಿತು. ಎಂದರೆ, ಭಕ್ತಿಯೆ ನಿಷ್ಠೆಯಾಯಿತು. ಆ ನಿಷ್ಠೆಯೀಗ ಪ್ರಸಾದಿಸ್ಥಲದಲ್ಲಿ ಅವಧಾನ ಸ್ವರೂಪವನ್ನು ಪಡೆಯುವುದು. ಅವಧಾನಭಕ್ತಿಯಿಂದಲೇ ಪರಮಾತ್ಮನತ್ತ ಜಾಗ್ರುತಿಯುಂಟಾಗುವುದು. ಪರಮಾತ್ಮನ ಜ್ಞಾನಪ್ರಸಾದ ಪ್ರಾಪ್ತವಾಗುವುದು. ಪ್ರಸಾದಿಸ್ಥಲ ಸಂಪನ್ನನಾದ ವೀರಶೈವನಿಗೆ ಅಗ್ನಿಯೆ ಅಂಗ. ಇಚ್ಛಾಶಕ್ತಿ ಸಮೇತವಾದ ಶಿವ-ಲಿಂಗವೇ ಪೂಜ್ಯವಸ್ತು. ಅದನ್ನು ಆತನು ಪೂಜಿಸುವುದು ಅವಧಾನಭಕ್ತಿಯಿಂದ. ಆ ಅವಧಾನಭಕ್ತಿಯ ಫಲವಾಗಿ ಆತನ ಅಹಂಕಾರ ನಿರಹಂಕಾರವಾಗುವುದು. ಆ ಪ್ರಸಾದದ ಬಲದಿಂದ ಪ್ರಸಾದಿಯು ಪ್ರಾಣಲಿಂಗಿಯಾಗುವನು.

## ಪ್ರಾಣಲಿಂಗಿಸ್ಥಲ

ಅವಧಾನಭಕ್ತಿ ಬಲಿದು ಅನುಭಾವವಾಗಿ ಅವನು ಪ್ರಾಣಲಿಂಗಿಸ್ಥಲವನ್ನೈದುವನು.

ಸುಗುಣವೆ ಲಿಂಗಪ್ರಾಣಿಯಯ್ಯಾ.
ದುರ್ಗುಣವೆ ವಾಯುಪ್ರಾಣಿಯಯ್ಯಾ.
ಸುಗುಣ ದುರ್ಗಣವೆಂಬುಭಯವನತಿಗಳೆದು
ಸುಖದುಃಖಾದಿಗಳ ಸಮಾನಂಗಂಡು

ಶತ್ರುಮಿತ್ರಾದಿಗಳ ಸಮಾನಂಗಂಡು
ಸ್ತುತಿನಿಂದ್ಯಾದಿಗಳ ಸಮಾನಂಗಂಡು
ಹಾಸ್ಯ ವಿಸ್ಮಯ ವಿರಹ ಕರಣಹೇಸಿಕೆ
ಇಂತೀ ಪ್ರಾಣನ ವಿಷಯಭ್ರಾಂತಿಯನತಿಗಳೆದು
ಪ್ರಾಣನ ಪೂರ್ವಾಶ್ರಯವಳಿದು
ಲಿಂಗದ ನೆನಹು ಸಂಬಂಧಿಸಿ
ಲಿಂಗವೇ ಪ್ರಾಣವಾಗಿರಬಲ್ಲರೆ ಪ್ರಾಣಲಿಂಗಿಸ್ಥಲವಿದೆಂಬೆನಯ್ಯಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !
ವಾಯುವೆ ಅಂಗವಾದ ಪ್ರಾಣಲಿಂಗಿಯಲ್ಲಿಯೆ
ಶರಣ ಐಕ್ಯ ಭಕ್ತ ಮಹೇಶ್ವರ ಪ್ರಸಾದಿಯಪ್ಪ
ಅಂಗಪಂಚಕವು ಗರ್ಭೀಕೃತವಾಗಿ
ಆ ಪ್ರಾಣಲಿಂಗಿಗೆ ಜಂಗಮಲಿಂಗ ಸ್ವಾಯತವಾಗಿ
ಆ ಜಂಗಮಲಿಂಗದಲ್ಲಿಯೆ
ಪ್ರಸಾದಲಿಂಗ, ಮಹಾಲಿಂಗ, ಆಚಾರಲಿಂಗ, ಗುರುಲಿಂಗ, ಶಿವಲಿಂಗವೆನಿಸುವ
ಲಿಂಗಪಂಚಕವು ಗರ್ಭೀಕೃತವಾಗಿ
ಜಂಗಮಲಿಂಗವೆ ಆಶ್ರಯವಾಗಿ
ಇಂತೀ ಷಡ್ವಿಧಲಿಂಗದಲ್ಲಿ ಬೆರಸಿ ಬೇಱಿಲ್ಲದಿರಬಲ್ಲರೆ ಪ್ರಾಣಲಿಂಗಿಯೆಂಬೆನಯ್ಯಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಹೀಗೆ ಪ್ರಾಣಲಿಂಗಿಸ್ಥಲದಲ್ಲಿ ಪ್ರಾಣನ ಪೂರ್ವಾಶ್ರಯವಳಿಯುವುದು, ಲಿಂಗದ ನೆನಹು ಸಂಬಂಧಿಸುವುದು. ಲಿಂಗವೇ ಪ್ರಾಣವಾಗಿ, ಪ್ರಾಣವೇ ಲಿಂಗವಾಗಿ ಪ್ರಾಣಲಿಂಗಿಯೆನಿಸುವನು. ಪ್ರಾಣಲಿಂಗಿಗೆ ವಾಯುವೆ ಅಂಗ; ಆದಿಶಕ್ತಿಸಮೇತವಾದ ಜಂಗಮಲಿಂಗವೆ ಲಿಂಗ. ಈ ಲಿಂಗವನ್ನು ಆತನು ಅನುಭಾವಭಕ್ತಿಯಿಂದ ಆರಾಧಿಸುವನು. ತತ್ಪರಿಣಾಮವಾಗಿ ಆತನ ಮನಸ್ಸು ಸುಮನಸ್ಸಾಗುವುದು. ಸುಮನೋಹಸ್ತದಿಂದ ಸ್ಪರ್ಶಪದಾರ್ಥವನ್ನು ಕೈಕೊಂಡು ತ್ವಗಿಂದ್ರಿಯ ಮುಖದಲ್ಲಿಟ್ಟು ಜಂಗಮಲಿಂಗಕ್ಕರ್ಪಿಸುವನು; ಇದರಿಂದ ಸ್ಪರ್ಶಪದಾರ್ಥ ಪ್ರಸಾದವಾಗುವುದು. ಈ ಪ್ರಸಾದದ ಬಲದಿಂದ ಪ್ರಾಣಲಿಂಗಿಯು ಶರಣನೆನಿಸುವನು.

## ಶರಣಸ್ಥಲ

ಅನುಭಾವಭಕ್ತಿಯು ಆನಂದ ಭಕ್ತಿಯಾಗಿ ಪರಿಣಮಿಸಲು ಶರಣಸ್ಥಲ ಅಳವಡುವುದು.

ಲಿಂಗವೆ ಪತಿಯಾಗಿ ತಾನೆ ಸತಿಯಾಗಿ
ಅನ್ಯವನಱಿಯದೆ, ಪಂಚೇಂದ್ರಿಯರಹಿತನಾಗಿ,
ತೆಱಹಿಲ್ಲದಱುಹು ತಾನಾಗಿ, ನೆಱೆ ಅಱುಹಿನೊಳು ನಿಬ್ಬೆಱಗಾಗಿ,
ಹೃದಯಕಮಲಮಧ್ಯದಲ್ಲಿ ಪರಮೇಶ್ವರನೊಳಗಣ ಸಮರಸಸ್ನೇಹವೆರಸಿ
ಅಗಲದಿಪ್ಪುದೀಗ ಶರಣಸ್ಥಲವಿದೆಂಬೆನಯ್ಯಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.[೧]

---

೧. ತೋಂ. ಸಿ. ವ. ೪೪೩.

ಆಕಾಶವೆ ಅಂಗವಾದ ಶರಣನಲ್ಲಿಯೆ
ಐಕ್ಯ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿಯುಪ್ಪ
ಅಂಗಪಂಚಕವು ಗರ್ಭೀಕೃತವಾಗಿ
ಶರಣಂಗೆ ಪ್ರಸಾದಲಿಂಗವೆ ಸ್ವಾಯುತವಾಗಿ
ಆ ಪ್ರಸಾದಲಿಂಗದಲ್ಲಿಯೆ
ಮಹಾಲಿಂಗ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗವೆನಿಸುವ
ಲಿಂಗಪಂಚಕವು ಗರ್ಭೀಕೃತವಾಗಿ
ಪ್ರಸಾದಲಿಂಗವೆ ಆಶ್ರಯುವಾಗಿ,
ಇಂತೀ ಷಡ್ವಿಧಲಿಂಗದಲ್ಲಿ ಬೆರಸಿ, ಬೇಱಿಲ್ಲದಿರಬಲ್ಲರೆ ಶರಣನೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !

ಎಂದು ಸಿದ್ಧಲಿಂಗ ಶಿವಯೋಗಿಗಳು ಶರಣಸ್ಥಲದ ಲಕ್ಷಣ ಹೇಳಿರುವರು. ಈ ಸ್ಥಲದಲ್ಲಿ ಶರಣಸತಿ ಲಿಂಗಪತಿ ಎಂಬ ಭಾವವು ಪ್ರಕಟವಾಗುವುದು. ಪಂಚೇಂದ್ರಿಯ ರಹಿತನಾಗಿ ತೆರಹಿಲ್ಲದರುಹು ತಾನಾಗಿರುವನು. ಆ ಅರುಹಿನಲ್ಲಿ ಬೆರಸಿ ಬೇರಿಲ್ಲದೆ ನಿಬ್ಬೆರಗಿನಲ್ಲಿರುವನು. ಹೃದಯಕಮಲಮಧ್ಯದಲ್ಲಿರುವ ಪರಮಾತ್ಮನಲ್ಲಿ ಸಮರಸಸ್ನೇಹದಿಂದಿರುವನು. ಆ ಸ್ನೇಹದಿಂದ ಅಗಲದಿರುವನು. ಶರಣನು ವ್ಯೋಮಕಾಯನಾಗಿ ಪರಾಶಕ್ತಿಯುಕ್ತವಾದ ಪ್ರಸಾದಲಿಂಗವನ್ನು ಆನಂದಭಕ್ತಿಯಿಂದ ಆರಾಧಿಸುವನು. ಅವನ ಜ್ಞಾನವು ಸುಜ್ಞಾನವಾಗುವುದು. ಆ ಸುಜ್ಞಾನಹಸ್ತದಿಂದ ಶಬ್ದಪದಾರ್ಥವನ್ನು ಗ್ರಹಿಸಿ ಶ್ರೋತ್ರೇಂದ್ರಿಯ ಮುಖದಲ್ಲಿ ಪ್ರಸಾದಲಿಂಗಕ್ಕರ್ಪಿಸುವನು. ತತ್ಪರಿಣಾಮವಾಗಿ ಶಬ್ದಪದಾರ್ಥ ಪ್ರಸಾದವಾಗುವುದು. ಮುಂದೆ ಐಕ್ಯಸ್ಥಲ ಪ್ರಾಪ್ತವಾಗುವುದು.

## ಐಕ್ಯಸ್ಥಲ

ಆನಂದಭಕ್ತಿ ಸಮರಸಭಕ್ತಿಯಾಗಿ ಐಕ್ಯಸ್ಥಲವಳವಡುವುದು. ಶರಣ, ಲಿಂಗ ಎಂಬ ಉಭಯವಳಿದು ಮಹಾಲಿಂಗದಲ್ಲಿ ಏಕರಸಮಯನಾಗಿರುವನು.

ಕ್ಷುತ್ತು, ಪಿಪಾಸೆ, ಶೋಕ, ಮೋಹ, ಜರಾ, ಮರಣ ಎಂಬ
ಷಡೂರ್ಮಿಗಳಿಲ್ಲದೆ ಇಪ್ಪನು;
ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ
ಷಡುವರ್ಗಗಳಿಲ್ಲದೆ ಇಪ್ಪನು.

ನಾಹಂ ಕೋऽಹಂ ಸೋऽಹಂ ಎಂಬ ಭಾವರಹಿತನಾಗಿಪ್ಪನು;
ಅಷ್ಟವಿಧಾರ್ಚನೆ ಷೋಡಶೋಪಚಾರರಹಿತನಾಗಿಪ್ಪನು.
ಕರ್ಪುರ-ಅಗ್ನಿಸಂಯೋಗವಾಗಿ ಕರ್ಪುರದ ಗುಣವಳಿದು ಅಗ್ನಿಯಾದಂತೆ
ಲಿಂಗವ ನೆನೆನೆನೆದು ಲಿಂಗವೇ ತಾನಾಗಿಪ್ಪುದೀಗ
ನಿಜೈಕ್ಯಸ್ಥಲವೆಂಬೆನಯ್ಯಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಸಿದ್ಧಲಿಂಗ ಶಿವಯೋಗಿಗಳ ಈ ವಚನಗಳು ಐಕ್ಯಸ್ಥಲದ ಲಕ್ಷಣಗಳನ್ನು ವಿವರವಾಗಿ ಕೊಡುತ್ತವೆ. ಐಕ್ಯನು ಆತ್ಮಾಂಗದಲ್ಲಿದ್ದ ಚಿಚ್ಛಕ್ತಿಯುಕ್ತವಾದ ಮಹಾಲಿಂಗವನ್ನು ಸಮರಸಭಕ್ತಿಯಿಂದ ಆರಾಧಿಸುವನು. ತತ್ಪರಿಣಾಮವಾಗಿ ಆತನ ಭಾವ ಸದ್ಭಾವವಾಗುವುದು. ಈ ಸದ್ಭಾವಹಸ್ತದಿಂದ ತೃಪ್ತಿಪದಾರ್ಥವನ್ನು ಪರಿಗ್ರಹಿಸಿ ಮನೋಮುಖದಲ್ಲಿ ಮಹಾಲಿಂಗಕ್ಕರ್ಪಿಸುವನು. ತೃಪ್ತಿಪದಾರ್ಥವು ಪ್ರಸಾದವಾಗುವುದು.

ಈ ಷಟ್‌ಸ್ಥಲಗಳ ಸುಂದರವಾದ ವರ್ಣನೆಯನ್ನು ಕೆಳಗಿನ ವಚನಗಳಲ್ಲಿ ಕಾಣಬಹುದು:

ಕಿಂಕುರ್ವಾಣತೆಯಿಂದೆ ಉಳ್ಳುದನಱಿತು ಮಾಡುವಲ್ಲಿ ಭಕ್ತ.
ನಿಷ್ಠೆ ನಿಬ್ಬೆರಸಿ ಗಟ್ಟಿಗೊಂಡು ಅಭಿಲಾಷೆ ಸಮನಿಸದೆ
ಪರಿಚ್ಛೇದಬುದ್ಧಿಯುಳ್ಳಲ್ಲಿ ಮಹೇಶ್ವರ.
ಅನರ್ಪಿತವ ಸಮನಿಸದೆ ಬಂದುದ ಕಾಯದ ಕರಣದ
ಕೈಯಲ್ಲಿ ಕೊಟ್ಟು ಲಿಂಗಸಹಿತ ಭೋಗಿಸುವಲ್ಲಿ ಪ್ರಸಾದಿ.
ಪ್ರಾಣಕ್ಕೆ ಪ್ರಾಣವಾಗಿ ಕಾಲಸ್ಥಿತಿಯನಱಿದು
ಎಚ್ಚಱಿಕೆಗುಂದದಿಪ್ಪಲ್ಲಿ ಪ್ರಾಣಲಿಂಗಿ.
ತನಗೆ ಲಿಂಗವಾಗಿ ಲಿಂಗಕ್ಕೆ ತಾನಾಗಿ ಹೆಚ್ಚು ಬೇಱಿಲ್ಲದಿರ್ದೊಡೆ ಶರಣ.
ಸದಾಚಾರ ಸಂಪತ್ತಿನಲ್ಲಿ ಬಂದ ಅನುಭಾವವನು ಮೀಱಿ
ಹೆಸರಡಗಿದ ಸುಖವದು ಲಿಂಗೈಕ್ಯ.
ಇದುಕಾರಣ, ಚನ್ನಸಂಗಯ್ಯನಲ್ಲಿ ಬಸವಣ್ಣಂಗಲ್ಲದೆ ಷಟ್‌ಸ್ಥಲವಪೂರ್ವ.
ಭಕ್ತನಾದಡೆ ತನುಮನದಾಸೆಯನಳಿದಿರಬೇಕು.
ಮಹೇಶ್ವರನಾದಡೆ ಪರಧನ, ಪರಚಿಂತೆ,
ಪರಾಂಗನೆಯರ ಎಡೆಯುಳಿದಿರಬೇಕು.
ಪ್ರಸಾದಿಯಾದಡೆ ಸುಖರುಚಿಯುವಗ್ರಹವಂ ಮಱೆದು
ಪ್ರಸಾದ ಘುಟವಳಿಯದೆ ಉಳಿದಿರಬೇಕು.
ಪ್ರಾಣಲಿಂಗಿಯಾದಡೆ ಘುಟದಾಸೆಯ ತೊಱೆದು,
ಪ್ರಾಣಲಿಂಗದೊಳಗೆ ಬೆರಸಿ ಬೇಱಿಲ್ಲದಿರಬೇಕು.
ಲಿಂಗೈಕ್ಯನಾದಡೆ ಆಪ್ಯಾಯನದೆಡೆಯಡಗಿ ಸುಖದುಃಖಮಂ ತಾಳದೆ
ನಿಭ್ರಾಂತನಾಗಿರಬೇಕು.
ಇಂತೀ ಷಟ್‌ಸ್ಥಲವಾರಿಗೆಯೂ ಅಳವಡದು.
ಸೊಡ್ಡಳದೇವನು ಷಟ್‌ಸ್ಥಲದ ಭಕ್ತಿಯನು
ಬಸವಣ್ಣಂಗೆ ಮೂರ್ತಿಯ ಮಾಡಿದನು.
ಭಕ್ತಂಗೆ ಕ್ರಿಯೆ, ಮಹೇಶ್ವರಂಗೆ ನಿಶ್ಚಯ, ಪ್ರಸಾದಿಗೆ ಅರ್ಪಣ,
ಪ್ರಾಣಲಿಂಗಿಗೆ ನೋಟ, ಶರಣಂಗೆ ನಿಬ್ಬೆಱಗು, ಐಕ್ಯಂಗೆ ನಿರ್ಲೇಪ.
ಇಂತೀ ಷಟ್‌ಸ್ಥಲವ ಗ್ರಹಿಸಿ ನಿಂದ ವಿರಕ್ತನ
ಏಕಸ್ಥಲದಾಟ, ನಿಜತತ್ವದ ಕೂಟ.
ಶಂಭುವಿಂದತ್ತ, ಸ್ವಯಂಭುವಿಂದತ್ತ ಅತಿಬಳ ನೋಡಾ,
ಮಾತುಳಂಗ ಮಧುಕೇಶ್ವರನು!

ವಿಶ್ವಾಸದಿಂದ ಭಕ್ತನಾಗಿ,
ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ,
ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ,
ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ.
ಆ ಸ್ವಾನುಭಾವದೊಳಗಣ ಅಱಿವಿನಿಂ ಶರಣನಾಗಿ,
ಆ ಅಱಿವು ನಿಜದಲ್ಲಿ ಸಮರಸಭಾವವನೈದಿದಡೆ
ಅದೇ ಐಕ್ಯಸ್ಥಲ ಗುಹೇಶ್ವರಾ!
ಭಕ್ತನಾದಡೆ ಕಿಂಕರರ ಕಿಂಕರನಾಗಿರಬೇಕು.
ಮಹೇಶ್ವರನಾದಡೆ ಆದಿ ಅನಾದಿಯನಱಿದಿರಬೇಕು.
ಪ್ರಸಾದಿಯಾದಡೆ ಒಡಲಗುಣವಿರಹಿತನಾಗಿರಬೇಕು.
ಪ್ರಾಣಲಿಂಗಿಯಾದಡೆ ಬಾಹ್ಯವಿಚಾರವಿಲ್ಲದಿರಬೇಕು.
ಶರಣನಾದಡೆ ನಿಸ್ಸಂಗಿಯಾಗಿರಬೇಕು.
ಐಕ್ಯನಾದಡೆ ಬಯಲು ಬಯಲಾಗಿರಬೇಕು.
ಇಂತಪ್ಪ ಸ್ಥಲವನ್ನಱಿಯದೆ ಕೂಡಲ ಚನ್ನಸಂಗಯ್ಯನಲ್ಲಿ
ಸುಸಂಗತಿಯೆನಿಸಬಾರದು.

ಷಟ್ಸ್ಥಲಗಳ ವಿವರಣೆಯನ್ನು ಕ್ರಮವಾಗಿ ಹೇಳಿದ್ದರೂ ಅಲ್ಲಿ ಸಮಸಮುಚ್ಚಯವು ಮಹತ್ವವಾದುದು. ಸಿದ್ಧಲಿಂಗ ಶಿವಯೋಗಿಗಳು ಈ ಸ್ಥಲಗಳನ್ನು ವ್ಯಾಖ್ಯಾನಿಸುವಲ್ಲಿ ಸಮಸಮುಚ್ಚಯಕ್ಕೆ ವಿಶೇಷವಾದ ಮಹತ್ವವನ್ನು ಕೊಟ್ಟಿರುವರು. ಒಂದು ಸ್ಥಲದಲ್ಲಿ ಎಲ್ಲ ಸ್ಥಳಗಳೂ ಅಳವಡದಿದ್ದರೆ ಆ ಸ್ಥಲವು ಪರಿಪೂರ್ಣವಾಗದೆಂದು ಶಿವಯೋಗಿಗಳ ಅಭಿಮತ.

ಪ್ರಥಮದಲ್ಲಿ ಭಕ್ತನಾದೆನೆಂಬರು.
ದ್ವಿತೀಯದಲ್ಲಿ ಮಹೇಶ್ವರನಾದೆನೆಂಬರು.
ತೃತೀಯದಲ್ಲಿ ಪ್ರಸಾದಿಯಾದೆನೆಂಬರು.
ನಾಲ್ಕನೆಯಲ್ಲಿ ಪ್ರಾಣಲಿಂಗಿಯಾದೆನೆಂಬರು.
ಐದನೆಯಲ್ಲಿ ಶರಣನಾದೆನೆಂಬರು.
ಆಱನೆಯಲ್ಲಿ ಐಕ್ಯನಾದೆನೆಂಬರು.
ಈ ಆಱು ಸ್ಥಲವ ಮೀಱಿ ನಿರವಯನೆಯ್ದಿಹೆನೆಂಬರು.
ಇದು ಖಂಡಿತ ಷಟ್ಸ್ಥಲ ಬ್ರಹ್ಮಜ್ಞಾನದ ನಿರ್ಣಯವಲ್ಲ.
ಆವಾವ ಸ್ಥಲವನಂಗಂಗೊಂಡರೂ ಆ ಸ್ಥಲದಲ್ಲಿ
ಷಡ್ವಿಧಲಿಂಗದಲ್ಲಿ ಬೆರಸಿ ಬೇಱಿಲ್ಲದಿರಬಲ್ಲರೆ ಸದ್ಭಕ್ತನೆಂಬೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ![೧]

ಎಂದು ಶಿವಯೋಗಿಗಳು ಷಟ್ಸ್ಥಲದಲ್ಲಿ ಕ್ರಮಸಮುಚ್ಚಯವನ್ನು ಖಂಡಿಸಿ ಸಮಸಮುಚ್ಚಯವನ್ನು ಎತ್ತಿ ಹಿಡಿದಿರುವರು.

---

೧, ತೋಂ. ಸಿ. ವ. ೨೧೫.

ಶಿವಶರಣರು ಷಟ್ಸ್ಥಲಸಿದ್ಧಾಂತದಲ್ಲಿ ಈ ಸಮಸಮುಚ್ಚಯವನ್ನು ಪ್ರತಿಷ್ಠಾಪಿಸಿರುವುದು ಮನಶ್ಶಾಸ್ತ್ರದೃಷ್ಟಿಯಿಂದ ಬಹು ಮಹತ್ವವಾದುದು. ಭಾವ, ಜ್ಞಾನ, ಮನಸ್ಸು, ಅಹಂಕಾರ, ಬುದ್ಧಿ, ಚಿತ್ತ ಇವು ವಸ್ತುಗ್ರಹಣ ಸಾಧನಗಳಾಗಿವೆ. ಅವುಗಳ ಸಹಾಯವಿಲ್ಲದೆ ಯಾವ ವಸ್ತುವಿನ ಕಲ್ಪನೆಯೂ ಆಗುವಂತಿಲ್ಲ. ಮೊದಲು ವಸ್ತುಸತ್ತೆಯ ಸ್ವಭಾವದ ಸೂಕ್ಷ್ಮ ಪ್ರಜ್ಞೆ ಭಾವದಲ್ಲಿ ಉಂಟಾಗುವುದು. ಭಾವದಲ್ಲಿ ಸೂಕ್ಷ್ಮವಾಗಿ ನೆಲೆಗೊಂಡ ವಸ್ತುಸತ್ತೆಯ ಬಗೆಗೆ ತಿಳಿವಳಿಕೆಯುಂಟಾಗುತ್ತದೆ. ಇದೇ ಜ್ಞಾನ. ಜ್ಞಾನದಲ್ಲಿ ಹೊಳೆದ ವಸ್ತುವಿನ ಬಗೆಗೆ ಮನನಕ್ರಿಯೆ ನಡೆಯುತ್ತದೆ. ಈ ಕ್ರಿಯೆ ನಡೆಯುವುದು ಮನಸ್ಸಿನಲ್ಲಿ. ಹೀಗೆ ಮನಸ್ಸಿನಲ್ಲಿ ಮೂಡಿದ ವಸ್ತುವಿನ ಬಗೆಗೆ ತಾನು ತನ್ನದು ಎಂಬ ಮಮಕಾರಭಾವನೆ ಉಂಟಾಗುತ್ತದೆ. ವಸ್ತುಮಮಕಾರಭಾವನೆಯುಂಟಾಗುವುದು ಅಹಂಕಾರತತ್ತ್ವದಲ್ಲಿ. ಹೀಗೆ ಅಹಂಕಾರಗೊಂಡ ವಸ್ತುವಿನ ಬಗೆಗೆ ಸಾರಾಸಾರವಿಚಾರಕ್ರಿಯೆ ಬುದ್ಧಿಯಲ್ಲಿ ನಡೆಯುತ್ತದೆ. ಅನಂತರ ಅದು ಚಿತ್ತದಲ್ಲಿ ಬೆಳಗಿ ವಸ್ತುಭಾವನೆ ಗಟ್ಟಿಯಾಗುತ್ತದೆ. ಇದೇ ಮಾನಸಿಕ ದೃಷ್ಟಿಯಿಂದ ವೀರಶೈವರು ಒಪ್ಪಿಕೊಂಡ ವಸ್ತುಗ್ರಹಣವಿಧಾನ. ಬದ್ಧಜೀವನಲ್ಲಿ ಈ ರೀತಿಯಾಗಿ ಉಂಟಾದ ವಸ್ತುಜ್ಞಾನ, ಇಂದ್ರಿಯಗಳಿಗೆ ವಿಷಯರೂಪವಾಗಿ ಸಲ್ಲುತ್ತದೆ. ಹಾಗೆ ಸಂದು ಜೀವನಿಗೆ ಜನನಮರಣಗಳನ್ನೂ ಸುಖದುಃಖಗಳನ್ನೂ ಉಂಟುಮಾಡುತ್ತದೆ. ಆದರೆ ಷಟ್ಸ್ಥಲ ಬ್ರಹ್ಮಜ್ಞಾನದಲ್ಲಿ ಇವು ಸದ್ಭಾವ, ಸುಜ್ಞಾನ, ಸುಮನಸ್ಸು, ನಿರಹಂಕಾರ, ಸುಬುದ್ಧಿ, ಸುಚಿತ್ತವಾಗುವುದರಿಂದ ಇವುಗಳಲ್ಲಿ ಉಂಟಾಗುವುದು ಪದಾರ್ಥಭಾವನೆಯಲ್ಲ, ಪ್ರಸಾದಭಾವನೆ. ಇವೇ ಮಹಾಲಿಂಗಾದಿಯಾಗಿ ಆಚಾರಲಿಂಗಾಂತ್ಯವಾದ ಷಡ್ಲಿಂಗಗಳಿಗೆ ಕ್ರಮವಾಗಿ ಹಸ್ತವಾಗುತ್ತವೆ. ಬದ್ಧಸ್ಥಿತಿಯಲ್ಲಿ ವಿಷಯೋಪಭೋಗಸಾಧನಗಳಾದ ಆತ್ಮ, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ ಇವುಗಳಲ್ಲಿ ಅನುಕ್ರಮವಾಗಿ ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗಗಳು ಪ್ರತಿಷ್ಠಾಪಿತವಾಗಿವೆ. ಅಂದರೆ ಈ ಇಂದ್ರಿಯಗಳು ಆಯಾ ಲಿಂಗಗಳಿಗೆ ಮುಖಗಳಾಗಿವೆ. ಇಂದ್ರಿಯಗಳೇ ವಿಷಯಸೇವನೆ ಮಾಡುವುದಿಲ್ಲ. ಆದರೆ ಅವು ಸದ್ಭಾವಾದಿ ಸುಚಿತ್ತಾಂತ್ಯವಾದ ಹಸ್ತಗಳಿಂದ ಬಂದ ಪ್ರಸಾದವನ್ನು ಲಿಂಗಕ್ಕರ್ಪಿಸುತ್ತವೆ. ಒಂದು ಸ್ಥಲದಲ್ಲಿ ಎಲ್ಲ ಸ್ಥಲಗಳೂ ಅಳವಟ್ಟರೆ ಮಾತ್ರ ಸರ್ವೇಂದ್ರಿಯಗಳಿಂದ ಬರುವ ವಸ್ತು ಪ್ರಸಾದವಾಗುತ್ತದೆ. ಅಲ್ಲಿ ಸಮಷ್ಟಿಭಾವನೆ ತಲೆದೋರುತ್ತದೆ. ಆದರೆ ಕ್ರಮಸಮುಚ್ಚಯದಿಂದ ಸಾಗಿದರೆ ಒಂದಿಂದ್ರಿಯ ಶುದ್ಧವಾಗಿ ಅದರ ವಿಷಯ ಪ್ರಸಾದವಾಗಿರಲು, ಮಿಕ್ಕ ಇಂದ್ರಿಯಗಳು ಅಶುದ್ಧವಾಗಿ ಉಳಿದು, ಅವುಗಳ ಮೂಲಕ ಪದಾರ್ಥವನ್ನೇ ಸೇವಿಸಬೇಕಾಗುತ್ತದೆ. ಹೀಗೆ ಪದಾರ್ಥಪ್ರಸಾದಗಳ ಬೆರಕೆಯಾಗದೆ ಎಲ್ಲವೂ ಪ್ರಸಾದಮಯವಾಗಿಯೇ ಲಿಂಗಕ್ಕರ್ಪಿತವಾಗಬೇಕೆಂಬುದೆ ಈ ಸಮುಚ್ಚಯದ ಉದ್ದೇಶ.

## ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ

ಷಟ್ಸ್ಥಲಮಾರ್ಗದಲ್ಲಿ, ಭಕ್ತಮಹೇಶ್ವರಸ್ಥಲಗಳಲ್ಲಿ ಇಷ್ಟಲಿಂಗಪೂಜೆ, ಪ್ರಸಾದಿ-ಪ್ರಾಣಲಿಂಗಿಸ್ಥಲಗಳಲ್ಲಿ ಪ್ರಾಣಲಿಂಗಪೂಜೆ, ಶರಣ-ಐಕ್ಯಸ್ಥಲಗಳಲ್ಲಿ ಭಾವಲಿಂಗಪೂಜೆ ಪ್ರಧಾನವಾಗಿದ್ದರೂ ಎಲ್ಲ ಸ್ಥಲಗಳಲ್ಲಿಯೂ ಈ ತ್ರಿವಿಧ ಲಿಂಗಪೂಜೆ ನಡೆದಿರುತ್ತದೆ. ಸ್ಥೂಲತನುವಿಗೆ ಸಂಬಂಧಪಟ್ಟ ಪದಾರ್ಥಗಳನ್ನು ಇಷ್ಟಲಿಂಗಪೂಜಾನಂತರ ಆ ಲಿಂಗಕ್ಕರ್ಪಿಸಿ ಪ್ರಸಾದವಾಗಿ ಸೇವಿಸುವುದೇ ಕಾಯಾರ್ಪಣವೆನಿಸುವುದು. ಗಂಧ, ರಸ, ರೂಪ, ಸ್ಪರ್ಶ, ಶಬ್ದ, ತೃಪ್ತಿ ಈ ಷಡ್ವಿಷಯಗಳನ್ನು ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಕರ್ಣ, ಹೃದಯಗಳಲ್ಲಿರುವ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಿಗೆ ಆ ಇಂದ್ರಿಯಮುಖಗಳಿಂದ ಅರ್ಪಿಸುವುದು ಕರಣಾರ್ಪಣ. ಕರಣಾರ್ಪಣದಲ್ಲಿ ಪ್ರಧಾನವಾದುದು ಪ್ರಾಣಲಿಂಗ. ಇದು ಸೂಕ್ಷ್ಮತನುವಿಗೆ ಸಂಬಂಧಪಟ್ಟುದು. ಇಷ್ಟಲಿಂಗವೇ ಪ್ರಾಣಲಿಂಗವಾಗಿ, ಆ ಪ್ರಾಣಲಿಂಗವೇ ಆಚಾರಾದಿ ಷಡ್ಲಿಂಗಗಳಾಗುವುದು. ಇನ್ನು ಭಾವ, ಜ್ಞಾನ, ಮನಸ್ಸು, ಅಹಂಕಾರ, ಬುದ್ಧಿ, ಚಿತ್ತ ಈ ಕರಣಗಳಲ್ಲಿ ನಡೆಯುವ ವ್ಯಾಪಾರವನ್ನು ಭಾವಲಿಂಗಕ್ಕರ್ಪಿಸಿ ಪ್ರಸಾದವೆಂದು ಸೇವಿಸುವುದೇ ಭಾವಾರ್ಪಣ. ಇದು ಕಾರಣತನುವಿಗೆ ಸಂಬಂಧಪಟ್ಟಿದೆ.

## ಗುರು, ಲಿಂಗ, ಜಂಗಮ

ಷಟ್ಸ್ಥಲಸಾಧನೆಯಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂಬ ಅಷ್ಟಾವರಣಗಳು ಬಹು ಮಹತ್ವವಾದುವು. ಈ ಅಷ್ಟ ಆವರಣಗಳುಳ್ಳ ಆತ್ಮನಿಗೆ ಮಲತ್ರಯಬಾಧೆಯಿಲ್ಲ. ಷಟ್ಸ್ಥಲಸಾಧನೆಯಲ್ಲಿ ಒಂದೊಂದು ಆವರಣಕ್ಕೂ ವಿಶೇಷ ಮಹತ್ವವಿದ್ದರೂ ಷಟ್ಸ್ಥಲಾಚರಣೆಯಲ್ಲಿ ಗುರುಲಿಂಗಜಂಗಮಕ್ಕೆ ವಿಶಿಷ್ಟ ಸ್ಥಾನವಿದೆ. ಸಚ್ಚಿದಾನಂದಸ್ವರೂಪನಾದ ಪರಶಿವನ ಸದ್ರೂಪವೇ ಗುರು, ಚಿದ್ರೂಪವೇ ಲಿಂಗ, ಆನಂದರೂಪವೇ ಜಂಗಮ. ಜಗದ್ಧಿತಾರ್ಥವಾಗಿ ಪರಶಿವನು ಸಾಕಾರವಾಗಿ ಭುವಿಗೈತಂದಿರುವನು. ಈ ಮೂರರಲ್ಲಿ ಯಾವುದೂ ಹೆಚ್ಚು, ಯಾವುದೂ ಕಡಿಮೆ ಎನ್ನುವಂತಿಲ್ಲ. ಎಲ್ಲವೂ ಅಷ್ಟೇ. ತನ್ನ ತನುಮನಧನಗಳನ್ನು ಅನುಕ್ರಮವಾಗಿ ಗುರುಲಿಂಗಜಂಗಮಕ್ಕೆ ಅರ್ಪಿಸಬೇಕಾಗುತ್ತದೆ. ಇದೇ ತ್ರಿವಿಧ ದಾಸೋಹ. ಈ ದಾಸೋಹಂಭಾವದಿಂದ ಇಚ್ಛಾ-ಕ್ರಿಯಾ-ಜ್ಞಾನಶಕ್ತಿಗಳು ಆಣವ-ಕಾರ್ಮಿಕ-ಮಾಯಾಮಲವಿಮುಕ್ತವಾಗಿ ಸರ್ವವ್ಯಾಪಕತ್ವ, ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವಗಳನ್ನು ಪಡೆಯುತ್ತವೆ.

# ಶಿವಯೋಗ

ವೀರಶೈವದಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳು ಅತ್ಯವಶ್ಯ. ಭಾವಪ್ರಾಣಗಳಲ್ಲಿ ಲಿಂಗವಿರುವುದರಿಂದ ಇಷ್ಟಕ್ಕೆ ಲಿಂಗದ ಆವಶ್ಯಕತೆಯಿಲ್ಲವೆನ್ನುವವರಿಗೆ ಸಿದ್ಧಲಿಂಗ ಶಿವ ಯೋಗಿಗಳ ಉತ್ತರವಿದು:

**ಭಾವಮನಕ್ಕೆ ಲಿಂಗವ ಧರಿಸಿ ಕಾಯಕ್ಕೆ ಲಿಂಗವಿಲ್ಲದಿರಬಹುದೆ?**
**ಎರಡಂಗ ಭಕ್ತರಾಗಿ ಒಂದಂಗ ಭವಿಯಾಗಿಪ್ಪ ಭ್ರಾಂತರ**
**ಮುಖವ ನೋಡಲಾಗದು.**
**ತನುಮನಭಾವದಲ್ಲಿ ಲಿಂಗವ ಧರಿಸಿ**
**ಲಿಂಗತ್ರಯಕ್ಕೆ ಅಂಗತ್ರಯಕ್ಕೆ ಅಗಲಿಕೆಯಿಲ್ಲದೆ**
**ಅಚಲಿತನಾಗಿರ್ದೆನಯ್ಯಾ,**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.**

ಸ್ಥೂಲತನುವಿನ ಭವಿತನವನ್ನು ಕಳೆಯುವುದಕ್ಕಾಗಿ ಇಷ್ಟಲಿಂಗ ಅವಶ್ಯವಿರುವುದಷ್ಟೇ ಅಲ್ಲದೆ, ಈ ಅಂಗತ್ರಯವನ್ನು ಲಿಂಗತ್ರಯವನ್ನಾಗಿ ಮಾರ್ಪಡಿಸುವ ದಿವ್ಯಶಕ್ತಿಯೇ ಇಷ್ಟಲಿಂಗವೆಂದು ಹೇಳಲು ಅಭ್ಯಂತರವಿಲ್ಲ.

ವೀರಶೈವವು ಲಿಂಗಾಂಗಸಾಮರಸ್ಯವನ್ನು ಸಾಧಿಸಲು ಕಂಡುಹಿಡಿದ ಉಪಾಸನಾ ಕ್ರಮವನ್ನು ಶಿವಯೋಗವೆಂದು ಕರೆವರು. ಶಿವಯೋಗವು ಎಲ್ಲ ಯೋಗಗಳಲ್ಲಿಯೂ ಶ್ರೇಷ್ಠವಾದುದೆಂದು ಪರಿಗಣಿತವಾಗಿದೆ.

'ಯೋಗಶ್ಚಿತ್ತವೃತ್ತಿನಿರೋಧಃ' ಎಂದು ಪತಂಜಲಮಹರ್ಷಿಗಳು ಹೇಳಿರುವರು. ಚಿತ್ತವೃತ್ತಿಗಳನ್ನು ನಿರೋಧಗೊಳಿಸುವುದೇ ಯೋಗದ ಉದ್ದೇಶ. ಮಾನವನ ಬಂಧ ಮೋಕ್ಷಗಳಿಗೆ ಮನವೇ ಕಾರಣವೆಂದು ಅನೇಕ ದರ್ಶನಗಳು ಕಂಡುಕೊಂಡಿವೆ. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂದು ಹೇಳಿರುವುದು ನಿತ್ಯಸತ್ಯ. ಮನಸ್ಸು ನಿಮಿಷ ನಿಮಿಷಕ್ಕೆ ಚಂಚಲಸ್ಥಿತಿಯನ್ನು ಹೊಂದುತ್ತಿರುತ್ತದೆ. 'ಚಂಚಲಂ ಹಿ ಮನಃ ಪಾರ್ಥ' ಎಂದು ಗೀತೆಯಲ್ಲಿ ಮನಸ್ಸಿನ ಚಾಂಚಲ್ಯವನ್ನು ಕುರಿತು ವಿವರಿಸಲಾಗಿದೆ. ವಿಷಯಗಳತ್ತ ಹರಿದು, ವಿಷಯಸುಖಕ್ಕೆಳಸುವಂತೆ ಮಾಡುವುದೇ ಮನಸ್ಸು.

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥**
**ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥**

ಆದುದರಿಂದ ವಿಷಯದತ್ತ ಹರಿವ ಮನಸ್ಸೇ ಮಾನವನ ವಿನಾಶಕ್ಕೆ ಕಾರಣವಾಗುತ್ತದೆ. ಅದರ ಚಾಂಚಲ್ಯವನ್ನು ನಿರೋಧಗೊಳಿಸಿ, ಅದಕ್ಕೆ ಸ್ಥಿರತೆಯನ್ನುಂಟುಮಾಡಿ ಅದನ್ನು ಪರಮಾತ್ಮನ ಧ್ಯಾನಪೂಜೆಗಳಿಗೆ ಅಣಿಗೊಳಿಸುವುದೇ ಮೋಕ್ಷಮಾರ್ಗದ ಮೊದಲ

ಹೆಜ್ಜೆ. ಇದಕ್ಕಾಗಿಯೇ ಬೇರೆ ಬೇರೆ ಯೋಗಗಳು ನಿರ್ಮಿತವಾಗಿವೆ. ಹಠಯೋಗ, ಲಯಯೋಗ, ರಾಜಯೋಗ, ಮಂತ್ರಯೋಗ ಮೊದಲಾದುವು ಪ್ರಸಿದ್ಧವಾದ ಕೆಲವು ಯೋಗಗಳು. ಈ ಯೋಗಸಾಧನೆಯಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಅಷ್ಟಾಂಗಗಳನ್ನು ಕಲ್ಪಿಸಿದರು. ಇವುಗಳ ಸಾಧನೆಯಲ್ಲಿ ಸಾಧಕ, ವಿವಿಕ್ತವಾಗಿದ್ದು ಅತ್ಯುಗ್ರವಾದ ವ್ರತಗಳನ್ನು ಆಚರಿಸಬೇಕಾಗುತ್ತದೆ. ಪ್ರಾಣಾಯಾಮದಿಂದ ಪ್ರಾಣವನ್ನು ನಿಯಂತ್ರಿಸುವಲ್ಲಿ ಅನೇಕಸಾರೆ ಪ್ರಾಣಕ್ಕೆ ಅಪಾಯವೊದಗುವ ಭಯವೂ ಉಂಟು. ಕುಂಡಲಿನಿಯನ್ನು ಜಾಗೃತಗೊಳಿಸಿ ಅದನ್ನು ಮೇಲಕ್ಕೇರಿಸುವಲ್ಲಿ ಅನೇಕಸಲ ವ್ರತಚ್ಯುತರಾಗುವ ಸಂಭವವೂ ಉಂಟು. ಉಗ್ರವಾದ ಕಠಿನತಮವಾದ ಬ್ರಹ್ಮಚರ್ಯಾದಿ ವ್ರತಗಳನ್ನು ಕೈಕೊಂಡು ಯೋಗಸಾಧನೆ ಮಾಡುವ ಹಲವಾರು ಜನ ಸಾಧಕರು ಸ್ವಾಧಿಷ್ಠಾನ ಚಕ್ರದಿಂದ ಪದಚ್ಯುತರಾಗಿ ಸ್ತ್ರೀ ವ್ಯಾಮೋಹಕ್ಕೆ ತುತ್ತಾದುದುಂಟು. ಈ ಯೋಗಗಳನ್ನು ಸಾಧಿಸುವುದು ಸುಲಭವಲ್ಲವೆಂಬ ಮಾತಂ ಇಷ್ಟರಿಂದಲೇ ಸ್ಪಷ್ಟವಾಗಬಲ್ಲುದು. ಯೋಗಗಳ ಈ ಕಾಠಿನ್ಯವನ್ನು, ಕ್ಲಿಷ್ಟತೆಯನ್ನು ಹೋಗಲಾಡಿಸಿ ಸುಲಭಸಾಧ್ಯವಾದ ಶಿವಯೋಗವನ್ನು ವೀರಶೈವರು ಕಂಡುಹಿಡಿದರು. ಅಷ್ಟಾಂಗಯೋಗದೊಳಗಿನ ಮೊದಲಿನ ಐದಂಗಗಳನ್ನು ಬಿಟ್ಟು ಧ್ಯಾನ ಧಾರಣ ಸಮಾಧಿ ಈ ಮೂರನ್ನೇ ಶಿವಯೋಗದಲ್ಲಿ ಇಟ್ಟುಕೊಳ್ಳಲಾಯಿತು. ಇಷ್ಟಲಿಂಗಧಾರಣ, ಪ್ರಾಣಲಿಂಗ ಧ್ಯಾನ, ಭಾವಲಿಂಗಸಮಾಧಿ ಇವು ವೀರಶೈವದಲ್ಲಿ ಮುಖ್ಯವಾದುವು. ವೀರಶೈವನು ನಿತ್ಯ ಮಾಡುವ ಶಿವಪೂಜೆಯೆ ಶಿವಯೋಗವಾಗುವಂತೆ ಏರ್ಪಡಿಸಿ ವ್ಯವಹಾರಕ್ಕೆ ಪರಮಾರ್ಥವನ್ನು ಬೆರಸಿದರು. ಶಿವಯೋಗವು ಮಿಕ್ಕ ಯೋಗಗಳ ಕಠಿನ ವ್ರತನಿಯಮಗಳನ್ನು ತೊಡೆದುಹಾಕಿ, ಇಲ್ಲಿ ಸಂದು, ಅಲ್ಲಿ ಸಲ್ಲಲು ಅನುವಾಗುವ ಕ್ರಿಯಾವಿಧಾನಗಳನ್ನು ಮಾತ್ರ ಇಟ್ಟುಕೊಂಡಿತು. ತನ್ಮೂಲಕವಾಗಿ ವೀರಶೈವಮಾರ್ಗದಲ್ಲಿ ಘನವಾದ ಪರಂಪರೆಯಿದೆ. ವಿವಿಧ ಕಾಯಕನಿರತರಾದ ಸಿದ್ಧರಾಮೇಶ್ವರ, ಗೊಗ್ಗಯ್ಯ ಮೊದಲಾದವರನ್ನು ಪ್ರಭುದೇವರು ತಂದುದು ಈ ಶಿವಯೋಗದತ್ತ. ಪ್ರಭುದೇವರು ತನ್ನ ಲಿಂಗಲೀಲೆಯಲ್ಲಿ ಅನೇಕ ಜನರನ್ನು ಏಕಾಂತಕ್ಕೆ ಕರೆದೊಯ್ಯುವುದು ಈ ಶಿವಯೋಗದ ರಹಸ್ಯವನ್ನು ತಿಳಿಸುವುದಕ್ಕಾಗಿ.

ಹದಿನೈದನೆಯ ಶತಮಾನದಿಂದೀಚೆಗೆ ಆಗಿ ಹೋದ ಅಸಂಖ್ಯಾತ ಶಿವಯೋಗಿಗಳಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಸ್ಥಾನ ಗುರುತರವಾದುದು. ಅವರನ್ನು ಪ್ರಭುದೇವರ ಅಪರಾವತಾರವೆಂದು ಪರಿಗಣಿಸಲಾಗಿರುವುದೇ ಈ ಮಾತಿಗೆ ನಿದರ್ಶನ. ಅಂತೆಯೇ ಸಿದ್ಧಲಿಂಗ ಶಿವಯೋಗಿಗಳ ವಚನಗಳಲ್ಲಿ ಶಿವಯೋಗದ ಸ್ಫುಟವಾದ ವಿವರಣೆಯಿದೆ.

ಇಷ್ಟಲಿಂಗೋಪಾಸನೆಯೆ ಶಿವಯೋಗವೆಂಬುದು ಕೆಳಗಣ ಪದ್ಯಗಳಿಂದ ವಿದಿತವಾಗುತ್ತದೆ.

ಅಲಿ ನಿಂದೊಡೆ ಸುಳಿದು ಸೂಸುವ
ಗಾಳಿ ನಿಲುವುದು ಗಾಳಿ ನಿಲೆ ಮನ
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು
ಲೀಲೆಯಿಂದಾ ಬಿಂದು ನಿಂದೊಡೆ
ಕಾಲಕರ್ಮವ ಗೆದ್ದು ಮಾಯೆಯ
ಹೇಳಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ[1]

ಲಿಂಗದೊಳಿಟ್ಟ ದೃಷ್ಟಿ ನಿಜದೃಷ್ಟಿಯೊಳಿರ್ದ ಮನಂ ಮನಸ್ಸಿನೊ-
ಳ್ಪಿಂಗದೆ ನಿಂದ ಭಾವಮದರೊಳ್ನೆಲೆಗೊಂಡ ಶಿವಾತ್ಮಲಿಂಗವಾ-
ಲಿಂಗದೊಳಿರ್ದ ನಿತ್ಯಸುಖಿಯಾಗಿ ವಿರಾಜಿಸುವಂಗೆ ಬಾಹ್ಯಕ-
ರ್ಮಂಗಳವೇತಕಯ್ಯ ಪರಮಪ್ರಭುವೇ ಮಹದೈಪುರೀಶ್ವರಾ[2]

ಈ ಪದ್ಯಗಳಿಂದ ಶಿವಯೋಗದ ರಹಸ್ಯ ವೇದ್ಯವಾಗಬಲ್ಲುದು. ಭಕ್ತನು ಇಷ್ಟ ಲಿಂಗೋಪಾಸನೆಯಲ್ಲಿ ತನ್ನ ದೃಷ್ಟಿಯನ್ನು ಲಿಂಗದಲ್ಲಿರಿಸುವನು. ದೃಷ್ಟಿ ಲಿಂಗದಲ್ಲಿ ಸ್ಥಿರವಾಗಿ ನಿಂತರೆ ಪ್ರಾಣ ನಿಯಂತ್ರಣಗೊಳ್ಳುವುದು. ಇದನ್ನು ವೀರಶೈವ ದಾರ್ಶನಿಕರು ಅನುಭವದಿಂದ ಕಂಡುಕೊಂಡಿರುವರು. ಸ್ವಸ್ವರೂಪದರ್ಶನವಾದ, ಅರುಹಿನ ಕುರುಹಾದ ಲಿಂಗದಲ್ಲಿ ಭಕ್ತನು ಮನಸ್ಸನ್ನು ನಟ್ಟಿರುವುದು ಈ ಪರಮಾರ್ಥಸಾಧನೆಗಾಗಿ. ಸಾಧನ ವಾದ ಭಕ್ತಿ, ಲಿಂಗಗಳೇ ಸಾಧ್ಯವಾಗುತ್ತವೆ ಆತನಿಗೆ ಕೊನೆಯಲ್ಲಿ. ಉಸಿರು ನಿಯಂತ್ರಣ ಗೊಂಡರೆ ಮನಸ್ಸು, ಮನಸ್ಸು ನಿಂತರೆ ಬುದ್ಧಿ. . . . ಎಲ್ಲವೂ ಸ್ಥಿರಗೊಳ್ಳುವವು.

ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅನೇಕ ಯೋಗಗಳನ್ನು ಖಂಡಿಸಿ ಶಿವಯೋಗವೇ ಸರ್ವಶ್ರೇಷ್ಠವಾದುದೆಂದು ಪ್ರತಿಷ್ಠಾಪಿಸಿದರು.

ಲಂಬಿಕಾಯೋಗಿಗಳ ಡೊಂಬರಿಗೆ ಸರಿಯೆಂದೆಂಬೆ.
ಹಠಯೋಗಿಗಳ ಆಟಮಟಗಾಱರೆಂದೆಂಬೆ.
ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂದೆಂಬೆ.
ಪವನಯೋಗಿಗಳ ಪ್ರಪಂಚಿಗಳೆಂದೆಂಬೆ.
ಲಯಯೋಗಿಗಳ ನಾಯಿಗಿಂದ ಕಡೆ ಎಂದೆಂಬೆ.
ಅದೇನು ಕಾರಣವೆಂದಡೆ:
ಲಯಯೋಗವೆಂಬುದು ನಾನಾದರುಶನದಲ್ಲಿ ವರ್ತಿಸುವುದಾಗಿ,
    ಆದ ಶಿವಯೋಗಿಗಳು ಒಲ್ಲರು.
ಮಂತ್ರಯೋಗವೆಂಬುದು ಸರ್ವಸಂದೇಹಕಿಕ್ಕಿ ಕೊಲುತಿಪ್ಪುದು.
ಅದೇನು ಕಾರಣವೆಂದಡೆ:
ಮಂತ್ರವೇ ಲಿಂಗ, ಲಿಂಗವೇ ಮಂತ್ರವೆಂದಱಿದು
    ಲಿಂಗನೆನಹ ಸಂಬಂಧಿಸಿಕೊಳ್ಳಲಱಿಯದೆ
    ಲಿಂಗವಿರಹಿತವಾಗಿ ಮಾಡುತಿಪ್ಪರಾಗಿ.

---

೧. ಪ್ರ. ಲೀ. ಸಾಧ. ೨೨.   ೨. ಮಹ. ಶ. ೫೩.

ಅದ ಅಂಗಲಿಂಗಸಂಬಂಧಿಗಳು ಮೆಚ್ಚರು ನೋಡಾ.
ಅದೇನು ಕಾರಣವೆಂದಡೆ:
ಕೆಲವು ಶೈವರುಗಳು ಮಾಡುವರಾಗಿ
ರಾಜಯೋಗವೆಂಬುದು ಗಾಜುಗೋಜು ನೋಡಾ.
ಅದನು ಲಿಂಗವಿರಹಿತವಾಗಿ
ಜ್ಞಾತೃ, ಜ್ಞಾನ, ಜ್ಞೇಯ ಒಂದಾದಲ್ಲಿಯೆ ಯೋಗವೆನುತಿಪ್ಪರಾಗಿ.
ಇವು ಒಂದೂ ಲಿಂಗಾಂಗಯೋಗದ ಹಜ್ಜೆಯಲ್ಲ ನೋಡಾ.
ಅದುಕಾರಣ, ಲಿಂಗನಿಷ್ಠರು ಮೆಚ್ಚರು.
ಅದೇನು ಕಾರಣವೆಂದಡೆ:
ಲಿಂಗವ ತೆಗೆದಡೆ ಲಿಂಗದೊಡನೆ ಪ್ರಾಣ ಹೋಗದಾಗಿ
ಅದೆಲ್ಲಿಯ ಯೋಗವಯ್ಯಾ? ಭ್ರಾಂತುಯೋಗ.
ಇದು ಕಾರಣ ನಿಮ್ಮ ಶರಣರು ಲಿಂಗಪ್ರಾಣಿಗಳು;
ಪ್ರಾಣಲಿಂಗಸಂಬಂಧಿಗಳು; ಪ್ರಸಾದಮುಕ್ತರು.
ಈ ಮೂಱು ಪ್ರಕಾರದಲ್ಲಿ ಕೂಡುತ್ತಿಪ್ಪರು ಶಿವಯೋಗಿಗಳು.
ಇದುಕಾರಣ, ನಿಮ್ಮ ಶರಣರು
ಸ್ವಾನುಭಾವಜ್ಞಾನಶುದ್ಧ ಶಿವಯೋಗದಲ್ಲಿ ಸ್ವರೂಪಜ್ಞಾನಿಗಳು ಕಾಣಾ.
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ನೇಮಗಳನ್ನು ಅವರು ಪರಿಪಾಲಿಸಬೇಕಾಗುವುದು. ಲಯಯೋಗ ನಾನಾ ದರ್ಶನಗಳಲ್ಲಿ ಕಾಣುವುದಂತೆ. ಮಂತ್ರಯೋಗ ಸರ್ವಸಂದೇಹಕ್ಕೀಡಾಗಿದೆ. ಏಕೆಂದರೆ ಮಂತ್ರವೇ ಲಿಂಗ, ಲಿಂಗವೇ ಮಂತ್ರವೆಂಬುದನ್ನು ಅವರರಿಯರು. ಲಿಂಗವಿರಹಿತರಾಗಿ ಮಾಡುವ ಯಾವ ಶಿವಯೋಗವನ್ನೂ ಶಿವಯೋಗಿಗಳು ಮನ್ನಿಸಲಿಲ್ಲ. ಏಕೆಂದರೆ, ಜ್ಞಾತೃ, ಜ್ಞಾನ, ಜ್ಞೇಯ ಈ ತ್ರಿಪುಟವೊಂದಾಗದೆ ಯೋಗ ಸಾಧ್ಯವಿಲ್ಲ. ಇದು ಲಿಂಗಪೂಜೆಯಲ್ಲಿ ಸಹಜ ಸಾಧ್ಯವಾಗುವುದರಿಂದ ಲಿಂಗಸಹಿತವಾಗಿ ಮಾಡುವ ಶಿವಯೋಗವೇ ಯೋಗ. ಆ ಲಿಂಗವು ಶಿವಯೋಗಿಗಳ ದೇಹದಿಂದ ಕಳಚಿದರೆ ಅವರ ಪ್ರಾಣ ಹೋಗುವುದು. ಇಂತಹ ಯೋಗವೇ ಯೋಗವಲ್ಲದೆ ಉಳಿದುದೆಲ್ಲ ಭ್ರಾಂತಿಯೋಗ. ಲಿಂಗಪ್ರಾಣಿಗಳಾಗಿ, ಪ್ರಾಣಲಿಂಗಿಗಳಾಗಿ, ಪ್ರಸಾದಮುಕ್ತರಾಗಿ ಇರುವ ಶರಣರೆ ಶಿವಯೋಗಿಗಳು. ಶಿವಯೋಗದ ರಹಸ್ಯವೇ ಈ ತ್ರಿವಿಧದಲ್ಲಿ ಅಡಗಿದೆ.

ಸಿದ್ಧಲಿಂಗ ಶಿವಯೋಗಿಗಳು ಇವೆಲ್ಲ ಯೋಗಗಳ ರಹಸ್ಯವನ್ನರಿತೇ ಮೇಗಣ ನಿರ್ಣಯಕ್ಕೆ ಬಂದಿರುವರು. ಅಷ್ಟಾಂಗಯೋಗವನ್ನು ಅವರು ಒಳ್ಳೆಯ ಮಾರ್ಮಿಕವಾಗಿ ಶಿವಯೋಗದ ರೀತಿಯಲ್ಲಿ ವಿವರಿಸಿರುವರು.

ಅನೃತ ಹಿಂಸೆ ಪರಧನ ಪರಸ್ತ್ರೀ ಪರನಿಂದೆ ಇವನ್ನು ಬಿಟ್ಟು
ಲಿಂಗಪೂಜೆ ಮಾಡುವುದೇ ಯಮಯೋಗ.
ಅಶುಚಿತ್ತವ ಬಿಟ್ಟು ಪಾಪಭೀತನಾಗಿ ಇಂದ್ರಿಯ ನಿಗ್ರಹದಿಂದ ಮಾಡುವ
ಲಿಂಗಾರ್ಚನೆಯೇ ನಿಯಮಯೋಗ.

**ಪಂಚಾಸನಗಳಲ್ಲಿ ಸ್ವಸ್ಥಿರಚಿತ್ತ**
**ನಾಗಿ ಮಾಡುವ ಪೂಜೆ ಆಸನಯೋಗ.**

ಹೀಗೆ ಅಷ್ಟಾಂಗಯೋಗಗಳ ಪೂರ್ವಭಾಗವನ್ನು ಲಿಂಗಾರ್ಚನೆಯಲ್ಲಿ ಅಳವಡಿಸಿ ಉತ್ತರ ಭಾಗದ ಧ್ಯಾನ, ಧಾರಣ, ಸಮಾಧಿಗಳಿಗೆ ಇಷ್ಟಲಿಂಗಧಾರಣ, ಪ್ರಾಣಲಿಂಗ ಧ್ಯಾನ, ಭಾವಲಿಂಗ ಸಮಾಧಿ ಇವಕ್ಕೆ ಪ್ರಾಧಾನ್ಯವಿತ್ತು ಶಿವಯೋಗವನ್ನು ಪರಿಪೂರ್ಣಗೊಳಿಸಿದರು; ಸುಲಭಸಾಧ್ಯವಾಗುವಂತೆ ಮಾಡಿದರು.

ಇದೊಂದೆ ವಚನ ಸಾಕು, ಸಿದ್ಧಲಿಂಗ ಶಿವಯೋಗಿಗಳಿಗಿದ್ದ ಯೋಗದ ಪರಿಜ್ಞಾನ ಸಿದ್ಧಿಗಳನ್ನು ವಿವರಿಸಲು. ಸಾಮಾನ್ಯವಾಗಿ ವೀರಶೈವವು ಅಷ್ಟಾಂಗಯೋಗದಲ್ಲಿ ಪೂರ್ವಭಾಗವೆನಿಸಿದ ಐದಂಗಗಳನ್ನು ಬಿಟ್ಟು ಧ್ಯಾನ ಧಾರಣ ಸಮಾಧಿಗಳನ್ನೇ ಶಿವ ಯೋಗಸಾಧನೆಗಾಗಿ ಇಟ್ಟುಕೊಂಡಿದೆ ಎಂದು ಎಲ್ಲರೂ ಒಪ್ಪಿದರೂ ಶಿವಯೋಗಿಗಳು ಲಿಂಗಾರ್ಚನೆಯಲ್ಲಿ ಆ ಮಿಕ್ಕ ಐದಂಗಗಳನ್ನು ಹೇಗೆ ಸಾಧಿಸಬಹುದೆಂಬುದನ್ನು ಬಹು ಸೂಕ್ಷ್ಮವಾಗಿ ವಿವರಿಸಿದ್ದಾರೆ. ಈ ವಚನದಲ್ಲಿ ಶಿವಯೋಗ ಮತ್ತು ಅಷ್ಟಾಂಗಯೋಗ ಗಳ ನಡುವಿರುವ ವ್ಯತ್ಯಾಸ ಪರಿಸ್ಫುಟವಾಗಿ ಬಂದಿದೆ. ಅಷ್ಟಾಂಗಯೋಗದಲ್ಲಿ ಶಿವ ಲಿಂಗಾರ್ಚನೆಯ ಮಾಡಿ, ಶಿವತತ್ವದೊಡನೆ ಕೂಡುವುದನ್ನೇ ಲಿಂಗಾಂಗಯೋಗವೆಂದು ಕರೆದಿರುವರು. ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಈ ಐದನ್ನು ಲಿಂಗವಿರಹಿತರಾಗಿ ಮಾಡುವವರನ್ನು ಕರ್ಮಯೋಗಿಗಳೆಂದು ಕರೆದಿರುವರು. ಲಿಂಗ ಸಹಿತವಾಗಿ ಮಾಡುವುದು ಕ್ರಿಯೆ. ಅದು ಕ್ರಿಯಾಜ್ಞಾನ ಸಾಮರಸ್ಯಪೂರ್ವಕವಾಗಿರು ವುದರಿಂದ ಬಂಧವಿರಹಿತವಾಗಿರುವುದು. ಲಿಂಗವಿರಹಿತವಾಗಿ ಮಾಡುವುದು ಕರ್ಮ ಯೋಗ. ಅದರಿಂದ ಬಂಧನವುಂಟು. ಇಷ್ಟಲಿಂಗವನ್ನು ದೃಷ್ಟಿಯಿಂದ ಗ್ರಹಿಸಿ, ಪ್ರಾಣ ಲಿಂಗವನ್ನು ಮನೋಜ್ಞಾನದಿಂದ ಗ್ರಹಿಸಿ, ಭಾವಲಿಂಗವನ್ನು ಭಾವಜ್ಞಾನದಿಂದ ಗ್ರಹಿಸಿ, ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡನೆ ಕೂಡಿ, ಲಿಂಗವೇ ತಾನಾಗಿ ವಿರಾಜಿಸುವುದೇ ಶಿವಯೋಗ. ಇಂತಹ ಶಿವಯೋಗವನ್ನು ತೋಂಟದ ಸಿದ್ಧಲಿಂಗ ಶಿವಯೋಗಿಗಳು ರಾಜ ಶಿವಯೋಗವೆಂದು ಕರೆದಿರುವರು. ನಾದಬಿಂದುಕಳಾಭೇದವನ್ನು ತಿಳಿದಲ್ಲದೆ ಷಡಕ್ಷರದ ಪರಿಯನ್ನು ಅರಿಯಲಾಗದು. ಈ ಷಡಕ್ಷರಮಂತ್ರಕ್ಕೆ ಮೂಲವಾದ ಪ್ರಣವವನ್ನು ತಿಳಿಯದೆ ನಾದ ತಲೆದೋರದು. ನಾದದ ಬೆಳಗಿನ ಕಳೆಯನ್ನು ನೋಡಿ ಕಂಡಲ್ಲದೆ ರಾಜ ಶಿವಯೋಗವನ್ನು ಸಾಧಿಸಲು ಬಾರದು. ಈ ಯೋಗ ಆದಿಯಲ್ಲಿ ಶಿವಬೀಜವಾದ ಮಹಾ ಮಹಿಮನಿಗೆ ಮಾತ್ರ ಸಾಧ್ಯವಾಗಬಲ್ಲುದು.

ಶಿವಯೋಗವನ್ನು ರಾಜಶಿವಯೋಗವೆಂದೂ ಸಿದ್ಧಲಿಂಗ ಶಿವಯೋಗಿಗಳು ಕರೆ ದಿರುವುದು ಅರ್ಥಪೂರ್ಣವಾಗಿದೆ. ಅದು ಕ್ರಿಯಾಜ್ಞಾನಗಳನ್ನು ಸಮರಸಗೊಳಿಸುವ ಪರಮ ಸಾಧನ. ವೀರಶೈವನ ನಿತ್ಯಲಿಂಗಾರ್ಚನೆಯೇ ಶಿವಯೋಗ. ಆ ಶಿವಯೋಗ ಸಾಧನೆಯಲ್ಲಿ ಶಕ್ತಿ-ಭಕ್ತಿಗಳು ಅಂದರೆ ಜ್ಞಾನಕ್ರಿಯೆಗಳು ಒಂದರಲ್ಲಿ ಒಂದು ಸಮರಸ ವಾಗುತ್ತ ಹೋಗುವವು. ಶಿವಯೋಗದಲ್ಲಿ ಷಟ್ಚಕ್ರಗಳನ್ನು ಹೇಳಿರುವುದಲ್ಲದೆ ಮಿಕ್ಕ

ನಾಲ್ಕು ಚಕ್ರಗಳನ್ನು ವಿವರಿಸಲಾಗಿದೆ. ಯೋಗಾನುಸಂಧಾನದಲ್ಲಿ ಇದು ಅತ್ಯಂತ ನೂತನ ಸಂಶೋಧನೆಯೆಂದು ಹೇಳಬಹುದು. ಆ ದಶಚಕ್ರಗಳೆಂದರೆ ಇವು: ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧಿ, ಸಹಸ್ರ, ಪಶ್ಚಿಮ, ಶಿಖಾ, ಆಜ್ಞಾ, ಅಣು. ಈ ಚಕ್ರಗಳಲ್ಲಿ ಜಾಗ್ರತವಾಗುವುದು ಶಕ್ತಿಭಕ್ತಿಸಂಯೋಗರೂಪದ ಕುಂಡಲಿನಿ. ಅದನ್ನು ಶಿವಯೋಗಿಗಳು ಹೀಗೆ ವರ್ಣಿಸಿರುವರು:

**ಕುಂಡಲಿಯು ಒಲೆಯು ಭಾಂಡದಲ್ಲಿ ಮಂಡಿಸಿಪ್ಪ**
**ತುಂಡುಮುಂಡುಕಾತಿ ಜಗವನೆಲ್ಲಾ ಭಂಡುಮಾಡುತ್ತಿದ್ದಾಳೆ ನೋಡಾ.**
**ಕುಂಡಲಿಯು ಒಲೆಯುಲ್ಲಿ ಕೆಂಡವ ಚಾಚಲು, ಭಾಂಡವೊಡೆದು,**
**ತುಂಡುಮುಂಡುಕಾತಿಯು ತಾಮುಸ ಬೆಂದು,**
**ಕುಂಡಲಿಯು ಸರ್ಪನೆದ್ದು ಮಂಡೆವಾಲನುಂಡು**
**ಮಡಿದುದ ಕಂಡೆನಯ್ಯಾ,**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!**

ಇಲ್ಲಿ ಉಕ್ತಳಾದ ತುಂಡುಮುಂಡುಕಾತಿ ಎಂದರೆ ಶಕ್ತಿಭಕ್ತಿಗಳ ಅಂದರೆ ಜ್ಞಾನ ಕ್ರಿಯೆಗಳ ಸಾಮರಸ್ಯವನ್ನು ಮರೆಸಿ ಅವುಗಳಲ್ಲಿ ಭೇದವನ್ನು ತೋರಿಸುವ ಅಜ್ಞಾನ ರೂಪದ ಪ್ರಕೃತಿ. ಈ ಮಾಯೆಯೇ ಜಗವನ್ನೆಲ್ಲ ಗೋಳಿಡಿಸುತ್ತಿರುವವಳು. ಕುಂಡಲಿನಿಯಲ್ಲಿ ಅರುಹಿನ ರೂಪದ ಕೆಂಡವನ್ನು ಚಾಚಲು ತುಂಡುಮುಂಡುಕಾತಿ ಸುಟ್ಟು ಭಸ್ಮವಾಗುವಳು. ಕುಂಡಲಿನಿಯಲ್ಲಿದ್ದ ಶಕ್ತಿಭಕ್ತಿಗಳು ಸಾಮರಸ್ಯದಿಂದ ಸ್ವಲೀಲಾನಂದವಿಲಾಸದಲ್ಲಿ ಲೋಲಾಡುವುದೇ ಸರ್ಪನೆದ್ದು ಮಂಡೆವಾಲನುಂಡು ಮಡಿಯುವುದು. ಇದೇ ಐಕ್ಯ.

ಈ ಸ್ಥಿತಿಯಲ್ಲಿಯೇ ಭಕ್ತನು ಸರ್ವಾಂಗಲಿಂಗಮಯನಾಗುವನು. ಅವನ ಅಂಗ ಕ್ರಿಯೆಗಳೆಲ್ಲಾ ಲಿಂಗಕ್ರಿಯೆಗಳಾಗುವವು. ಆತನು ಬೆಳಗಿನೊಳಗಣ ಮಹಾಬೆಳಗನುಂಡು ನಿಜದರಿವಿನಲ್ಲಿ ನಿಬ್ಬೆರಗಾಗಿರುವನು. ಆತನ ನಡೆಗೆ ಹೆಜ್ಜೆಗಳಿಲ್ಲ; ನುಡಿಗೆ ಲೇಪನವಿಲ್ಲ. ಶರಣನು ಹಿಡಿದು ಸಂಸಾರಿಯಲ್ಲ; ಬಿಟ್ಟು ನಿಸ್ಸಂಸಾರಿಯಲ್ಲ. ಮಹದಲ್ಲಿ ಒಡಗೂಡಿ ಮಹವಾಗಿರುವನು. ಸುಮನವೇ ಗಮನವಾಗಿ, ಸುಚಿತ್ತವೇ ಸುಳುಹಾಗಿ, ಪರತತ್ತ್ವ ಸದ್ಭಾವವೇ ದೇಹವಾಗಿ ನಡೆದ ಮಹಾಂತನಿಗೆ ನುಡಿದುದೇ ಮಂತ್ರವಾಗುವುದು; ನಡೆದುದೇ ಮಾರ್ಗವಾಗುವುದು. ಅವನ ನುಡಿ ತತ್ತ್ವ, ನಡೆ ಪಾವನ, ಸುಳುಹು ವಸಂತ ಕಾಲ. ಈ ಬೆಳಗಿನೊಬ್ಬುಳಿಯಂತಿದ್ದ ಶರಣನು ಐಕ್ಯದ ಆಚೆಗಿರುವ ನಿರವಯುವನ್ನು ಮುಟ್ಟಿ ನಿಸ್ಸಂಗಿಯಾಗಿರುವನು; ನಿರಾಭಾರಿಯಾಗಿರುವನು; ನಿಸ್ಸೀಮನಾಗಿರುವನು; ನಿರುಪಾಧಿಕನಾಗಿರುವನು; ನಿರ್ದೇಹಿಯಾಗಿರುವನು. ಇದೇ ವೀರಶೈವದ ಮೋಕ್ಷ. ಲಿಂಗ ಅಂಗ, ಶಕ್ತಿ ಭಕ್ತಿ, ಹಸ್ತ ಮುಖ, ಪದಾರ್ಥ ಪ್ರಸಾದ ಈ ಅಷ್ಟವಿಧ ಸಕೀಲದಲ್ಲಿ ವೀರಶೈವ ದರ್ಶನವೆಲ್ಲ ಅಡಕವಾಗಿದೆ. ಅದರ ವಿವರ ಮುಂದಿನಂತಿದೆ:

# ಅಷ್ಟವಿಧ ಸಕೀಲ

| | | | | | | |
|---|---|---|---|---|---|---|
| ಲಿಂಗ: | ಆಚಾರಲಿಂಗ | ಗುರುಲಿಂಗ | ಶಿವಲಿಂಗ | ಜಂಗಮಲಿಂಗ | ಪ್ರಸಾದಲಿಂಗ | ಮಹಾಲಿಂಗ |
| ಅಂಗ: | ಪೃಥಿವ್ಯಂಗ | ಅಪ್‌ಅಂಗ | ಅಗ್ನ್ಯಂಗ | ವಾಯ್ವಂಗ | ಆಕಾಶಾಂಗ | ಆತ್ಮಾಂಗ |
| ಶಕ್ತಿ: | ಕ್ರಿಯಾಶಕ್ತಿ | ಜ್ಞಾನಶಕ್ತಿ | ಇಚ್ಛಾಶಕ್ತಿ | ಆದಿಶಕ್ತಿ | ಪರಾಶಕ್ತಿ | ಚಿಚ್ಛಕ್ತಿ |
| ಭಕ್ತಿ: | ಶ್ರದ್ಧಾಭಕ್ತಿ | ನೈಷ್ಠಿಕಭಕ್ತಿ | ಸಾವಧಾನಭಕ್ತಿ | ಅನುಭವಭಕ್ತಿ | ಆನಂದಭಕ್ತಿ | ಸಮರಸಭಕ್ತಿ |
| ಹಸ್ತ: | ಸುಚಿತ್ತಹಸ್ತ | ಸುಬುದ್ಧಿಹಸ್ತ | ನಿರಹಂಕಾರಹಸ್ತ | ಸುಮನಸಹಸ್ತ | ಸುಜ್ಞಾನಹಸ್ತ | ಸದ್ಭಾವಹಸ್ತ |
| ಮುಖ: | ಘ್ರಾಣಮುಖ | ಜಿಹ್ವಾಮುಖ | ನೇತ್ರಮುಖ | ತ್ವಕ್‌ಮುಖ | ಶ್ರೋತ್ರಮುಖ | ಹೃದಯಮುಖ |
| ಪದಾರ್ಥ: | ಸುಗಂಧಪದಾರ್ಥ | ಸುರಸಪದಾರ್ಥ | ಸುರೂಪಪದಾರ್ಥ | ಸುಸ್ಪರ್ಶಪದಾರ್ಥ | ಸುಶಬ್ದಪದಾರ್ಥ | ಸುತೃಪ್ತಿಪದಾರ್ಥ |
| ಪ್ರಸಾದ: | ಗಂಧಪ್ರಸಾದ | ರಸಪ್ರಸಾದ | ರೂಪಪ್ರಸಾದ | ಸ್ಪರ್ಶಪ್ರಸಾದ | ಶಬ್ದಪ್ರಸಾದ | ತೃಪ್ತಿಪ್ರಸಾದ |

# ಸಕೀಲಗಳು

| | | | | | | | | | |
|---|---|---|---|---|---|---|---|---|---|
| ಚಕ್ರಗಳು | ಆಧಾರಚಕ್ರ | ಸ್ವಾಧಿಷ್ಠಾನಚಕ್ರ | ಮಣಿಪೂರಚಕ್ರ | ಅನಾಹತಚಕ್ರ | ವಿಶುದ್ಧಿಚಕ್ರ | ಆಜ್ಞಾಚಕ್ರ | ಬ್ರಹ್ಮಚಕ್ರ | ಶಿಖಾಚಕ್ರ | ಪಶ್ಚಿಮಚಕ್ರ |
| ಅಂಗಗಳು | ಪೃಥ್ವಿ ಅಂಗ | ಅಪ್ಪು ಅಂಗ | ಅಗ್ನಿ ಅಂಗ | ವಾಯು ಅಂಗ | ಆಕಾಶ ಅಂಗ | ಆತ್ಮ ಅಂಗ | ತ್ಯಾಗ ಅಂಗ | ಭೋಗ ಅಂಗ | ಯೋಗ ಅಂಗ |
| ಸ್ಥಲಗಳು | ಭಕ್ತ | ಮಹೇಶ | ಪ್ರಸಾದಿ | ಪ್ರಾಣಲಿಂಗಿ | ಶರಣ | ಐಕ್ಯ | ನಿಷ್ಕಲ | ನಿರಂಜನ | ನಿಃಶೂನ್ಯ |
| ತನುಗಳು | ಸ್ಥೂಲತನು | ಸೂಕ್ಷ್ಮತನು | ಕಾರಣತನು | ನಿರ್ಮಲತನು | ಆನಂದತನು | ಶುದ್ಧತನು | ಚಿದ್ರೂಪತನು | ಚಿನ್ಮಯತನು | ನಿರ್ಮುಕ್ತತನು |
| ಹಸ್ತಗಳು | ಸುಚಿತ್ತಹಸ್ತ | ಸುಬುದ್ಧಿಹಸ್ತ | ನಿರಹಂಕಾರಹಸ್ತ | ಸುಮನೋಹಸ್ತ | ಸುಜ್ಞಾನಹಸ್ತ | ಸದ್ಭಾವಹಸ್ತ | ನಿಃಕಲಹಸ್ತ | ನಿರಾಳಹಸ್ತ | ನಿರಾಮಯಹಸ್ತ |
| ಲಿಂಗಗಳು | ಆಚಾರಲಿಂಗ | ಗುರುಲಿಂಗ | ಶಿವಲಿಂಗ | ಜಂಗಮಲಿಂಗ | ಪ್ರಸಾದಲಿಂಗ | ಮಹಾಲಿಂಗ | ಇಷ್ಟಲಿಂಗ | ಪ್ರಾಣಲಿಂಗ | ಭಾವಲಿಂಗ |
| ಮುಖಗಳು | ಘ್ರಾಣಮುಖ | ಜಿಹ್ವಾಮುಖ | ನೇತ್ರಮುಖ | ತ್ವಕ್‌ಮುಖ | ಶ್ರೋತ್ರಮುಖ | ಹೃದಯಮುಖ | ಬ್ರಹ್ಮರಂಧ್ರಮುಖ | ಉನ್ಮನಿಮುಖ | ಪಶ್ಚಿಮಮುಖ |
| ಶಕ್ತಿಗಳು | ಕ್ರಿಯಾಶಕ್ತಿ | ಜ್ಞಾನಶಕ್ತಿ | ಇಚ್ಛಾಶಕ್ತಿ | ಆದಿಶಕ್ತಿ | ಪರಾಶಕ್ತಿ | ಚಿಚ್ಛಕ್ತಿ | ಆನಂದಮಯಶಕ್ತಿ | ನಿಭಾಂತಶಕ್ತಿ | ನಿರಾಮಯಶಕ್ತಿ |
| ಭಕ್ತಿಗಳು | ಶ್ರದ್ಧಾಭಕ್ತಿ | ನಿಷ್ಠಾಭಕ್ತಿ | ಅವಧಾನಭಕ್ತಿ | ಅನುಭವಭಕ್ತಿ | ಆನಂದಭಕ್ತಿ | ಸಮರಸಭಕ್ತಿ | ಪರಿಪೂರ್ಣಭಕ್ತಿ | ನಿರಂಜನಭಕ್ತಿ | ಅಪ್ರದರ್ಶನಭಕ್ತಿ |
| ಪದಾರ್ಥಗಳು | ಗಂಧಪದಾರ್ಥ | ರಸಪದಾರ್ಥ | ರೂಪಪದಾರ್ಥ | ಸ್ಪರ್ಶಪದಾರ್ಥ | ಶಬ್ದಪದಾರ್ಥ | ತೃಪ್ತಿಪದಾರ್ಥ | ಆನಂದಪದಾರ್ಥ | ಪರಿಪೂರ್ಣಪದಾರ್ಥ | ಅವಿರಳಪದಾರ್ಥ |
| ಪ್ರಸಾದಗಳು | ಗಂಧಪ್ರಸಾದ | ರಸಪ್ರಸಾದ | ರೂಪಪ್ರಸಾದ | ಸ್ಪರ್ಶಪ್ರಸಾದ | ಶಬ್ದಪ್ರಸಾದ | ತೃಪ್ತಿಪ್ರಸಾದ | ಆನಂದಪ್ರಸಾದ | ಪರಿಪೂರ್ಣಪ್ರಸಾದ | ಅವಿರಳಪ್ರಸಾದ |
| ಕಲೆಗಳು | ನಿವೃತ್ತಿಕಲೆ | ಪ್ರತಿಷ್ಠಾಕಲೆ | ವಿದ್ಯಾಕಲೆ | ಶಾಂತಿಕಲೆ | ಶಾಂತ್ಯತೀತಕಲೆ | ಶಾಂತ್ಯತೀತೋ-ತ್ತರಕಲೆ | ಆನಂದ ಕಲೆ | ನಿರ್ಮಳಕಲೆ | ನಿರ್ವಾಚ್ಯಕಲೆ |
| ಸಾದಾಖ್ಯಗಳು | ಕರ್ಮಸಾದಾಖ್ಯ | ಕರ್ತೃಸಾದಾಖ್ಯ | ಮೂರ್ತಿಸಾದಾಖ್ಯ | ಅಮೂರ್ತಿಸಾದಾಖ್ಯ | ಶಿವಸಾದಾಖ್ಯ | ಮಹಾಸಾದಾಖ್ಯ | ಅಗಮ್ಯಸಾದಾಖ್ಯ | ಅವಿರಳಸಾದಾಖ್ಯ | ನಿರ್ಮುಕ್ತಿಸಾದಾಖ್ಯ |
| ಲಕ್ಷಣಗಳು | ಸತ್ | ಚಿತ್ | ಆನಂದ | ನಿತ್ಯ | ಪರಿಪೂರ್ಣ | ಅಖಂಡ | ಅನಾಮಯ | ಅಗಮ್ಯ | ಅಗೋಚರ |

# ಸಾಹಿತ್ಯ ಸೌರಭ

**ಮಡಕೆಯ ಮಾಡುವರೆ ಮಣ್ಣು ಮೊದಲು,**
**ತೊಡಿಗೆಯ ಮಾಡುವರೆ ಹೊನ್ನು ಮೊದಲು.**

ಸಾಹಿತ್ಯವ ನಿರ್ಮಿಸುವರೆ ಸೌಂದರ್ಯಾನುಭವ ಮೊದಲು. ಆ ಅನುಭವ ಇಲ್ಲ ದಿದ್ದರೆ ಸಾಹಿತ್ಯ ಹುಟ್ಟಲಾರದು; ಹುಟ್ಟಬಾರದು. ಅನುಭವದ ಅಂತರಾಳದಿಂದ ನೆಗೆದ ಅನಂತ ಭಾವನೆಗಳು, ಕಲ್ಪನೆಗಳು, ಆಲೋಚನೆಗಳು ಶಬ್ದದೇಹವನ್ನು ಪಡೆದು ಸಾಹಿತ್ಯಕ್ಷೇತ್ರದಲ್ಲಿ ಚಿರಕಾಲ ಬಾಳುತ್ತವೆ; ಲೋಕದ ಬಾಳನ್ನು ಬೆಳಗುತ್ತವೆ. ಅನು ಭಾವವು ಅನುಭವದ ಪರಮಾರ್ಥಪಥ. ಅನುಭವಜನ್ಯ ಸಾಹಿತ್ಯ ಲೌಕಿಕವನ್ನು ಬೆಳಗಿದರೆ ಅನುಭಾವನಿರ್ಮಿತಕೃತಿ ಪರಮಾರ್ಥವನ್ನು ಬೆಳಗಬಲ್ಲುದು. ಆದರೆ ಲೌಕಿಕ ಕಾವ್ಯವನ್ನು ಬರೆಯಲು ಹೊರಟ ಕವಿ ಪರಮಾರ್ಥಪಥದಲ್ಲಿ ನಡೆಯುವುದು, ಅನುಭಾವಸಾಹಿತ್ಯ ವನ್ನು ಸೃಜಿಸುವ ಅನುಭಾವಿಗಳು ಲೋಕಾನುಭವದ ಹಾದಿಯನ್ನು ಹಿಡಿಯುವುದು ಲೋಕಸತ್ಯದ ಮಾತಾಗಿದೆ. ಶರಣರ ಅನುಭಾವಸಾಹಿತ್ಯ ಪರಮಾರ್ಥದ ಗುರಿಯನ್ನಿಟ್ಟು ಕೊಂಡಿದ್ದರೂ ಲೌಕಿಕವನ್ನು ಅದು ಮರೆತಿಲ್ಲ. ಇಲ್ಲಿ ಸಂದು ಅಲ್ಲಿ ಸಲ್ಲಬೇಕೆಂಬ ತತ್ತ್ವ ವನ್ನು ಸಾಧಿಸಿದ, ಬೋಧಿಸಿದ ಶರಣರು ತಮ್ಮ ಸಾಹಿತ್ಯದಲ್ಲಿ ಈ ಸಮನ್ವಯಮಾರ್ಗ ವನ್ನು ಕಂಡುಕೊಂಡರು. ಆದುದರಿಂದ ಅವರ ಸಾಹಿತ್ಯದಲ್ಲಿ ಕಾವ್ಯಸೌಂದರ್ಯವುಂಟು; ಸಾಹಿತ್ಯದ ಸೊಗಸುಂಟು; ತತ್ತ್ವದ ತಿರುಳುಂಟು. ಸತ್ಯವನ್ನು ಸೌಂದರ್ಯದ ಕಣ್ಣಿ ನಿಂದ ಕಂಡು ಶರಣರು ಭಾವಭರಿತರಾಗಿ ಹಾಡಿರುವರು. "ಅಯ್ಯಾ, ನೀ ಕೇಳಿದರೆ ಕೇಳು, ಕೇಳದಿದ್ದರೆ ಮಾಣು, ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ" ಎಂದು ಹಾಡಿದ ಮಹಾದೇವಿಯಕ್ಕನವರ ವಚನವು ಉತ್ತಮ ಕಾವ್ಯದ ಅತ್ಯುತ್ತಮ ವ್ಯಾಖ್ಯೆ ಎನಿಸಿದೆ.

ಶರಣರು ತತ್ತ್ವಗಳನ್ನು ಕುರಿತು ವಿವೇಚಿಸಿದರು; ಜೀವನವನ್ನು ಕುರಿತು ಸಮಾಲೋಚನೆ ಮಾಡಿದರು. ಆದರೆ ಅವರ ಈ ಸತ್ಯಾನ್ವೇಷಣೆ ಕೇವಲ ಬೌದ್ಧಿಕ ವಾಗಿಯೇ ಉಳಿಯಲಿಲ್ಲ. ತರ್ಕದ ತಾಂಡವದಲ್ಲಿಯೆ ಶರಣರು ತೊಳಲಿ ಬಳಲಲಿಲ್ಲ. ಅರಿವು ನೆಗಳ್ತೆಯೆಂಬ ಉಭಯ ಕಾಂಡವನ್ನು ಅನುಭವದ ಆಗರದಲ್ಲಿ ಅಡಗಿಸಿಟ್ಟರು. ಅದೇ ಅನುಭಾವ. ಆ ಅನುಭಾವದಲ್ಲಿ ತರ್ಕದ ತಿರುಳು, ಜೀವಜಗತ್ತುಗಳ ಸಮಾ ಲೋಚನೆ, ಪರಮಾನುಭವ ಬೋಧೆ, ಪರಮಾರ್ಥದ ಆನಂದ, ಸಮಾಜದ ದರ್ಶನ ಎಲ್ಲವೂ ಹೊರಹೊಮ್ಮಿದುವು. ಕಾವ್ಯಕ್ಕೆ ಕೇವಲ ಜನಮನವನ್ನು ರಂಜಿಸುವ ಕಥೆಯಷ್ಟೇ ವಸ್ತುವಲ್ಲ. ಅನುಭವದಿಂದ ವೇದಿಸಬಲ್ಲ ತತ್ತ್ವ, ನೀತಿ ಮೊದಲಾದ ವಿಷಯಗಳೂ ಉತ್ತಮ ಸಾಹಿತ್ಯದ ಕೃತಿಗಳೆನಿಸಬಲ್ಲುವು ಎಂಬುದನ್ನು ವಚನಕಾರರು ಸಿದ್ಧಮಾಡಿ ತೋರಿಸಿದರು. ಅಂತೆಯೇ ವಚನವಾಙ್ಮಯವು ತತ್ತ್ವ-ಧರ್ಮ-ಸಾಹಿತ್ಯಗಳ ಮುಪ್ಪುರಿ

ಯಾಯಿತು. ತತ್ತ್ವಜ್ಞಾನದಂತಹ ಶಾಸ್ತ್ರೀಯ ವಿಷಯಗಳೂ ವಚನವಾಙ್ಮಯದಲ್ಲಿ ಕಾವ್ಯವಾಗಿ ಮೈವೆತ್ತಿರುವುದೊಂದು ಅದರ ವೈಶಿಷ್ಟ್ಯವೆಂದೇ ಹೇಳಬೇಕು. ತಾತ್ತ್ವಿಕ ವಿಷಯವಿರಲಿ, ಧಾರ್ಮಿಕ ವಿಚಾರವಿರಲಿ, ಸಾಮಾಜಿಕ ವಿಮರ್ಶೆಯಿರಲಿ ಎಲ್ಲವೂ ಶರಣರ ಅನುಭವದ ಚಿಲುಮೆಯಿಂದ ಚಿಮ್ಮಿದುವು; ಕಾವ್ಯದ ಮೆರುಗನ್ನು ಪಡೆದುವು; ಸಾಹಿತ್ಯದ ಸೌರಭವನ್ನು ಸೂಸಿದುವು. ತೋಂಟದ ಸಿದ್ಧಲಿಂಗ ಶಿವಯೋಗಿಗಳ 'ಷಟ್‌ಸ್ಥಲಜ್ಞಾನಸಾರಾಮೃತ ವಚನಗಳು' ಇಂತಹ ಅನುಭವದ ಆಣಿಮುತ್ತುಗಳು.

**ನವಿಲಾಡಿತೆಂದು ಕೆಂಬೋತ ಪಕ್ಕವ ತೆಱಕೊಂಡಂತೆ,**
**ಹುಲಿಯ ಬಣ್ಣಕ್ಕೆ ನರಿ ಮೈಸುಟ್ಟುಕೊಂಡಂತೆ,**
**ಕೋಗಿಲೆ ಸರಗೆಯ್ದುದೆಂದು ಕಾಗೆ ಕರೆದಂತೆ,**
**ಲಿಂಗನಿಷ್ಠಾಂಗಿ ವಚನ ಹಾಡಿದರೆ ಒಪ್ಪುವನಲ್ಲದೆ**
**ನಿಷ್ಠೆಹೀನರು ಓದಿ ಹಾಡಿದರೆ ನಳ್ಳಿಗುಳ್ಳಿಯ ತಿಂದ ನರಿ**
**ಹಳ್ಳಿದ ತಡಿಯಲ್ಲಿ ಬಳ್ಳಿಟ್ಟು ಬೊಗಳಿದಂತೆ**
**ಎಂದು ಪಾಟ ಮಾಡೆನಯ್ಯಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.**

ಸಿದ್ಧಲಿಂಗ ಶಿವಯೋಗಿಗಳ ಈ ವಚನ ಅವರ ವಚನನಿರ್ಮಿತಿಯ ರಹಸ್ಯವನ್ನು ಭೇದಿಸುತ್ತದೆ. ಲಿಂಗನಿಷ್ಠಾಂಗಿಯೇ ವಚನವನ್ನು ಹಾಡಿದರೆ ಒಪ್ಪುವನಲ್ಲದೆ ನಿಷ್ಠಾಹೀನರು ಹಾಡಿದರೆ ಶೋಭಿಸದೆಂಬುದನ್ನು ಕಾವ್ಯಮಯವಾಗಿ ವಿವರಿಸಿರುವರು. ಶಿವಯೋಗಿಗಳು ಲಿಂಗನಿಷ್ಠಾಂಗಿಗಳೆಂಬುದನ್ನು ಅವರ ವಚನದ ಪ್ರತಿ ಚರಣವು ಘಂಟಾಘೋಷವಾಗಿ ಸಾರುತ್ತದೆ. ಅವರು ಷಟ್ಸ್ಥಲ ಜ್ಞಾನಪ್ರಭಾಪುಂಜರಂಜಿತರೆಂಬುದು ಸುಪ್ರಸಿದ್ಧವಾಗಿದೆ. ಶಿವಯೋಗದ ತತ್ತ್ವವನ್ನು ಅರಿತವರು, ಅರಿತು ಆಚರಿಸಿದವರು, ಲಿಂಗಾಂಗಸಾಮರಸ್ಯವನ್ನು ಪಡೆದ ಮಹಾನುಭಾವರು. ಇಂತಹ ಅನುಭಾವಿಗಳ ಉಸಿರು ಮಂತ್ರವಾಗುತ್ತದೆ; ನಡೆ ತತ್ತ್ವವಾಗುತ್ತದೆ. ನುಡಿ ಸಾಹಿತ್ಯವಾಗುತ್ತದೆ. ಆದುದರಿಂದ ಸಿದ್ಧಲಿಂಗ ಶಿವಯೋಗಿಗಳ ವಚನಗಳಲ್ಲಿ ಉತ್ತಮ ಸಾಹಿತ್ಯದ ಲಕ್ಷಣಗಳನ್ನು ಹೇರಳವಾಗಿ ಕಾಣಬಹುದು. ಸೌಂದರ್ಯವು ಕಾವ್ಯದ ಮೂಲವೆಂಬುದನ್ನು ಹಿಂದೆ ಹೇಳಲಾಗಿದೆ. ಕವಿಗಳು ಈ ಸೌಂದರ್ಯಾನುಭೂತಿಯಲ್ಲಿ ಅನೇಕ ಅಲಂಕಾರಗಳನ್ನು ಹೆಣೆಯುವುದುಂಟು. ಹೀಗೆ ಸೌಂದರ್ಯಾನುಭೂತಿಯಿಂದ ಬಂದ ಅಲಂಕಾರಗಳು ಕಾವ್ಯದಲ್ಲಿ ಕೃತಕವಲ್ಲ. ಅವು ಜೀವನದ ವಾಸ್ತವತೆಯ ದ್ಯೋತಕ. ಶಿವಯೋಗಿಗಳ ವಚನಗಳಲ್ಲಿ ಇಂತಹ ಉತ್ತಮೋತ್ತಮವಾದ ಅಲಂಕಾರಗಳು ವಿಪುಲವಾಗಿ ಬರುತ್ತಿರುವುದನ್ನು ಕಾಣಬಹುದು.

**ಸೂರ್ಯನಿಂದ ತೋಱಿದ ಕಿರಣಂಗಳಿಗೂ ಆ ಸೂರ್ಯನಿಗೂ ಭಿನ್ನವುಂಟೇ ?**
**ಚಂದ್ರನಿಂದ ತೋಱಿದ ಕಲೆಗೂ ಆ ಚಂದ್ರನಿಗೂ ಭಿನ್ನವುಂಟೇ ?**
**ಅಗ್ನಿಯಿಂದ ತೋಱಿದ ಕಾಂತಿಗೂ ಆ ಅಗ್ನಿಗೂ ಭಿನ್ನವುಂಟೇ ?**
**ಜ್ಯೋತಿಯಿಂದ ತೋಱಿದ ಬೆಳಗಿಗೂ ಆ ಜ್ಯೋತಿಗೂ ಭಿನ್ನವುಂಟೇ ?**

ಶರಣನಿಗೂ ಲಿಂಗಕ್ಕೂ ಭಿನ್ನವಿಲ್ಲವೆಂಬುದನ್ನು ಶಿವಯೋಗಿಗಳು ವಿವರಿಸಲು ಕೊಟ್ಟ ಉದಾಹರಣೆಗಳಿವು. ಸೂರ್ಯ-ಕಿರಣ, ಚಂದ್ರ-ಕಲೆ, ಅಗ್ನಿ-ಕಾಂತಿ, ಜ್ಯೋತಿ-ಬೆಳಗು ಇವುಗಳ ಸಂಬಂಧ ಲೋಕದಲ್ಲಿ ಎಲ್ಲರ ಅನುಭವಕ್ಕೆ ಬಂದ ಮಾತು. ಶರಣಲಿಂಗ ಸಂಬಂಧವು ಈ ವಿವರಣೆಯಿಂದ ಸುಸ್ಪಷ್ಟವಾಗುತ್ತದೆ. ಭಾವದ ಮೊನೆಯ ಕೊನೆಯಲ್ಲಿ ಮೂಡಿದ ಅತ್ಯಂತ ಸೂಕ್ಷ್ಮಾಂಶಗಳನ್ನು ವಿವರಿಸಲು ಲೋಕದಲ್ಲಿ ಎಲ್ಲರ ಅನುಭವಕ್ಕೆ ಬಂದ ಸಾದೃಶ್ಯಗಳನ್ನು ಕೊಟ್ಟರೆ ಆ ವಿಷಯವು ಒಮ್ಮೆಲೆ ಮನದಟ್ಟಾಗುವುದು ಸಹಜ.

**ಸೂರ್ಯನ ಬೆಳಗಿಂಗೆ**
**ಕೊಳ್ಳಿಯ ಬೆಳಗ ಹಿಡಿಯಲುಂಟೇ ಮರುಳೇ?**
**ತನ್ನ ಮುಖವ ತಾ ಬಲ್ಲವಂಗೆ**
**ಕನ್ನಡಿ ಹಿಡಿದು ನೋಡಲುಂಟೇ ಹೇಳಾ?**
**ಆಗಮ ಶಿಕ್ಷೆಯೆಂಬುದು ಲೋಗರಿಗಲ್ಲದೆ,**
**ಆದಿಯಲ್ಲಿ ಶಿವಬೀಜವಾದ ಮಹಾಮಹಿಮರಿಗುಂಟೇ?**

ಆಗಮಶಾಸ್ತ್ರಗಳ ಆವಶ್ಯಕತೆ ಶಿವಬೀಜವಾದವರಿಗಿಲ್ಲವೆಂಬುದು ಮೇಗಣ ಮಾತು ಗಳಿಂದ ಸುಸ್ಪಷ್ಟವಾಗುತ್ತದೆ. ಅಲಂಕಾರಸೌಂದರ್ಯವು ಅರ್ಥವ್ಯಕ್ತಿತ್ವಕ್ಕೆ ಸಹಾಯಕ ವಾಗುತ್ತದೆ. ಹೀಗೆಯೇ ಪ್ರಸ್ತುತವನ್ನು ಪರಿಸ್ಫುಟಗೊಳಿಸಲು ಅನೇಕ ಅನುಭಾವದ ನಿದರ್ಶನಗಳನ್ನು ಕೊಡುವುದು ಶಿವಯೋಗಿಗಳ ಶೈಲಿಯ ಒಂದು ಸಹಜಗುಣವಾಗಿದೆ.

**ಸುಧೆಯೊಳಗೆ ವಿಷವುಂಟೆ? ಮಧುರದೊಳಗೆ ಕಹಿಯುಂಟೆ?**
**ದಿನಮಣಿಯೊಳಗೆ ಕಪ್ಪುಂಟೆ? ಬೆಳುದಿಂಗಳೊಳಗೆ ಕಿಚ್ಚುಂಟೆ?**
**ಅಮೃತಸಾಗರದೊಳಗೆ ಬೇವಿನ ಬಿಂದುವುಂಟೆ?**

ಮಹಾಜ್ಞಾನಸ್ವರೂಪರಪ್ಪ ಶರಣರಿಗೆ ಸಂಕಲ್ಪವಿಕಲ್ಪಗಳಿಲ್ಲವೆಂಬುದನ್ನು ತಿಳಿಸಲು ಅನು ಸರಿಸಿದ ಶೈಲಿಯಿದು. 'ಬೆಳುದಿಂಗಳೊಳಗೆ ಕಿಚ್ಚುಂಟೇ?' ಎಂಬ ಮಾತು ಕಾವ್ಯದ ದೃಷ್ಟಿ ಯಿಂದ ಎಷ್ಟು ಎತ್ತರಕ್ಕೆ ಹೋಗಬಲ್ಲುದು ಎಂಬುದನ್ನು ವಿಮರ್ಶಕರು ಬಲ್ಲರು. ದ್ವೈತಕ್ಕೆ ಎಂದೂ ಮುಕ್ತಿಯಿಲ್ಲವೆಂಬ ತಾತ್ವಿಕ ವಿಚಾರವನ್ನು ಶಿವಯೋಗಿಗಳು ಅನುಭವ ಪೂರ್ಣವಾಗಿ ಹೇಳುವುದನ್ನು ಕೇಳಿದರೆ ಮೈ ರೋಮಾಂಚನವಾಗುವಂತಿದೆ.

**ಮಸಿ ಎಂದಾದರೂ ಬೆಳ್ಪಾದುದುಂಟೆ?**
**ಅಂಬರ ಮಾಸಿದರೆ ತೊಳೆದರೆ ಬಿಳ್ಪಹುದಲ್ಲದೆ,**
**ಮಲದಲ್ಲಿ ಸೀರೆಯ ಮಾಡಿ ತೊಳೆದರೆ ಬಿಳಿದಾಗಬಲ್ಲುದೇ?**

ಈ ಮಾತುಗಳಲ್ಲಿ ಅಲಂಕಾರಧ್ವನಿ ಮಿಂಚಿನಂತೆ ಹೊಳೆಯುತ್ತದೆ. ರೂಪೆರಡಳಿದು ಏಕಾರ್ಥವಾದವರು "ದೀಪ ದೀಪವ ಬೆರಸಿದಂತೆ" ಇರುವರಂತೆ. ಸ್ವಾಭಾವಿಕವಾದ ನಿದರ್ಶನಗಳನ್ನು ಕೊಡುತ್ತ ಕೊಡುತ್ತ ಶಿವಯೋಗಿಗಳು ಒಮ್ಮೆಲೆ ಮಹೋನ್ನತ ಸ್ಥಲ ವನ್ನು ಮುಟ್ಟುವರು. ಬಯಲು ಬಯಲ ಬೆರಸಿದಂತೆ ಎಂದು ಹೇಳುವಲ್ಲಿ ಈ ಮಾತಿನ

ಮಥಿತಾರ್ಥವಾಗಬಲ್ಲುದು. ಅವರ ಮಾತಿನಲ್ಲಿ ತೂಕವಿದೆ. ಅಲಂಕಾರದಲ್ಲಿ ಸೌಂದರ್ಯ ವಿದೆ. ಎಲ್ಲಕ್ಕೂ ಮೇಲಾಗಿ ತಾತ್ವಿಕವಿಚಾರಗಳಿಗೆ ಪೋಷಕವಾಗಿ ಅವು ಅಭಿವ್ಯಕ್ತಿಗೆ ಸಹಾಯವಾಗುತ್ತವೆ.

**ಸುರತರು ವೃಕ್ಷದೊಳಗಲ್ಲ,**
**ಸುರಧೇನು ಪಶುವಿನೊಳಗಲ್ಲ,**
**ಪರುಷ ಪಾಷಾಣದೊಳಗಲ್ಲ,**
**ಶಿಷ್ಯನ ಭಾವಕ್ಕೆ ಗುರು ನರನಲ್ಲ.**

ಪ್ರಸ್ತುತವಾದ ಶಿಷ್ಯನ ಭಾವಕ್ಕೆ ಗುರುವು ನರನಲ್ಲವೆಂಬುದಕ್ಕೆ ಮೇಗಣ ಮೂರು ಉಕ್ತಿ ಗಳು ಎಷ್ಟು ಪುಷ್ಟಿಯನ್ನು ಕೊಡುತ್ತವೆ! ಅಲ್ಲದೆ, ಅಲ್ಲಿಯ ಕಾವ್ಯಸೌಂದರ್ಯಕ್ಕೆ ಎಲ್ಲರೂ ತಲೆದೂಗಬಹುದಾಗಿದೆ. ಇವು ಕೇವಲ ವೈಚಿತ್ರ್ಯಕ್ಕಾಗಿ ಬಂದ ಅಲಂಕಾರಗಳಲ್ಲ. ಸೌಂದರ್ಯಮೇವ ಅಲಂಕಾರಃ ಎಂಬುದಕ್ಕೆ ಉತ್ತಮ ನಿದರ್ಶನವಾದ ಅಲಂಕಾರಗಳಿವು.

ಅನುಭಾವಮಾರ್ಗದಲ್ಲಿ ನಡೆವ ಶಿವಯೋಗಿಗಳಿಗೆ ತಾರ್ಕಿಕರನ್ನು ಕಂಡರೆ ಆಗದು. ಅವರ ನುಡಿಯೊಂದು ಪರಿ; ನಡೆಯೊಂದು ಪರಿ. ಅದಕ್ಕಾಗಿಯೇ,

**ಬಯಲ ಸಂಭ್ರಮದ ತಾರ್ಕಿಕರನ್ನು ಕಂಡರೆ**
**ಮಾಗಿಯ ಕೋಗಿಲೆಯಂತೆ ಮುಖವ ಮುನಿಸಾಗಿರಿಸಯ್ಯಾ.**

ಸಿದ್ಧಲಿಂಗ ಶಿವಯೋಗಿಗಳ ದೃಷ್ಟಾಂತ ಪ್ರಪಂಚವು ಪ್ರಕೃತಿ, ವ್ಯವಹಾರ, ಜೀವನ ಮುಂತಾದೆಡೆಗಳನ್ನು ವ್ಯಾಪಿಸಿರುವುದನ್ನು ಇಲ್ಲಿ ಮನಗಾಣಬಹುದು. ಮಾಗಿಯ ಕೋಗಿಲೆಯಂತೆ ಮುನಿಸಾಗಿರಿಸೆಂದು ಹೇಳುವಲ್ಲಿ ಕಾವ್ಯ ಮಹೋನ್ನತ ಸ್ಥಲವನ್ನು ಮುಟ್ಟಿದೆ. ಮುಂದಿನ ವಚನದಲ್ಲಿರುವ ಕಾವ್ಯಸೌಂದರ್ಯವನ್ನು ಅವಶ್ಯವಾಗಿ ಸವಿಯ ಬೇಕು.

**ಕತ್ತಲೆಯನೊಳಕೊಂಡ ಬೆಳಕಿನಂತೆ**
**ಪಕ್ಷಿಯನೊಳಕೊಂಡ ತತ್ತಿಯಂತೆ**
**ಮುತ್ತನೊಳಕೊಂಡ ಚಿಪ್ಪಿನಂತೆ**
**ಸಾಗರವನೊಳಕೊಂಡ ಶಶಿಯಂತೆ**
**ಜಗವನೊಳಕೊಂಡ ಆಕಾಶದಂತೆ ಎನ್ನ ನೀವು ಒಳಕೊಂಡಿರಿ.**

ಶಿವಯೋಗಿಗಳು ಕೇವಲ ಸಾಂಪ್ರದಾಯಿಕ ಉಪಮೆಗಳನ್ನು ಕೊಟ್ಟು ತೃಪ್ತರಾಗುವವರಲ್ಲ. ಕಾವ್ಯದ ಕಾವು ಏರಿದಲ್ಲಿ ಅವರು ಒಂದಕ್ಕೆ ಹತ್ತು ಉಪಮೆಗಳನ್ನೂ ದೃಷ್ಟಾಂತಗಳನ್ನೂ ನಿದರ್ಶನಗಳನ್ನೂ ಮಾಲೆಮಾಲೆಯಾಗಿ ಕೊಟ್ಟು ಅರ್ಥವ್ಯಕ್ತಿತ್ವವನ್ನು ಹೆಚ್ಚಿಸುವರು.

**ಹೊನ್ನು ತನ್ನ ಬಣ್ಣದ ಲೇಸ ತಾನಱಿಯದಂತೆ**
**ಬೆಲ್ಲ ತನ್ನ ಮಧುರವ ತಾನಱಿಯದಂತೆ**
**ಪುಷ್ಪ ತನ್ನ ಪರಿಮಳವ ತಾನಱಿಯದಂತೆ**
**ಮನವು ಮಹಾಲಿಂಗದಲ್ಲಿ ಲಯವಾಯಿತು.**

ಇಲ್ಲಿ ಮಹಾಲಿಂಗದಲ್ಲಿ ಲೀಯವಾದ ಮನಸ್ಸು ತನ್ನ ಗುಣವನ್ನು ತಾನರಿಯದಂತಾಯಿತೆಂಬುದನ್ನು ಸುಂದರವಾದ ನಿದರ್ಶನಗಳಿಂದ ಸ್ಪಷ್ಟಪಡಿಸಿರುವರು. ಹೀಗೆ ವಚನಗಳಲ್ಲಿ ಅನೇಕ ಅಲಂಕಾರಗಳು ಸಹಜವಾಗಿ ಮಾರ್ಮಿಕವಾಗಿ ಹೃದಯಸ್ಪರ್ಶಿಯಾಗಿ ಬಂದಿರುವವು. ಅವುಗಳಲ್ಲಿ ಕೆಲವನ್ನು ಮಾತ್ರ ಮೇಲೆ ಉದ್ಧರಿಸಿ ವಿವರಿಸಲಾಗಿದೆ.

ಶಿವಯೋಗಿಗಳ ವಚನಗಳಲ್ಲಿ ಆಧ್ಯಾತ್ಮಿಕ ಅನುಭವದ ಜೊತೆಗೆ ಲೋಕಾನುಭವವು ತುಂಬಿ ತುಳುಕುತ್ತದೆ.

ಪುರಜನಂಗಳ ಮಚ್ಚಿಸುವಾಗ ಪುರುಷಾರ್ಥಿಯೆ ಶರಣ ?
ಪರಿಜನಂಗಳ ಮಚ್ಚಿಸುವಾಗ ಪಾದರಗಿತ್ತಿಯೆ ಶರಣ ?
ಸರ್ವರ ಮಚ್ಚಿಸುವಾಗ ಸಂತೆಯ ಸೂಳೆಯೆ ಶರಣ ?

ಈ ಉಕ್ತಿಗಳಲ್ಲಿ ಲೋಕಾನುಭವ ನಿಷ್ಠುರತೆಗಳು ಎಷ್ಟು ಸ್ಪಷ್ಟವಾಗಿ ಪ್ರಕಟವಾಗಿವೆ ! ಇದರಂತೆ ಇನ್ನೂ ಕೆಲವು ಉಕ್ತಿಗಳನ್ನು ಕಾಣಬಹುದು:

೧ "ಕೈಯಲ್ಲಿ ಹಣ್ಣಿದ್ದಂತೆ ಮರನನೇಱಿ ಕೊಂಬ ಬಾಗಿಸಿ
ಕಾಯ ಕೊಯ್ವ ಅರೆಮರುಳರಂತೆ"[೧]

೨ "ಉದ್ದೇಶದಿಂದ ತನುವ ಒಣಗಿಸಿದರೆ
ಹಸಿಯ ಮರನ ತಱಿದು ಬಿಸಿಲಿಗೆ ಹಾಕಿದಂತೆ"[೨]

೩ "ಈಚಲ ತಿಂದ ನರಿ ತನ್ನ ವಿಕಾರಕ್ಕೆ ಒರಲುವಂತೆ
ಮಾತಿನ ಮಮಕಾರಕ್ಕೆ ಆಗಮವ ಬಲ್ಲೆವೆಂದು
ಕೂಗಿಡುವರು ನೋಡಾ"[೩]

೪ "ನೊರೆವಾಲ ಚೆಲ್ಲಿ ಕಾಟಗೆ ಬಯಸಿ ಬಾಯಾರುವಂತೆ"[೪]

೫ "ಕತ್ತೆಗೇಕಯ್ಯಾ ಕಡಿವಾಣ,
ತೊತ್ತಿಗೇಕಯ್ಯಾ ತೋಳಬಂದಿ,
ಶ್ವಾನಂಗೇಕಯ್ಯಾ ಆನೆಯ ಚೌರ"[೫]

೬ "ಗಜಲ ತಿಂಬ ಕರಡಿ ಕರ್ಜೂರದ ಹಣ್ಣಿನ ಸವಿಯನೆತ್ತ ಬಲ್ಲುದು,
ಬೇವ ತಿಂಬ ಕಾಗೆ ಬೆಲ್ಲದ ಸವಿಯನೆತ್ತ ಬಲ್ಲುದು"[೬]

೭ "ತುರಿಯ ಮೇಲೆ ಉಗುರನಿಕ್ಕಿದರೆ ಹಿತವಾಗಬಹುದು"[೭]

೮ "ನಾಯ ಸರಸ ಸೀರೆಯ ಕೇಡು
ಮಾಯಾಸಂಗ ಹರಣದ ಕೇಡು
ಈಶ್ವರಶರಣಂಗೆ ವಿಕಾರ ಹುಟ್ಟಿದೊಡೆ
ಮೊಸಲ ನಾಯಿ ಮುಟ್ಟಿದಂತಾಯಿತ್ತು"[೮]

---

೧. ತೋಂ. ಸಿ. ವ. ೨೬೮.
೨. ತೋಂ. ಸಿ. ವ. ೩೫೦.
೩. ,, ೩೫೪.
೪. ,, ೩೯೬.
೫. ,, ೪೦೨.
೬. ,, ೪೦೬.
೭. ,, ೧೧೨.
೮. ,, ೧೨೪.

೯ ಚರ್ಮವ ತಿಂಬ ಸೊಣಗ ಬಲ್ಲುದೆ ಪಾಯಸದ ಸವಿಯ"[೧]

೧೦ "ಹೆಣನ ಕಂಡರೆ ನಾಯಿ ಕಚ್ಚದೆ?
ನೊಣನ ಕಂಡರೆ ಕಪ್ಪೆ ಹಿಡಿಯದೆ"[೨]

೧೧ "ಕಟ್ಟರಸಿಲ್ಲದ ರಾಜ್ಯ ಕಳ್ಳರ ಭಯ
ಒಕ್ಕಲಿಲ್ಲದ ಊರು ಹಾಳು
ಮಕ್ಕಳಿಲ್ಲದ ಮನೆ ಮಸಣವಟ್ಟಿಗೆ"[೩]

ಈ ಉಕ್ತಿಗಳಲ್ಲಿ ಹುದುಗಿರುವ ಲೋಕಾನುಭವ ಕಾವ್ಯಸೌಂದರ್ಯವನ್ನು, ಅನುಭವಿಸಿಯೇ ಅರಿಯಬೇಕು. ನಿತ್ಯ ಜೀವನ, ಸುತ್ತಲಿನ ಪ್ರಕೃತಿ, ಸಾಮಾಜಿಕ ಸ್ಥಿತಿಗತಿ ಇವೆಲ್ಲ ಕ್ಷೇತ್ರಗಳಿಂದ ಈ ಉಕ್ತಿಗಳು ಹೊರಹೊಮ್ಮಿವೆ. ಅವು ಶಿವಯೋಗಿಗಳ ಲೋಕಾನುಭವದ ವಿಸ್ತಾರವನ್ನೂ ಆಳವನ್ನೂ ಸ್ಪಷ್ಟಪಡಿಸುತ್ತವೆ. ಇಂತಹ ಸುಂದರವಾದ ಲೋಕೋಕ್ತಿಗಳು ಶಿವಯೋಗಿಗಳ ವಚನಗಳ ತುಂಬೆಲ್ಲ ಚೆಲ್ಲವರಿದು ಅವರ ಶೈಲಿಗೆ ವಿನೂತನವಾದ ಮೆರುಗನ್ನು ತಂದಿವೆ. ಈ ಉಕ್ತಿಗಳಲ್ಲಿ ಜನವಾಣಿಯಿಂದ ಕವಿವಾಣಿಗೂ, ಕವಿವಾಣಿಯಿಂದ ಜನವಾಣಿಗೂ ಹೋದ ನಾಣ್ನುಡಿಗಳು ವಿಪುಲವಾಗಿವೆ. ಅವುಗಳ ಸೌಂದರ್ಯವನ್ನು ಸಹೃದಯರು ಓದಿಯೇ ಅನುಭವಿಸಬೇಕು.

ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶೈಲಿಯ ವೈಶಿಷ್ಟ್ಯವೆಂದರೆ ಸ್ಪಷ್ಟತೆ. ಆ ಸ್ಪಷ್ಟತೆ ಒಮ್ಮೊಮ್ಮೆ ತುತ್ತತುದಿಯನ್ನೇರುತ್ತದೆ. ಶರಣನು ನ್ಯಾಯನಿಷ್ಠುರ, ದಾಕ್ಷಿಣ್ಯಪರನಲ್ಲ. ಲೋಕವೇ ಅವನಿಗೆ ಎದುರಾದರೂ ಆತನು ಅಂಜುವವನಲ್ಲ. ಕಂಡುದನ್ನು ಖಚಿತವಾಗಿ ಹೇಳಿಬಿಡುವನು. ಲೋಕದ ಡೊಂಕು, ಕುಂದುಕೊರತೆ, ಆಡಂಬರ, ಡಂಭಾಚಾರಗಳನ್ನು ಸಿದ್ಧಲಿಂಗ ಶಿವಯೋಗಿಗಳು ನಿಷ್ಠುರವಾಗಿ ಖಂಡಿಸಿರುವರು. ಅವರ ಆ ಉಕ್ತಿಗಳನ್ನು ಕೇಳಿದೊಡನೆಯೇ ವಜ್ರದ ಶಲಾಕೆಯನ್ನು ಬೀಸಿದಂತಾಗುತ್ತದೆ. ಆ ಮಾತಿನಲ್ಲಿ ತೀಕ್ಷ್ಣತೆ ಇದ್ದರೂ ಮಾನವಕುಲಕೋಟಿಯ ವಿಷಯದಲ್ಲಿ ಅನುಕಂಪೆ ಇದೆ. ಮಾತು ಹೊರಗೆ ಬಿರುಸಾಗಿ ತೋರಿದರೂ ಒಳಗೆ ಆರ್ದ್ರತೆ ಇದೆ. ಅಂತಹ ಉಕ್ತಿಗಳಲ್ಲಿ ಕೆಲವನ್ನಿಲ್ಲಿ ಅವಲೋಕಿಸಬಹುದು.

"ತನು ಮುಟ್ಟಿ ಅಪ್ಪಿ ಮನಮುಟ್ಟಿ ನೆರೆಯದೆ
ಕಡೆಯಲ್ಲಿದ್ದವರಿಗೆ ಕಾಮಿಸುವ ತುಡುಗುಣಿ
ಹೊಲತಿಯರಂತೆ"[೪]

"ನೆಟ್ಟಿದ್ದ ಕಲ್ಲಿಗೆ ನೀಡಿ ಕೆಡೆದರೆ
ಕಟ್ಟಿದ್ದ ಕಲ್ಲಿನ ಕಷ್ಟವ ನೋಡಿರೇ"[೫]

---

೧. ತೋಂ. ಸಿ. ವ. .
೨. ತೋಂ. ಸಿ. ವ. ೪೭೩.
೩. ,, ೪೮೭.
೪. ,, ೨೫೫.
೫. ,, ೨೬೭.

"ವಂದಿಸಿ ನಿಂದಿಸುವ ಸಂದೇಹಿಯ ಮನೆಯ ಕೂಳು
ಹಂದಿಯ ಬಾಯ ತುತ್ತ ನಾಯಿ ಕಿತ್ತುಕೊಂಡು
ತಿಂದಂತಾಯಿತ್ತು"[೧]

"ಬೂದಿಯಲ್ಲಿ ಹೊರಳುವ ಕತ್ತೆಯಂತೆ
ಎಲುವ ಕಡಿವ ಶ್ವಾನನಂತೆ
ಹಾತೆಯ ತಿಂಬ ಹಲ್ಲಿಯಂತೆ......"[೨]

ಇವೇ ಮೊದಲಾದ ಉಕ್ತಿಗಳಲ್ಲಿ ಶಿವಯೋಗಿಗಳು ಡಾಂಭಿಕ ಸಮಾಜವನ್ನು, ಸತ್ಪಥವನ್ನು ಬಿಟ್ಟು ಆಮುಷ್ಮಿಕದಲ್ಲಿ ಮುಳುಗಿದ ಮಾನವಕೋಟಿಯನ್ನು ಕಟುವಾಗಿ ಖಂಡಿಸಿರುವರು. ಅದರ ಉದ್ದೇಶ ಅಂತಹರನ್ನು ಬಡಿದೆಬ್ಬಿಸಬೇಕೆಂಬುದು. ಏಸು, ಬುದ್ಧ, ಬಸವರು ಬಂದರೂ ಮಾನವನ ಮೌಢ್ಯ ಕತ್ತರಿಸಲಿಲ್ಲ. ಬೆಳಗು ಹರಿಯಲಿಲ್ಲ. ಅಂದಮೇಲೆ ಮಾನವನನ್ನು ಕುರಿತು ದಯಾಪೂರ್ಣ ದೃಷ್ಟಿಯುಳ್ಳವರಾಗಿ ಇಂತಹ ನಿಷ್ಠುರೋಕ್ತಿಗಳ ನ್ನಾಡಿದರೆ ಅದು ಆವಶ್ಯಕವೆಂದೆ ಹೇಳಬೇಕಾಗುತ್ತದೆ. ಶರಣರ ಶಿವಯೋಗಿಗಳ ದೃಷ್ಟಿ ಮರ್ತ್ಯವನ್ನು ಮಹವನ್ನಾಗಿ ಮಾರ್ಪಡಿಸಬೇಕೆಂಬುದು. ಆದುದರಿಂದಲೇ ಅವರು ಶ್ರೇಷ್ಠಪ್ರತಿಯ ಸಮಾಜವಿಮರ್ಶಕರೂ ಆಗಿರುವರು. ಸಮಾಜದರ್ಶನ ವಚನಸಾಹಿತ್ಯದ ಒಂದಂಗವಾಗಿದೆ. ಆದುದರಿಂದ ಸಿದ್ಧಲಿಂಗ ಶಿವಯೋಗಿಗಳು ಸಮಕಾಲೀನ ಸಮಾಜ ವನ್ನು ಪರಾಮರ್ಶಿಸಿರುವರು. ಅದಕ್ಕೆ ಸತ್ಪಥವನ್ನು ತೋರಿರುವರು. ಇಹವು ಪರವಾಗ ಬೇಕೆಂದು ಹಾರೈಸಿರುವರು.

'ಧ್ವನಿರಾತ್ಮಾ ಕಾವ್ಯಸ್ಯ' ಎಂದು ಹೇಳುವುದು ಸತ್ಯವಾದುದು. ಕಾವ್ಯವು ವಾಚ್ಯ ವಾಗಿರುವುದಕ್ಕಿಂತ ಸೂಚ್ಯವಾಗಿರಬೇಕು. ರಸೋತ್ಪತ್ತಿಯಾಗುವುದು ಇಂತಹ ಸೂಚ್ಯ ಪದಗಳಿಂದ. ಆದುದರಿಂದ ಕವಿಯ ಅಗ್ಗಳಿಕೆಯನ್ನು ಅಳೆಯುವವರು ಆತನ ಧ್ವನಿ ಪೂರ್ಣ ಉಕ್ತಿಗಳ ಕಡೆಗೆ ಗಮನ ಕೊಡಬೇಕಾಗುವುದು. ಸಿದ್ಧಲಿಂಗ ಶಿವಯೋಗಿಗಳ ವಚನಗಳಲ್ಲಿ ಧ್ವನಿ ವಿಪುಲವಾಗಿ ಬರುತ್ತದೆ. ಅಲ್ಲಿ ವಸ್ತುಧ್ವನಿಯಿದೆ. ಅಂತಹ ಕೆಲವು ಉಕ್ತಿಗಳನ್ನು ಓದಿದೊಡನೆಯೇ ಸಹೃದಯನು ಮಂತ್ರಮುಗ್ಧನಾಗುವನು. ಅನುಭವ, ಅನುಭಾವಗಳು ಹೆಪ್ಪುಗಟ್ಟಿ ಅರ್ಥಭಾರದಿಂದ ಬಳುಕುವ ಆ ಪದ, ಪದಗುಂಫನ, ವಾಕ್ಯ ಗಳನ್ನು ನಿರೀಕ್ಷಿಸಿದರೆ ಮಹದಾನಂದವಾಗುವುದು.

"ಕೆಂಡಗಣ್ಣನ ಶರಣರೊಡನೆ ಸರಸವಾಡಿದರೆ
ಕೆಂಡವ ಕೊಂಡು ಕೆನ್ನೆಯ ತುರಿಸಿಕೊಂಡಂತಾಯಿತ್ತು"[೩]

"ಕೆಂಡವ ಇರುಹೆ ಮುತ್ತಬಲ್ಲುದೇ?
ನೊಣ ಹಾದರೆ ಮದಸೊಕ್ಕಿದಾನೆಯ ಬಱಿ ಮುಱಿಯಬಲ್ಲುದೇ"[೪]

---

೧. ತೋಂ. ಸಿ. ವ. ೫೨. ೨. ತೋಂ. ಸಿ. ವ. ೪೦೦.
೩. ,, ೪. ,, ೮೯.

"ಸ್ಫಟಿಕದ ಘಟದೊಳಗೆತ್ತಿದ ಜ್ಯೋತಿ
ಒಳಹೊಱಗೊಂದೇ ಸ್ವಯುವಾಗಿ ಪ್ರಜ್ವಲಿಸುವಂತೆ
ಎನ್ನೊಳಗಿಪ್ಪಾತನೂ ಹೊಱಗಿಪ್ಪಾತನೂ ಒಂದೇ"[೧]

"ಕೋತಿಗೆ ಕೊಂಬು ಹುಟ್ಟಬಲ್ಲುದೇ?
ನುಚ್ಚಕ್ಕಿ ಮೊಳೆಯುಬಲ್ಲುದೇ?
ಸತ್ತ ಮರ ಎಳಕಬಲ್ಲುದೇ?"[೨]

"ಸುಡುವಗ್ನಿ ಕಾಷ್ಠದಿರವ ಬಲ್ಲುದೇ?
ಕೊರೆದು ಹರಿವ ಉದಕ ಗಿರಿಯ ಗರ್ವವ ಬಲ್ಲುದೇ?
ಮುಱಿದು ತಿಂಬ ತೋಳ ಕುಱಿಯ ಮಱಿಯ ಬೇನೆಯ ಬಲ್ಲುದೇ"?[೩]

ಈ ಮಾತುಗಳನ್ನು ಓದಿದರೆ ಲಿಂಗ ಮೆಚ್ಚಿ ಅಹುದಹುದೆನಬಲ್ಲುದು. ಧ್ವನಿ, ಅಲಂಕಾರಗಳ ಪರಾಕಾಷ್ಠದೆಸೆಯೇ ಬೆಡಗು. ಬೆಡಗೆಂಬುದು ನೂತನ ಪ್ರತಿಮಾ ಸಂವಿಧಾನ. ವಚನಕಾರರು ಅನುಭವದ ಅತ್ಯಂತ ಸೂಕ್ಷ್ಮ ವಿಷಯುಗಳನ್ನು ಹೊಸ ಹೊಸ ಉಪಮೆ, ರೂಪಕ, ಅಲಂಕಾರಗಳ ಸಹಾಯದಿಂದ ಬಿತ್ತರಿಸಿದರು. ಅವು ಧ್ವನಿ ಪೂರ್ಣವೂ ವಿನೂತನವೂ ಆದುದರಿಂದ ಸಾಹಿತ್ಯಪ್ರಪಂಚದಲ್ಲಿ ಅದಕ್ಕೊಂದು ವಿಶಿಷ್ಟ ಹೆಸರು ಪ್ರಾಪ್ತವಾಯಿತು. ವಚನವಾಙ್ಮಯದಲ್ಲಿ "ಬೆಡಗಿನ ವಚನಗಳು" ಎಂಬ ಒಂದು ಸೃಷ್ಟಿಯೇ ನಿರ್ಮಾಣವಾಯಿತು. ಸುಲಭವಾಗಿ ಹೇಳಬಹುದಾದುದನ್ನು ಗೂಢವಾಗಿ ಹೇಳಿದುದೇ ಬೆಡಗೆಂದು ಹಲವರ ಭ್ರಮೆ. ಇಲ್ಲಿ ಸೌಲಭ್ಯ ಕಾಠಿಣ್ಯಗಳ ಪ್ರಶ್ನೆಯೇ ಇಲ್ಲ. ಮಿಂಚಿನಂತೆ ಒಳಗೆ ಹೊಳೆದುದನ್ನು, ಮಿಂಚಿನ ವೇಗದಿಂದ, ನೂತನ ದೃಷ್ಟಿಯಿಂದ ಶರಣರು ಹೇಳಿಧರು. ಒಂದು ಮಾತು ನಿಜ. ಹಳೆಯ ಸಂಪ್ರದಾಯುಗಳನ್ನು ಅವರು ಕಿತ್ತೊಗೆದಿದ್ದರು. ಮುಖ, ಚಂದ್ರ, ಚಕೋರ ಈ ಕ್ಲಿಪ್ತವಾದ ಕವಿಸಮಯ ಪ್ರಪಂಚದಲ್ಲಿ ವಚನಕಾರರ ಕಾವ್ಯ-ಪಕ್ಷಿ ಗರಿಗೆದರಿ ಹಾರಲು ಸಾಧ್ಯವಿರಲಿಲ್ಲ. ಅಂತೆಯೇ ಅದು ತನಗೆ ಬೇಕಾದ ವಿಸ್ತೃತವಾದ ನೂತನಮಾರ್ಗವನ್ನು ಕಲ್ಪಿಸಿಕೊಂಡಿತಂ. ಅಲ್ಲಿರುವುದುಂ ಎರಡಕ್ಕೆ ಎರಡಿಟ್ಟ ವಸ್ತು ಪ್ರತಿವಸ್ತೂಪಮೆ ಅಲ್ಲ; ಭಾವಗಳ ವಿದ್ಯುದಾಲಿಂಗನ. ಅರ್ಥದ ಅವಿರಳಾನಂದ. ಆ ಸಂಕೇತಗಳನ್ನು ಮಾತ್ರ ತಿಳಿದುಕೊಳ್ಳಬೇಕಾಗುವುದು. ಯಾವುದೇ ಕಾವ್ಯಕ್ಷೇತ್ರದಲ್ಲಿ ಅದರ ಸಾದ್ಯಂತವಾದ ಸಂಕೇತಗಳ ಪರಿವೆ ಇರಬೇಕಾಗುತ್ತದೆ.

"For he on honeny due hath fed,
And drank the milk of paradise"

ಎಂಬ ಕೀಟ್ಸ ಕವಿಯ ಉಕ್ತಿಯನ್ನು ಕೇಳಿ, ಅಲ್ಲಿಯ ಸಂಕೇತಗಳ ಅರ್ಥವಾದವರು ಕುಣಿದಾಡಿದರಂತೆ. 'Honeydue' ಇದರ ಮೇಲೆ ಜೀವಿಸಿದವರು, 'Milk of paradise' ಕುಡಿದವರು ಯಾರೆಂಬ ಸಂಕೇತ ಹೊಳೆಯದಿದ್ದರೆ ಆ ಕಾವ್ಯ ಅರ್ಥವಾಗು

೧. ತೋಂ. ಸಿ. ವ. ೮೯.
೨. ,, ೪೦೧.
೩. ತೋಂ. ಸಿ. ವ. ೪೦೩.

ವುದು ಅಷ್ಟಕ್ಕಷ್ಟೇ. ಇದೇ ಬಗೆಯಾಗಿ ವಚನವಾಙ್ಮಯದ ಬೆಡಗನ್ನು ಒಡೆವರೆ ಅಲ್ಲಿ ಅಣುಸ್ಫೋಟವಾದಷ್ಟು ಅರ್ಥ ಹೊರಹೊಮ್ಮುತ್ತದೆ. ನವ್ಯಕಾವ್ಯದವರು ಹೇಳುವ ನೂತನ ಪ್ರತಿಮಾಸೃಷ್ಟಿ ಗಂಭೀರವಾಗಿ, ಸುಂದರವಾಗಿ ವಚನವಾಙ್ಮಯದಲ್ಲಿ ಬಂದಿರು ವುದನ್ನು ಗಮನಿಸಬೇಕು. ತೋಂಟದ ಸಿದ್ಧಲಿಂಗ ಶಿವಯೋಗಿಗಳು ಕನ್ನಡ ಸಾಹಿತ್ಯ ದೇವಿಗೆ ಬೆಡಗಿನ ಎಡೆಯನ್ನು ಹಿಡಿದಿರುವರು. ಅವರ ವಚನಗಳಲ್ಲಿ ಬೆಡಗು ವಿಪುಲವಾಗಿ ಬರುತ್ತದೆ. ವಚನವಾಙ್ಮಯವು ಉದಯವಾಗಿ ೮೦೦ ವರುಷಗಳು ಸಂದಿದ್ದರೂ ಸಾಮಯಿಕವೆನಿಸದ ಬೆಡಗು ಶಿವಯೋಗಿಗಳ ಶೈಲಿಯಲ್ಲಿ ಹೊಂದಿಬರುತ್ತದೆ.

**"ಅದ್ಭುತದಾಕಾಶದಲ್ಲಿ ಶುಭ್ರವರ್ಣದ ಅಂಗನೆ**
**ವಿದ್ಯುಲ್ಲತೆಯ ಹಡೆದಳು ನೋಡಾ"**[೧]

ಎಂಬ ಬೆಡಗಿನ ನುಡಿಯಲ್ಲಿ 'ಅದ್ಭುತದ ಆಕಾಶ'ವೆಂದರೆ ಚಿದಾಕಾಶ, ಅಂದರೆ ಪರಮಾತ್ಮ. ಶುಭ್ರವರ್ಣದ ಅಂಗನೆಯೆಂದರೆ ಶಕ್ತಿ. ಈ ಶಕ್ತಿಸಂಕ್ಷೋಭೆಯಿಂದ ಸೃಷ್ಟ್ಯುನ್ಮುಖವಾದ ಪ್ರಕೃತಿಯ ಉದಯವಾಯಿತು. ಈ ಅರ್ಥ ಹೊಳೆದರೆ, ಅಲ್ಲಿರುವ ಕಾವ್ಯಸೌಂದರ್ಯ ಸುಲಭವಾಗಿಯೇ ಮನದಟ್ಟಾಗಬಲ್ಲುದು. ಪ್ರಕೃತಿಯನ್ನು ವರ್ಣಿಸುವ ಇನ್ನೊಂದು ವಚನವನ್ನು ನೋಡಬಹುದು.

**"ಧರೆಯಾಕಾಶ ಮಧ್ಯದಲ್ಲಿ ಉರಿಯ ಸೀರೆಯನುಟ್ಟು**
**ಧರೆಯಾಕಾಶಕ್ಕೆ ಎಡೆಯಾಡುತ್ತಿದ್ದಾಳೆ ನೋಡಾ"**[೨]

ಅಂದರೆ ಮಾಯೆ ಉರಿಯ ಸೀರೆಯನ್ನುಟ್ಟುಕೊಂಡು ವಿಹರಿಸುವಳೆಂಬ ಮಾತಿನಲ್ಲಿ ಹುದುಗಿರುವ ಅರ್ಥವನ್ನು ವಿವರಿಸುವ ಶಕ್ತಿ ಶಬ್ದಕ್ಕಿಲ್ಲ. ಅದನ್ನು ಅನುಭವದಿಂದಲೇ ಕಂಡುಕೊಳ್ಳಬೇಕು.

**ಮುಚ್ಚಿದ ಕಣ್ಣು ತೆಱೆದುದ ಕಂಡೆ**
**ಕಿಚ್ಚಿನ ಜ್ವಾಲೆ ಕರೆವುದ ಕಂಡೆ**
**ಮೃತ್ಯುಗಳ ಮೊತ್ತ ಕಿತ್ತೋಡುವುದ ಕಂಡೆ**
**ಕತ್ತಲೆ ಬೆಳಗಾದುದ ಕಂಡೆ"**[೩]

ಇಲ್ಲಿ ಕಾವ್ಯ ಲೀಲಾಜಾಲವಾಗಿ ವಿಲಾಸವಾಡುತ್ತಿಲ್ಲವೇ? ಕಿಚ್ಚಿನ ಜ್ವಾಲೆ ಎಂದರೆ ಅರಿವು. ಅರಿವು ಆತ್ಮನನ್ನು ಕೈಮಾಡಿ ಕರೆಯಿತಂತೆ. ಅರಿವು ಕರೆದ ಮೇಲೆ ಕತ್ತಲೆ ಕರಗುವುದು ಸಹಜವೇ. ಜ್ಞಾನೋದಯದ ಮಂಗಲಮುಹೂರ್ತವನ್ನು ಈ ವಚನವಾಣಿ ಸಂಭ್ರಮ ದಿಂದ ಬಣ್ಣಿಸುತ್ತದೆ.

ಇಂತಹ ಅಪೂರ್ವವಾದ ಬೆಡಗಿನ ವಚನಗಳು ತೋಂಟದ ಸಿದ್ಧಲಿಂಗೇಶ್ವರರ ವಚನಗಳಲ್ಲಿ ವಿಪುಲವಾಗಿ ಬರುತ್ತವೆ. ಬೆಡಗಿನ ವಚನಗಳಲ್ಲಿ ಪ್ರಾಯಶಃ ಪ್ರಭುದೇವ

---

೧. ತೋಂ. ಸಿ. ಪ. ೩೩೨. ೨. ತೋಂ. ಸಿ. ಪ. ೪೮೬.
೩. ,, ೧೦೦.

ರೊಬ್ಬರನ್ನು ಬಿಟ್ಟರೆ, ಶಿವಯೋಗಿಗಳೇ ಅಗ್ರಗಣ್ಯರೆಂದು ಹೇಳಬೇಕಾಗುತ್ತದೆ. ಅವು ಸಾಮಯಿಕ ಬೆಡಗುಗಳಲ್ಲ. ಪ್ರತಿಭೆಯ ವಿದ್ಯುದಾಲಿಂಗನದಿಂದ ಉದ್ಬುದ್ಧವಾದ ಸಾಹಿತ್ಯ ಸಾಗರದ ಶಾಶ್ವತ ಬುದ್ಬುದಗಳು. ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲಜ್ಞಾನ ಸಾರಾ ಮೃತ ವಚನಗಳ ಸಾಹಿತ್ಯಸೌರಭವನ್ನು ಅನುಭವಿಸಬೇಕಾದವರು, ಅಳೆಯಬೇಕಾದವರು ರಾಸಿರಾಸಿಯಾಗಿ ಬರುವ ಅವರ ಬೆಡಗಿನ ವಚನಗಳ ಬೆಡಗನ್ನು ಒಡೆದು ನೋಡಬೇಕಾಗು ವುದು. ಅದು ಬೆಡಗೆಂದೂ ಕೇವಲ ಸಾಮಯಿಕ ಅರ್ಥವಿರಬೇಕೆಂದೂ ಪುಟ ತಿರುವಿ ಮುಂದೆ ಸಾಗುವವರಿಗೆ ಶಿವಯೋಗಿಗಳ ವಚನಗಳಲ್ಲಿರುವ ಸೌಂದರ್ಯದ ಕಲ್ಪನೆ ಆಗದಿರ ಬಹುದು. ಪ್ರಾಯಶಃ ಅನೇಕರಿಗೆ ಹೀಗಾಗುವ ಸಂಭವವಿದೆ. ಪ್ರೊ. ಡಿ. ಎಲ್. ನರಸಿಂಹಾಚಾರ್, ಎಂ.ಎ. ಅವರು ಶಿವಯೋಗಿಗಳ ವಚನಗಳನ್ನು ಕುರಿತು ಹೇಳಿದ ಮಾತುಗಳನ್ನು ಮೇಲಿನ ಹಿನ್ನೆಲೆಯಲ್ಲಿ ಅವಲೋಕಿಸಿದರೆ ಅವುಗಳ ತಥ್ಯವೇನೆಂಬುದು ವೇದ್ಯವಾಗಬಲ್ಲುದು.

"ಅವನ ವಚನಗಳು ಕಾವ್ಯದ ಕಾವಿಲ್ಲದೆ ಉಪದೇಶಾತ್ಮಕವಾಗಿ ಸಾಹಿತ್ಯದೃಷ್ಟಿ ಯಿಂದ ನೀರಸವಾಗಿವೆ. ಬಸವನೂ ಅವನ ಅನುಯಾಯಿಗಳೂ ಬರೆದ ವಚನಗಳೊಡನೆ ಹೋಲಿಸಿ ನೋಡಿದರೆ ಇವನ ವಚನಗಳು ನಿಕೃಷ್ಟವಾದುವುಗಳೆಂದು ಹೇಳಬಹುದು."[1]

ಇಲ್ಲಿ ಒಂದೆರಡು ಮಾತುಗಳು ಗಮನಾರ್ಹವಾಗಿವೆ. ಸಿದ್ಧಲಿಂಗ ಶಿವಯೋಗಿಗಳ ವಚನಗಳು ಬಸವೇಶ್ವರ, ಪ್ರಭುದೇವರು, ಮಹಾದೇವಿಯಕ್ಕ ಮೊದಲಾದವರ ವಚನ ಗಳಷ್ಟು ಭಾವಭರಿತವಾಗಿಲ್ಲವೆಂಬುದೊಂದಂಶ. ಅವರ ಜಾಯಮಾನ, ಪರಿಸರ, ಉದ್ದೇಶಗಳೇ ಬೇರೆ. ಸಿದ್ಧಲಿಂಗ ಶಿವಯೋಗಿಗಳ ರೀತಿಯೇ ಬೇರೆ. ಷಟ್ಸ್ಥಲ ಶಾಸ್ತ್ರ ವನ್ನು ಸುಸಂಬದ್ಧವಾಗಿ ವಿವರಿಸಬೇಕೆಂದು ಹೊರಟವರು ಸಿದ್ಧಲಿಂಗ ಶಿವಯೋಗಿಗಳು. ಅನುಭವದ ಆಣಿಮುತ್ತುಗಳನ್ನು ಹಾಡಿ ಹಾಡಿ ಆನಂದಪಟ್ಟುಕೊಂಡವರು ಬಸವಣ್ಣ, ಪ್ರಭು, ಮಹಾದೇವಿಯಕ್ಕನವರು. ಅದೇ ಸಿದ್ಧಾಂತವನ್ನು ನಿರ್ಣಯಿಸಿ ವಿವರಿಸಿದ ಚನ್ನ ಬಸವಣ್ಣನವರ ವಚನಗಳ ಶೈಲಿಯೇ ಬೇರೆ ತೆರನಾಗಿದೆ. ವಸ್ತು ಉದ್ದೇಶ ಇವುಗಳಿಗನು ಗುಣವಾಗಿ ಸಾಹಿತ್ಯದ ಶೈಲಿ ಅಳವಡುತ್ತದೆ. ಸಿದ್ಧಲಿಂಗ ಶಿವಯೋಗಿಗಳು ನೀತಿಯನ್ನು ನೀತಿಯಾಗಿಯೇ ಹೇಳ ಹೊರಟವರಲ್ಲ. ನೀತಿ ಷಟ್ಸ್ಥಲ ಸಿದ್ಧಾಂತದ ಸಾರಸಾರಾಯ; ಶಿವಯೋಗಿಗಳ ಜೀವನದ ಉಸಿರು. ಷಟ್ಸ್ಥಲವನ್ನೇ ಜೀವಿಸಿದ ಶಿವಯೋಗಿಗಳ ನುಡಿ ನೀತಿಯ ಹೊಂಬೆಳಗಿನಲ್ಲಿ ಹೊರಹೊಮ್ಮಿರುವುದು ಸಹಜವಾಗಿದೆ. ಆ ನೀತಿ ವಚನ ಗಳಿಗೆ ಭಾರವಾಗಿಲ್ಲ. ಅವು 'Cold and didactic' ಎಂದು ಹೇಳುವ ಮಾತಿನಲ್ಲಿ ನಮಗೆ ಅರ್ಥವೇ ಕಾಣುವುದಿಲ್ಲ. ಆದರೆ ಷಟ್ಸ್ಥಲಜ್ಞಾನಸಾರಾಮೃತ ವಚನಗಳಲ್ಲಿ

---

[1] "Of original writers Tontada Siddhalinga (C 1470), the nuclus of the movement, is easily the best. But his vachanas are cold and didactic and seldom give the glow of literature. When compared with the writings of Basava and his followers, his is a misrable performance"

ತತ್ತ್ವವನ್ನು ವಿವರಿಸುವ ವಚನಗಳು ಬೇಕಾದಷ್ಟಿವೆ. ಸರ್ವಶೂನ್ಯ ನಿರಾಲಂಬಸ್ಥಲದಿಂದ ಪಿಂಡಸ್ಥಲದ ಮುಗಿತಾಯದವರೆಗಿರುವ ವಚನಗಳು ತತ್ತ್ವವನ್ನೇ ನಿರೂಪಿಸುತ್ತವೆ. ಅಲ್ಲಿ ಕಾವ್ಯದ ಮೆರುಗನ್ನು ಕಾಣಬೇಕೆಂದು ಹೊರಡುವುದು ಧಾರ್ಷ್ಟ್ಯದ ಮಾತಾದೀತು. ಇದರಂತೆ ಪ್ರಾಣಲಿಂಗಿಸ್ಥಲದ ವಚನಗಳಲ್ಲಿ ಯೋಗದ ರಹಸ್ಯವನ್ನು ವಿವರಿಸಿರುವರು. ಅದೇ ಪಿಂಡಜ್ಞಾನ, ಸಂಸಾರಹೇಯಸ್ಥಲಗಳತ್ತ ಬಂದರೆ ಅಲ್ಲಿ ಅನುಭವಕ್ಕೆ ಕಾವ್ಯದ ಕಿರಣಗಳು ಮೂಡುತ್ತವೆ.

> **"ಚಿತ್ತನ ಮನೆಯಲ್ಲಿ ಸತ್ತಿಪ್ಪವನಿವನಾರು ?**
> **ಸತ್ತವನ ನೋಡಿ ಎತ್ತ ಹೋದರೆ,**
> **ಎತ್ತ ಹೋದವ ಸತ್ತು ಸತ್ತವನೆದ್ದು ಕೂಗುತ್ತಿದ್ದಾನೆ**
> **ಈ ಚಿತ್ರವನೇನೆಂಬೆ ?"**[1]

ಚಿದಾಕಾಶದ ಮನೆಯಲ್ಲಿ ಹುಟ್ಟಿ ಜೀವಿಸುತ್ತಿರುವವನು ಜೀವಾತ್ಮ. ಆತನು ತನ್ನ ನಿಜವನ್ನು ಮರೆತು ಮಾನವನಾಗಿ ಸತ್ತಂತಿರುವನು. ಅವನನ್ನು ನೋಡಿ ಎತ್ತಲಿಕ್ಕೆ ಹೋದುದು ಮಾಯೆ. ಪಿಂಡಜ್ಞಾನದಲ್ಲಿ ಎತ್ತ ಹೋದ ಈ ಮಾಯೆ ಸತ್ತು, ಸತ್ತ ಜೀವಾತ್ಮನು ಜ್ಞಾನೋದಯವನ್ನು ಹೊಂದಿ ಎದ್ದು ಕೂಗಿದನಂತೆ. ಇಂಥ ವಚನಗಳು ಪಿಂಡಜ್ಞಾನ ಸ್ಥಲದಲ್ಲಿ ಆರಂಭವಾಗುತ್ತವೆ. ಸಂಸಾರಹೇಯದ ವಚನಗಳಂತೂ ಜಡವನ್ನು ಸಹ ಚೇತರಿಸಬಲ್ಲುವು. ಸಂಸಾರದ ಬಗೆಗೆ ನಿಜವಾಗಿಯೂ ಜುಗುಪ್ಸೆಗೊಂಡ ವೀರ ವಿರಕ್ತರವರು. ಅಂತಹರ ವಾಣಿಯಲ್ಲಿ ಸಂಸಾರಹೇಯದ ವಚನಗಳು ತೀಕ್ಷ್ಣವಾಗಿ ತೀವ್ರವಾಗಿ ಭಾವಾನುಭಾವಪೂರ್ಣವಾಗುವುದು ಸ್ವಾಭಾವಿಕ. ಆದುದರಿಂದ ಸಿದ್ಧಲಿಂಗ ಶಿವಯೋಗಿಗಳ ವಚನಗಳಲ್ಲಿ ಎರಡು ಭಾಗಗಳನ್ನು ಮಾಡಬೇಕಾಗುವುದು. ಒಂದು, ಅನುಭಾವದ ವಚನಗಳು; ಎರಡು, ಶಾಸ್ತ್ರವಿವರಣೆಯ ವಚನಗಳು. "ನೆಗಟ್ಟಾದಿ ಪುರಾಣದೊಳಱಿವುದು ಕಾವ್ಯಧರ್ಮಮುಮಂ ಧರ್ಮಮುಮಂ" ಎಂದು ಹೇಳಿದ ಮಹಾಕವಿ ಪಂಪನಿಗೂ ಸಹ ಇವೆರಡನ್ನು ಸಮಸಮುಚ್ಚಯವಾಗಿ ನಡೆಸಿಕೊಂಡು ಹೋಗುವುದು ಸಾಧ್ಯವಾಗಲಿಲ್ಲ. ಆದಿನಾಥನ ದ್ವಾದಶವಿಧ ತಪಸ್ಸು, ಆತನು ಆಚರಿಸಿದ ಅಣುವ್ರತ, ಗುಣವ್ರತ ಮುಂತಾದವುಗಳನ್ನು ವಿವರಿಸುವ ಶಾಸ್ತ್ರಭಾಗದಲ್ಲಿ ಕಾವ್ಯಾಂಶವು ಕಡಿಮೆಯಾಗಿರುವುದನ್ನು ಸಹೃದಯರು ಗಮನಿಸಿರಬೇಕು. ಶಾಸ್ತ್ರ ಶಾಸ್ತ್ರವೇ, ಕಾವ್ಯ ಕಾವ್ಯವೇ. ಕಾರಣ ಶಾಸ್ತ್ರ-ವಿಷಯವನ್ನು ವಿವರಿಸುವ ಶಿವಯೋಗಿಗಳ ವಚನವಿಭಾಗದಲ್ಲಿ ಕಾವ್ಯಾಂಶವಿಲ್ಲದಿರುವುದು ವಸ್ತುಸ್ಥಿತಿಗೆ ಸಹಜವಾದುದೇ. ಅವರ ಕಾವ್ಯವೈಭವವನ್ನು ನೋಡಬೇಕಾಗಿರುವುದು ಅನುಭಾವದ ವಚನಗಳಲ್ಲಿ. ಶರಣಸ್ಥಲ ಐಕ್ಯಸ್ಥಲಗಳಲ್ಲಿ ಬರುವ ಸಮಷ್ಟಿಮಾನವನ ಚಿತ್ರಗಳು ವಿನೂತನವಾಗಿವೆ. ಇಷ್ಟಾದರೂ ಬಸವಾದಿ ಪ್ರಮಥರ ವಚನಗಳ ರೀತಿಯೇ ಬೇರೆ. ಇವರ ರೀತಿಯೇ ಬೇರೆ. ಅದು ಭೋರ್ಗರೆದು ಹರಿವ ಬ್ರಹ್ಮಪುತ್ರೆಯಾದರೆ, ಇದು ತುಂಬಿ ಹರಿವ ತುಂಗೆ ಇದ್ದಂತೆ.

---

[1] ತೋಂ. ಸಿ. ವ. ೯೩.



# ವ್ಯಕ್ತಿತ್ವ, ಪ್ರಭಾವಮುದ್ರೆ

ಷಟ್‌ಸ್ಥಲ ಜ್ಞಾನಸಾರಾಮೃತ ವಚನಗಳು, ಸಿದ್ಧಲಿಂಗ ಶಿವಯೋಗಿಗಳು ಸ್ವಸ್ವರೂಪದರ್ಶನಕ್ಕಾಗಿ ಎತ್ತಿ ಹಿಡಿದ ಕನ್ನಡಿಯಂತಿವೆ. ಕರಿಯು ಕನ್ನಡಿಯಲ್ಲಿ ಅಡಗಿರುವಂತೆ ಶಿವಯೋಗಿಗಳ ಘನವಾದ ವ್ಯಕ್ತಿತ್ವ ಈ ವಚನಗಳಲ್ಲಡಗಿದೆ. ಅವರ ವ್ಯಕ್ತಿತ್ವದ ಸಂಪೂರ್ಣ ಚಿತ್ರವನ್ನು ಇಲ್ಲಿ ಕಂಡುಕೊಳ್ಳಬಹುದು. ತಾವು ಮರ್ತ್ಯಲೋಕದಲ್ಲಿ ಅವತರಿಸಿದ ವಿಷಯವನ್ನು ಶಿವಜ್ಞಾನೋದಯ ದೃಷ್ಟಿಯಿಂದ ಅರಿತು ವಿವರಿಸುವ ಬಗೆ ಹೀಗೆ:

"ಬಸವ ಮೊದಲಾದ ಪ್ರಮಥರು, ಪ್ರಸಾದವ ಎನ್ನಲ್ಲಿ ಸಂಬಂಧಿಸಿ,
ನಿನ್ನ ಕೃಪಾಪ್ರಸಾದವ ಎನ್ನಲ್ಲಿ ಮೂರ್ತಿಗೊಳಿಸಿ,
ಇನ್ನಾವುದಕ್ಕೂ ಅಂಜಬೇಡವೆಂದು
　　ನೀನು, ನಿನ್ನ ಪ್ರಮಥರು ಎನ್ನ ಆಜ್ಞಾಪಿಸಿ
　　ಮರ್ತ್ಯಕ್ಕೆ ಕಳುಹಿದಿರಿಯಾಗಿ
ಕಳುಹಿದ ಭೇದವ ಶಿವಜ್ಞಾನೋದಯದಿಂದ ಅಱಿದು
ಸಿದ್ಧಲಿಂಗನೆಂಬ ನಾಮ ಎನಗೆ ನಿನ್ನಿಂದ ಬಂದಿತ್ತೆಂಬುದ ಅಱಿದೆನು"

ಈ ವಚನದಲ್ಲಿ ಶಿವಯೋಗಿಗಳು ತಮ್ಮ ಹೆಸರು ಸಿದ್ಧಲಿಂಗ ಎಂಬುದನ್ನು ಸ್ಪಷ್ಟವಾಗಿ ಹೇಳಿರುವರು. ಇದರಂತೆ ಹಲವೆಡೆ ಈ ವಿಷಯವನ್ನು ಸ್ಪಷ್ಟಪಡಿಸಿರುವರು. ಇನ್ನೊಂದು ವಚನದಲ್ಲಿ ಅನಾದಿಗಣೇಶ್ವರನಿಂದ ಹಿಡಿದು ಚನ್ನಬಸವೇಶ್ವರದೇವರ ವರೆಗಿನ ತಮ್ಮ ಗುರುಪರಂಪರೆಯನ್ನು ಹೇಳಿ "ಚನ್ನಬಸವೇಶ್ವರದೇವರ ಕರಕಮಲದಲ್ಲಿ ಉತ್ಪತ್ತಿಯಾದ ಶಿಶು ಸಿದ್ಧಲಿಂಗ ನಾನಯ್ಯ"[೧] ಎಂಬುದನ್ನು ಖಚಿತಪಡಿಸಿರುವರು.

ಶಿವಯೋಗಿಗಳಿಗೂ ಅರಿಷಡ್ವರ್ಗ, ತಾಪತ್ರಯಗಳ ಬಾಧೆ ತಪ್ಪಿಲ್ಲ.

"ಕಾಮದಿಂದ ಕರಗಿದೆನಯ್ಯಾ
ಕ್ರೋಧದಿಂದ ಕೊರಗಿದೆನಯ್ಯಾ
ಅರಿಷಡ್ವರ್ಗಂಗಳ ಕಳೆದು, ಎನ್ನ ನಿರಹಂಕಾರಿ ಎಂದೆನಿಸಯ್ಯಾ"[೨]

"ಎನ್ನ ಮನಸ್ಸು ಹೊನ್ನು ಹೆಣ್ಣು ಮಣ್ಣು ನೆನೆನೆನೆದು
ನಿಮ್ಮ ನೆನೆಯಲೊಲ್ಲದು ನೋಡಾ . . . . . ."[೩]

"ಸಂಸಾರದಲ್ಲಿ ಸವೆಸವೆದು ಅವಿವೇಕಿಯಾದೆನಯ್ಯಾ
ಎನ್ನ ಅವಿವೇಕವ ಕಳೆದು ಶಿವತತ್ವವಿವೇಕವನಿತ್ತು ಕರುಣಿಸಯ್ಯಾ"[೪]
"ಜೀವಭಾವದ ಭ್ರಮೆಯು ಕಳೆಯಯ್ಯಾ"[೫]

---

೧. ತೋಂ. ಸಿ. ವ. ೮.
೨. ತೋಂ, ಸಿ, ವ, ೧೨೭.
೩. ,, ೧೨೭,
೪. ,, ೧೨೭,
೫. .. ೧೩೨.

ಈ ಜೀವಭಾವದಲ್ಲಿರುವವರೆಗೆ ಅರಿಷಡ್ವರ್ಗಗಳ ಬಾಧೆ ಬಿಟ್ಟುದಲ್ಲ. ಸಂಸಾರದ ವಿಷಯಸುಖಗಳತ್ತ ಮನಸ್ಸು ಹಾತೊರೆಯುತ್ತಿರುವುದು. ಹೊನ್ನು ಹೆಣ್ಣು ಮಣ್ಣುಗಳ ಆಸೆ ಅತಿಯಾಗಿರುವುದು. ಸುವಿವೇಕ ಒದಗದೆ ಆತ್ಮನಿಗೆ ಪ್ರಗತಿ ಇಲ್ಲ. ಅದಕ್ಕಾಗಿಯೇ ಅಂತಹ ಸುವಿವೇಕವನ್ನು ಕರುಣಿಸಬೇಕೆಂದು ಪ್ರಾರ್ಥಿಸಿರುವರು. ಕೊನೆಗೆ ಮುಕ್ಕಣ್ಣ ನನರಿಯದೆ ಬರಿಯ ಬಣ್ಣದ ಹಿರಿಯರು ಭ್ರಮೆಗೊಂಬುದನ್ನು ನೋಡಿ, ನಾನು ಹೇಸಿ ತೊಲಗಿದೆನಯ್ಯಾ ಎಂದು ತಮ್ಮ ಸಂಸಾರ ವಿನಿರ್ಮುಕ್ತ ಸ್ಥಿತಿಯನ್ನು ಬಣ್ಣಿಸಿರುವರು. ಸಂಸಾರವೆಂದರೆ ರೂಢವಾದ ಪ್ರಾಪಂಚಿಕ ಸಂಸಾರವೆಂದೇ ಅರ್ಥಮಾಡುವ ಕಾರಣವಿಲ್ಲ. ಯೋಗಿ ಸಿದ್ಧರಾಮೇಶ್ವರನು ಲೋಕಸಂಗ್ರಹ ಕಾರಣಾರ್ಥವಾಗಿ ಕೆರೆಬಾವಿಗಳನ್ನಗಿಸು ತ್ತಿರುವುದನ್ನು ಕಂಡ ದಿವ್ಯಜ್ಞಾನಿ ಪ್ರಭುದೇವರು,

> **"ಚಿಕ್ಕ ಸಂಸಾರವನು ಸಡಿಲಿಸಿ**
> **ಹೊಕ್ಕನಲ್ಲಾ ಹಿರಿಯ ಸಂಸಾ**
> **ರಕ್ಕೆಕಟ ವಿಖ್ಯಾತಿ ಪೂಜಾಲಾಭದಿಚ್ಛೆಯಲಿ"**

ಎಂದು ನುಡಿದಿರುವರು. ಇದೂ ಒಂದು ಸಂಸಾರವೇ. ಭವದ ಆವುದೇ ಒಂದು ಬಗೆಯ ಲೇಪನವೂ ಸಂಸಾರವೇ. ಇಂತಹ ಭವವಿಲೇಪನದಿಂದ ಬಿಡುಗಡೆ ಹೊಂದಿ ಅವಿರಳಾನಂದವನ್ನು ಪಡೆಯಬೇಕೆಂಬುದೇ ಶಿವಯೋಗಿಗಳ ಬಯಕೆ. ಸದ್ಭಾವನೆ ಅವರಲ್ಲಿ ಉಂಟಾದುದು ಸಂಸಾರಹೇಯ ಭಾವನೆಯ ಫಲ. "ಶಿವಶರಣರಲ್ಲದವರ ತನುವ ತಾಮಸವೆಂಬ ಸರ್ಪ ಸುಡುವುದನ್ನು ಕಂಡೆನು. ಮಾಯೆ ಶರಣರಲ್ಲದವರ ಕೊಂದು ಕೂಗಿದುದನ್ನು ಕಂಡೆನಯ್ಯಾ" ಹೀಗೆ ನಿತ್ಯವ ಹಿಡಿಯದೆ ಅನಿತ್ಯವ ಹಿಡಿದು ವ್ಯರ್ಥಕ್ಕೆ ಸತ್ತವರ ನೋಡಿ ಹೇಸಿ ಹೇಸಿ ಗುರುಕಾರುಣ್ಯವನ್ನು ಪಡೆದರು. ಬಯಲ ಮೂರ್ತಿಯ ಮಾಡಿ ಶ್ರೀಗುರುವು ಅವರ ಕರಸ್ಥಲಕ್ಕೆ ಕೊಟ್ಟನು. ಈಗ ಶರಣ, ಲಿಂಗ ಬೇರೆಬೇರೆಯಲ್ಲ ವೆಂಬ ಭಾವನೆ ಶಿವಯೋಗಿಗಳಲ್ಲಿ ದೃಢವಾಯಿತು.

> **"ಆದಿಯಲ್ಲಿ ಶಿವತತ್ವದಲ್ಲಿ ರೇಣುಕನುದಯವಾಗದಿರ್ದಡೆ**
> **ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿಯೆಂತೊ?**
> **ಆ ಶಿವನಲ್ಲಿಯೇ ಹುಟ್ಟಿ ಶಿವನಲ್ಲಿಯೇ ಲಯವಾದ ರೇವಣಸಿದ್ಧೇಶ್ವರನು**
> **ಅನಾದಿ ಮುಕ್ತನಲ್ಲ, ಅವಾಂತರ ಮುಕ್ತನೆಂಬ ಅಜ್ಞಾನಿಗಳಿಗೆ**
> **ನಾಯಕನರಕ ತಪ್ಪದು"**[೧]

ಎಂದು ಹೇಳಿ ರೇಣುಕಾದ್ಯಾಚಾರ್ಯರಲ್ಲಿಯೂ ಬಸವಾದಿ ಪ್ರಮಥರಲ್ಲಿಯೂ ಅಚಲವಾದ ಶ್ರದ್ಧೆಯನ್ನು ವ್ಯಕ್ತಪಡಿಸಿರುವರು. ಶರಣನು ಲಿಂಗದಲ್ಲಿ ಉದಯವಾಗಿ ಕೊನೆಗೆ ನೀರು ನೀರು ಬೆರಸಿದಂತೆ, ಹಾಲು ಹಾಲು ಬೆರಸಿದಂತೆ ಲಿಂಗವ ಬೆರಸಿ ಮಹಾ

---

೧. ತೋಂ. ಸಿ. ವ. ೬೧.

ಲಿಂಗವೆ ಆಗುವರೆಂದು ಶಿವಯೋಗಿಗಳ ಅಭಿಮತ. ನೀಲಲೋಚನೆಯಮ್ಮ ತನ್ನಂಗವ ಲಿಂಗದಲ್ಲಿ ಏಕೀಕರಿಸಿದುದನ್ನು ನೆನೆವರು. ಬಸವಾದಿ ಪ್ರಮಥರನ್ನಂತೂ ಶಿವಯೋಗಿಗಳು ಹಾಡಿ ಕೊಂಡಾಡಿ ತಣಿಯರು.

> 'ಚನ್ನಬಸವಣ್ಣನೇ ಎನ್ನ ಅಂತರಂಗದ
> ಸುಜ್ಞಾನ ಪ್ರಾಣಲಿಂಗವೆಂದಱಿದು
> ಪ್ರಾಣಲಿಂಗಿಯಾದೆನು ಕಾಣಾ'

ಹೀಗೆ ಚನ್ನಬಸವಣ್ಣನವರು ಶಿವಯೋಗಿಗಳ ಪ್ರಾಣವನ್ನಾವರಿಸಿದರೆ ಬಸವಣ್ಣನವರಂತೂ ಅವರ ಸರ್ವಾಂಗಲಿಂಗವೇ ಆಗಿರುವರು.

> ಜೀವದ್ರ್ಯಯುವಾದ ಬಸವಣ್ಣನೇ
> ಎನ್ನಂಗಲಿಂಗ, ಪ್ರಾಣಲಿಂಗ, ಭಾವಲಿಂಗ;
> ಎನ್ನ ಸರ್ವಾಂಗಲಿಂಗವು ಕಾಣಾ.
> ಎನ್ನ ಷಡಾಧಾರದಲ್ಲಿ ಸಂಬಂಧವಾದ ಷಡಕ್ಷರ ಮಂತ್ರವು
> ಬಸವಣ್ಣನಾದ ಕಾರಣ,
> ಬಸವಲಿಂಗಾ, ಬಸವಲಿಂಗಾ, ಬಸವಲಿಂಗಾ ಎಂದು ಜಪಿಸಿ
> ಭವಾರಣ್ಯವ ದಾಂಟಿದೆನು.

ಬಸವಮಂತ್ರದ ಅಸಮಮಹಿಮೆಯಿಂದ ಸಿದ್ಧಲಿಂಗ ಶಿವಯೋಗಿಗಳು ಭವಾರಣ್ಯವ ದಾಂಟಿದರು. ಅವರ ಸರ್ವಾಂಗದಲ್ಲಿ ಬಸವಲಿಂಗ ನೆಲೆಗೊಂಡಿತು. ಶಿವಯೋಗದ ಪರಮ ಸಾಧನೆಯಿಂದ ಅವಿರಳಾನಂದವನ್ನು ಪಡೆದು ನಿಜದಲ್ಲಿ ನಿಂದರು.

> ಪಿಂಡ ಕರಗಿ ಅಖಂಡಮಯವಾದೆನು.
> ಅಮೃತ ಬಿಂದುವ ಸೇವಿಸಿ, ನಿತ್ಯಾನಿತ್ಯವ ಗೆದ್ದು,
> ನಿರ್ಮಲ ನಿರಾವರಣವಾದೆನು.
> ಸೀಮೆಯ ಮೀಱಿ, ನಿಸ್ಸೀಮನಾದೆನು.
> ಪರಮ ನಿರಂಜನನೊಡಗೂಡಿ, ಮಾಯಾರಂಜನೆಯಳಿದು
> ನಿರಂಜನನಾಗಿರ್ದೆನು ಕಾಣಾ.
> ಸಮಸ್ತ ವಿಶ್ವಪ್ರಪಂಚಿಗೆ ಹೊಱಗಾಗಿ
> ನಿಃಪ್ರಪಂಚ ನಿರ್ಲೇಪವಾಗಿರ್ದೆನು
> ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ವಿಶ್ವಪ್ರಪಂಚಿಗೆ ಹೊರಗಾಗಿ ನಿಂತುದೇ ನಿರಂಜನಸ್ಥಲ. ಮಾಯೆಯಿಂದ ಬಿಡುಗಡೆಯಾಗದೆ ಅಂದರೆ ಮಾಯಾರಂಜನೆಯಳಿಯದೆ ನಿರಂಜನವಾಗಲು ಸಾಧ್ಯವಿಲ್ಲ. ತೋಂಟದ ಸಿದ್ಧಲಿಂಗ ಶಿವಯೋಗಿಗಳು ಶಿವಯೋಗದ ಸಿದ್ಧಿಯಿಂದ ನಿತ್ಯಾನಿತ್ಯವ ಗೆದ್ದರು; ನಿರ್ಮಲ ನಿರಾವರಣವಾದರು. ಕೊನೆಗೆ ಅದ್ವೈತ ಪರವಸ್ತುವೇ ಆದರು.

'ತನ್ನಿಂದನ್ಯವಾಗಿ ಇನ್ನೇನೂ ಇಲ್ಲ;
ಅನ್ಯ ಅನನ್ಯವೆಂಬುದಳಿದುಳಿದು
ಅದ್ವೈತ ಪರವಸ್ತುವಾದೆನು ಕಾಣಾ.
ಎನ್ನಂಗವೂ ಆತ್ಮವೂ ನಿನ್ನೊಳಗಡಗಿ
ಶುದ್ಧ ಪರಮಾತ್ಮನಾದೆನು ಕಾಣಾ.
ಇನ್ನಾವ ಪ್ರಪಂಚವೂ ಎನಗಿಲ್ಲ'.

ಶಿವಯೋಗಿಗಳ ಈ ಉಕ್ತಿಗಳೇ ಅವರ ಅಧ್ಯಾತ್ಮಸಾಧನೆಯ ತುತ್ತತುದಿಯ ಸ್ಥಿತಿಯನ್ನು ವಿವರಿಸುತ್ತವೆ.

ಶಿವಯೋಗಿಗಳ ಅಧ್ಯಾತ್ಮಸಂಪತ್ತನ್ನು ಇಲ್ಲಿ ಕಂಡುದಾಯಿತು. ಅವರು ಶಿವಯೋಗವನ್ನು ವಿವರಿಸುವ ರೀತಿಯೂ ಅಲ್ಲಿ ಮಹದಾನಂದವನ್ನು ಸವಿದಿರುವ ಪರಿಯೂ ಅದ್ಭುತವಾಗಿವೆ; ಅನುಪಮವಾಗಿವೆ. ಶಿವಯೋಗಿಗಳೆಂಬ ಹೆಸರಿಗೆ ಅನ್ವರ್ಥಕವಾಗುವಂತೆ ಆ ವಿಷಯವನ್ನು ವಿವರಿಸಿರುವರು. ಯೋಗಶಾಸ್ತ್ರದ ಪರಿಜ್ಞಾನ, ಶಿವಯೋಗ ಸಾಧನೆ ಇವು ಅವರಿಗೆ ಉಸಿರಾಗಿದ್ದುವು; ಪಂಚಪ್ರಾಣವಾಗಿದ್ದುವು.

ಬಸವಾದಿ ಪ್ರಮಥರನ್ನು ಶಿವಯೋಗಿಗಳು ಅಪಾರವಾದ ಭಕ್ತಿಯಿಂದ ಸ್ತುತಿಸಿರುವುದರಿಂದ ಅವರ ಪ್ರಭಾವ ಶಿವಯೋಗಿಗಳ ಮೇಲೆ ವಿಶೇಷವಾಗಿತ್ತೆಂದು ಬೇರೆ ಹೇಳುವ ಕಾರಣವೇ ಇಲ್ಲ. ತಾವು ಅವರ ಕಾರುಣ್ಯದ ಶಿಶು ಎಂದು ಒಂದು ಮಾತಿನಲ್ಲಿ ಶಿವಯೋಗಿಗಳೇ ಹೇಳಿರುವರು. ಅವರ ನಡೆ, ನುಡಿ, ತತ್ತ್ವ ಇವರಲ್ಲಿ ಮೈವೆತ್ತಿವೆ. ಅಂತೆಯೇ ಇವರನ್ನು ಪ್ರಭುದೇವರ ಅವತಾರವೆಂದು ಕರೆಯಲಾಗಿದೆ. ಶಿವಯೋಗಿಗಳು ಅನುಭಾವಿಗಳಾಗಿದ್ದಂತೆ ಘನವಿದ್ವಾಂಸರೂ ಆಗಿದ್ದರು. ಅವರಿಗೆ ಅನೇಕ ಶಾಸ್ತ್ರಗಳು ಕರತಲಾಮಲಕವಾಗಿದ್ದುದನ್ನು ಅವರ ವಚನಗಳು ಸ್ಫುಟಗೊಳಿಸುತ್ತವೆ. ಅವರ ಕಾವ್ಯಶಕ್ತಿಯನ್ನು ಹಿಂದೆಯೇ ವಿವರಿಸಲಾಗಿದೆ. ಅಪಾರವಾದ ಲೋಕಾನುಭವವುಳ್ಳ ಶಿವಯೋಗಿಗಳು ಲೋಕವಿಮರ್ಶಕರಾಗಿದ್ದುದನ್ನು ವಿವರಿಸಲಾಗಿದೆ; ವಿಮರ್ಶಕರಲ್ಲ; ಒಳ್ಳೆಯ ನಿರ್ಭಿಡೆಯ ವಿಮರ್ಶಕರು; ವಿಡಂಬನಕಾರರು; ಲೋಕಸಂಗ್ರಹದ ದೃಷ್ಟಿಯುಳ್ಳವರು.

ಸಿದ್ಧಲಿಂಗ ಶಿವಯೋಗಿಗಳು ಶಿವಾನುಭಾವಿಗಳಾಗಿ, ಷಟ್‌ಸ್ಥಲಜ್ಞಾನಪ್ರಭಾಪುಂಜರಂಜಿತರಾಗಿ, ಷಟ್‌ಸ್ಥಲೋದ್ಧಾರಕರಾಗಿ, ಶ್ರೇಷ್ಠಪ್ರತಿಯ ವಚನಕಾರರಾಗಿ, ಸಮಾಜವಿಮರ್ಶಕರಾಗಿ, ಸಮಾಜೋದ್ಧಾರಕರಾಗಿ ಜನಮನದಲ್ಲಿ ನಾಡುನುಡಿಗಳಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದಿರುವರು. ಖಿಲವಾಗುತ್ತಿರುವ ಷಟ್‌ಸ್ಥಲಸಿದ್ಧಾಂತ-ವೀರಶೈವ ಧರ್ಮಗಳನ್ನು ಪುನರುಜ್ಜೀವನಗೊಳಿಸಿದರು. ಏಳುನೂರಾ ಒಂದು ಜನ ಶಿಷ್ಯವೃಂದದೊಡನೆ ನಾಡಿನ ಮೂಲೆ ಮೂಲೆಗಳಲ್ಲಿ ಸಂಚರಿಸಿ ಜನತೆಯಲ್ಲಿ ಧಾರ್ಮಿಕ ಜಾಗೃತಿಯನ್ನುಂಟುಮಾಡಿದರು. ಅವರು ಅಡಿಯಿಟ್ಟ ನೆಲ ಪಾವನವಾಗಿದೆ; ಪುಣ್ಯಕ್ಷೇತ್ರವೆನಿಸಿದೆ; ಮುಟ್ಟಿದ ಕಲ್ಲು ಕರಗಿ ತೀರ್ಥವಾಗಿ ಹರಿದಿದೆ; ಆಡಿದ ನುಡಿ ಮಂತ್ರವೆನಿಸಿದೆ; ನಡೆದುದು ಧರ್ಮವಾಗಿದೆ. ಅಂತೆಯೇ ಲಕ್ಷೋಪಲಕ್ಷ ಜನತೆಯ ಹೃದಯ

ಮಂದಿರದಲ್ಲಿ ಸಿದ್ಧಲಿಂಗ ಶಿವಯೋಗಿಗಳು ಇಂದಿಗೂ ಸ್ಥಿರವಾಗಿ ನೆಲೆಸಿರುವರು. ವೀರಶೈವರಷ್ಟೇ ಅಲ್ಲ, ವೀರಶೈವೇತರರು ಸಹ ಸಿದ್ಧಲಿಂಗ ಶಿವಯೋಗಿಗಳ ವಿಷಯವಾಗಿ ಅಪಾರವಾದ ಭಕ್ತಿವಿಶ್ವಾಸಗಳನ್ನು ತಳೆದಿರುವರೆಂಬುದಕ್ಕೆ ಸಿದ್ಧಲಿಂಗ ಸಾಂಗತ್ಯವನ್ನು ರಚಿಸಿದ ಹೇರಂಬ, ಡಂಬಳದ ದೊರೆ, ಅಣ್ಣಿಗೆರೆಯ ದೇಶಪಾಂಡೆ ಮುಂತಾದವರೇ ಸಾಕ್ಷಿ. ಇವರಲ್ಲದೆ ಜನಸಾಮಾನ್ಯರಂತೂ ಜಾತಿಮತ ಕುಲಗೋತ್ರಗಳ ಗಣನೆಯಿಲ್ಲದೆ ಅಸಂಖ್ಯಾತರಾಗಿ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯರಾಗಿರುವರೆಂಬುದು ಅವರ ವ್ಯಕ್ತಿತ್ವದ ಪ್ರಭಾವ ಮುದ್ರೆಯ ದ್ಯೋತಕವಾಗಿದೆ. ಹಿಂದೆ ವಿವರಿಸಿದ ಅನೇಕ ಪವಾಡಗಳು ಜನತೆಯ ಮನೋಮಂದಿರದಲ್ಲಿ ಅವರು ನೆಲೆಸಿದ್ದುದರ ಕುರುಹಲ್ಲದೆ ಬೇರೆ ಏನೂ ಅಲ್ಲ.

ಕನ್ನಡ ಸಾಹಿತ್ಯಪ್ರಪಂಚದಲ್ಲಿ ಸಿದ್ಧಲಿಂಗ ಶಿವಯೋಗಿಗಳ ಪ್ರಭಾವಮುದ್ರೆ ಅವರ್ಣನೀಯವಾಗಿದೆ. ವಿರಕ್ತ ತೋಂಟದಾರ್ಯ (ಕ್ರಿ.ಶ. ೧೫೬೦), ಶಾಂತೇಶ (ಕ್ರಿ. ಶ. ೧೫೮೦), ಹೇರಂಬ (ಕ್ರಿ. ಶ. ೧೬೦೦) ರಂತಹ ಕವಿಶ್ರೇಷ್ಠರು ಸಿದ್ಧಲಿಂಗ ಶಿವಯೋಗಿಗಳ ಜೀವನ ಚರಿತ್ರೆಯನ್ನೇ ಕಥಾವಸ್ತುವನ್ನಾಗಿಟ್ಟುಕೊಂಡು ಕಾವ್ಯಪುರಾಣಗಳನ್ನು ರಚಿಸಿರುವುದು ಶಿವಯೋಗಿಗಳು ಸಾಹಿತ್ಯದಲ್ಲಿ ಎಂತಹ ಉನ್ನತಸ್ಥಾನವನ್ನು ಅಲಂಕರಿಸಿರುವರೆಂಬುದನ್ನು ಸಾರಿ ಹೇಳುತ್ತದೆ. ಇದಲ್ಲದೆ ಚನ್ನಬಸವಪುರಾಣ, ಗುರುರಾಜಚಾರಿತ್ರದಂತಹ ಮಹತ್ವದ ಕೃತಿಗಳಲ್ಲಿ ಶಿವಯೋಗಿಗಳ ಚರಿತ್ರೆ ಉಕ್ತವಾಗಿದೆ. ತೋಂಟದಾರ್ಯರಗಳೆ ಅವರು ಗೈದ ಪವಾಡಗಳನ್ನು ವಿವರಿಸಿದರೆ ನಿರಂಜನ ವಂಶರತ್ನಾಕರ, ನಿರಂಜನ ಜಂಗಮವಂಶದರ್ಪಣಗಳಲ್ಲಿ ಶಿವಯೋಗಿಗಳ ಬಗೆಗೆ ಚಾರಿತ್ರಿಕ ವಿಷಯಗಳು ಉಲ್ಲಿಖಿತವಾಗಿವೆ. ಎಲ್ಲಕ್ಕೂ ಮೇಲಾಗಿ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯಪರಂಪರೆಯಿಂದ ಕನ್ನಡ ಸಾಹಿತ್ಯೋದ್ಧಾರವಾಗಿದೆ. ಶೂನ್ಯಸಂಪಾದನೆಗಳಂತಹ ಲೋಕವಿಖ್ಯಾತವಾದ ಗ್ರಂಥಗಳನ್ನು ರಚಿಸಿದ ಗುಮ್ಮಳಾಪುರದ ಸಿದ್ಧಲಿಂಗೇಶ, ಗೂಳೂರ ಸಿದ್ಧವೀರಣಾರ್ಯರು ಸಿದ್ಧಲಿಂಗ ಶಿವಯೋಗಿಗಳ ಕರಕಮಲಸಂಜಾತರೆಂಬುದನ್ನು ಸಂಸ್ಮರಿಸಿದರೆ ವಿಶ್ವಸಾಹಿತ್ಯದಲ್ಲಿ ಸಿದ್ಧಲಿಂಗ ಶಿವಯೋಗಿಗಳ ಹೆಸರು ಶಾಶ್ವತವಾಗಿದೆಯೆಂದರ್ಥವಾಗುತ್ತದೆ. ಇದಲ್ಲದೆ ಇನ್ನೂ ಅನೇಕ ಬಗೆಯ ಸಂಪಾದನಕಾರರು, ಕವಿಗಳು, ಪಂಡಿತರು ಶಿವಯೋಗಿಗಳ ಶಿಷ್ಯ ಪರಂಪರೆಯಲ್ಲಿ ಆಗಿಹೋಗಿರುವರು. ಅವರೆಲ್ಲರೂ ಶಿವಯೋಗಿಗಳನ್ನು ಭಕ್ತಿಯಿಂದ ಸ್ತುತಿಸಿರುವರು. ಪ್ರಾಯಶಃ ಇಂತಹ ಶರಣಕವಿಗಳ ಶಿಷ್ಯಪರಂಪರೆಯನ್ನು ಪಡೆದ ಭಾಗ್ಯ ಬಹುಜನರಿಗಿಲ್ಲವೆಂದು ತೋರುತ್ತದೆ. ಪ್ರಭುದೇವರೊಬ್ಬರನ್ನು ಬಿಟ್ಟರೆ, ಇಷ್ಟು ಮಹಿಮಾನ್ವಿತರೂ ಸಾಹಿತ್ಯಪ್ರಪಂಚದಲ್ಲಿ ಸ್ಥಿರವಾದ ಪ್ರಭಾವವನ್ನು ಬೀರಿದವರೂ ದೊರೆಯುವುದು ಕಷ್ಟವೆಂದೇ ಹೇಳಬೇಕಾಗುತ್ತದೆ.

ತೋಂಟದ ಸಿದ್ಧಲಿಂಗ ಶಿವಯೋಗಿಗಳವರ ನಾಮಸ್ಮರಣೆ ಮಾಡಿ ಶಾಸನಗಳು ಪುನೀತವಾಗಿವೆ. ಎಡೆಯೂರು ದೇವಸ್ಥಾನದಲ್ಲಿರುವ ಶಾಸನದಲ್ಲಿ ಶಿವಯೋಗಿಗಳ ದಿವ್ಯ ವರ್ಣನೆಯನ್ನು ಕಾಣಬಹುದು:

೧ ಕೊಡಗಿಹಳಿಯ ದೇವರು ತಾಉ ಪಡೆದ ಭೂಮಿಯಲಿ ತೋಂಟದ ಸ್ವಾಮಿ
೨ ಗೆ ತಮ್ಮ ಭಕ್ತಿಯಿಂದಾ ಕಟ್ಟಿಸಿ ಕೊಟ್ಟ ಮಠ ಯಿ ಮಹಸಿದ್ಧೇಶ್ವರನ ಅತಿಸಯು ವೆಂತೆಂದ
೩ ಡೆ ಶ್ರೀಮತು ಸಚಿದಾನಂದ ನಿತ್ಯಪರಿಪೂರ್ಣವನುಳ್ಳ ಅನಾದಿಭಕ್ತ ಆ ಭಕ್ತನ ಹ್ರುದಯದಲ್ಲಿ ಜಂ
೪ ಗಮ ಜಂಗಮದ ಮಕುಟದಲ್ಲಿ ಶೂನ್ಯಲಿಂಗ; ಆ ಲಿಂಗದಲ್ಲಿ ಚಿದಂಬರ ಶಿವಶಕ್ತಿ ಪಂಚ
೫ ಶಕ್ತಿ ಪಂಚನಾದ ಪಂಚಬ್ರುಂಹ್ಮಯಿೊಶ್ವರಾಷ್ಟಕ ಮಹೇಶ್ವರ ಪಂಚವಿಂಶತಿ ರುದ್ರ ರೇಕಾ
೬ ದಶತ್ರಯವಯು ........ ರಂಣ್ಯಗರ್ಭವಿರಾಟಮೂರ್ತಿಯಿಂತೀಯೆಂಭತೊಂದು ಮೂರ್ತಿ
೭ ಯೆ ಅಂಗವಾಗಿರ್ಪಾತನೆ ಅನಾದಿ ಭಕ್ತನು. ಆ ಭಕ್ತನ ಪ್ರಾಣಕಳಾ ಚೈತಂನ್ಯಸ್ವ
೮ ರೂಪೇ ತೋಂಟದ ಸಿದ್ಧಲಿಂಗೇಶ್ವರನು; ಆ ಸಿದ್ಧಲಿಂಗೇಶ್ವರನ ಮೂರ್ತಿಕ್ರಮ ವೆಂತೆಂದ
೯ ಡೆ ಪ್ರಣಮವೆ ಸಿರಸು ನಮಸಾರಾವೇ ಭುಜ ಶಿಕುರವೇ ಭುಜ ಶಿಕುರವೇ ದೇಹ ವಯಷ್ಕಾರವೇ ಪಾದ ಅನಂ
೧೦ ತಕೋಟಿಬ್ರಹ್ಮಾಂಡಗಳೇ ಮಕುಟ ಸಮಸ್ತ ಲೋಕಾದಿ ಲೋಕಂಗಳೇ ದೇಹದ ಜಳವ
೧೧ ಳೆಯ ಆಕಾಶವೇ ಮುಖ ದಶದಿಕ್ಕುಗಳೇ ತೋಳು ಚಂದ್ರಸೂರ್ಯಾದಿಗಳೇ ನಯನ ಪಾತಾಳ
೧೨ ವೇ ಹೆದೆ ಮೇಘಂಗಳೇ ಜಟಾಬಂಧ ಆ ಜಟಾಬಂಧದಲ್ಲಿ ಶೂನ್ಯಲಿಂಗ ವೇದ ಪುರಾಣಂಗಳೇ ತ್ರಿನ
೧೩ ಕ್ಷತ್ರಂಗಳೇ ಪುಷ್ಪ ಚಂದ್ರಪ್ರಕಾಶವೇ ವಿಭೂತಿ ಅಷ್ಟಕುಲ ಪರ್ವತಂಗಳೇ ರುದ್ರಾಕ್ಷಿ ಸಮಸ್ತ ಸಮುದ್ರಂಗ
೧೪ ಳೇ ಕಮಂಡಲ ಭುವನಸ್ರುಷ್ಟಿಯೆ ಕಂತೆ ದಿವಾರಾತ್ರೆಗಳೇ ಮಠ ಷಡುರುತುಗಳೇ ಷಡುಸ್ಥಲ ಮಹಾಸೇ
೧೫ ಷನೇ ಕಟಿಸೂತ್ರ ಪರಿಪೂರ್ನ್ನಗ್ಞಾನವೇ ಪಂಚಮುದ್ರೆ ತ್ರಿಕಾಲಗ್ಞಾನವೇ ಮಹ ದೈಶ್ವರ್ಯ್ಯ ಮಹಾ
೧೬ ಮೇರುವೇ ದಂಡ ಸದ್ಗುಣವೇ ಕರ್ಪರ ಕುಲವೇ ಶಿವಕುಲಯಿಂತಪ್ಪ ಅನಾದಿ ಜಂಗಮವೆ
೧೭ ಜಗಹಿತಾರ್ಥವಾಗಿ ಚರಿಸಿದ ಕ್ರಮವೆಂತೆಂದರೆ ಗಾನಕ್ರಿಯಾಸ್ವರೂಪನು ಸರ್ವಾಂಗಲಿಂ

೧೮ ಗಿ ಷಟ್ಸ್ಥಲಗ್ನಾನಿ ಸರ್ವಾಚಾರಸಂಪಂನ್ನ ಪಾದೋದಕಪ್ರಸಾದ ಪ್ರತಿಷ್ಠಾಚಾರ್ಯರು

೧೯ ಅಷ್ಟಾವರಣಾಲಂಕರಣದ್ವೈತಾದ್ವೈತತಿಮಿರಮಾರ್ತಂಡನುಂಯಿಂತಪ್ಪ ದಿವ್ಯ-ಶಿವಯೋಗಿ ಸಿದಲಿ

೨೦ ಂಗೇಶ್ವರಂಗೆ ಸಂಮ್ಯಗ್ಞಾನೋದಯವಾಗಿ ಸಂಸಾರಹೇಯಮಂ ಮಾಡಿ ಶರಣು ಹೊಕ್ಕ ಸಿಷ್ಯಜನ

ಇನ್ನೊಂದು ಶಾಸನದಲ್ಲಿ[೨] ಸಿದ್ಧಲಿಂಗ ಶಿವಯೋಗಿಗಳ ವಚನವೇ ಉದ್ಧೃತವಾಗಿದೆ. ಚಿತ್ರದುರ್ಗದ ಮೋಕ್ಷಗುಂಡಂ ಶ್ರೀನಿವಾಸ ಅವಧಾನಿಗಳ ತೋಟದೊಳಗಿನ ಒಂದು ಶಿಲಾಶಾಸನದಲ್ಲಿ

**ನಾದ ಬಿಂದು ಕಳೆ ಭೇದವ ತಿಳಿದಲ್ಲ**
**ಆರಕ್ಷರವಾದ ತೆರವನರಿಯ ಬಾ**
**ರದು । ಆರಕ್ಷಕೆ ಮೂಲಪ್ರಣಮುನ**
**ತಿಳಿದಲ್ಲದೆ ನಾದಕಲೆದೋರದು ಆ ನಾದದೊ**
**ಳಗಿನ ಕಳೆಯ ನೋಡಿ ಕಂಡಲ್ಲದೆ ರಾಜಶಿವಯೋ**
**ಗಿಯಾಗಬಾರದು । ರಾಜಶಿವಯೋಗವೆಂಬುದು**
**ಆದಿಯಲ್ಲಿ ಶಿವಬೀಜವಾದ ಮುಹಾಮುಹಿ**
**ಮರಿಗೆ ಸಾಧ್ಯವಪ್ಪುದಲ್ಲದೆ ತ್ರೈಜಗದಲ್ಲಾರಿ**
**ಗು ಅಸಾಧ್ಯ ನೋಡಾ ಮುಹಾಲಿಂಗಗುರುಶಿವ ಸಿದ್ಧೇಶ್ವರ ಪ್ರಭುವೆ**

ಎಂಬ ವಚನವಿದೆ. ಈ ಶಿಲಾಶಾಸನವನ್ನು ಯಂತ್ರದ ಕಲ್ಲೆಂದು ಕರೆಯಲಾಗುತ್ತಿದೆ. ಜನರು ದನಕರುಗಳಿಗೆ ಬೇನೆ ಬಂದಾಗ ಇದನ್ನು ತೊಳೆದ ನೀರನ್ನು ಅವುಗಳಿಗೆ ಕುಡಿಸುತ್ತಾರೆ. ರೋಗ ಗುಣವಾಗುತ್ತದೆಯೆಂಬ ಭಾವನೆ ಆ ಜನರಲ್ಲಿದೆ. ಇದೊಂದು ಯಂತ್ರದ ಕಲ್ಲಾಗಿರುವುದು ನಿಜವೆಂದು ತೋರುತ್ತದೆ. ಏಕೆಂದರೆ ಈ ವಚನದ ಮೇಲ್ಭಾಗದಲ್ಲಿ ಷಡಕ್ಷರ ಮಂತ್ರದ ಕುಂಡಲಿಯು ಉದ್ಧೃತವಾಗಿದೆ. ದತ್ತಿ ಮುಂತಾದ ಬೇರೆ ಯಾವ ವಿಷಯವೂ ಈ ಶಾಸನದಲ್ಲಿಲ್ಲದ ಮೂಲಕ ಇದನ್ನು ಕೇವಲ ಈ ಮಂತ್ರಮಹಿಮೆಯನ್ನು ಚಿತ್ರರಿಸುವುದಕ್ಕಾಗಿಯೇ ಕೆತ್ತಿದಂತೆ ತೋರುತ್ತದೆ. ಇಲ್ಲಿ ಸಿದ್ಧಲಿಂಗ ಶಿವಯೋಗಿಗಳ ವಚನವನ್ನು ಉದ್ಧರಿಸಿರುವುದರಿಂದ ಈ ಶಾಸನದ ಕಾಲಕ್ಕೆ ಅಂದರೆ ಕ್ರಿ. ಶ. ೧೭೩೮ರ ಹೊತ್ತಿಗೆ ಶಿವಯೋಗಿಗಳ ವಚನಗಳು ಮಂತ್ರಸ್ವರೂಪವನ್ನು ತಳೆದಿದ್ದವೆಂಬ ಮಾತು ದೃಢವಾಗುತ್ತದೆ. ಇದು ಅವರ ಘನವಾದ ವ್ಯಕ್ತಿತ್ವದ ಬಗೆಗೆ ಜನತೆ ಇಟ್ಟುಕೊಂಡ ಭಕ್ತಿ ವಿಶ್ವಾಸಗಳ ಕುರುಹಾಗಿದೆ.

ಕನ್ನಡ ಸಾಹಿತ್ಯದಲ್ಲಿ ಅನಂತರ ಸಂಪಾದನೆಗಳ ದೊಡ್ಡದೊಂದು ಸಂಪ್ರದಾಯವೇ ಬೆಳೆದುಬಂದಿದೆ. ಸ್ವತಃ ಸಿದ್ಧಲಿಂಗ ಶಿವಯೋಗಿಗಳೇ ಒಂದು ಏಕೋತ್ತರ ಶತಸ್ಥಲ

---

೧. ಶರಣಸಾಹಿತ್ಯ ಸಂಪುಟ ೧೮ ಸಂಚಿಕೆ ೧೦. ೨. ತೋಂ. ಸಿ. ವ. ೩೭೨.

ವನ್ನು ಸಂಗ್ರಹಿಸಿರುವರು. ಆ ಸಂಪ್ರದಾಯವೆಲ್ಲ ತೋಂಟದ ಸಿದ್ಧಲಿಂಗ ಶಿವಯೋಗೀಶ್ವರರ ಪರಂಪರೆಯೆಂದೇ ಹೇಳಬಹುದು. ಇವರಲ್ಲದೆ ಇನ್ನೂ ಅನೇಕ ಕವಿಗಳು ಸಿದ್ಧಲಿಂಗ ಶಿವಯೋಗೀಶ್ವರರ ನಾಮಸ್ಮರಣೆ ಮಾಡಿರುವರು. ಅವರಲ್ಲಿ ಘನಲಿಂಗಿದೇವ, ಗುಬ್ಬಿಯ ಮಲ್ಲಣ್ಣ (೧೪೭೫) ಸ್ವತಂತ್ರ ಸಿದ್ಧಲಿಂಗೇಶ್ವರ (೧೪೮೦) ಗುಮ್ಮಳಾಪುರ ಸಿದ್ಧಲಿಂಗೇಶ್ವರ (೧೪೮೦) ಗೂಳೂರು ಸಿದ್ಧವೀರಣಾರ್ಯ, ಸಾನಂದ ಶಿವಯೋಗಿ (೧೪೮೦) ಮಲ್ಲಿಕಾರ್ಜುನ ಕವಿ (೧೪೮೫) ಆನಂದ ಬಸವಲಿಂಗ ಶಿವಯೋಗಿ (೧೫೦೦) ಗುರುನಂಜ (೧೫೦೦) ಗುಬ್ಬಿಯ ಮಲ್ಲಣಾರ್ಯ (೧೫೧೩) ಪ್ರಭುಲಿಂಗ (೧೫೨೦) ಒದುವಗಿರಿಯ (೧೫೨೫) ಚೇರಮಾಂಕ (೧೫೨೬) ಮುರಿಗೆಯ ಶಾಂತವೀರ (೧೫೩೦) ಸಂಪಾದನೆಯ ಚೆನ್ನಂಜೆದೇವ (೧೫೩೦) ಇಮ್ಮಡಿಯ ತೋಂಟದಯ್ಯ (೧೫೩೦) ಯಮ್ಮೆಯ ಬಸವ (೧೫೪೩) ಚನ್ನ ಬಸವಾಂಕ (೧೫೧೫) ಕುಮಾರ ಚನ್ನಬಸವ (೧೫೫೦) ಸಿರಿನಾಮಧೇಯ (೧೫೫೦) ವಿರಕ್ತತೋಂಟದಾರ್ಯ (೧೫೬೦) ಮುರಿಗೆ ದೇಶಿಕೇಂದ್ರ (೧೫೬೦) ಮಹಾಂತಸ್ವಾಮಿ (೧೫೬೦) ಶಾಂತೇಶ (೧೫೬೧) ಎಳಮೆಲಿಯ ಗುರುಶಾಂತದೇವ (೧೫೬೫) ವಿರೂಪಾಕ್ಷ ಪಂಡಿತ (೧೫೮೦) ಇಮ್ಮಡಿ ಮುರಿಗೆಸ್ವಾಮಿ (೧೫೯೦) ಉತ್ತರದೇಶದ ಬಸವಲಿಂಗ (೧೬೦೦) ಸಿದ್ಧಲಿಂಗ ಶಿವಯೋಗಿ (೧೬೦೦) ಸಂಪಾದನೆಯ ವೀರಣಾಚಾರ್ಯ (೧೬೦೦) ಹರೀಶ್ವರ (೧೬೦೬) ಬಸವಲಿಂಗ (೧೬೧೧) ಶಾಂತವೀರದೇಸಿಕ (೧೬೫೦) ಶಿದ್ಧನಂಜೇಶ[1] (೧೬೫೦) ಶಾಂತಮಲ್ಲ (೧೬೫೦) ಪರ್ವತಶಿವಯೋಗಿ (೧೬೫೦) ಷಡಕ್ಷರದೇವ (೧೬೫೪ ಬಸವಲಿಂಗ (೧೬೭೯) ಸಂಪಾದನೆಯ ಪರ್ವತೇಶ (೧೬೯೮) ಸೋಮಶೇಖರ ಶಿವ ಯೋಗಿ[2] (೧೭೦೦) ಸೋಮ (೧೭೦೦) ನೂರೊಂದ (೧೭೪೦) ನಂದಿನಾಥ (೧೭೪೫) ಮಹಾದೇವ, ಮೋದಿಯರುದ್ರ ಇವರು ಮುಖ್ಯರು. ಈ ಸ್ತುತಿಗಳಲ್ಲಿ ಒಂದೆರಡನ್ನು ಉದಾಹರಿಸಬಹುದು.

ಎನ್ನ ಗುರುವಿನ ಪರಮಗುರು ಪರಮಾರಾಧ್ಯ ತೋಂಟದಾರ್ಯನಿಗೆ
ಗುರುಭಕ್ತಿಯಿಂದ ಎನ್ನ ಶರಣುಮಾಡಿದರು
ಆ ತೋಂಟದಾರ್ಯನು ತನ್ನ ಕೃಪೆಯಿಂದ ತೊಟ್ಟಲೊಳಗೆ ಎನ್ನ ಮಲಗಿಸಿ
ಪ್ರಮಥಗಣಂಗಳ ವಚನಸ್ವರೂಪಾರ್ಥವೆಂಬ ಹಾಲತುಪ್ಪವಂ
ಸದಾತಣಿಸುತೆಱೆದು
ಅಕ್ಕಱಿಂ ರಕ್ಷಣವಂ ಮಾಡಿ ಘನಲಿಂಗಿಯೆಂಬ ನಾಮಕರಣವಂ ಕೊಟ್ಟರು

— ಘನಲಿಂಗಿದೇವರು (೧೪೭೦)

---

೧. ಈತನು ತೋಂಟದ ಸಿದ್ಧದೇಶಿಕನ ಭಾವರತ್ನಾಭರಣವನ್ನು ಬರೆದಿರುವನಂತೆ. ಅದು ದೊರೆತಿರುವುದಿಲ್ಲ.

೨. ಈತನು ಬಸವಣ್ಣನವರ ಬೆಡಗಿನ ವಚನಗಳಿಗೂ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತ ವಚನಗಳಿಗೂ ಟೀಕೆ ಬರೆದಿರುವನು.

ಶ್ರೀ ವಿಮಲ ಮುಕ್ತಿದಾಯಕ
ಪಾವನಮಯಪರಮಚರಿತ ಷಟ್‌ಸ್ಥಲನಾಯಕ
ಭೂವಿನುತ ಸಚ್ಚಿದಾತ್ಮಕ
ಭಾವಜಹರ ಸಲಹು ಸಿದ್ಧಲಿಂಗಸುದೇಶಿಕ

ಶ್ರೀಮತ್ ಪರಾತ್ಪರ ಪರಶಿವ ನಿತ್ಯನಿರ್ಮಲ ನಿರಹ ನಿರಸೂಯ ಅನಿರ್ವಾಚ್ಯ ಪರಂಜ್ಯೋತಿಸ್ವರೂಪ, ಷಟ್‌ಸ್ಥಲಜ್ಞಾನಪ್ರಭಾಪುಂಜರಂಜಿತ, ಸಕಲ ಭಕ್ತಜನ ಹೃತ್ಕಮಲ ಕರ್ಣಿಕಾವಾಸ, ಶರಣಜನಮುಕ್ತಿಪ್ರದಾಯಕ ಅಖಿಲ ಜಗದಾರಾಧ್ಯರಪ್ಪ ತೋಂಟದ ಸಿದ್ಧಲಿಂಗೇಶ್ವರ........

— ಗೂಳೂರು ಸಿದ್ಧವೀರಣಾರ್ಯ.

ಮಹಾಕವಿ ಷಡಕ್ಷರದೇವನು ಸಿದ್ಧಲಿಂಗ ಶಿವಯೋಗಿಗಳನ್ನು ಕಾವ್ಯಾರಂಭದಲ್ಲಿ ಸ್ತುತಿಸಿರುವನಲ್ಲದೆ ಸಂಸ್ಕೃತದಲ್ಲಿ ಸಿದ್ಧಲಿಂಗಸ್ತವವೆಂಬ ಅಷ್ಟಕವನ್ನು ರಚಿಸಿರುವನು. ಅವನ್ನಿಲ್ಲಿ ಉದಾಹರಿಸಬಹುದು.

ದುರಿತತಮಃ ಪತಂಗನಮಳಾರ್ಥವಿವೇಚನಸತ್ತ್ರಸಂಗನೀ
ಶ್ವರಲಸದಂತರಂಗನಭವಾಗಮವಾರಿಜದಿವ್ಯ ಭೃಂಗನ
ಕ್ಷರಪರಲಿಂಗಸಂಗನತಿಶಾಂತನಿರಸ್ತಜಡಾನುಷಂಗನೊ
ಲ್ದುರುತರ ಸಿದ್ಧಲಿಂಗಯತಿತುಂಗನೊಡರ್ಚುಗೆ ಸಜ್ಜನೇಷ್ಟಮಂ

— ರಾಜಶೇಖರವಿಳಾಸಂ (೧–೧೪)

ಶ್ರೀಕರವೀರಸಾಧು ಸಹಕಾರನುದಂಚಿತಮುಕ್ತಕಂ ಸುಪ
ದ್ಮಾಕರನುದ್ಗಮಪ್ರರುಚಿ ಮಂಜುಲತಾನ್ವಿತನೂರ್ಜಿತಾಗಮಾ
ನೀಕನುತಂ ಮಹಾವಿರತಿ ಸಂಯುತನಾದುದಱಿಂದೆ ಸಾರ್ಥನಾ
ಮಾಕರನಾದ ತೋಂಟದ ಗುರೂತ್ತಮನೊರ್ವನೆ ಸತ್ಫಲಪ್ರದಂ

— ವೃಷಭೇಂದ್ರವಿಜಯ (೧-೧೨)

## ಅಷ್ಟಕ

ಜಗಜ್ಜಾಲಪಾಲಂ ಜನಸ್ತುತ್ಯಶೀಲಂ ।
ಭವಾರಣ್ಯದಾವಂ ಭೃತಸ್ವಾನುಭಾವಂ ।
ಶಿವಾನಂದಕೋಶಂ ದಿನೇಶಪ್ರಕಾಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೧ ॥

ಕಲಾಸತ್ಕಲಾಪಂ ಕಪರ್ದಿಸ್ವರೂಪಂ ।
ಮನೋವೃತ್ತಿಶೂನ್ಯಂ ಮುನಿವ್ರಾತಮಾನ್ಯಂ ।
ಸಮುಂಚದ್ಗುಣಾಂಕಂ ಸದಾ ನಿಷ್ಕಳಂಕಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೨ ॥

ಪವಿತ್ರಸ್ವಗಾತ್ರಂ ಬುಧಸ್ತೋತ್ರಪಾತ್ರಂ ।
ನಿವೃತ್ತಾವರೋಧಂ ನಿಸರ್ಗಾವಬೋಧಂ ।
ಚಿದಾಮೋದಭಾಜಂ ಚರಾಚರ್ಯರಾಜಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೩ ॥

ಜಿತಾರಾತಿವರ್ಗಂ ಗೃಹೀತಾದ್ಯಮಾರ್ಗಂ ।
ತತಾವಮ್ನಾಯಸಾರಂ ತಮಸ್ತೋಮದೂರಂ ।
ಪರಮ್ ಷಟ್‌ಸ್ಥಲಾಂಕಂ ನಿರಾತಂಕಶಂಕಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೪ ॥

ಶಿವಾಚಾರಪಕ್ಷಂ ಕೃಪಾಭೃತ್ಕಟಾಕ್ಷಂ ।
ಷಡಧ್ವಾದಿಬೀಜಂ ನತಾಮರ್ತ್ಯಭೂಜಂ ।
ಪರಿತ್ಯಕ್ತರಾಗಂ ಪರಬ್ರಹ್ಮಯೋಗಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೫ ॥

ಪರಿವ್ರಾಡ್ವರೇಣ್ಯಂ ಗಣೇಶಾಗ್ರಗಣ್ಯಂ ।
ಸದಾಸತ್ಯಭಾಷಂ ಶಿವಜ್ಞಾನಭಾಸಂ ।
ಸರುದ್ರಾಕ್ಷಮಾಲಂ ಲಸದ್ಭಸ್ಮಫಾಲಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೬ ॥

ಶರಣಜನಪರಿಭವಲತಾಳಿಯಂ ಕೀಳ್ದುದು
ಸ್ಮರಕುಜನ ಕುಜವಿತಾನಂಗಳಂ ತರಿದುದು
ಸ್ತರದುರಾಶಾವಾರಿಭರಿತಕಾಸಾರಮಂ ಕೆಡಿಸಿಯುನ್ನತ ಫಲಂಗಳಂ
ಕರಮೆ ನಾಶಂಗೆಯ್ದು ವಿಷಯಕುಸುಮಂಗಳಂ
ಕುರಿಸದಂತೆಸಗಿ ತೋಂಟದ ರಾಯನೆನಿಸಿದ
ಚ್ಚರಿಯ ಚರಿತಂ ಸಿದ್ಧಲಿಂಗೇಶನೆಮಗೀಗೆ ಸುರುಚಿರೇಷ್ಟಾರ್ಥಫಲವಂ[೧]

ಈ ಕಾವ್ಯಪ್ರವಾಹದಲ್ಲಿ ಸಿದ್ಧಲಿಂಗೇಶ್ವರನ ವ್ಯಕ್ತಿತ್ವ ಸ್ಫುಟವಾಗಿ ಪಡಿಮೂಡಿದೆ. ಅವರ ಹೆಸರನ್ನೆತ್ತಿದರೆ ಸಾಕು; ನಮ್ಮ ಕವಿಗಳು ಭಕ್ತಿಯ ನಿರ್ಭರಭಾವದಿಂದ ಕುಣಿದಾಡಿರುವರು. ಷಡಕ್ಷರದೇವನಂತಹ ಮಹಾಕವಿಯ ಸ್ತುತಿಗೆ ಪಾತ್ರರಾದ ಸಿದ್ಧಲಿಂಗ ಶಿವಯೋಗಿಗಳ ವ್ಯಕ್ತಿತ್ವ ಹಾಗೂ ಅದರ ಪ್ರಭಾವಮುದ್ರೆಗಳನ್ನು ವರ್ಣಿಸುವ ಶಕ್ತಿ ಶಬ್ದಕ್ಕಿಲ್ಲವೆಂದು ಹೇಳಿ ವಿರಮಿಸಬೇಕಾಗುತ್ತದೆ.

---

೧. ಬಸವಲಿಂಗ ಕವಿ–ಕೊಟ್ಟೂರು ಬಸವೇಶ್ವರ ಚಾರಿತ್ರ (೧–೨೦)

